# ಹರಿದಾಸ ಸಾಹಿತ್ಯ

ಮತ್ತು ಅದರ

# ಪ್ರವರ್ತಕರು

ಲೇಖಕರು:

**ಆನಂದ ಕೊರಟಿ**

ಈ ಪುಸ್ತಕವನ್ನು ತಿರುಮಲ ತಿರುಪತಿ ದೇವಸ್ಥಾನದ - **ಲೇಖಕರಿಗೆ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಲು ಸಹಾಯ ಮಾಡುವ ಯೋಜನೆಯ ಅಡಿಯಲ್ಲಿ** -ನೀಡಿರುವ ಸಹಾಯ ಧನದಿಂದ ಪ್ರಕಟಿಸಲಾಗಿದೆ.

**ಆನಂದನಿಲಯ ಪ್ರಕಾಶನ**

ನಂ. ೨೨/೧೨, ಎಂ.ಜಿ.ಕೆ. ಮೂರ್ತಿ ಬಡಾವಣೆ,

೬ನೇ ಮುಖ್ಯ ರಸ್ತೆ, ಚಾಮರಾಜಪೇಟೆ,

ಬೆಂಗಳೂರು - ೫೬೦ ೦೧೮

ಮೊ : ೯೮೪೪೪ ೦೬೨೬೬

**'Haridasasahitya mattu adara Pravartakaru'** (A detail study on Haridasa Sahitya) - Written by Sri Anand Korati ; Published by Smt. Sukanya, **for Anandanilaya Prakashana, #** 22/12, M.G.K. Murthy Layout, 6th Main Road, Chamarajpet, Bangalore - 560 018
Mobile 98444 06266

Pages : **296**

First Edition 2005
No of Copies 1000



Cover Design · Vishwanath Mandi

**Price : Rs. 50/-**

This book is published under the Financial Assistance of Tirumala Tirupati Devastanam, Under Their Scheme-
***- Aid to Authors Scheme -***
***Financial Assistance for Religious Publication***



Printed at : ***Vadiraja Printech***, # 22/12, M.G.K. Murthy Layout, 6th Main Road, Chamarajpet, Bangalore - 560 018.

# ಮೊದಲ ಮಾತು

ಕನ್ನಡ ನಾಡಿನ ಹರಿದಾಸ ಸಾಹಿತ್ಯದಲ್ಲಿ ನಾವು ಎರಡು ಪಂಥವನ್ನು ಕಾಣುತ್ತೇವೆ ಅದು ವ್ಯಾಸಸಾಹಿತ್ಯ ಮತ್ತು ದಾಸಸಾಹಿತ್ಯ. ವ್ಯಾಸ ಸಾಹಿತ್ಯವೆಂದರೆ ಶ್ರೀ ಬಾದರಾಯಣ ದೇವರು ಕಲಿಯುಗದಲ್ಲಿ ಜ್ಞಾನವು ತಿರೋಧಾನಗೊಂಡಾಗ, ಸುಜೀವರ ಮೇಲೆ ಅನುಗ್ರಹಾರ್ಥವಾಗಿ ಅವತಾರ ಮಾಡಿ, ತತ್ವಮಾರ್ಗವನ್ನು ತಿಳಿಯಲು ಸಾಧಕವಾದ ವೇದಗಳನ್ನು ಸಂಗ್ರಹಿಸಿ, ಪುರಾಣಗಳನ್ನು, ಬ್ರಹ್ಮಸೂತ್ರಗಳನ್ನು ರಚಿಸಿ ಪರಮೋಪಕಾರ ಮಾಡಿದರು. ಈ ಸಾಹಿತ್ಯವು ಸಂಸ್ಕೃತ ವಾಙ್ಮಯದಲ್ಲಿದ್ದು ವ್ಯಾಸಸಾಹಿತ್ಯವೆನಿಸಿಕೊಂಡಿತು. ಶ್ರೀಮಧ್ವಾಚಾರ್ಯರು ಪಾಜಕಕ್ಷೇತ್ರದಲ್ಲಿ ಅವತರಿಸಿ, ಹಿಂದಣ ಇಪ್ಪತ್ತೊಂದು ಕುಭಾಷ್ಯಗಳನ್ನು ಖಂಡಿಸಲು ತಮ್ಮ ಮೂವತ್ತೇಳು ಗ್ರಂಥಗಳನ್ನು ರಚಿಸಿ, ವ್ಯಾಸಸಾಹಿತ್ಯವನ್ನು ಅರಿಯಲು ಸಾತ್ವಿಕ ಜೀವರಾಶಿಗಳಿಗೆ ಉಪಕಾರ ಮಾಡಿದರು. ಅವರ ನಂತರ ಶ್ರೀ ಜಯತೀರ್ಥರೂ, ಶ್ರೀ ವ್ಯಾಸರಾಯರೂ, ಅನಂತರ ಬಂದ ವಾದಿರಾಜರೂ, ವಿಜಯೀಂದ್ರರೂ, ಶ್ರೀರಾಘವೇಂದ್ರಸ್ವಾಮಿಗಳೂ ತಮ್ಮ ಟೀಕೆ, ವ್ಯಾಖ್ಯಾನ, ಟಿಪ್ಪಣಿಗಳಿಂದ ಆಚಾರ್ಯರು ಪ್ರತಿಪಾದಿಸಿದ ತತ್ವವಾದವನ್ನು ಸ್ಪಷ್ಟಗೊಳಿಸಿದರು. ಇವೆಲ್ಲವು ಸಂಸ್ಕೃತದಲ್ಲಿದ್ದು ವ್ಯಾಸ ಸಾಹಿತ್ಯಕ್ಕೆ ಭಾಷ್ಯ ರೂಪದಲ್ಲಿ ಅಂದರೆ ವಿವರಣೆ ರೂಪದಲ್ಲಿ ಇವೆ. ಇವು ವ್ಯಾಸ ಸಾಹಿತ್ಯವೆನಿಸಿಕೊಂಡವು.

ಆದರೆ ಸಂಸ್ಕೃತದಲ್ಲಿರುವ ಈ ದಾಸ ಸಾಹಿತ್ಯವು ಅಂದರೆ ಭಕ್ತಿ ಸಾಹಿತ್ಯವು ಸಾಮಾನ್ಯರ ಕೈಗೆ ಎಟುಕದಾಗಲು ಪ್ರಾಕೃತ ಭಾಷೆಯಲ್ಲಿ ಈ ಪ್ರಮೇಯಗಳನ್ನು ತಿಳಿಸಿ, ಹರಿಭಕ್ತಿಯನ್ನು ಜ್ಞಾನಪೂರ್ವಕ ದೃಢ ಭಕ್ತಿಯನ್ನಾಗಿ ಮಾಡಲು ಮಹಾನುಭಾವರಾದ ಹರಿದಾಸರು ಅವತಾರ ಮಾಡಿದರು. ಪ್ರಾಕೃತ ಅಂದರೆ ದೇಶೀಯ ಭಾಷೆಯಾದ ಕನ್ನಡ ನುಡಿಯಲ್ಲಿ ಈ ವ್ಯಾಸ ಸಾಹಿತ್ಯದ ಗಂಗೆಯನ್ನು ಹರಿಸಿ, ನಾಡು ನುಡಿಗಳನ್ನು ಪಾವನಗೊಳಿಸಿದರು. ಅವರ ಕೃತಿಗಳು ಹರಿದಾಸ ಸಾಹಿತ್ಯವೆಂದು ಹೆಸರು ಪಡೆಯಿತು. ಒಂದು ವ್ಯಾಸಕೂಟವೆನಿಸಿದರೆ ಇನ್ನೊಂದು ದಾಸಕೂಟವೆನಿಸಿತು. ಇವರೆಡರ ರೂಪ ಬೇರೆಯಾದರೂ ಗುರಿ ಒಂದೇ ಆಗಿತ್ತು. ಅಂದರೆ ಶ್ರೀಹರಿಯು ಸರ್ವೋತ್ತಮತ್ವ ತತ್ವದ ಆಧಾರದ ಮೇಲೆ ರೂಪುಗೊಂಡ ಈಶ - ದಾಸ ಭಾವವನ್ನು, ದ್ವೈತ ಸಿದ್ಧಾಂತವನ್ನು ತಿಳಿಸಲು ಹೊರಟ ಒಂದೇ ಗಿಡದ ಎರಡು ಕಂಟೆಗಳಾದವು. ಒಂದು ಪ್ರಕಾಶಮಾನವಾಗಿ ಕಣ್ಣು ಕುಕ್ಕುವ ಸೂರ್ಯನಾದರೆ, ಇನ್ನೊಂದು ಅದು ಪ್ರತಿಫಲಿಸಿದ ಚಂದ್ರ ಕಿರಣಗಳಂತೆ ಆಹ್ಲಾದವಾಯಿತು. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು. ಒಂದೇ ಬಳ್ಳಿಯ ಎರಡು ಹೂಗಳು - ಪರಮಾತ್ಮನಿಗೆ ಎರಡೂ ಪ್ರಿಯವೇ. ಒಂದು ಹೆಚ್ಚಲ್ಲ, ಇನ್ನೊಂದು

ಕೀಳಲ್ಲ - ಎಂಬ ಸತ್ಯವನ್ನು ತಿಳಿಸಿಕೊಟ್ಟು, ಎರಡರಲ್ಲೂ ಕೃತಿರಚನೆ ಮಾಡಿದ ಮಹಾನುಭಾವರು, ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀವಾದಿರಾಜರು ಮುಂತಾದವರು.

ಇನ್ನು ಕನ್ನಡ ಭಾಷೆಯಲ್ಲಿ ತಮ್ಮ ಉಪನಿಷತ್ ಸದೃಶ ವಾಙ್ಮಯದಿಂದ ಕೃತಿರಚನೆಯನ್ನು ಮಾಡಿದ ದಾಸ ಶ್ರೇಷ್ಠರು ಪುರಂದರದಾಸರು. ಇವರು ಹರಿದಾಸ ಸಾಹಿತ್ಯಕ್ಕೆ ಶ್ರೇಷ್ಠ ಕಾಣಿಕೆಯನ್ನು ನೀಡಿದರು.

ಪುರಂದರದಾಸರು ಅನುಭಾವಿಗಳು, ಅನುಭವಿಗಳು. ಉತ್ತಮ ಲೋಕ ಬೋಧಕರು. ಇವರಿಗೆ ಎರಡನೆಯವರಾಗಿ ನಿಲ್ಲ ತಕ್ಕವರು ಕನಕದಾಸರು. ಇವರು ಮೊದಲು ಶ್ರೀವೈಷ್ಣವರಾಗಿ ಅನಂತರ ವ್ಯಾಸರಾಯರ ಪ್ರಭಾವದಿಂದ ದ್ವೈತಮತಕ್ಕೆ ಪರಿವರ್ತಿತರಾದವರು. ಇವರು ಮೋಹನ ತರಂಗಿಣಿ ಎಂಬ ಸಾಂಗತ್ಯವನ್ನೂ, ನಳಚರಿತ್ರೆ, ಹರಿಭಕ್ತಿ ಸಾರ, ರಾಮಧ್ಯಾನ ಚರಿತ್ರೆಗಳೆಂಬ ಕಾವ್ಯಗಳನ್ನೂ ಬರೆದಿರುವುದಲ್ಲದೆ ನೂರಾರು ಶ್ರೇಷ್ಠ ಆಧ್ಯಾತ್ಮ ರಸದಿಂದ ಮಿಡಿಯುವ ದೇವರ ನಾಮಗಳನ್ನು ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ಕನ್ನಡದಲ್ಲಿ ಬರೆದಿದ್ದಾರೆ.

ವಿಜಯನಗರ ಸಾಮ್ರಾಜ್ಯ ಪತನವಾದ ನೂರು ವರ್ಷಗಳವರೆಗೆ ಅಂದರೆ ವಿಜಯದಾಸರು ಅವತಾರವೆತ್ತುವವರೆಗೆ ಈ ಹರಿದಾಸ ಸಾಹಿತ್ಯವು ಸಮಸ್ತ ಸೌಭಾಗ್ಯವನ್ನು ಕಳೆದುಕೊಂಡ ಸುಮಂಗಲಿಯಂತಾಗಿತ್ತು. ವಿಜಯದಾಸರ ಅವತಾರದೊಂದಿಗೆ ಬತ್ತಿ ಹೋಗಿದ್ದ ತೊರೆಗೆ ಹೊಸ ನೀರು ಬರುವಂತೆ ಆಯಿತು. ಬರಡಾಗಿದ್ದ ದಾಸಸಾಹಿತ್ಯ ಕ್ಷೇತ್ರದಲ್ಲಿ ಹೊಸ ಚಿಗುರು, ಹಸಿರು ತಲೆ ಎತ್ತುವಂತೆ ಆಯಿತು.

ಇಲ್ಲಿಂದ ಮುಂದೆ ಹರಿದಾಸ ಸಾಹಿತ್ಯಕ್ಕೆ ಹಾಗೂ ಕನ್ನಡ ಸಾಹಿತ್ಯಕ್ಕೆ ತಮ್ಮ ಕೃತಿಗಳಿಂದ ಅಪೂರ್ವ ಕೊಡುಗೆಯನ್ನು ಇತ್ತ ಹಲವಾರು ದಾಸ ಮಹನೀಯರು ಆಗಿ ಹೋಗಿದ್ದಾರೆ. ಈ ಎಲ್ಲ ಮಹನೀಯರು ದಾಸ ಸಾಹಿತ್ಯಕ್ಕೆ ಇತ್ತ ಕೊಡುಗೆ ಅಮೋಘವಾದುದು.

ಮಾನವನ ಬದುಕಿನ ಜೀವಂತ ಸಮಸ್ಯೆಗಳಿಗೆ ನೇರವೂ, ತರ್ಕಬದ್ಧವೂ ವ್ಯಾವಹಾರಿಕವೂ ಆದ ಪರಿಹಾರಗಳನ್ನು ನೀಡುವ ಈ ಹರಿದಾಸ ಸಾಹಿತ್ಯವನ್ನು ಪ್ರಚಾರ ಮಾಡಿದ ಪ್ರಯತ್ನಗಳು ಇಂದು ನಿನ್ನೆಯದಲ್ಲ. ಒಂದೂವರೆ ಶತಮಾನದ ಹಿಂದೆಯೆ ಜರ್ಮನಿಯಿಂದ ಮತ ಪ್ರಸಾರಕ್ಕೆಂದು ಬಂದಿದ್ದ ಮೊಗ್ಲಿಂಗ್ ಎಂಬ ಕ್ರೈಸ್ತಪಾದ್ರಿಯು ತನ್ನ ಗಮನಕ್ಕೆ ಬಂದ ದಾಸಸಾಹಿತ್ಯದ ಅಣಿಮುತ್ತುಗಳನ್ನು ಆರಿಸಿ ಅವುಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿ, ಪ್ರಥಮ ಬಾರಿಗೆ ಪಾಶ್ಚಾತ್ಯ ಜಗತ್ತಿಗೆ ಪರಿಚಯ ಮಾಡಿಕೊಟ್ಟನು. ತದನಂತರ ಕರ್ನಾಟಕ ರಾಜ್ಯದ ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ರೈಸ್ ಸಾಹೇಬರು ಕನ್ನಡಕ್ಕೊಂದು ಕೋಶ ರಚಿಸಿಕೊಟ್ಟರಲ್ಲದೆ - ಈ ದಾಸಸಾಹಿತ್ಯದ ಸೌಂದರ್ಯ, ವಿಚಾರ, ಸರ್ವಕಾಲಿಕ ಮೌಲ್ಯಗಳಿಂದ ಪ್ರಭಾವಿತರಾಗಿ ಅಳಿಯುತ್ತಿದ್ದ ದಾಸ ಸಾಹಿತ್ಯದ ಹಸ್ತ ಪ್ರತಿಗಳನ್ನು ರಕ್ಷಿಸುವ, ಪರಿಷ್ಕರಿಸುವ, ಪ್ರಕಟಿಸುವ ಕಾರ್ಯವನ್ನು ಕೈಗೊಂಡರು. ಇವರೆಲ್ಲರೂ ಕನ್ನಡಿಗರ ಪಾಲಿಗೆ ಪ್ರಾತಃ ಸ್ಮರಣೀಯರಾಗಿದ್ದಾರೆ. ಈ ಶತಮಾನದ ಮೊದಲ ದಶಕದಲ್ಲಿ ಬೆಂಗಳೂರಿನ

ಮೂರ್ತಿರಾವ್ ಎಂಬುವರೂ, ಅನಂತರ ಮದರಾಸಿನ ತಿರುಮಲರಾವ್ ಎಂಬುವರೂ ತಮ್ಮ ಮಾಧ್ವ ಸಿದ್ಧಾಂತ ಗ್ರಂಥ ಮಾಲೆಯಲ್ಲಿ ಕೆಲವು ಗ್ರಂಥಗಳನ್ನು ಪ್ರಕಟಿಸಿದರು.

ದಾಸ ಸಾಹಿತ್ಯ ಸಂಗ್ರಹ,ಸಂಸ್ಕರಣ ಪ್ರಚಾರಗಳಲ್ಲಿ ಅನಂತರ ಕಾಣುವ ದೊಡ್ಡ ಹೆಜ್ಜೆ ಎಂದರೆ ಬೇಲೂರು ಕೇಶವದಾಸರು. ಇವರು ಬಹಳ ಶ್ರಮದಿಂದ ಪ್ರಕಟಿಸಿದ ಅಮೂಲ್ಯ ಗ್ರಂಥ ಕರ್ಣಾಟಕ ಭಕ್ತ ವಿಜಯ!

ಬೇಲೂರು ಕೇಶವದಾಸರು ಸುಪ್ರಸಿದ್ಧ ಹರಿದಾಸರ - ಕೀರ್ತನಕಾರರ ವಂಶದಲ್ಲಿ ಹುಟ್ಟಿದವರು. ಇವರ ತಂದೆ ಬೇಲೂರು ವೆಂಕಟಸುಬ್ಬದಾಸರು, ಭೃಗು ಅಂಶದವರೂ, ಮಹಾನುಭಾವರೂ ಆದ ವಿಜಯದಾಸರ ಶಿಷ್ಯ ಪೀಳಿಗೆಯಲ್ಲಿ ಬಂದವರು. ವೆಂಕಟೇಶದಾಸರು ಪೂರ್ಣಯ್ಯನವರ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದ್ದರು. ಇವರ ಪುತ್ರ ವೆಂಕಟಸುಬ್ಬದಾಸರು ಬೇಲೂರಿನಲ್ಲಿ ನೆಲೆಸಿ, ಕೀರ್ತನಕಾರರಾಗಿ ದಾಸ ಸಾಹಿತ್ಯ ಪ್ರಚಾರ ಮಾಡಿದರು. ಇವರ ಮಕ್ಕಳಾದ ಕೇಶವದಾಸರು ಅನೇಕ ಊರುಗಳನ್ನು ತಿರುಗಿ ದಾಸರ ಬಗ್ಗೆ ವಿಪುಲ ವಿಷಯಗಳನ್ನು ಸಂಗ್ರಹಿಸಿ ಅವರ ಚರಿತ್ರೆಯನ್ನು ಎರಡು ಸಂಪುಟಗಳಲ್ಲಿ (ಕ್ರಿ.ಶ. ೧೯೨೦)ರಲ್ಲಿ ಪ್ರಕಟಿಸಿದರು. ಇದು ಅನೇಕ ದೃಷ್ಟಿಗಳಲ್ಲಿ ಒಂದು ಆಚಾರ್ಯ ಗ್ರಂಥ.

ಈ ಗ್ರಂಥವನ್ನು ಬರೆಯಲು ಒಂದು ಘಟನೆ ಕಾರಣವಾಯಿತೆಂದು ಹೇಳುತ್ತಾರೆ. ಅವರು ಹಂಪೆಯಲ್ಲಿದ್ದಾಗ ತುಂಗಭದ್ರೆಯಲ್ಲಿ ಸ್ನಾನ ಮಾಡಲು ಹೋಗಿ, ಮುಳುಗಿದರಂತೆ. ಯಾರೋ ಪುಣ್ಯಾತ್ಮನ ಸಹಾಯದಿಂದ ಬದುಕಿ ಉಳಿದರಂತೆ. ಉಳಿದ ಶೇಷಾಯುಸ್ಸನ್ನು ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ಮೀಸಲಿಡಲು ನಿರ್ಧರಿಸಿದರಂತೆ. ಹೀಗೆ ಆರಂಭವಾದ ಅವರ ದಾಸದೀಕ್ಷೆ ಈ ಶ್ರೇಷ್ಠ ಗ್ರಂಥದ ನಿರ್ಮಾಣ, ಪ್ರಕಟಣೆಗಳಲ್ಲಿ ಪರ್ಯವಸಾನಗೊಂಡಿತು.

ಈ ಗ್ರಂಥದಲ್ಲಿ ಅಚಲಾನಂದ ದಾಸರಿಂದ ಮೊದಲುಗೊಂಡು ಶೇಷದಾಸರವರೆಗೆ ಎಲ್ಲ ಅಪರೋಕ್ಷ ಜ್ಞಾನಿಗಳ ಚರಿತ್ರೆ, ಅವರ ಕೃತಿಗಳ ಪರಿಚಯಗಳು ಇರುವುದಲ್ಲದೆ, ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದ ಎಲ್ಲ ಪ್ರಮುಖ ಹರಿದಾಸರ ಪರಿಚಯವನ್ನು ಮಾಡಿಕೊಡಲಾಗಿದೆ. ಕರ್ಣಾಟಕದ ಇತರ ಹರಿದಾಸರು ಎಂಬ ಶೀರ್ಷಿಕೆಯ ಅಡಿಯಲ್ಲಿ ಅಡಪಿ ರಾಮದಾಸರು, ಆದವಾನಿಯ ರಾಮಸುಂದರದಾಸರು, ಪ್ರೇಮದಾಸರು, ಶ್ರೀನಿವಾಸದಾಸರು, ಮೈಸೂರು ಕೃಷ್ಣದಾಸರು, ರಾಮರಾಯರು, ದೂರ್ವಾಸರಾಯರು, ತುಳಸೀ ರಾಮದಾಸರು, ಮಡಕಶಿರದ ಭೀಮದಾಸರು, ಕಮಲಾಪತಿದಾಸರು, ಗುಂಡಾಚಾರ್ಯರು. ಬೇಲೂರು ವೆಂಕಟಸುಬ್ಬದಾಸರು, ಜೋಗಿವೆಂಕಟಪ್ಪಾಚಾರ್ಯರು, ಹರಪನಹಳ್ಳಿ ರಾಮಾಚಾರ್ಯರು, ತುಂಗಮ್ಮನವರು - ಹೀಗೆ ಮೂವತ್ತಕ್ಕೂ ಹೆಚ್ಚಿನ ಹರಿದಾಸರನ್ನು ಪರಿಚಯಿಸಿದ್ದಾರೆ.

ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಮೈಸೂರಿನ ಗುರುಗೋವಿಂದ ವಿಠಲದಾಸರು ತಮ್ಮ ಹರಿಭಕ್ತ ವಿಜಯ ಗ್ರಂಥ ಮಾಲೆಯಲ್ಲಿ ಏಳು ಸಂಪುಟಗಳನ್ನು ಪ್ರಕಟಿಸಿ, ಪರಮಪ್ರಿಯ ಸುಬ್ಬರಾಯರು, ವಾದಿರಾಜರು, ವಿಶ್ವಪ್ರಿಯತೀರ್ಥರು, ಜಮಖಂಡಿ ವಾದಿರಾಜಾಚಾರ್ಯರು,

ತಂದೆ ವರದಗೋಪಾಲದಾಸರು, ಶ್ರೀವರವಿಠಲದಾಸರು, ಶ್ರೀನಿಧಿವಿಠಲದಾಸರು, ತಂದೆ ಶ್ರೀಪತಿದಾಸರು, ಶ್ರೀಪತಿವಿಠಲದಾಸರು, ಭೂವರಾಹ ರಘುಪತಿವಿಠಲದಾಸರು, ರಘುಪತಿ ವಿಠಲದಾಸರು, ವ್ಯಾಸವಿಠಲದಾಸರು, ಮೋಹನದಾಸರು, ಮಧ್ವಪತಿ ವಿಠಲದಾಸರು, ಪ್ರಸನ್ನ ವೆಂಕಟಪತಿದಾಸರು, ವಿಜಯರಾಮಚಂದ್ರ ವಿಠಲದಾಸರು, ಶ್ರೀಜಯೇಶವಿಠಲದಾಸರು, ಮಣೂರುದಾಸರು, ಹರಪನಹಳ್ಳಿ ಭೀಮವ್ವ, ಶ್ರೀ ವಿಷ್ಣುತೀರ್ಥರು (ವ್ಯಾಸಸಾಹಿತ್ಯ) ಏರಿ ಶೇಷಾಚಾರ್ಯರು, ರಾಘವಾಚಾರ್ಯರು, ಪಾಂಡುರಂಗಿ ಹುಚ್ಚಾಚಾರ್ಯರು - ಮುಂತಾದ ಹರಿದಾಸರ ಜೀವನ ಚರಿತ್ರೆಗಳನ್ನೂ, ಅವರ ಮಹಿಮಾತಿಶಯಗಳನ್ನೂ, ಕೃತಿ ಸಂಗ್ರಹವನ್ನೂ ಪರಿಚಯ ಮಾಡಿಕೊಟ್ಟು ಮಹೋಪಕಾರ ಮಾಡಿ ಕೊಟ್ಟಿದ್ದಾರೆ. ಇದರಂತೆ ಮುದ್ದು ಮೋಹನದಾಸರು, ಪ್ರಸನ್ನ ಶ್ರೀನಿವಾಸದಾಸರ ಬಗೆಗೂ ಇತರರು ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

ಪುರಂದರದಾಸರ ಹಾಗೂ ಕನಕದಾಸರ ಚತುಶ್ಶತಮಾನೋತ್ಸವಗಳ ಸಂದರ್ಭದಲ್ಲಿ ದಾಸರಾಯರ ಎಲ್ಲ ಕೃತಿಗಳನ್ನು ಪ್ರಕಟಿಸಿ, ಆಸಕ್ತರಿಗೆ ಅವರ ಕೃತಿಗಳ ವಿರಾಟ್ ದರ್ಶನ ಮಾಡಿಸಿದ್ದಾರೆ. ಅಲ್ಲದೆ ಬೆಂಗಳೂರಿನ ಹರಿದಾಸರತ್ನಂ ಗೋಪಾಲದಾಸರು ತಮ್ಮ ಹರಿದಾಸ ಭಾರತಿ ಗ್ರಂಥರತ್ನ ಮಾಲೆಯಲ್ಲಿ ಕೆಲವು ದಾಸ ಸಾಹಿತ್ಯ ಗ್ರಂಥಗಳನ್ನು ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಈ ದಿಸೆಯಲ್ಲಿ ಗೋಪಾಲದಾಸರು ಆರಂಭಿಸಿದ ಹರಿದಾಸ ಭಾರತಿ ಪತ್ರಿಕೆಯು ದಾಸ ಸಾಹಿತ್ಯ ಪ್ರಚಾರ ಕಾರ್ಯದಲ್ಲಿ ಮಹತ್ವ ಪಾತ್ರವಹಿಸಿತು. ಇದು ನಿಲ್ಲಬೇಕಾಗಿ ಬಂದುದು ದೌರ್ಭಾಗ್ಯ. ಶ್ರೀ ರಾಜಾಗುರುರಾಜಾಚಾರ್ಯರು ತಮ್ಮ ಪರಿಮಳ ಗ್ರಂಥ ಮಾಲೆಯಲ್ಲೂ, ಶ್ರೀ. ಎಚ್. ಎಸ್. ಶ್ರೀನಿವಾಸಮೂರ್ತಿ ಅವರು ಉರುಗಾದ್ರಿ ವಿಠಲ ಗ್ರಂಥಮಾಲೆಯಲ್ಲೂ ಹರಿದಾಸರ ಕೃತಿ ಪರಿಚಯ ಮಾಡಿಕೊಟ್ಟಿದ್ದಾರೆ.

ಹುಬ್ಬಳ್ಳಿಯ ಕಲಮದಾನಿ ಗುರುರಾಯರು ಹರಿದಾಸರ ಕಥೆಗಳು ಎಂಬ ಗ್ರಂಥವನ್ನು ರಚಿಸಿ, ಇದರಲ್ಲಿ ಶ್ರೀಪಾದರಾಜರಿಂದ ಆರಂಭಿಸಿ ಗೋವಿಂದ ವಿಠಲದಾಸರವರೆಗೆ ೬೬ ಮಂದಿ ಖ್ಯಾತ ಹರಿದಾಸರೆಲ್ಲರ ಪರಿಚಯವನ್ನು ಮಾರ್ಮಿಕವಾಗಿ ಮಾಡಿಕೊಟ್ಟು ಅಮೂಲ್ಯ ವಿಷಯಗಳನ್ನು ಹೊರಗೆಡಹಿದ್ದಾರೆ.

ದಾಸ ಸಾಹಿತ್ಯದ ಸಂಪುಟಗಳು ಅಲಭ್ಯವಾದುದನ್ನು ಅರಿತು ಧಾರವಾಡದ ಸಮಾಜ ಪುಸ್ತಕಾಲಯದವರು ಹತ್ತು ಸಂಪುಟಗಳಿಗೂ ಹೆಚ್ಚಿನ - ಕಾವ್ಯಪ್ರೇಮಿ ಅವರ ದಕ್ಷ ಸಂಪಾದಕತ್ವದಲ್ಲಿ ಎಲ್ಲ ಹರಿದಾಸರ ಕೃತಿಗಳ ಪರಿಚಯವನ್ನು ಜನಸಾಮಾನ್ಯರಿಗೆ ಮಾಡಿಕೊಟ್ಟು ಉಪಕಾರ ಮಾಡಿದ್ದಾರೆ.

ಈ ದಿಸೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದವರು ಕೆಲವು ಹೊತ್ತಿಗೆಗಳನ್ನು ಪ್ರಕಟಿಸುವ ಸಾಹಸ ಮಾಡಿದ್ದಾರೆ. ಇದು ಸ್ತುತ್ಯಾರ್ಹಕಾರ್ಯ.

ಇತ್ತೀಚೆಗೆ ಕನ್ನಡ ಸಂಸ್ಕೃತಿ ಇಲಾಖೆಯವರಿಂದ ದಾಸಸಾಹಿತ್ಯದ ಲಭ್ಯವಿರುವ ಎಲ್ಲ

ಕೃತಿಗಳನ್ನು ಸುಮಾರು ೫೦ ಬೃಹತ್ ಸಂಪುಟಗಳಲ್ಲಿ ಸಂಗ್ರಹಿಸಿ ಮಹತ್ತರ ಕಾರ್ಯವನ್ನು ಮಾಡಿದ್ದಾರೆ.

**ಎಲ್ಲಕ್ಕಿಂತಲೂ ಸಂತೋಷದಾಯಕವಾದ ಸಂಗತಿ ಎಂದರೆ ತಿರುಪತಿ ತಿರುಮಲೆ ದೇವಸ್ಥಾನದ ಸಂಸ್ಥೆಯು ಉತ್ತಮ ವ್ಯಕ್ತಿಗಳ ಮಾರ್ಗದರ್ಶನದಲ್ಲಿ ಹರಿದಾಸ ಸಾಹಿತ್ಯದ ಪ್ರಾಜೆಕ್ಟ್ ಯೋಜನೆಯ ಅಡಿಯಲ್ಲಿ ವಾಙ್ಮಯವನ್ನು ಜಗದಾದ್ಯಂತ ಪ್ರಚಾರ ಮಾಡಲು ಒಂದು ಕಾರ್ಯಕ್ರಮ ಹಾಕಿಕೊಂಡುದು. ಈ ಸಂಸ್ಥೆಯು ದಾಸ ಸಾಹಿತ್ಯದ ಬಗ್ಗೆ ಹಲವು ಉತ್ತಮ ಪ್ರಕಟಣೆಗಳನ್ನು ಪ್ರಕಟಿಸುವ ಜತೆಯಲ್ಲಿ ಹರಿದಾಸ ಸಾಹಿತ್ಯದ ಬಗ್ಗೆ ಕೃತಿಗಳ ರಚನೆ ಮಾಡಿದ ಲೇಖಕರಿಗೆ ಧನ ಸಹಾಯವನ್ನಿತ್ತು ಪ್ರಕಟಿಸಲು ಪ್ರೋತ್ಸಾಹಿಸುತ್ತಿರುವುದು. ಇದಲ್ಲದೆ ಹರಿದಾಸರ ಸ್ಮಾರಕ ಪ್ರದರ್ಶನ, ಪ್ರಚಾರ, ವಿಚಾರ ಸಂಕಿರಣ, ತತ್ತ್ವಜ್ಞಾನ ಸಮ್ಮೇಳನ ಮುಂತಾದ ದಿಸೆಯಲ್ಲಿ ಸ್ತುತ್ಯವಾದ ವ್ಯಾಪಕವಾದ ಕಾರ್ಯಕ್ರಮಗಳು ನಡೆಸುತ್ತಿರುವುದು ಸಾಕ್ಷಾತ್ ಶ್ರೀನಿವಾಸನೇ ಹರಿದಾಸ ಸಾಹಿತ್ಯ ಪ್ರಚಾರಕ್ಕೆ ಟೊಂಕಕಟ್ಟಿ ನಿಂತಿರುವಂತೆ ಭಾಸವಾಗುತ್ತದೆ. ಮುಂದೆ ಬರಲಿರುವ ದಿನಗಳು ಹರಿದಾಸ ವಾಙ್ಮಯದ ಮರೆತು ಹೋದ ಸ್ವರ್ಣ ಯುಗವನ್ನು ಮರಳಿ ತರಬಹುದೆಂದು ನಿರೀಕ್ಷಿಸಬಹುದಾಗಿದೆ. ತಿರುಪತಿ ಶ್ರೀನಿವಾಸನ ಇಚ್ಛೆಯೂ ಇದೇ ಆಗಿರಬಹುದು.**

ಇವರೆಲ್ಲರಿಗೆ ಸ್ಫೂರ್ತಿಯನ್ನೂ, ಮೂಲ ಸಾಮಾಗ್ರಿಯನ್ನು ಒದಗಿಸಿ, ಹರಿದಾಸ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸಿ, ಅದರ ವ್ಯೋಮ ದರ್ಶನ ಮಾಡಿಸಿದವರು - ಪ್ರಾತಃ ಸ್ಮರಣೀಯರಾಗಿ ಉಡುಪಿ ಕ್ಷೇತ್ರದಲ್ಲಿ ಇದ್ದುಕೊಂಡು ತಮ್ಮ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯವನ್ನು ಆರಂಭಿಸಿ, ಅದರ ಮೂಲಕ ಮಹತ್ತರ ಸೇವೆ ಸಲ್ಲಿಸಿದ **ಪಾವಂಜೆ ಗುರುರಾಯರು**, ಬೆಂಗಳೂರಿನಲ್ಲಿ ಸುಬೋಧಪತ್ರಿಕೆಯನ್ನು ಆರಂಭಿಸಿ ಕರ್ನಾಟಕ ಹರಿದಾಸ ವಾಙ್ಮಯವನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಉಪಕಾರ ಮಾಡಿದ **ರಾಮರಾಯರು**. ಇವರೆಲ್ಲರಿಗೆ ಕೀರ್ತಿ ಶಿಖರದಂತೆ ನಿಲ್ಲುವ ಕಾರ್ಯ ಮಾಡಿದವರು **ಗೋರೆಬಾಳ ಹನುಮಂತರಾಯರು**. ಇವರು ಹರಿದಾಸ ಸಾಹಿತ್ಯದ ಸಂಗ್ರಹ, ಶೋಧನೆ, ಪರಿಷ್ಕರಣ, ಪ್ರಕಟನೆ ಪ್ರಚಾರ ಕಾರ್ಯಕ್ಕಾಗಿ ತಮ್ಮ ಸಮಸ್ತ ಶಕ್ತಿಯನ್ನು ಮೀಸಲಿಟ್ಟು, ಅವಿಶ್ರಾಂತವಾಗಿ ದುಡಿದು, ಕರ್ನಾಟಕದ ಎಲ್ಲ ಹರಿದಾಸರ ಕೃತಿಗಳನ್ನು ಧಾರಾವಾಹಿಯಾಗಿ, ತಮ್ಮ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಮೂಲಕವಾಗಿ ಪ್ರಕಟಿಸಿದ್ದಾರೆ. ಈ ಮೂವರು ಪ್ರಾತಃಸ್ಮರಣೀಯ ದಾಸ ತಪಸ್ವಿಗಳ ಪ್ರಯತ್ನದ ಫಲವಾಗಿ, ಮೈಸೂರು ವಿಶ್ವವಿದ್ಯಾನಿಲಯದವರು ಹರಿದಾಸರ ಸಮಗ್ರ ಸಾಹಿತ್ಯವನ್ನು ಪ್ರಕಟಿಸಲು ಒಂದು ಯೋಜನೆಯನ್ನು ಹಾಕಿಕೊಳ್ಳುವಂತೆ ಆಯಿತು.

ದಾಸ ವಾಙ್ಮಯದಲ್ಲಿ ಕೃತಿ ರಚನೆ ಮಾಡಿದ ಪುರುಷರ ಸಂಖ್ಯೆ ಹೆಚ್ಚಿಸಿದ್ದರೂ,

ಸ್ತ್ರೀಯರೂ ಕೃತಿ ರಚನೆ ಮಾಡದೆ ಇಲ್ಲ. ಇಂಥ ಹಲವಾರು ಮಹಿಳಾ ಮಣಿಗಳು ಬರೆದ ದೇವರನಾಮ, ಕೀರ್ತನೆ ಮತ್ತು ಸಾಹಿತ್ಯ ಗ್ರಂಥಗಳು ದೊರತಿವೆ. ಇವುಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳ ಪ್ರತಿಪಾದನೆ ಇದೆ. ಇವರಲ್ಲಿ ಮುಖ್ಯವಾಗಿ ಹೆಳವನಕಟ್ಟೆ ಗಿರಿಯವ್ವ ಮತ್ತು ಹರಪನಹಳ್ಳಿ ಭೀಮವ್ವ. ಇವರು ಎಲ್ಲರ ಗಮನಕ್ಕೆ ಪಾತ್ರರಾಗಿದ್ದಾರೆ. ಇವರ ಕೃತಿಗಳಲ್ಲಿ ಆಳವಾದ ಆಧ್ಯಾತ್ಮಿಕ ಅನುಭವವಿದೆ. ಇವರಂತೆಯೇ ದಾಸ ಸಾಹಿತ್ಯಕ್ಕೆ ವಿಶಿಷ್ಟ ಕಾಣಿಕೆಯನ್ನು ನೀಡಿದ ಇತರ ಮಹಿಳೆಯರೆಂದರೆ ಗಲಿಗಲಿಯ ಅವ್ವನವರು, (ರಾಮೇಶ) ತುಳಸಾಬಾಯಿ, ತುಂಗಮ್ಮ, ಓರಬಾಯಿ ಲಕ್ಷ್ಮೀದೇವಮ್ಮ - ಮುಂತಾದವರೂ ಕೃತಿರಚನೆ ಮಾಡಿದ್ದಾರೆ. ಇತ್ತೀಚಿನವರೆಗೂ ಮಹಿಳಾ ಮಣಿಗಳು ದೇವರ ನಾಮಗಳನ್ನು ರಚಿಸುವ ಪರಿಪಾಠ ಮುಂದುವರೆಸಿಕೊಂಡು ಬಂದಿರುವರು ಎಂಬುದಕ್ಕೆ ರುಕ್ಮಿಣಿ ಗಿರಿಮಾಜಿ ಅವರ ರಚನೆಗಳು ಸಾಕ್ಷಿಯಾಗಿವೆ.

ಈ ದಿಸೆಯಲ್ಲಿ ಹರಿದಾಸ ಸಾಹಿತ್ಯಕ್ಕೆ ತಮ್ಮ ಜೀವಿತವನ್ನು ಮುಡುಪಿಟ್ಟು ಹುತಾತ್ಮರಾದ **ಪಾವಂಜೆ ಗುರುರಾಯರು, ಗೊರೆಬಾಳ ಹನುಮಂತರಾಯರು ಮತ್ತು ಸುಬೋಧ ರಾಮರಾಯರು** ಈ ಮೂವರು ಹರಿದಾಸ ಪ್ರವರ್ತಕರನ್ನು ಕುರಿತು ಕಿರು ಪರಿಚಯವನ್ನು ಮಾಡಿಕೊಡುವ ಪ್ರಯತ್ನ ಈ ಕೃತಿಯಲ್ಲಿ ನಡೆದಿದೆ. ಈ ಕಾರ್ಯವು ಮುಂದೆ ಬರಲಿರುವ ಬೃಹದ್ಗ್ರಂಥಗಳಿಗೆ ಅವರ ಸಾರಸ್ವತ ಸೇವೆಯ ವಿಸ್ತಾರವಾದ ಅಧ್ಯಯನಕ್ಕೆ ಪ್ರೇರಣೆ ನೀಡಲಿ ಎಂದು ಹಾರೈಸುತ್ತೇನೆ. ಈ ಹರಿದಾಸ ರತ್ನತ್ರಯರ ಹೆಸರಿನಲ್ಲಿ ಸಂಶೋಧನಾ ಪೀಠಗಳು ಏರ್ಪಟ್ಟು ಆ ಮೂಲಕ ಹರಿದಾಸ ಸಾಹಿತ್ಯದ ಪ್ರಚಾರ ಕಾರ್ಯ ನಡೆದು, ಹರಿದಾಸರ ಕನಸು ನನಸಾಗಲೆಂದು ಈ ಸಮಯದಲ್ಲಿ ಬಯಸುತ್ತೇನೆ. ಆ ದಿನ ಬೇಗ ಬರಲೆಂದು ತಿರುಪತಿಯ ಶ್ರೀನಿವಾಸನನ್ನು ಬೇಡುತ್ತೇನೆ.

ಕಡೆಯದಾಗಿ ಈ ಪುಸ್ತಕವನ್ನು ಪ್ರಕಟಿಸಲು ನೆರವಾದ ತಿರುಪತಿ ತಿರುಮಲ ದೇವಸ್ಥಾನದ ಕಾರ್ಯನಿರ್ವಾಹಕ ಮಂಡಲಿಯವರಿಗೂ, ಸುಂದರವಾಗಿ ಮುಖಪುಟ ರಚಿಸಿರುವ ಶ್ರೀಯುತ ವಿಶ್ವನಾಥ ಮಂಡಿಯವರಿಗೂ, ಸುಂದರವಾಗಿ ಮುದ್ರಣ ಮಾಡಿದ ವಾದಿರಾಜ ಪ್ರಿಂಟೆಕ್‌ನ ಮಾಲೀಕರಿಗೂ ಹಾಗೂ ಸಿಬ್ಬಂದಿ ವರ್ಗದವರಿಗೂ, ನನ್ನ ಏಳಿಗೆಗಾಗಿ ಸದಾ ಹಾರೈಸುತ್ತಿರುವ ನನ್ನ ಮಾತೃಶ್ರೀ ಶ್ರೀಮತಿ ಮಂಜುಳಾರವರಿಗೂ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಯನ್ನು ಅರ್ಪಿಸುತ್ತಾ ಈ ಪುಸ್ತಕವನ್ನು ಆಸ್ತಿಕ ಓದುಗರ ಮುಂದೆ ವಿನಯಪೂರ್ವಕವಾಗಿ ಇಡುತ್ತಿದ್ದೇನೆ.

***– ಆನಂದ ಕೊರಟಿ***

# ಹರಿಭಕ್ತಿ - ಒಂದು ವಿವೇಚನೆ

## ೧

ನಮ್ಮ ಪಂಚೇಂದ್ರಿಯಗಳ ವ್ಯಾಪಾರಕ್ಕೆ ಅನುಭವವಾಗುವ ಜಗತ್ತಿನಲ್ಲಿ ಚೇತನಾ ಚೇತನಾತ್ಮಕ ವಸ್ತುಗಳಿವೆ. ಇಚ್ಛೆ, ಜ್ಞಾನ, ಕ್ರಿಯೆಗಳಿರುವ ವಸ್ತುಗಳಿಗೆ ಚೇತನಾತ್ಮಕ ವಸ್ತುವೆಂದೂ, ಇವುಗಳಿಂದ ಹೊರಗಿರುವ, ಸಂವೇದನೆಗೆ ಒಳಪಡದ ವಸ್ತುಗಳನ್ನು ಜಡಪದಾರ್ಥಗಳೆಂದೂ ಸ್ಥೂಲವಾಗಿ ವಿಂಗಡಿಸಬಹುದು. ಒಂದರಲ್ಲಿ ಜೀವಪ್ರಧಾನ, ಇನ್ನೊಂದು ಜಡಪ್ರಧಾನ. ಈ ದೃಷ್ಟಿಯಿಂದ ಅವುಗಳನ್ನು ಆತ್ಮ (ಜೀವ) ಅನಾತ್ಮ ವಸ್ತುಗಳೆಂದು ಕರೆಯಬಹುದು. ಜೀವನು ಅಸ್ವತಂತ್ರನು; ಅವನ ಸ್ವಾತಂತ್ರ್ಯಕ್ಕೆ ಮಿತಿ ಇದೆ. ಅವನಿಗೆ ಹಸಿವು, ಬಾಯಾರಿಕೆ, ಶೋಕ, ಮೋಹ, ಉತ್ಪತ್ತಿ, ಜರಾಮರಣಗಳೆಂಬ ದೋಷಗಳು ಇವೆ. ಜಗತ್ತಿನ ಸೃಷ್ಟಿ ವ್ಯಾಪಾರನ್ನು ನೋಡಿದಾಗ, ಜೀವನಿಗಿಂತಲೂ, ಜಡವಸ್ತುಗಳಿಗಿಂತಲೂ ವಿಭಿನ್ನವಾದ ಒಂದು ಚೇತನ ಅಥವಾ ಮಹಾಚೈತನ್ಯವು ಕಾರ್ಯ ಮಾಡುತ್ತಿರುವುದು ನಮ್ಮ ಅನುಭವಕ್ಕೆ ಗೋಚರಿಸುತ್ತದೆ. ಈ ಚೇತನವನ್ನು ನಾವು ಜೀವನಿಗಿಂತ ವಿಭಿನ್ನನಾದ ಭಗವಂತನೆಂದು ಕರೆಯಬಹುದು. ಹೀಗೆ ಜಗತ್ತಿನಲ್ಲಿ ಮೂರು ಬಗೆಯ ವಸ್ತುಗಳು ಇರುವುವೆಂದಾಯಿತು. ಜೀವ, ಜಡ ಮತ್ತು ಪರಮಾತ್ಮ. ಇವುಗಳ ಪರಸ್ಪರ ಸಂಬಂಧದಿಂದ ಜೀವ-ಜೀವಭೇದ, ಜೀವ-ಜಡಭೇದ, ಜೀವ-ಪರಮಾತ್ಮರ ಭೇದ, ಜಡ- ಪರಮಾತ್ಮರ ಭೇದ, ಜಡ-ಜಡರ ಭೇದಗಳೆಂಬ ಪಂಚಭೇದಗಳು ಜಗತ್ತಿನಲ್ಲಿ ವ್ಯಾಪಾರ ಮಾಡುತ್ತವೆ.[೧] ಇವುಗಳಿಂದ ಕೂಡಿದ ಜಗತ್ತನ್ನು ಪ್ರಪಂಚ ಎಂಬ ಶಬ್ದದಿಂದ ನಿರ್ವಚನ ಮಾಡುತ್ತಾರೆ. (*ಪ್ರಕೃಷ್ಟಃ ಪಂಚವಿಧೋಃ ಭೇದಃ ಪ್ರಪಂಚಃ*).

ಜೀವಜೀವದಲ್ಲೂ, ಜಡಪದಾರ್ಥಗಳಲ್ಲೂ ನಾವು ಭೇದವನ್ನು ಕಾಣುವುದರಿಂದ ತಾರತಮ್ಯಕ್ಕೂ ಅವಕಾಶ ಒದಗುತ್ತದೆ. ಹೀಗೆ ದೃಶ್ಯಾತ್ಮಕವೂ, ಅನುಭವವೇದ್ಯವೂ ಆಗಿರುವ ಜಗತ್ತು ಪಂಚಭೇದ ಹಾಗೂ ತಾರತಮ್ಯಗಳಿಂದ ತುಂಬಿರುವುದರಿಂದ ವೈಜ್ಞಾನಿಕವಾಗಿ ಜಗತ್ತನ್ನು ಸತ್ಯವೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ಜಗತ್ತಿನಲ್ಲಿ ಬದುಕುವ ಜೀವನು ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಾಯಃ-ಎಂಬ ಶ್ರುತಿವಾಕ್ಯದಂತೆ ಅವನು ಇನ್ನೊಬ್ಬರನ್ನು ಆಶ್ರಯಿಸಿಯೇ ಬದುಕಬೇಕು. ಜೀವನಿಗೆ ಸುಖ ದುಃಖಗಳು ಉಂಟು ; ಜಡವಸ್ತುಗಳಿಗೆ ಇರುವುದಿಲ್ಲ. ಈ ಸುಖ ದುಃಖಗಳಿಗೆ ಕಾರಣವಾಗುವ ಕರ್ಮ ಜೀವನಿಗುಂಟು; ಜಡಪದಾರ್ಥಗಳಿಗೆ ಇರುವುದಿಲ್ಲ. ಜೀವನು ಸದಾ

---

೧. ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ।
ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ।
ಮಿಥಶ್ಚ ಜಡಭೇದ್ಯೋಽಯಂ ಪ್ರಪಂಚೋ ಭೇದಪಂಚಕಃ ॥ - **ವಿಷ್ಣುತತ್ತ್ವನಿರ್ಣಯ.**

ಒಂದಲ್ಲ ಒಂದು ಕರ್ಮದಲ್ಲಿ ನಿರತನಾಗಿರುವುದರಿಂದ ಕರ್ಮದ ಫಲಗಳನ್ನು ಅನುಭವಿಸ ಬೇಕಾಗುತ್ತದೆ. ಇವುಗಳಿಂದ ಜನ್ಮಗಳನ್ನು ಎತ್ತಬೇಕಾಗುತ್ತದೆ ಎಂದು ಆಸ್ತಿಕರು ನಂಬುತ್ತಾರೆ.[೧]

ಭಗವಂತನು ಜೀವನಿಗಿಂತ ವಿಭಿನ್ನನಾಗಿರುವುದರಿಂದ ಅವನನ್ನು ಕರ್ಮಗಳಾಗಲೀ, ಕರ್ಮಫಲಗಳಾಗಲೀ ಬಂಧಿಸುವುದಿಲ್ಲ. ಅವನು ಜಡವಲ್ಲ, ಜೀವನಲ್ಲ-ಪರಮಾತ್ಮ ; ಜೀವರಿಗಿಂತ ಭಿನ್ನ. ಇವನನ್ನು ತಿಳಿಯಲು ಹೊರಟ ಶಾಸ್ತ್ರವೇ ತತ್ತ್ವಶಾಸ್ತ್ರ. ಅಂದರೆ ಒಂದು ವಸ್ತುವಿನ ಯಥಾರ್ಥಭಾವ, ಅದು ವಾಸ್ತವವಾಗಿ ಯಾವ ರೂಪ, ಗುಣ ಮುಂತಾದುವುಗಳನ್ನು ಪಡೆದಿದೆಯೋ ಆ ಸ್ವಭಾವ, ಅವುಗಳ ಹಿಂದಿರುವ ತತ್ತ್ವ ಯಾವುದು, ಅವುಗಳ ಪರಸ್ಪರ ಸಂಬಂಧವೇನು - ಇವುಗಳನ್ನು ತಿಳಿಸುವುದೇ ತತ್ತ್ವಶಾಸ್ತ್ರದ ಗುರಿ. ಮಾನವನು ಅನಾದಿ ಕಾಲದಿಂದಲೂ ಇಂಥ ತತ್ತ್ವದ ಅನ್ವೇಷಣೆಯಲ್ಲಿ ತೊಡಗಿದ್ದಾನೆ.

ಸುಪ್ರಸಿದ್ಧ ಗ್ರೀಕ್ ತತ್ತ್ವವಾದಿಯಾದ ಅರಿಸ್ಟಾಟಲನು"ತತ್ತ್ವವಾದವು ಆಶ್ಚರ್ಯ ದಲ್ಲಿ ಹುಟ್ಟುವುದು, ಮನುಷ್ಯನಿಗಿರುವ ಸ್ವಾಭಾವಿಕ ಕುತೂಹಲ, ಜಿಜ್ಞಾಸಾ ಪ್ರವೃತ್ತಿ- ಇವೇ ತತ್ತ್ವವನ್ನು ತಿಳಿಯಲು ಮೂಲಕಾರಣಗಳು"- ಎಂದು ಹೇಳಿದ್ದಾನೆ. ಜೀವ, ಜಡಗಳ ಜಗತ್ತು, ಉತ್ಪತ್ತಿ ಹೇಗೆ ಆಯಿತು? ಪರಸ್ಪರ ಸಂಬಂಧಗಳೇನು? ಇದರಿಂದ ಪ್ರಯೋಜನವೇನು? ಇದನ್ನು ಯಾರಾದರೂ ಸೃಷ್ಟಿಸಿರುವರೋ, ಅದು ತಾನಾಗಿ ಉದ್ಭವವಾಯಿತೋ? ಭಗವಂತ-ದೇವರು ಎಂದು ಕರೆಸಿಕೊಳ್ಳುವ ಒಂದು ವಸ್ತು-ಶಕ್ತಿ- ಇದೆಯೇ? ಇಂಥ ಪ್ರಶ್ನೆಗಳನ್ನು ಅನಾದಿ ಕಾಲದಿಂದಲೂ ಮನುಷ್ಯನು ಕೇಳುತ್ತಾ ಬಂದಿದ್ದಾನೆ. ಅವನ ಸುತ್ತಲಿರುವ ವೈವಿಧ್ಯಮಯವಾದ ಜಗತ್ತು, ಸೂರ್ಯೋದಯ, ಸೂರ್ಯಾಸ್ತಗಳು? ಋತುಗಳ ಬದಲಾವಣೆ, ಸೃಷ್ಟಿ, ಸ್ಥಿತಿ, ಲಯ ವ್ಯಾಪಾರಗಳು; ಜನನ ಮರಣಗಳ ರಹಸ್ಯಗಳು, ಪೃಥ್ವಿ, ಅಪ್, ವಾಯು, ತೇಜ, ಆಕಾಶಗಳೆಂಬ ಪಂಚಭೂತಗಳ ವ್ಯಾಪಾರ -ಅವನನ್ನು ಸದಾ ದಿಙ್ಮೂಡಗೊಳಿಸಿ, ಏಕೆ? ಹೇಗೆ? ಏನು? ಈ ಪ್ರಶ್ನೆಗಳನ್ನು ಕೇಳುವಂತೆ ಮಾಡಿದೆ.

೨

ಮನುಷ್ಯ ಶರೀರದ ರಚನೆ ಅವನಿಗೆ ಎಂದಿನಿಂದಲೂ ವಿಸ್ಮಯಕ್ಕೆ ಕಾರಣವಾಗಿದೆ. ಪಂಚಭೂತಗಳಿಂದ ಆದ ಈ ದೇಹದಲ್ಲಿ ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳು ನಡೆಸುತ್ತಿರುವ ವ್ಯಾಪಾರ ; ಅವುಗಳಿಗೆ ಚಾಲನೆ ಕೊಡುವ ಬುದ್ಧಿ, ಮನಸ್ಸು, ಅಹಂಕಾರ, ಮಹತ್ ಎಂಬ ತತ್ವೇಶರರ ಕಾರ್ಯಕಾರಣ ವಿಧಾನ ; ಜೀವ ಹಾಗೂ ಭಗವಂತನ ಸಂಬಂಧ, ಜೀವರಿಗಿಂತ ವಿಭಿನ್ನನಾದ ಭಗವಂತನನ್ನು ತಿಳಿಯಲು ಸಾಧ್ಯ ಇದೆಯೇ, ಈ ಮಾರ್ಗ ಯಾವುದು? ಜೀವನನ್ನು ಭಗವಂತನೆಡೆಗೆ ನಡೆಸುವ ಸಲಕರಣೆಗಳು, ಸಾಧನಗಳು ಯಾವುವು? ಇವೇ ಮೊದಲಾದ ಪ್ರಶ್ನೆಗಳು ಅನಂತ ಕಾಲದಿಂದ ಅವನನ್ನು ಬಾಧಿಸುತ್ತ ಬಂದಿದೆ. ಜಗತ್ತಿನ ಎಲ್ಲ ತತ್ತ್ವಜ್ಞಾನಿಗಳೂ, ದಾರ್ಶನಿಕರೂ ಈ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನದಲ್ಲಿ

---

೧. ನಿರ್ದುಃಖಮಿತರತ್ಸರ್ವಂ ಜೀವ ಏವ ತು ದುಃಖಿನಃ ತೇಷಾಂ
ದುಃಖ ಪ್ರಹಾಣಾಯ ಶ್ರುತಿರೇಷಾ ಪ್ರವರ್ತಿತಾ ॥ - ಶ್ರುತಿ

ಶ್ರಮಿಸಿದ್ದಾರೆ. ಅವರ ಅಭಿಪ್ರಾಯಗಳಿಗೆ ಸಿದ್ಧಾಂತ, ರಾದ್ಧಾಂತ ಮತ ಅಥವಾ ವಾದವೆಂದು ಹೆಸರು. ಇಂಥ ತತ್ತ್ವವಾದಿಗಳು, ದಾರ್ಶನಿಕರು ಒಂದು ವಿಷಯದಲ್ಲಿ ಏಕಾಭಿಪ್ರಾಯಕ್ಕೆ ಬಂದಿದ್ದಾರೆ. ಅದು ಮನುಷ್ಯನ ಆಸೆ-ಆಕಾಂಕ್ಷೆಗೆ ಸಂಬಂಧಿಸಿದ್ದು. ಜಗತ್ತಿನ ಎಲ್ಲೆಡೆ, ಎಲ್ಲ ಮಾನವರು ಏಕೆ , ಪ್ರಾಣಿಗಳೂ ಹಂಬಲಿಸುವುದು ಸುಖವನ್ನೇ ಎಂಬುದರ ಬಗ್ಗೆ ಎಲ್ಲ ವಿಚಾರ ವಾದಿಗಳ ಏಕಾಭಿಪ್ರಾಯವಿದೆ. ಸುಖದ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯವಿರಬಹುದಾದರೂ, ಇಷ್ಟ ಪ್ರಾಪ್ತಿ, ಅನಿಷ್ಟ ನಿವೃತ್ತಿಯ ಬಗ್ಗೆ ಎಲ್ಲರೂ ಏಕಾಭಿಪ್ರಾಯರಾಗಿದ್ದಾರೆ.

ಮನುಷ್ಯನು ಜೀವನದಲ್ಲಿ ಆಸೆ ಪಡುವುದು ಸುಖ ಅಥವಾ ಆನಂದ. ಅವನು ನಡೆಸುವ ಎಲ್ಲ ವ್ಯಾಪಾರವೂ ಅದರ ಪ್ರಾಪ್ತಿಗಾಗಿಯೇ ಇದೆ. ಈ ಸುಖ ಕ್ಷಣಿಕ ಅಂದರೆ ಕ್ಷಣಭಂಗುರ, ಶಾಶ್ವತವೆಂದು ಎರಡು ವಿಧ. ಸುಖ ಅನುಭವದ ಕ್ಷಣದಲ್ಲಿ ಅಸುಖದ ಭೀತಿ, ಅನಿಷ್ಟ ಪ್ರಾಪ್ತಿಯ ಭೀತಿ ಇದ್ದೇ ಇರುತ್ತದೆ. ಇಂಥ ಸುಖ ಪೂರ್ಣವೆನಿಸಬೇಕಾದರೆ, ಇಷ್ಟ ಪ್ರಾಪ್ತಿಯ ಜತೆಯಲ್ಲೇ ಅನಿಷ್ಟದ ನಿವೃತ್ತಿಯೂ ಇರಬೇಕಾಗುತ್ತದೆ. ಮನುಷ್ಯನು ಈ ಜಗತ್ತಿನಲ್ಲಿ ಅಸ್ವಂತಂತ್ರನೂ, ಪರಾವಲಂಬಿಯೂ ಆಗಿದ್ದಾನೆ - ಎಂಬ ಮಾತು ಎಲ್ಲರ ಅನುಭವಕ್ಕೆ ಬಂದಿದೆ.

ಇಚ್ಛಾಶಕ್ತಿ, ಕ್ರಿಯಾಶಕ್ತಿಗಳು ಜೀವನ ಲಕ್ಷಣ. ನಾವು ಕಣ್ಣಿನಿಂದ ನೋಡುತ್ತೇವೆ, ನಾಲಿಗೆಯಿಂದ ರುಚಿ ತಿಳಿಯುತ್ತೇವೆ, ಕಿವಿಯಿಂದ ಕೇಳುತ್ತೇವೆ, ಮೂಗಿನಿಂದ ವಾಸನೆ ನೋಡುತ್ತೇವೆ, ಚರ್ಮದಿಂದ ಸ್ಪರ್ಶ ಉಂಟಾಗುತ್ತದೆ. ಹೀಗೆ ಪಂಚೇಂದ್ರಿಯಗಳಿಂದ ಹೊರಗಿನ ಜಗತ್ತಿನ ಸಂಪರ್ಕ, ಅನುಭವ ಪಡೆಯುತ್ತೇವೆ. ಇಂಥ ಅನುಭವ ಪಡೆಯುವುದು ಈ ಪಂಚೇಂದ್ರಿಯಗಳು ಅಲ್ಲ. ಅವು ಕೇವಲ ಉಪಕರಣಗಳು ಮಾತ್ರ. ಅವುಗಳ ಹಿಂದೆ ಇರುವ, ಪ್ರತ್ಯಕ್ಷಕ್ಕೆ ಕಾಣದ ಜೀವ ಎಂಬುದನ್ನು ನಾವು ಅನುಮಾನ, ತರ್ಕಗಳಿಂದಲೂ, ಊಹೆಯಿಂದಲೂ ತಿಳಿದುಕೊಳ್ಳಬಹುದು. ಈ ಜೀವವು ಹೊರಟುಹೋದರೆ ದೇಹವು ಜಡವಾಗುವುದು. ಅದು ಪಂಚಭೂತಾತ್ಮಕವಾದುದರಿಂದ ಪಂಚಭೂತಗಳಿಗೆ ಸೇರಿ ಹೋಗುವುದು. ಆದರೆ ದೇಹದಲ್ಲಿದ್ದು ಕೆಲಸ ಮಾಡುತ್ತಿದ್ದ ಜೀವವು ಅದರ ಸಂಬಂಧವಾಗಿ ಇದ್ದ ಬುದ್ಧಿ, ಮನಸ್ಸು, ಅಹಂಕಾರ ಮತ್ತು ಮಹತ್ ತತ್ತ್ವಗಳು ಎಲ್ಲಿ ಹೋದವು? ಏನಾದವು?- ಎಂಬುದು ಅವನಿಗೆ ಪ್ರಶ್ನಾತ್ಮಕವಾಗಿ ಉಳಿಯುತ್ತದೆ. ಇಂಥ ಪ್ರಶ್ನೆಗಳಿಗೆ ತತ್ತ್ವವಾದವು ಉತ್ತರ ಹೇಳಲು ಪ್ರಯತ್ನಿಸುತ್ತದೆ.

ಜೀವನು ಜಗತ್ತಿನಲ್ಲಿ ವ್ಯಾಪಾರ ಮಾಡುವಾಗ -ಕೆಲಸ ಮಾಡಲು ಆರಂಭಿಸಿದಾಗ ಆ ಕೆಲಸಕ್ಕೆ ಅವಶ್ಯಕವಾದ ಸಾಮರ್ಥ್ಯವು ಇಲ್ಲದೆ ಹೋಗಬಹುದು, ಕಾರ್ಯ ಸಾಧನೆಗಾಗಿ ಸಲಕರಣೆಗಳೂ ಒದಗದೇ ಇರಬಹುದು, ಕೆಲಸವನ್ನು ಸಮರ್ಪಕವಾಗಿ ಮುಗಿಸಿಯೂ, ಜೀವನು ಇಷ್ಟಪಟ್ಟ ಪ್ರಯೋಜನವನ್ನು ಪಡೆಯದೆ ಹೋಗಬಹುದು. ಇವುಗಳ ವಿಮರ್ಶೆಯಿಂದ ಹೊರಪಡುವ ಅಂಶವೆಂದರೆ ನಮಗಿಂತಲೂ ಒಂದು ಅದೃಷ್ಯಶಕ್ತಿ ನಿಂತು ವ್ಯಾಪಾರ ಮಾಡುತ್ತಿದೆ ಎಂಬುದು.

ನಾವು ಜಗತ್ತಿನಲ್ಲಿ ಅನುಭವದಿಂದ ತಿಳಿಯುತ್ತಿದ್ದೇವೆ- ನಮಗಿಂತ ಕಡಿಮೆ ಕೆಲಸ ಮಾಡುವವನಿಗೆ ಹೆಚ್ಚು ಫಲ ದೊರೆಯಬಹುದು. ಕೆಲವರು ಕರ್ಮ ಮಾಡಿಯೂ ಯೋಗ್ಯ ಫಲವನ್ನು ಪಡೆಯದೆ ಇರಬಹುದು ; ಇನ್ನೂ ಕೆಲವರು ಯಾವುದೇ ಕರ್ಮ ಮಾಡದಿದ್ದರೂ ಸತ್ಫಲವನ್ನು

ಹೊಂದಬಹುದು. ಇವುಗಳನ್ನು ಪರಿಶೀಲಿಸಿದಾಗ ಮನುಷ್ಯನ ಶಕ್ತಿಗೆ ಮೀರಿದ ಒಂದು ವಸ್ತು ಅಥವಾ ಪರಾಶಕ್ತಿ ಇದ್ದು ಅದು ಆಯಾ ಜೀವರ ಪೂರ್ವಾರ್ಜಿತ ಕರ್ಮಗಳಿಗೆ ಉದ್ದಿಷ್ಟ ಫಲಗಳನ್ನು -ಪಾಪ ಪುಣ್ಯಗಳೆಂಬ, ದುಃಖ ಇಲ್ಲವೇ ಸುಖರೂಪದ ಫಲಗಳನ್ನು ನೀಡುತ್ತಿದೆ ಎಂಬ ಸಂಗತಿ ಅನುಭವ ವೇದ್ಯವಾಗುತ್ತದೆ. ಈ ಪರ ವಸ್ತುವನ್ನು ಪರಮಾತ್ಮ, ಭಗವಂತನೆಂದು ಕರೆಯುತ್ತಾರೆ. ಅವನು ಪಂಚೇಂದ್ರಿಯಗಳಿಗೆ ಗೋಚರನಾಗದಿದ್ದರೂ, ಅನುಭವಕ್ಕೆ ವೇದ್ಯ, ಭಾವಕ್ಕೆ ಗೋಚರನೆಂದು ಭಾರತೀಯ ವೇದಶಾಸ್ತ್ರ ಪುರಾಣಗಳು ಸಾರುತ್ತವೆ. ಸರ್ವಶಕ್ತನಾದ ಪರಮಾತ್ಮನು ತನ್ನಿಚ್ಛೆಯಂತೆ ತಾನು ಅನುಗ್ರಹಿಸಿದ, ತನ್ನ ಕೃಪೆಗೆ ಪಾತ್ರರಾದ ಮನುಷ್ಯರಿಗೆ ಪಂಚೇಂದ್ರಿಯಗಳಿಗೆ ಗೋಚರನೂ ಆಗಬಹುದು. ಭಾವ ಗೋಚರವಾದ ಈ ಸ್ವಾಮಿಯನ್ನು ಪ್ರತ್ಯಕ್ಷವಾಗಿ ಕಂಡ ಅಪರೋಕ್ಷ ಜ್ಞಾನಿಗಳೂ, ಭಗವದ್ಭಕ್ತರೂ ಈ ನಾಡಿಲ್ಲಿ ಅನೇಕರು ಆಗಿ ಹೋಗಿದ್ದಾರೆ.

ಭಗವಂತನು ಜೀವನಿಗಿಂತ ಭಿನ್ನನೂ, ಸ್ವತಂತ್ರನೂ, ಜ್ಞಾನಾನಂದಾದಿ ಸಕಲ ಗುಣ ಪೂರ್ಣನೂ, ಭಕ್ತವತ್ಸಲನೂ, ಮುಕ್ತಿಪ್ರದನೂ ಆಗಿರುವನೆಂದು ಎಲ್ಲ ನಾಡಿನ, ಎಲ್ಲ ಕಾಲದ ಸಾಧು - ಸಂತರು, ಭಗವದ್ಭಕ್ತರೂ ನಂಬಿದ್ದಾರೆ.

ಭಗವಂತನನ್ನು ಶ್ರುತಿಗಳು "ಸ್ವಸ್ಮಿನ್ನೇವಾ ಪತಿಷ್ಠತೇ" - ಎಂದು ವರ್ಣಿಸಿದೆ. ಅಂದರೆ ಅವನು ತನ್ನಲ್ಲೇ ಸದಾ ಇರುವವನು. ಸ್ವರಮಣನನು. ಅವನಿಗೆ ಈ ಕಾರಣದಿಂದ ಈಶತ್ವ ಪ್ರಾಪ್ತವಾಗಿದೆ. ಜೀವೇಶರಿಬ್ಬರೂ ನಿತ್ಯರೆಂದು ಶ್ರುತಿ ಸ್ಮೃತಿಗಳು ಸಾರುತ್ತವೆ. ಚೇತನತ್ವದಲ್ಲಿ ಇಬ್ಬರೂ ಸಮರು. ಆದರೆ ಜೀವನಿಗೆ ಸ್ವಾತಂತ್ರ್ಯವಿಲ್ಲ. ಭಗವಂತನು ಸರ್ವತಂತ್ರ ಸ್ವತಂತ್ರನು. ಜೀವನು ಅಲ್ಪ ಇಚ್ಛಾ, ಜ್ಞಾನಕ್ರಿಯೆ ಆನಂದಾದಿಗುಣಗಳನ್ನು ಹೊಂದಿರುವವನು. ಭಗವಂತನು ಪರಿಪೂರ್ಣನು. ಅವನು ಆತ್ಮಾನಾತ್ಮ ಅಂದರೆ ಜೀವಜಡವಸ್ತುಗಳ ಪ್ರಪಂಚಕ್ಕೆ ಒಡೆಯನಾಗಿರುವುದರಿಂದ ಪರಮಾತ್ಮನಿಗೆ ದುಃಖಾದಿಗಳ ಸಂಬಂಧವು ಇರುವುದಿಲ್ಲ. ಅನಾದಿ ಅನಂತರಾದ ಜೀವಕೋಟಿಗೆ ಭಗವಂತನು ದೇಹವನ್ನು ನೀಡುವುದಷ್ಟೇ ಜಗತ್ತಿನ ಸೃಷ್ಟಿ ಎನಿಸುವುದು; ಅವುಗಳ ರಕ್ಷಣೆಯು ಸ್ಥಿತಿ ಎನಿಸುವುದು. ಅವುಗಳ ಅಂದರೆ ದೇಹದ ನಾಶವು ಪ್ರಳಯ ಅಥವಾ ಲಯವೆನಿಸುವುದು. ಪ್ರಳಯ ಕಾಲದಲ್ಲಿ ಅಂದರೆ ಕಲ್ಪಾಂತದಲ್ಲಿ ಎಲ್ಲ ಜೀವರು ಪರಮಾತ್ಮನ ಹೊಟ್ಟೆಯಲ್ಲಿ ಅಡಗಿ ನಿಶ್ಚೇಷ್ಟಿತರಾಗಿರುವರು. ಭಗವಂತನ ಇಚ್ಛೆಯಂತೆ ಅವನ ಲೀಲೆಗಾಗಿ ಮತ್ತೆ ಕಲ್ಪಾದಿಯಲ್ಲಿ ಚೇಷ್ಟೆಯನ್ನು ಆರಂಭಿಸುವರು. ಇದೇ ಜಗದ್ವ್ಯಾಪಾರವೆನಿಸುತ್ತದೆ. ಜೀವರು ತಮ್ಮ ಅನಾದಿ ಕರ್ಮ ನಿಮಿತ್ತರಾಗಿ ಅಂದರೆ ದೇಹ ಸಂಬಂಧದಿಂದ ಜನನ, ದೇಹ ವಿಯೋಗದಿಂದ ಮರಣ, ರಕ್ಷಣೆ, ನಿಯಮನ, ಜ್ಞಾನಲಾಭ, ಜ್ಞಾನತಿರೋಧಾನ ಅಂದರೆ ಅಜ್ಞಾನ, ಸಂಸಾರ ಬಂಧನ ಅಂದರೆ ಜಗತ್ತಿನ ಹುಟ್ಟು ಸಾವಿನ ಜನ್ಮಗಳನ್ನು ಪಡೆಯುವುದು, ಭವಬಂಧನ ರಹಿತವಾದ ಮೋಕ್ಷ ಅಂದರೆ ಹುಟ್ಟು ಸಾವಿನಿಂದ ಬಿಡುಗಡೆ ಹೊಂದುವುದನ್ನು ಈಶನಾದ ಪರಮಾತ್ಮನು ನಡೆಸುತ್ತಿರುವ ಲೀಲಾಮಯವಾದ ವ್ಯಾಪಾರ. ಜೀವನು ಅನುಭವಿಸುವ ಈ ಊರ್ಮಿಗಳಿಂದ (ದೋಷಗಳಿಂದ) ಭಗವಂತನು ಮುಕ್ತನು. ಸರ್ವವೂ ಅವನ ಅಧೀನವಾಗಿರುವುದರಿಂದ ಅವನಿಗೆ ಸರ್ವನೆಂದೇ ಹೆಸರು. ಜೀವೇಶರಿಬ್ಬರೂ ಜಲಾನಲ (ನೀರು ಬೆಂಕಿ) ಗಳಂತೆ ವಿರುದ್ಧ ಗುಣಧರ್ಮವುಳ್ಳವರು ಎಂದು ಹೇಳುತ್ತಾರೆ.

ಭಗವಂತನು ಸ್ವತಂತ್ರನು, ಜೀವರು ಅಸ್ವತಂತ್ರರು, ಅವನು ನಡೆಸುವ

ವ್ಯಾಪಾರಗಳೆಲ್ಲವೂ, ಚೇಷ್ಟೆಗಳೆಲ್ಲವೂ ಅಧೀನವೆಂದ ಮೇಲೆ, ಜೀವನು ಮಾಡುವ ಕರ್ಮ ಫಲಗಳಿಗೆ, ಪಾಪ ಪುಣ್ಯಗಳಿಗೆ ಸುಖ ದುಃಖಗಳಿಗೆ ಅವನು ಎಷ್ಟರ ಮಟ್ಟಿಗೆ ಹೊಣೆಗಾರನಾಗುತ್ತಾನೆ? ಈ ಪ್ರಶ್ನೆಗಳು ಏಳುವುದೂ ಸಹಜ. ಈ ಪ್ರಶ್ನೆಗೆ ಉತ್ತರ ದತ್ತ ಸ್ವಾತಂತ್ರ್ಯ.

೩

ಭಗವಂತನಾದ ಶ್ರೀಹರಿಯೆ ಸರ್ವಕರ್ತನು, ಸ್ವತಂತ್ರಕರ್ತನು; ಜೀವನು ಪರಾಧೀನ ಕರ್ತನು; ಜಡನಲ್ಲ. ವಿಧಿ ನಿಷೇಧಗಳು ಭಗವಂತನ ಆಜ್ಞೆಗಳು. ಸ್ವತಂತ್ರನಾದ ಭಗವಂತನು ವಿಧಿ ನಿಷೇಧಗಳಿಂದ ಬದ್ಧನಲ್ಲ; ಪರಾಧೀನನು ಬದ್ಧನು. ಜಡವು ಜ್ಞಾನಶೂನ್ಯವಾದ ಸುಖಾದಿಗಳನ್ನು ಅನುಭವಿಸುವ ಯೋಗ್ಯತೆ ಪಡೆದಿರುವುದಿಲ್ಲ. ಕರ್ಮಬಂಧವು ಜೀವನಿಗೆ ಮಾತ್ರ.

ಬ್ರಹ್ಮ ಸೂತ್ರದ 'ಕರ್ತಾಶಾಸ್ತ್ರಾರ್ಥವತ್ವಾತ್' ಎಂಬ ಸೂತ್ರದಲ್ಲಿ ವಿಧಿನಿಷೇಧ ರೂಪದ ಶಾಸ್ತ್ರಗಳು ಪ್ರಯೋಜನವುಳ್ಳವಾದ್ದರಿಂದ ಜೀವನು ಅಸ್ವತಂತ್ರನಾದರೂ ಕರ್ತನೇ, ಕ್ರಿಯಾಶಕ್ತಿ ಸ್ವರೂಪವನ್ನು ಹೊಂದಿಲ್ಲದ ಜಡನಲ - ಎಂದು ಹೇಳಿದೆ.

ಶ್ರೀಕೃಷ್ಣನು ಗೀತೆಯಲ್ಲಿ ಈ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾನೆ. ಯೋಗ್ಯಾಯೋಗ್ಯ ಸಕಲ ಕರ್ಮಗಳ ಸಂಭವಕ್ಕೆ ಅಂದರೆ ಘಟನೆಗಳಿಗೆ ಐದು ಬಗೆಯ ಕಾರಣಗಳು ಇವೆ.[೧] ೧)ದೇಹ ಭೂಮ್ಯಾದಿ ಅಧಿಷ್ಠಾನ, ೨)ಜ್ಞಾನ ಇಚ್ಛಾಕ್ರಿಯಾಶಕ್ತಿಗಳನ್ನು ಸ್ವರೂಪದಲ್ಲಿ ಹೊಂದಿರುವ ಜೀವ, ೩) ವಿವಿಧವಾದ ಇಂದ್ರಿಯಗಳು ಅಂದರೆ ಕರಣಗಳು, ಸಾಧನಗಳು, ೪) ಅವುಗಳ ನಾನಾ ವ್ಯಾಪಾರಗಳು ಅಂದರೆ ಚೇಷ್ಟೆಗಳು, ೫) ಅದೃಷ್ಟ ಅಂದರೆ ಪ್ರೇರಕವಾದ ಶ್ರೀಹರಿ (ಭಗವಂತ) ಇವೆಲ್ಲವೂ ಕೂಡಿಯೇ ಕಾರಣಗಳು. ಹೀಗಿರಲು ತಾನು ಮಾತ್ರ ಕಾರಣನೆಂದೂ ತಿಳಿಯುವ ನರನು ಜ್ಞಾನಶೂನ್ಯನು.

ಈ ಐದು ಕಾರಣಗಳಲ್ಲಿ ಪ್ರತಿಯೊಂದೂ ಸಮಾನ ಸ್ಥಾನವುಳ್ಳವುಗಳೆಂದು ಭ್ರಮಿಸ ಬಾರದು. ಇವುಗಳಲ್ಲಿ ಐದನೆಯ ಕಾರಣನಾದ ಶ್ರೀಹರಿಯೇ ಸ್ವತಂತ್ರ ಕಾರಣನು. ಮಿಕ್ಕ ನಾಲ್ಕು ಅವನ ಅಧೀನ ಕಾರಣಗಳು. ಮಹಾಭಾರತದಲ್ಲಿ ಯುದ್ಧಾರಂಭಕ್ಕೆ ಮುನ್ನ ಅರಣ್ಯವಾಸದ ಮರು ದಿನ ಧರ್ಮರಾಯನು ಶ್ರೀಹರಿಯೆ ಸರ್ವಕರ್ತನೆಂದು, ತಾವು ಸುಮ್ಮನಿರಬೇಕೆಂದು ಹೇಳಿದಾಗ, ಮೊದಲು ದ್ರೌಪದಿಯು, ಅನಂತರ ಭೀಮಸೇನನೂ ಜೀವನ ಪ್ರಯತ್ನಕ್ಕೆ ಸ್ಥಾನವುಂಟೆಂದು, ಅಜ್ಞಾತವಾಸ ಮುಗಿದೊಡನೆ ದುರ್ಯೋಧನನು ಧರ್ಮದಿಂದ ರಾಜ್ಯಕೊಡದೆ ಇದ್ದರೆ ಯುದ್ಧ

---

೧. ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥
ಶರೀರ ವಾಙ್ಮನೋ ಭಿರ್ಯತ್ಕರ್ಮ ಕುರುತೇನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥
ತತ್ರೈವಂ ಸಃ ಕರ್ತಾರಂ ಆತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತ ಬುದ್ಧಿತ್ವಾನ್ನ ಸಃ ಪಶ್ಯತಿ ದುರ್ಮತಿಃ ॥

-(ಭಗವದ್ಗೀತಾ)

ಮಾಡಿ ಕಿತ್ತುಕೊಳ್ಳುವುದಾಗಿ ತಿಳಿಸುತ್ತಾನೆ. ಈ ಮಾತಿಗೆ ಮಧ್ವಾಚಾರ್ಯರು ಜೀವಸ್ವಭಾವವಾದ ಹಠವು ಮೊದಲನೆಯ ಕಾರಣವೆಂದು, ಅನಾದಿ ಕರ್ಮವು ಎರಡನೆಯ ಕಾರಣವೆಂದೂ, ಪೌರುಷವೆಂದು ಕರೆಯಲ್ಪಡುವ ಪುರಷ ಪ್ರಯತ್ನವು ಮೂರನೆಯ ಕಾರಣ - ಇವು ಮೂರು ಶ್ರೀಹರಿಯ ಅಧೀನದಲ್ಲಿದೆ. ಶ್ರೀಹರಿಯು ಮಾತ್ರ ಸರ್ವೋತ್ತಮನು, ಸ್ವತಂತ್ರನೂ ಆಗಿದ್ದಾನೆ. ಆದರೆ ಜೀವನ ಯೋಗ್ಯತೆ ಮತ್ತು ಪೂರ್ವಕರ್ಮಗಳಿಗನುಸಾರ ಪುರುಷ ಪ್ರಯತ್ನವು ಅಭಿವ್ಯಕ್ತಗೊಳಿಸುತ್ತದೆ ಎಂದು ಅರ್ಥ ಹೇಳಿದ್ದಾರೆ.[೧]

ಜೀವರು ಅಸ್ವತಂತ್ರರಾದರೂ ದತ್ತ ಸ್ವಾತಂತ್ರ್ಯವುಳ್ಳವರು. ಅವರು ತಮ್ಮ ಯೋಗ್ಯತಾನುಗುಣವಾದ ಕರ್ತೃತ್ವವುಳ್ಳವರಾಗಿ ಕರ್ಮಗಳನ್ನು ಮಾಡುತ್ತಾರೆ. ಕರ್ಮದಲ್ಲಿ ಜೀವರಿಗೆ ಅಧಿಕಾರವಿದೆ. ಆದರೆ ಫಲದಲ್ಲಿ ಸ್ವಾತಂತ್ರ್ಯವಿಲ್ಲವೆಂದೇ ಈ ಮಾತಿನ ಅರ್ಥ. (*ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ*) ಎಂದು ತಿಳಿಯಬೇಕು.

ಜೀವರು ಬಿಂಬನಾದ ಭಗವಂತನ ಪ್ರತಿಬಿಂಬರು. ಸರ್ವಕ್ರಿಯೆಗಳು ಬಿಂಬನ ಅಧೀನನಾಗಿ ನಡೆಯುವುದು. ಜಡ ವಸ್ತುಗಳೂ ಶ್ರೀಹರಿಯ ಪ್ರತಿಬಿಂಬಗಳೇ. ಆಕಾರ ಮತ್ತು ಗುಣಗಳಲ್ಲಿ ಅವುಗಳಿಗೆ ಅಲ್ಪ ಸದೃಶ್ಯವಿದೆ ಎಂದು ಅರ್ಥ. ಎಲ್ಲ ಜೀವರು ತಮ್ಮ ಸೊತ್ತಮರಾದ ಇತರ ಎಲ್ಲ ಜೀವರ ಪ್ರತಿಬಿಂಬರೂ ಆಗಿದ್ದಾರೆ. ಆದರೆ ಶ್ರೀಹರಿಯೆ ಮುಖ್ಯ ಬಿಂಬನೆಂಬುದನ್ನು ಮರೆಯಬಾರದು.ವಾಯುದೇವರು ಯೋಗ್ಯತೆಯಿಂದ ಶ್ರೀಹರಿಗೆ ಮುಖ್ಯ ಪ್ರತಿಬಿಂಬರೆನಿಸುತ್ತಾರೆ.

ಜೀವಸ್ವರೂಪವೇ ಅನಾದಿ ನಿತ್ಯವಾದುದು. ಅನಂದವಾದದು; ಆದ್ದರಿಂದ ಪ್ರತಿಬಿಂಬತ್ವವೂ ಅನಾದಿನಿತ್ಯವೇ, ಅನಂತವೇ. ಆದರೆ ಜೀವನಿಗೆ ಬಾಹ್ಯೋಪಾಧಿ ಇದೆ. ಅದು ನಾಶವುಳ್ಳದ್ದು. ಅದು ನಾಶವಾದರೆ ಜೀವನು ಮುಕ್ತನಾಗುತ್ತಾನೆ. ಇದರ ನಾಶವೆಂದರೆ ಬಿಂಬನಾಶ, ಉಪಾದಿನಾಶ ಅಥವಾ ಇವುಗಳ ಸನ್ನಿಧಿ ನಾಶ. ಈ ಮೂಲಕವಾಗಿ ಕನ್ನಡಿಯಿಂದ ದೂರವಾದ ಪ್ರತಿಬಿಂಬನು ಸ್ವರೂಪದಲ್ಲಿ ನಿತ್ಯನಾದರೂ, ಬಾಹ್ಯೋಪಾಧಿಯ ನಾಶದಿಂದ ಮೋಕ್ಷ ಹೊಂದುವನು. ಅಲ್ಲಿಯೂ ಅವನು ಬಿಂಬ - ಪ್ರತಿಬಿಂಬ ಭಾವದಲ್ಲಿದ್ದುಕೊಂಡು, ಸ್ವರೂಪಾನಂದವನ್ನು ಅನುಭವಿಸುವನು.

ಹಾಗಾದರೆ "*ತೇನ ವಿನಾ ತೃಣಮಪಿ ನ ಚಲತಿ,*" ಮತ್ತು "*ಸ ಹಿ ಸರ್ವಸ್ಯ ಕರ್ತಾ*"- ಎಂಬ ಶ್ರುತಿವಾಕ್ಯಗಳಿಗೆ ಅರ್ಥವೇನು? ಸರ್ವಕರ್ತತ್ವವೂ ಶ್ರೀಹರಿಯದಾದರೆ, ಮನುಜರಿಗೆ ಕರ್ತೃತ್ವವೆಲ್ಲಿ? ಆದರ ಫಲವಾಗಿ ಬರುವ ಪಾಪ ಪುಣ್ಯಗಳೆಲ್ಲಿ? ಸುಖ ದುಃಖಗಳೆಲ್ಲಿ? ಈ ಪ್ರಶ್ನೆಗಳಿಗೆ ಬಾದರಾಯಣರು- ಜೀವನು ಪರಮಾತ್ಮನ ಪ್ರತಿಬಿಂಬನಾದುದರಿಂದ ಅವನಲ್ಲೂ ಪರಾಧೀನ ಕರ್ತೃತ್ವವಿದೆ. ಅವನಿಗೆ ಭಗವಂತನು ನೀಡಿರುವ ದತ್ತ ಸ್ವತಂತ್ರ್ಯದಿಂದ ಕಾರ್ಯ ಮಾಡುವ ಮತ ಸ್ವಾತಂತ್ರ್ಯವಿದೆ ಎಂದು ಹೇಳಿದ್ದಾರೆ.[೨] ಒಂದು ಗೊತ್ತಿಗೆ ದೊಡ್ಡ ಹಗ್ಗವನ್ನು ಕಟ್ಟಿಬಿಟ್ಟ ಹಸುವಿನಂತೆ

---

೧. ಸ್ವಭಾವಾಖ್ಯಾಯೋಗ್ಯತಾ...........
ಪರಮೋನೌ ಸ್ವತಂತ್ರ...... - *ಮಹಾಭಾರತ ತಾತ್ಪರ್ಯ ನಿರ್ಣಯ.*

೨. ವಿಹಾರೋಪದೇಶಾತ್, ಯಥಾ ಚ ತಕ್ಷೋಭಯಥಾ, ಕರ್ತಾ ಶಾಸ್ತ್ರಾರ್ಥವತ್ವಾತ್- ಇತ್ಯಾದಿ ಬ್ರಹ್ಮಸೂತ್ರ ವಾಕ್ಯಗಳು.

ಜೀವನ ದತ್ತ ಸ್ವಾತಂತ್ರ್ಯ. ಆ ಪರಿಧಿಯೊಳಗೆ ಚಲಿಸುವಷ್ಟೇ ಜೀವನಿಗೆ ನೀಡಲ್ಪಟ್ಟಿರುವ ಸ್ವಾತಂತ್ರ್ಯ. ಇಚ್ಛಾ, ಜ್ಞಾನ,ಕ್ರಿಯಾಶಕ್ತಿಗಳೂ ಮಿತವಾಗಿದ್ದರೂ, ಜೀವನ ಸ್ವರೂಪ ಧರ್ಮಗಳು ಭಿನ್ನ ಭಿನ್ನ ಯೋಗ್ಯತೆಯುಳ್ಳ ಜೀವರಿಂದ ಪರಮಾತ್ಮನು ನಾನಾ ಪ್ರಕಾರದ ಕರ್ಮಗಳನ್ನು ಮಾಡಿ, ಮಾಡಿಸಿ, ಅವುಗಳ ಕರ್ಮಫಲಗಳನ್ನು ತತ್ವೇಶರಿಂದ ತಾನು ಉಂಡು ಜೀವರಿಗೆ ಉಣಿಸುತ್ತಾನೆ. ಭಗವಂತನು ಸ್ವತಂತ್ರನೂ, ಪೂರ್ಣಕಾಮನೂ, ನಿರಪೇಕ್ಷನೂ ಆಗಿರುವುದರಿಂದ ಜೀವನು ಪರಾಧೀನ ಕರ್ತನಾಗಿರುವುದರಿಂದ, ಶ್ರೀಹರಿಯು ಜೀವನ ಇಚ್ಛಾ ಪ್ರಯತ್ನಗಳನ್ನು ಪ್ರವೃತ್ತಿಗೊಳಿಸಿದಂತೆ, ಪ್ರವೃತ್ತನಾಗಿ ಜೀವನ ಯೋಗ್ಯತೆಯಂತೆ ಕಾರ್ಯಪ್ರವೃತ್ತನಾಗಿ ಕರ್ಮಫಲಗಳಿಗೆ ಭಾಗಿಯಾಗುವನು. ಅವುಗಳ ಫಲರೂಪವಾದ ಸುಖ ದುಃಖಗಳನ್ನು ಜೀವನು ಅನುಭವಿಸುವನೆಂದು ಜ್ಞಾನಿಗಳು ತಿಳಿಯುತ್ತಾರೆ.

ಶಾಂಡಿಲ್ಯರು ತಮ್ಮ ಭಕ್ತಿಸೂತ್ರದಲ್ಲಿ ಹೇಳಿರುವ ಮಾತು ಇಲ್ಲಿ ಗಮನಾರ್ಹವಾಗಿದೆ.[೧]

*ಬಿಂಬನು ಉಂಡರೆ ಪ್ರತಿಬಿಂಬನು ಉಣ್ಣುವನು, ಮಾತಾಡಲು ಮಾತಾಡುವನು, ಹೆಚ್ಚೇನು? ಬಿಂಬ ಮಾಡದ ಏನನ್ನೂ ಪ್ರತಿಬಿಂಬನು ಮಾಡನು. ಈ ಮಾತಿನಿಂದ ಜೀವನ ಅಸ್ವಂತಂತ್ರ್ಯವು ಸ್ಪಷ್ಟವಾಗುತ್ತದೆ. ಆದರೂ ಶ್ರೀಹರಿಯು ಅಚಿಂತ್ಯ ಮಹಿಮೆಯುಳ್ಳವನಾಗಿರುವುದರಿಂದ ತನ್ನ ಸ್ವತಂತ್ರ್ಯದ ಒಂದು ಅಂಶವನ್ನು ಜೀವನಲ್ಲಿ ಇರಿಸಿ, ಸ್ವಾತಂತ್ರ್ಯವನ್ನು ದಾನ ಮಾಡುವನು. ಸ್ವಾತಂತ್ರ್ಯ ದಾನವೆಂದರೆ ತನ್ನಾಮಕರೂಪದಿಂದ ಜೀವನನ್ನು ಪ್ರವೇಶಿಸುವುದೇ ಆಗಿದೆ. ಸ್ವಗತ ಸ್ವಾತಂತ್ರ್ಯ, ದತ್ತ ಸ್ವಾತಂತ್ರ್ಯ ಮತ್ತು ಸರ್ವ ಸ್ವಾತಂತ್ರ್ಯಗಳೆಂಬ ಮೂರು ರೂಪಗಳಲ್ಲೂ ಶ್ರೀಹರಿಯು ಈ ಜಗತ್ತಿನ ಸಕಲ ವ್ಯಾಪಾರಗಳನ್ನು ನಡೆಸುತ್ತಾನೆಂದು ಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ.*

೪

ಅನಂತ ಜೀವರಾಶಿಗಳಲ್ಲಿ ಮಾನವ ಜನ್ಮ ಪ್ರಾಪ್ತವಾಗುವುದು ದುರ್ಲಭ. ಕ್ರಿಮಿ ಕೀಟಾದಿ ಶರೀರಗಳು ಜೀವರು ಮಾಡಿದ ಪೂರ್ವಜನ್ಮಗಳ ಪಾಪದ ಫಲವೆಂದು ಹೇಳುತ್ತಾರೆ. ಇವುಗಳಿಗೆ ಚೈತನ್ಯವಿದ್ದರೂ ಜ್ಞಾನವಿಲ್ಲದುದರಿಂದ ಧರ್ಮಾಚರಣೆಗೆ ದಾರಿ ಇಲ್ಲದೆ, ಜಡ ವಸ್ತುಗಳಂತೆ ಬಿದ್ದಿರುತ್ತವೆ. ಧರ್ಮಾಚರಣೆಗೆ ಬೇಕಾದ ಸಾಧನ – ಮಾನವ ಶರೀರ. ಮಾನವ ಜನ್ಮ ಪಡೆಯಲು ಬಹುಪುಣ್ಯ ಮಾಡಿರಬೇಕು. ಹಲವು ಯೋನಿಗಳಲ್ಲಿ ಹುಟ್ಟಿದ ಮೇಲೆ ಜೀವನು ಮಾನವ ಶರೀರ ಪಡೆಯುತ್ತಾನೆ. ಹೀಗೆ ಪಡೆದ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವುದೆಂದರೆ ಅದನ್ನು ಮಾದ್ಯಂ ಖಲು ಧರ್ಮ ಸಾಧನಂ – ಎಂಬ ಶಾಸ್ತ್ರ ವಚನದಂತೆ ಅದನ್ನು ದುಡಿಸಿಕೊಂಡು ಸುಖರೂಪದ ಪುಣ್ಯದ ಫಲ ದೊರಕುವಂತೆ ಜೀವನು ಪ್ರಯತ್ನಿಸುವುದೇ ಆಗಿದೆ. ಆದರೆ ಸರ್ವ ಜೀವರಿಂದ ಅನಿಷ್ಟವಾದ ದುಃಖ ನಿವೃತ್ತಿಯೂ, ಸರ್ವರಿಂದ ಅಭ್ಯರ್ಥನೀಯವಾದ ಇಷ್ಟಪ್ರಾಪ್ತಿಯೂ ದೊರಕಬೇಕಾದರೆ ಪರಮಾತ್ಮನ ಅನುಗ್ರಹ ವಿಶೇಷದಿಂದ ಮಾತ್ರ ಸಾಧ್ಯ.

---

೧. ಪ್ರತಿಬಿಂಬ ಕ್ರಿಯಾಯಾಃ ಬಿಂಬಕ್ರಿಯಾನುಸ್ಯೂತತಾ ಯದಾಶ್ನಾತಿ ತದಾಶ್ನಾತಿ ಯದಾಪತ್ತಿ ತದ್ವೈವಸಃ ಕಿಮತ್ರ ಬಹುನೋಕ್ತೇನ ನಾಽಕೃತಂ ಕ್ರಿಯತೇ ಜನ್ಯೈಃ - ಶ್ಯಾಂಡಿಲ್ಯರ ಭಕ್ತಿ ಸೂತ್ರ.

ಪರಮಾತ್ಮನನ್ನು ಒಲಿಸಿಕೊಳ್ಳಬೇಕಾದರೆ ವಿಧಿವಿಹಿತವಲ್ಲದ ನಿಷಿದ್ಧ ಕರ್ಮಗಳನ್ನು ಆಚರಿಸದೆ ಇರುವುದು; ವಿದ್ಯುಕ್ತ ಕರ್ಮಗಳನ್ನು ಅಂದರೆ ದೇಹ ಮನಸ್ಸುಗಳ ಮಲಿನವನ್ನು ತೊಳೆಯುವ ಸ್ನಾನ, ಸಂಧ್ಯಾವಂದನೆ, ಭಗವಂತನ ಪೂಜೆ ಮುಂತಾದುವುಗಳನ್ನು ಬಿಡದೆ ಮಾಡುವುದು. "*ನಿಷಿದ್ಧ ಕರ್ಮಾಣಾಂ ತ್ಯಾಗಃ ವಿಹಿತಸ್ಯ ಸದಾ ಕ್ರಿಯಾ*"- ಎಂಬ ಶ್ರುತಿ ವಾಕ್ಯದಂತೆ ಸತ್ಕರ್ಮಾಚರಣೆಯಿಂದ ಪುಣ್ಯ ಸಂಪಾದಿಸಿ, ಉತ್ತಮ ಗತಿಯನ್ನು ಪಡೆಯುವುದೇ ಆಗಿದೆ.

ಸಾಧನ ಯೋಗ್ಯವಾದ ಶರೀರವನ್ನು ಬಾಹ್ಯಾಂತರಗಳಲ್ಲಿ ಶುಚಿಯಾಗಿ ಇಟ್ಟು ಕೊಳ್ಳುವುದು ಅಗತ್ಯ. ಅಂತರಂಗಶುದ್ಧಿ ಎಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳಿಗೆ ಕಾರಣವಾದ ಮನಸ್ಸನ್ನು ಸದ್ವಿಷಯಗಳಾದ ಶ್ರವಣ ಮನನಾದಿಗಳಿಂದ ತೊಳೆಯುವುದು. ಬಹಿರಂಗ ಶುದ್ಧಿ ಎಂದರೆ ನಿರ್ಮಲ ಉದಕದಲ್ಲಿ ಸ್ನಾನ, ಮಲಮೂತ್ರಗಳಲ್ಲಿ ದೇಹಶುದ್ಧಿ, ದಂತಧವನ, ವಮನ, ವಿರೇಚನ, ತೈಲಾಭ್ಯಂಜನ, ಕೇಶಶೋಧನಗಳು. ಆರೋಗ್ಯವಾದ ಶರೀರದಲ್ಲಿ ಆರೋಗ್ಯವಾದ ಮನಸ್ಸು ನೆಲೆಸಿರುತ್ತದೆ. ಶೃತಿಸ್ಮೃತಿ, ಪುರಾಣ ಶ್ರವಣ, ಗುರೂಪದೇಶಗಳಿಂದ ಮೈಮನಸ್ಸುಗಳ ಮಲಿನವು ಕಳೆಯುತ್ತದೆ. ಶರೀರ ಸ್ವಸ್ಥ್ಯದಿಂದ ಪರಲೋಕ ಸಾಧನವಾಗುತ್ತದೆ ಹೊರತು, ಅನ್ಯಥಾ ಇಲ್ಲ.

ಎಲ್ಲ ಜೀವರಿಗೂ ಇಂಥ ಸಾಧನ ಶರೀರವನ್ನು ಹೊಂದುವುದು ಸಾಧ್ಯವೆ? ಇಲ್ಲವೆಂದು ಶ್ರುತಿಸ್ಮೃತಿಗಳು ಸಾರುತ್ತವೆ. ಭಗವಂತನನ್ನು ಸಚ್ಚಿದಾನಂದ ಸ್ವರೂಪನೆಂದು ಜ್ಞಾನಿಗಳು ವರ್ಣಿಸುತ್ತಾರೆ. ಅವನನ್ನು ಜೀವರು ಯಾವ ಪರಿಯಲ್ಲಿ ಸೇವಿಸಿದರೆ ಅವನನ್ನು ಆ ಪರಿಯಲ್ಲಿ ಹೊಂದುತ್ತಾರೆ. ಅವನು ಅಪ್ರಾಕೃತ ದೇಹವುಳ್ಳವನು. ಅವನ ರೂಪಗುಣ ಕ್ರಿಯಾ ಜ್ಞಾನಗಳು ಅನಂತ. ಅವನ ಪರಿಪೂರ್ಣ ಗುಣಗಳನ್ನು ಅರಿಯಲು ಯಾರಿಂದಲೂ ಸಾಧ್ಯವಿಲ್ಲ. ಅವನು ಪ್ರಮೇಯ. ಅವನು ನಿರ್ಗುಣ ಅಂದರೆ ಪ್ರಾಕೃತ ಗುಣಗಳಾದ ಸತ್ವರಜಸ್ತಮಸ್ಸುಗಳಿಂದ ಅತೀತ ನಾದವನು. ಅವನು ಸರ್ವತ್ರವ್ಯಾಪ್ತ. ದೇಶ ಕಾಲಗಳಿಗೂ ಸ್ವಾಮಿ. ಅವನು ಸಕಲ ಚರಾಚರ ಜಗತ್ತಿಗೆ ಒಡೆಯ; ಜಗತ್ತನ್ನು ಸೃಷ್ಟಿಸಿ, ಸಂರಕ್ಷಣೆ ಮಾಡಿ ಸಂಹಾರ ಮಾಡುವವನು ಅವನೇ. ಸೃಷ್ಟಿ, ಸ್ಥಿತಿ, ಸಂಹಾರ ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಂಬ ಅಷ್ಟಧರ್ಮಗಳು ಅವನಲ್ಲೇ ಇವೆ. ಮತ್ಸ್ಯ ಕೂರ್ಮಾದಿ ಅವತಾರಗಳೂ, ಮಹಿದಾಸದತ್ತಾದಿ ವಿಶೇಷ ಅವತಾರಗಳೂ, ಭಗವಂತನ ಅನಂದ್ರೇಕದಿಂದಾಗುವ ಲೀಲೆಗಳು. ಅವನ ಗುಣಗಳಿಗೂ, ಅವತಾರಗಳಿಗೂ, ಅವನ ಅವಯವಗಳಿಗೂ, ಆಯುಧಗಳಿಗೂ ಭೇದವಿಲ್ಲ. ಇದಕ್ಕೆ ಸ್ವಗತ ಭೇದವಿವರ್ಜಿತತ್ವವೆಂದು ಹೇಳಿರುತ್ತಾರೆ. ಅವನು ಯಾವಾಗಲೂ ಪರಿಪೂರ್ಣ. ಅಂತಲೆ ಭಗವಂತನಿಗೆ ಪೂರ್ಣತಮನೆಂದು ಹೆಸರಿದೆ. ಇಂಥ ಭವ್ಯ ಕಲ್ಪನೆಯನ್ನು ಶ್ರುತಿ ಸ್ಮೃತಿಗಳ ಆಧಾರದಿಂದ ಶ್ರೀಮಧ್ವಾಚಾರ್ಯರು ಜಗತ್ತಿಗೆ ನೀಡಿದ್ದಾರೆ. ಪರಬ್ರಹ್ಮ ಸ್ವರೂಪದ ಬಗೆಗೆ ಆಚಾರ್ಯರ ಸಿದ್ಧಾಂತವು ಚಿರಕಾಲದಿಂದ ಎದ್ದಿದ್ದ ತಾತ್ವಿಕ ಪ್ರಶ್ನೆಗೆ ಸಮಂಜಸ ಉತ್ತರ ನೀಡಿತು. ಅವರು ಸರ್ವಗುಣ ಪರಿಪೂರ್ಣನಾದ ಭಕ್ತ ವತ್ಸಲನಾದ ಸ್ವಾಮಿ ಶ್ರೀಹರಿ ಎಂದು ಸಾರಿ ಸುಜೀವರ ಉದ್ಧಾರಕ್ಕೆ ರಾಜ ಮಾರ್ಗವನ್ನು ಹಾಕಿಕೊಟ್ಟರು. ಭಗವಂತನಿಗೂ ಭಕ್ತನಿಗೂ ಅವಿನಾಭಾವವಿದೆ ಎಂದೂ, ಈಶ - ದಾಸರ ನಡುವೆ ಏಕಾಂತಿಕ ಭಕ್ತಿ ಸಂಬಂಧವಿದೆ ಎಂದೂ ಭಗವಂತನನ್ನು ಒಲಿಸಿಕೊಳ್ಳಲು ಭವಬಂಧನದಿಂದ ಬಿಡುಗಡೆ

ಹೊಂದಲು ಭಕ್ತಿಯೇ ಮುಕ್ತಿಗೆ ಮಾರ್ಗವೆಂದೂ ತಾವು ವೇದೋಪನಿಷತ್ತು, ಗೀತೆ ಬ್ರಹ್ಮ ಸೂತ್ರಗಳ ಸಾರವನ್ನು ಕಡೆದು ಹಂಬಲಿಸಿದ ಆರ್ತರಿಗೆ ಭಕ್ತಿಯ ನವನೀತವನ್ನು ನೀಡಿದರು.

ಶ್ರೀಮಧ್ವಾಚಾರ್ಯರ ಸಿದ್ಧಾಂತದಂತೆ ಜಡಪದಾರ್ಥಗಳ ಮೂಲಕ್ಕೆ ಪ್ರಕೃತಿ ಎಂದು ಹೆಸರು. ಲಕ್ಷ್ಮೀದೇವಿ ಅಭಿಮಾನಿ ದೇವತೆ. ಈ ಪ್ರಕೃತಿಯು ಸತ್ವರಜಸ್‌ತಮೋಗುಣ ವಿಶಿಷ್ಟ ವಾದುದು. ಸೃಷ್ಟಿ ಕಾರ್ಯದಲ್ಲಿ ಈ ಗುಣಗಳಿಂದ ಅನುಕ್ರಮವಾಗಿ ಮಹತ್, ಅಹಂಕಾರಾದಿ ತತ್ವಗಳೂ, ಪಂಚಭೂತಗಳೂ, ಪಂಚತನ್ಮಾತ್ರಗಳೂ, ಪಂಚಜ್ಞಾನೇಂದ್ರಿಯಗಳೂ, ಪಂಚ ಕರ್ಮೇಂದ್ರಿಯಗಳ ವಿಕಸಿತವಾಗುವುವು. ಇದೇ ಜಡ ಪ್ರಪಂಚದ ರಚನೆ. ಪ್ರತಿಯೊಂದು ಪದಾರ್ಥಕ್ಕೂ ಒಂದು ಕಾರಣವುಂಟು. ಅನನ್ಯಥಾಸಿದ್ಧ ನಿಯತ ಪೂರ್ವವೃತ್ತಿ ಕಾರಣಂ ಕಾರ್ಯಂ ಎಂದಿದೆ. ಈ ಕಾರಣಗಳು ಉಪಾದಾನ, ನಿಮಿತ್ತ ಎಂದು ಎರಡು ಬಗೆ. ಮಣ್ಣು ಮಡಿಕೆಯಾಗಲು ಉಪಾದಾನ ಕಾರಣ, ಕುಂಬಾರನು ನಿಮಿತ್ತ ಕಾರಣ. ಪರಮಾತ್ಮನು ಜಗತ್ತಿನ ಜಡ ಪದಾರ್ಥಗಳಲ್ಲಿ ಇದ್ದು ನಿಮಿತ್ತ ಕಾರಣನಾಗಿ ಕೆಲಸ ಮಾಡುವನು. ಪ್ರಕೃತಿಯಲ್ಲಿ ವ್ಯಾಪಾರ ನಡೆಸಿ ಉಪಾದಾನ ಕಾರಣನಾಗುವನು. ಈ ಸತ್ವರಜಸ್ತಮಗಳೆಂಬ ಗುಣಗಳೇ ತ್ರಿಗುಣಗಳ ಜೀವಿಗಳಿಗೂ, ಅವರ ವ್ಯಾಪಾರಗಳಿಗೂ ಕಾರಣವಾಗುವುದು. ಜೀವಿಗಳಲ್ಲಿ ಅವರ ಮೂಲ ಸ್ವಭಾವಕ್ಕೆ ಅನುಗುಣವಾಗಿ ಮುಕ್ತಿಯೋಗ್ಯರು, ನಿತ್ಯ ಸಂಸಾರಿ ಮತ್ತು ತಮೋಯೋಗ್ಯರೆಂದು ಮೂರು ವಿಧ. ಜೀವರು ಅನಾದಿ ಮತ್ತು ಅನಂತ. ಅವರು ನಿತ್ಯರು. ಭಗವಂತನು ಜಡ ಮತ್ತು ಜೀವರ ಸ್ವಭಾವಕ್ಕೆ ಅನುಗುಣವಾದ ಧರ್ಮಗಳನ್ನು ಅವರುಗಳಲ್ಲಿ ಪ್ರಕಾಶಕ್ಕೆ ತಂದು ಅವರ ಸ್ವಭಾವಕ್ಕೆ ಅನುಗುಣವಾದ ಸಾಧನೆ ಮಾಡಿಸುವನು. ಈ ಜೀವರು ಸ್ವರೂಪದಿಂದಲೇ ತ್ರಿವಿಧರೆಂಬ ಸಂಗತಿಯನ್ನು ಶ್ರುತಿ ಸ್ಮೃತಿಗಳು ಸಾರುತ್ತವೆ. ಜಗತ್ತಿನಲ್ಲಿ ಜೀವರಲ್ಲಿ ಮೂರು ಬಗೆ. ಜೀವತ್ರೈವಿಧ್ಯ ಉಂಟೆಂದು ಅನುಭವವು ತಿಳಿಸಿಕೊಡುತ್ತದೆ.

ಅಸುರರಿಗೆ ದೇವಸ್ವರೂಪವೂ, ದೇವತೆಗಳಿಗೆ ಅಸುರ ಸ್ವರೂಪವೂ, ಮನುಷ್ಯನಿಗೆ ಈ ಎರಡರಲ್ಲಿ ಯಾವುದಾದರೊಂದೂ ಪ್ರಾಪ್ತವಾಗುವುದಿಲ್ಲ. ದೇವತೆಗಳು ದೇವ ಸ್ವಭಾವದವರೂ, ಅಸುರರು ಅಸುರ ಸ್ವಭಾವದವರೂ, ಮನುಷ್ಯರು ಮನುಷ್ಯ ಸ್ವಭಾವವನ್ನೂ ಹೊಂದುತ್ತಾರೆಯೇ ಹೊರತು ಅನ್ಯಥಾ ಇಲ್ಲ. ಅವರವರ ಸ್ವಭಾವಗಳು ಶಾಶ್ವತವಾಗಿ ನಿಲ್ಲುತ್ತದೆ.[೧]

ಅಸುರರು ತಾಮಸ ಕರ್ಮಗಳಿಂದಲೂ, ವಿದ್ಯಾಜ್ಞಾನದಿಂದಲೂ ನಿಶ್ಚಯವಾಗಿ ತಮಸ್ಸನ್ನು ಹೊಂದುತ್ತಾರೆ. ದೇವತೆಗಳು ಸತ್ಕರ್ಮಗಳಿಂದಲೂ ಸಮೀಚೀನ ಜ್ಞಾನದಿಂದಲೂ ಉತ್ತಮವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ಈ ಕ್ಲುಪ್ತ ನಿಯಮಕ್ಕೆ ಎಂದೂ ಎಲ್ಲಿಯೂ ವ್ಯತಿರೇಕ ಉಂಟಾಗುವುದಿಲ್ಲವೆಂಬುದು ಸತ್ಯಸ್ವರೂಪನಾದ ಭವಗಂತನ ನಿಯಮ. ಮನುಷ್ಯೋತ್ತಮರಲ್ಲಿ ಸಾತ್ವಿಕರು ಮುಕ್ತಿಯೋಗ್ಯರಾಗಿ ದೇವಸ್ವಭಾವದ ಗುಂಪಿಗೆ ಸೇರುತ್ತಾರೆ.

---

೧. (ಅ) ನಾಸುರಾಣಾಂ ದೈವರೂಪಂ ನ ದೇವಾನಾಮಾಸುರಂ ನ ಚೋ ಭಯಂ ಮನುಷ್ಯಾಣಾಂ ।
ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋಹ್ಯೇಷ ಭವತಿ ॥ - (ಶ್ರುತಿ)

(ಆ) ದೈವೀಮೇವ ಸಂಪತ್ತಿಂ ದೇವಾ ಅಭಗಚ್ಛಂತಿ ಆಸುರೀಮೇವ ಚಾಸುರಾ ।
ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ ॥ - (ಶ್ರುತಿ)

ರಾಜಸಗುಣದವರು ಮಿಶ್ರಜ್ಞಾನವುಳ್ಳ ನಿತ್ಯ ಸಂಸಾರಿಗಳು. ಸುಖ ದುಃಖ ಮಿಶ್ರಿತವಾದ ಸ್ವರ್ಗ-ನರಕಗಳನ್ನು ಹೊಂದುತ್ತಾರೆ. ತಾಮಸಗುಣದವರು ಅಂಧ ತಮಸ್ಸಿಗೆ ಹೋಗುತ್ತಾರೆ-ಎಂಬುದಾಗಿ ಸ್ಕಂದ ಪುರಾಣದಲ್ಲಿ ಹೇಳಿದೆ.

ಈ ಮೂರು ಸ್ವಭಾವದ ಜೀವರಲ್ಲಿ ಅಂದರೆ ದೇವ ಮನುಷ್ಯ ಅಸುರರೆಂಬ ತ್ರಿವಿಧ ಜೀವರಲ್ಲಿಯೂ ಭಗವಂತನ ಆಜ್ಞೆಯಂತೆ ಪ್ರಾಣದೇವರು ನಿಂತು ವ್ಯಾಪಾರ ನಡೆಸುತ್ತಿರುತ್ತಾರೆ. ಇವರಲ್ಲಿ ನಿಂತು ದಿನ ಒಂದಕ್ಕೆ ೨೧,೬೦೦ಸಾರಿ ಹಂಸಸೋಹಂ ಸ್ವಾಹಾ ಎಂಬ ಹಂಸ ಮಂತ್ರವನ್ನು ಉಚ್ಛ್ವಾಸ, ನಿಶ್ವಾಸ ರೂಪದಿಂದ ಜಪಿಸುತ್ತಿರುತ್ತಾರೆ. ಪ್ರತಿಯೊಂದು ನಿಮಿಷಕ್ಕೆ ಹದಿನೈದು ಬಾರಿ ಉಚ್ಛ್ವಾಸ, ನಿಶ್ವಾಸಗಳು ನಡೆಯುತ್ತವೆ. ಭಗವಂತನಿಗೆ ಹಂಸನೆಂದು ಹೆಸರು. ದೋಷರಹಿತನೂ, ಭಕ್ತರ ಸುಖ ದುಃಖಾದಿ ದೋಷನಾಶಕನೂ ಆಗಿರುವುದರಿಂದ ಅವನಿಗೆ ಈ ಹೆಸರು.

ದೇವಸ್ವಭಾವದ ಸಾತ್ವಿಕರು ಈ ಸೋಹಂ ಹಂಸ ಮಂತ್ರಕ್ಕೆ ಹಂಸರೂಪಿಯಾದ ಪರಮಾತ್ಮನು ನನ್ನ ಒಳಗೆ ಹೊರಗೆ ಅಂತರ್ಯಾಮಿಯಾಗಿ ನಿಂತು ಕೆಲಸ ಮಾಡುತ್ತಿದ್ದಾನೆ ಎಂದು ತಿಳಿದು ಸ್ವಾಹಾ ಎಂದರೆ ಆತ್ಮಸಮರ್ಪಣೆಯ ನಮಸ್ಕಾರ ಮಾಡುತ್ತಾರೆ. ರಾಜಸ ಸ್ವಭಾವದವರು ಉದಾಸೀನರೂ, ಸಂಶಯಗ್ರಸ್ಥರೂ ಆಗಿರುತ್ತಾರೆ. ಅಸುರ ಸ್ವಭಾವದ ತಾಮಸರು ನಾನೇ ಹಂಸ ನಾಮಕ ಪರಮಾತ್ಮನೆಂದು ಭಾವಿಸಿ ಜೀವಾತ್ಮ ಪರಮಾತ್ಮರ ಅಭೇದವನ್ನು ತಿಳಿದು ನಿತ್ಯ ನರಕಕ್ಕೆ ಬೀಳುತ್ತಾರೆ.

ಜೀವರು ಮಾಡುವ ಸಾಧನ ರೂಪವಾದ ಶ್ರವಣ, ಮನನ, ನಿಧಿಧ್ಯಾಸನಗಳಿಗೆ ಮನ -ಮೊದಲಾದ ಸಕಲೇಂದ್ರಿಯಗಳ ಮುಖ್ಯ ವ್ಯಾಪಾರಕ್ಕೆ ಪ್ರೇರಕರು ವಾಯುದೇವರು. ಅವರು ಜೀವೋತ್ತಮರೆಂದೂ, ಕುಲಗುರುಗಳೆಂದೂ ಪ್ರಖ್ಯಾತರಾಗಿದ್ದಾರೆ. ಅವರ ಪರಮಪ್ರಸಾದದಿಂದ ಭಗವಂತನ ವಿಷಯಕವಾದ ತತ್ವಜ್ಞಾನದಲ್ಲಿ ಆಸಕ್ತಿಯುಂಟಾಗುತ್ತದೆ. ಅದರ ಫಲರೂಪಿಯಾದ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಸಾಕ್ಷಾತ್ಕಾರವಾದ ಜೀವರಿಗೆ ಮುಕ್ತಿ ದೊರಕುತ್ತದೆ. ಆದುದರಿಂದ ವಾಯುದೇವರೇ ಸರ್ವರಿಗೂ ಜ್ಞಾನದಾತರು. ಅವರ ಅನುಗ್ರಹದಿಂದ ಬರುವ ಯಥಾರ್ಥ ಜ್ಞಾನದಿಂದ ಭಗವಂತನ ಬಗ್ಗೆ ದೃಢವಾದ ಭಕ್ತಿಯುಂಟಾಗುತ್ತದೆ. ಅದರಿಂದ ಪ್ರೀತನಾದ ಶ್ರೀಹರಿಯು ಪ್ರಸಾದ ರೂಪವಾದ ಮುಕ್ತಿಯನ್ನು ಅನುಗ್ರಹಿಸುತ್ತಾನೆ. ವಾಯು ದೇವರು ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರರಾದ ಶ್ರೇಷ್ಠತಮರು. ಈ ವಾಯ್ವಂತರ್ಗತ ಶ್ರೀಹರಿಯನ್ನು ಉಪಾಸಿಸುವ ಭಕ್ತರು ವಜ್ರ ಶಿಲೆಯಂತೆ (ಅಖಣಾತ್ಮ) ನಾಶರಹಿತರಾಗುತ್ತಾರೆ. ಅವರ ಅನುಗ್ರಹದಿಂದ ಸಾತ್ವಿಕ ಜೀವರಿಗೆ ಭಗವಂತನಲ್ಲಿ ಯಥಾರ್ಥಜ್ಞಾನ ರೂಪವಾದ ಶುದ್ಧ ಜ್ಞಾನ ಉಂಟಾಗುತ್ತದೆ. ಆದರಿಂದ ಶುದ್ಧ ಭಕ್ತಿ ಉಂಟಾಗುತ್ತದೆ. ಶುದ್ಧ ಭಕ್ತಿ ಅಂದರೆ ಭಗವಂತನ ಮಹಾತ್ಮ್ಯ ಜ್ಞಾನ ಜನ್ಯವಾದ ಪ್ರೇಮರೂಪದಿಂದ ಭಗವಂತನನ್ನು ಸೇವಿಸಿ ಅವನ ಅನುಗ್ರಹದಿಂದ ಜೀವನು ಮುಕ್ತನಾಗುತ್ತಾನೆ.

೫

ಭಗವಂತನ ಪ್ರಸಾದ ರೂಪವಾದ ಮುಕ್ತಿಯನ್ನು ಕೊಡುವ ಭಕ್ತಿ ಎಂದರೇನು? ಅದರ ಲಕ್ಷಣಗಳಾವುವು? ಅದು ಮುಕ್ತಿಗೆ ಸಾಧನವಾಗುವ ಬಗೆ ಹೇಗೆ? ಇವೇ ಪ್ರಶ್ನೆಗಳಿಗೆ ವಿವರವಾಗಿ ಉತ್ತರಗಳನ್ನು ಪರಿಶೀಲಿಸೋಣ.

ಭಕ್ತಿ ಎಂಬ ಶಬ್ದವು ಅಂದರೆ ಆಶ್ರಯಿಸು, ಪೂಜಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪರಮಾತ್ಮನನ್ನು ಸಂತೋಷಪಡಿಸಲು, ತೃಪ್ತಿಪಡಿಸಲು ಭಕ್ತನು ಅರ್ಪಿಸುವ ನಿವೇದನಾ ಪೂರ್ವಕವಾದ ಆತ್ಮ ನೈವೇದ್ಯವೇ ಭಕ್ತಿ. ಈ ಭಕ್ತಿಯನ್ನು ಕುರಿತು ಶ್ವೇತಾಶ್ವರೋಪನಿಷತ್ತಿನಲ್ಲಿ ಚೆನ್ನಾಗಿ ಹೇಳಿದೆ.

ಯಾವ ಜಿಜ್ಞಾಸುವಿಗೆ ಸಚ್ಚಿದಾನಂದ ಸ್ವರೂಪವಾದ ಪರಮಾತ್ಮನಲ್ಲಿ ನಿಷ್ಕಳಂಕವಾದ ಮತ್ತು ಉತ್ಕೃಷ್ಟವಾದ ಅವ್ಯಾಜ ಪ್ರೇಮವಿದೆಯೋ ಮತ್ತು ಆ ಭಗವಂತನಲ್ಲಿರುವಂತೆಯೇ ಪರಮಾತ್ಮನ ಜ್ಞಾನ ಬೋಧಕನಾದ ಪರಮ ಗುರುವಿನಲ್ಲೂ ಅತ್ಯಂತಿಕ ಭಕ್ತಿ ಇದೆಯೋ ಅಂಥ ಮಹಾತ್ಮನಿಗೆ ಮಾತ್ರ ಉಪನಿಷತ್ತಿನಲ್ಲಿ ಅಡಗಿರುವ ರಹಸ್ಯಗಳು ತಾವಾಗಿಯೇ ಹೊಳೆಯುತ್ತವೆ. ಅಂದರೆ ಪರಮಾತ್ಮನಲ್ಲಿ ಇರುವ ಶ್ರೇಷ್ಠ ಭಕ್ತಿ - ಪರಾಭಕ್ತಿಯುಳ್ಳವನಿಗೆ ಮಾತ್ರ ಮುಕ್ತಿ ಹೇತುವಾದ ಭಗವಂತನ ಅಪರೋಕ್ಷ ಜ್ಞಾನ ಉಂಟಾಗುತ್ತದೆ. ಇದನ್ನೇ ಶ್ಯಾಂಡಿಲ್ಯರು ತಮ್ಮ ಭಕ್ತಿ ಸೂತ್ರದಲ್ಲಿ ಪರಾಭಕ್ತಿ ಎಂದಿರುವುದು.[೧] ನಾರದರು ಭಗವಂತನಲ್ಲಿರುವ ಪರಮ ಪ್ರೇಮ ರೂಪವು ಭಕ್ತಿ. ಅದು ಅಮೃತದಂತೆ ರುಚಿಕರ ಮತ್ತು ಆನಂದದಾಯಕವೆಂದು ಹೇಳಿದ್ದಾರೆ.[೨] ಅಲ್ಲದೆ ಭಕ್ತಿಯ ಲಕ್ಷಣವನ್ನು ಕುರಿತು ಮುಕ್ತಿಯನ್ನು ಗಳಿಸುವ ಸಾಧನೆಗಳಲ್ಲಿ ಭಕ್ತಿಯೇ ಹೆಚ್ಚಿನದೆಂದು ಮೂರುಬಾರಿ ಸತ್ಯವೆಂದಿದ್ದಾರೆ.[೩]

ಭಕ್ತಿಯು ಅನಿರ್ವಚನೀಯ ಪ್ರೇಮರೂಪ. ಮೂಕನು ಸಿಹಿಯನ್ನು ಅಸ್ವಾದನೆ ಮಾಡಿದಂತೆ ಅದನ್ನು ಅನುಭವಿಸಬಹುದೇ ಹೊರತು ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ.[೪] ಈಶ್ವರನಾದ ಪರಮಾತ್ಮನಲ್ಲಿ ಇರುವ ಅತ್ಯಂತ ಅನುರಕ್ತಿಯೇ ಭಕ್ತಿ.[೫] ಜ್ಞಾನದೇವತುಕೈವಲ್ಯ ಎಂಬ ಶ್ರುತಿವಾಕ್ಯದಂತೆ ಮುಕ್ತಿಗೆ ಜ್ಞಾನವೇ ಸಾಧನವೆಂಬ ಮಾತು ಹೇಳುತ್ತಾರೆ. ಅದರ ಫಲ ಸ್ವರೂಪವೇ ಭಕ್ತಿ. ಭಕ್ತಿ ಎಂದರೆ ಜ್ಞಾನವಲ್ಲ; ಅದು ಜ್ಞಾನಕ್ಕಿಂತಲೂ ಶ್ರೇಷ್ಠ. ಜ್ಞಾನವು ಭಕ್ತಿಗೆ ದಿವ್ಯವಾದ ಮೋಕ್ಷವನ್ನು ಕೊಡುತ್ತದೆ ದಿಟ. ಈ ದೃಷ್ಟಿಯಿಂದ ಜ್ಞಾನವು ಭಕ್ತಿಗೆ ಒಂದು ಸಾಧನವಾಗುತ್ತದೆ.

---

೧. ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ ತಸ್ಯೈತೇ ।
ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

೨. ಸಾತ್ವಸ್ಮಿನ್ ಪರಮಪ್ರೇಮರೂಪಾ ಅಮೃತ ಸ್ವರೂಪ.

೩. ತ್ರಿಸತ್ಯಸ್ಯ ಭಕ್ತಿರೇವ ಗರೀಯಸೀ, ಭಕ್ತಿರೇವ ಗರೀಯಸೀ,
ಭಕ್ತಿರೇವ ಗರೀಯಸೀ -ನಾರದಭಕ್ತಿ ಸೂತ್ರ

೪. ಅನಿರ್ವಚನೀಯಂ ಪ್ರೇಮಸ್ವರೂಪಂ ಮೂಕಾಸ್ವಾದನವತ್ -೧

೫. ಸಾಪರಾನುರಕ್ತಿ ರೀಶ್ವರೇ -೨

ಭಕ್ತಿಯು ಒಂದು ರಾಗ, ರಸ ಎಂದೂ ಹೇಳುತ್ತಾರೆ. ಅದು ಒಂದು ಕ್ರಿಯೆಯಲ್ಲ. ಭಕ್ತಿಯು ಫಲದಾಯಿನಿ. ಶ್ರೀ ಟೀಕಾಕೃತ್ಪಾದರಾಯರು ಭಕ್ತಿಯನ್ನು ಕುರಿತು ಹೀಗೆ ನಿರ್ವಚಿಸಿದ್ದಾರೆ.

ಭಕ್ತನು ನಿರವಧಿಕ, ಅನಂತ, ಅನವದ್ಯ ಕಲ್ಯಾಣಗುಣಗಳಿಂದ ಕೂಡಿರುವವನು. ಪರಮಾತ್ಮನೆಂಬ ಜ್ಞಾನದಿಂದ ಸಹಸ್ರ ಅಡಚಣೆಗಳು ಬಂದರೂ ತನ್ನಲ್ಲಿ, ತನ್ನವರಲ್ಲಿ ಅಂದರೆ ತಾಯಿ, ತಂದೆ, ತಂಗಿ, ಹೆಂಡತಿ, ಮಕ್ಕಳು ಮೊದಲಾದ ಬಂಧು ಬಾಂಧವರು ಮತ್ತು ಸ್ವಾಮಿ, ಆಳು, ಅರಸು ಮೊದಲಾದವರಲ್ಲಿ ಇತರ ವಸ್ತುಗಳಲ್ಲಿ ಇರುವುದಕ್ಕಿಂತಲೂ ಬಹು ಅಧಿಕವಾಗಿ ತಡೆಯಿಲ್ಲದೆ ನಿರಂತರವೂ ಮಾಡುವ ಪ್ರೇಮಪ್ರವಾಹವೇ ಭಕ್ತಿ ಎಂದು ಹೇಳುತ್ತಾರೆ.[೧] ಇಂಥ ಪ್ರೇಮ ಹುಟ್ಟಬೇಕಾದರೆ ಪರಾತ್ಪರ ವಸ್ತುವಿನಲ್ಲಿ ಸಂಪೂರ್ಣ ನಂಬಿಕೆಯಿಂದ ಹುಟ್ಟುವ ಮನೋನಿಶ್ಚಯ ಮತ್ತು ತನ್ನದೆಲ್ಲವನ್ನು ಭಗವಂತನಿಗೆ ಅರ್ಪಿತವೆಂಬ ದೃಢ ಸಂಕಲ್ಪವು ಭಕ್ತಿ ಎನಿಸಿಕೊಳ್ಳುವುದೆಂದು ಹೇಳುತ್ತಾರೆ. ಪ್ರೇಮ ಸ್ವರೂಪವಾದ ಭಗವಂತನೆಡೆಗೆ ಒಯ್ಯುವ ಸೋಪಾನವೇ ಭಕ್ತಿ ಎನಿಸುತ್ತದೆ.[೨]

ಇದನ್ನು ಶ್ರೀಮಧ್ವಾಚಾರ್ಯರು ಮಹಾತ್ಮ್ಯ ಜ್ಞಾನಪೂರ್ವಕವಾಗಿ ಭಗವಂತನಲ್ಲಿ ಮಾಡುವ ಸರ್ವತೋಧಿಕ ಸ್ನೇಹರೂಪವಾದ ಪ್ರೀತಿಯೇ ಭಕ್ತಿ. ಇದರಿಂದಲೇ ಮುಕ್ತಿ ಎಂದು ಹೇಳುತ್ತಾರೆ.[೩] ಶ್ರೀಹರಿಯು ಸರ್ವೋತ್ತಮನೆಂಬ ನಿಶ್ಚಿತ ಜ್ಞಾನದಿಂದ ಮಾಡುವ ಪ್ರೇಮ ಇದು. ಭಗವಂತನ ಕಡೆಗೆ ಹರಿಯುವ ಈ ಪ್ರೇಮ ಪ್ರವಾಹದಲ್ಲಿ ಭಕ್ತನ ಹಾಗೂ ಲೋಕದ ಸಂಬಂಧ ಕಡಿಯುವುದು. ಭಕ್ತಿ ಒಂದು ಪರುಷವಿದ್ದಂತೆ. ಅದು ಮುಟ್ಟಿದ್ದೆಲ್ಲವೂ ಪರಮಾತ್ಮಮಯ ವಾಗುತ್ತದೆಂದು ಹೇಳುತ್ತಾರೆ. ಈ ಅಪರೋಕ್ಷ ಜ್ಞಾನ ಬಂದ ಭಕ್ತನಿಗೆ ಭಗವಂತನು ಎಲ್ಲೆಲ್ಲೂ ಕಾಣಿಸುತ್ತಾನೆ.

೬

ಭಗವದ್ಗೀತೆಯಲ್ಲಿ ಭಕ್ತಿಯನ್ನು ಕುರಿತು ಆರು ಆಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

"ಅರ್ಜುನಾ, ನನ್ನನ್ನು ನಾಲ್ಕು ಬಗೆಯ ಸುಕೃತ ಜೀವರು ಭಜಿಸುತ್ತಾರೆ. ಅವರು ಕ್ರಮವಾಗಿ ಆರ್ತ ಅಂದರೆ ಸಂಕಟಕ್ಕೆ ಸಿಕ್ಕಿರುವವರು, ಜಿಜ್ಞಾಸು ಅಂದರೆ ಭಗವತತ್ತ್ವವನ್ನು ತಿಳಿಯ ಬಯಸುವವರು, ಅರ್ಥಾರ್ಥಿ ಅಂದರೆ ಚತುರ್ವಿಧ ಪುರುಷಾರ್ಥಗಳಲ್ಲಿ ಒಂದಾದ ಹಣವನ್ನು

---

೧. ನಿರವಧಿಕ ಅನಂತ ಅನವದ್ಯ ಕಲ್ಯಾಣ ಗುಣತ್ವ ಜ್ಞಾನ ಪೂರ್ವಕಃ ।
ಸ್ವಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕಗುಣಾಧಿಕೋ ಅಂತರಾಯ
ಸಹಸ್ರೇಣಾಪಿ ಅಪ್ರತಿಬದ್ಧೋ ನಿರಂತರ ಪ್ರೇಮ ಪ್ರವಾಹಃ ॥ -ಶ್ರೀಮನ್ನ್ಯಾಯಸುಧಾ.

2. Supreme divine Love together with the steps leading to it is called Bhakti. - Swami Thyagananda : The Gospel of Love.

೩. ಮಹಾತ್ಮ್ಯ ಜ್ಞಾನಪೂರ್ವಸ್ತು ಸದೃಢಃ ಸರ್ವತೋಧಿಕಾ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥
- ಮಹಾಭಾರತ ತಾತ್ಪರ್ಯ ನಿರ್ಣಯ

ಬಯಸುವವರು, ಮತ್ತು ಜ್ಞಾನಿ ಅಂದರೆ ಭಗವಂತನನ್ನು ಅಪರೋಕ್ಷೀಕರಿಸಿಕೊಂಡ ತತ್ತ್ವ ಜ್ಞಾನಿಗಳು. ಇವರೊಳಗೆ ನಿತ್ಯಮುಕ್ತನಾಗಿ ಏಕಭಕ್ತಿಯಲ್ಲಿ ನೆಲೆಸಿರುವ ಜ್ಞಾನಿಯೇ ನನಗೆ ಹೆಚ್ಚು ಪ್ರಿಯನಾದವನು. ಅವನು ಮತ್ತೊಂದನ್ನು ಬಯಸದೆ ನನ್ನನ್ನು ಮಾತ್ರವೇ ಬಯಸುತ್ತಾನೆ. ಅವನೇ ನನ್ನು ಪರಮ ಭಕ್ತ ಎಂದು ನನ್ನ ಅಭಿಪ್ರಾಯ. ಅವನಿಗೆ ಲಭಿಸುವ ನಿತ್ಯಾನಂದವು ಮತ್ತಾರಿಗೂ ಲಭಿಸದು"–ಎಂದಿದ್ದಾನೆ ಕೃಷ್ಣ.[೧]

"ಅರ್ಜುನ, ಅನಿತ್ಯ ಫಲಗಳನ್ನು ಕೊಡುವ ಸರ್ವಧರ್ಮಗಳನ್ನು ಪರಿತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು, ನಾನು ನಿನ್ನನ್ನು ಸಮಸ್ತ ಪಾಪಗಳಿಂದ ಬಿಡಿಸಿ, ಮೋಕ್ಷವನ್ನು ಕರುಣಿಸುತ್ತೇನೆ. ಯಾರು ಈ ಪರಮ ರಹಸ್ಯವನ್ನು ನನ್ನ ಮೇಲಿನ ಭಕ್ತಿಯಿಂದ ನನ್ನ ಭಕ್ತರಿಗೆ ತಿಳಿಯ ಹೇಳುತ್ತಾನೋ ಅವನು ನನ್ನನ್ನೇ ಸೇರುವನು. ಈ ಮಾತು ನಿಸ್ಸಂಶಯವೆಂದು ತಿಳಿ. ಮಾನವರಲ್ಲಿ ಆತನಿಗಿಂತಲೂ ನನಗೆ ಪರಮ ಪ್ರಿಯರಾದವರು ಮತ್ತೊಬ್ಬರಿರುವುದಿಲ್ಲವೆಂದು ತಿಳಿ"– ಎಂಬುದಾಗಿ ಶ್ರೀಕೃಷ್ಣನು ತಿಳಿಸಿದ್ದಾನೆ.[೨]

ಗೀತೆಯಲ್ಲಿ ಕೃಷ್ಣನು "ಮದ್ಭಕ್ತ ಯಾಂತಿ ಮಾಮಪಿ" ಅಂದರೆ ನನ್ನ ಅತ್ಯಂತಿಕ ಭಕ್ತರು ನನ್ನನ್ನೇ ಸೇರುತ್ತಾರೆ. "ಯದ್ಗತ್ವಾನ ನಿವರ್ತಂತೇ ಧ್ದಾಮ ಪರಮಂ ಮಮ" ಅಂದರೆ ಯಾವನು ನನ್ನ ಪರಮ ಪದವನ್ನು ಸೇರಿದ ಬಳಿಕ ಮತ್ತೆ ಸಂಸಾರಕ್ಕೆ ಹಿಂದಿರುಗುವುದಿಲ್ಲವೋ ಅಂತಹ ಮುಕ್ತಿ ಸ್ಥಾನವನ್ನು ನನ್ನ ಆ ಭಕ್ತನು ಹೊಂದುತ್ತಾನೆ. ಮತ್ತೆ "ಯೇ ಭಜಂತಿ ಚ ಮಾಂ ಭಕ್ತ್ಯಾ ಮಯತೇಷಾಂ ಚಾಪ್ಯಹಂ" ಅಂದರೆ ನನ್ನನ್ನು ಅತ್ಯಂತಿಕವಾಗಿ ಭಕ್ತಿಯಿಂದ ಭಜಿಸುವವರು ನನ್ನಲ್ಲಿಯೇ ನೆಲೆಸುತ್ತಾರೆ. ನಾನು ಅವರಲ್ಲಿಯೇ ನೆಲೆಸುತ್ತೇನೆ. ಕೌಂತೇಯ, ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ – ಅಂದರೆ ನನ್ನ ಭಕ್ತನಿಗೆ ನಾಶವೆಂಬುದೇ ಇಲ್ಲ. ಅವನು ಸಂಸಾರದಿಂದ ಮುಕ್ತನಾದನೆಂದೆ ತಿಳಿ–ಎಂಬುದಾಗಿ ಆಶ್ವಾಸನೆಯನ್ನು ನೀಡಿದ್ದಾನೆ. ಆದುದರಿಂದ ಅರ್ಜುನ, ನೀನು ನನ್ನಲ್ಲಿ ಮನಸ್ಸನ್ನು ನೆಡು, ನನ್ನ ಅವಚ್ಛಿನ್ನ ಭಕ್ತನೆನಿಸು, ನನಗಾಗಿ ಯಜ್ಞ ಸ್ವರೂಪವಾದ

---

೧. ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥಿ ಜ್ಞಾನೀ ಚ ಭರತರ್ಷಭ ॥
ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕ ಭಕ್ತಿಃ ವಿ ಶಿಷ್ಯತೇ... ।
ಉದಾರಾಃ ಸರ್ವಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ ॥
–ಭಗವದ್ಗೀತೆ ಅ ೭–ಶ್ಲೋ ೧೬.೮

೨. ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥
ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾ ಮೈಷ್ಯತ್ಯ ಸಂಶಯಃ ॥
ನ ಚ ತಸ್ಮಾತ್ ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ
ಭವಿತಾ ನಚಮೇ ತಸ್ಮಾದನ್ಯಃ ಅತಃ ಪ್ರಿಯತರೋ ಭವಿ ॥
– ಭಗವದ್ಗೀತೆ, ಅಧ್ಯಾಯ ೧೮, ಶ್ಲೋ ೬೬–೬೮–೬೯

ಕರ್ತವ್ಯವನ್ನು ಮಾಡು. ನೀನು ನನ್ನನ್ನ ನಮಸ್ಕರಿಸು. ಹೀಗೆ ವರ್ತಿಸಿದ್ದಾದರೆ ನೀನು ಕಡೆಗೆ ನನ್ನನ್ನು ಸೇರುವೆ"-ಎಂದಿದ್ದಾನೆ.[೧]

"ಯಾರು ನನ್ನ ವಿಷಯಕವಾದ ಕರ್ಮದಲ್ಲಿ ತೊಡಗುತ್ತ, ನಾನೇ ಪರಮಗತಿ ಎಂದು ತಿಳಿದು, ನನ್ನ ಭಕ್ತಿಗಾಗಿ ಇತರ ವಿಷಯದ ಸಂಗವನ್ನು ತೊರೆದು, ಯಾವ ಜೀವಿಯನ್ನು ದ್ವೇಷಿಸದೆ ಅವುಗಳನ್ನು ಪ್ರೀತಿಸುವನೋ ಅವನು ನನ್ನನ್ನೇ ಸೇರುವನು. ಯಾರು ನನ್ನಲ್ಲಿಯೇ ಮನವನ್ನು ನೆಟ್ಟು ಹೆಚ್ಚಿನ ಶ್ರದ್ಧೆಯಿಂದ ನನ್ನ ಸೇವೆಯಲ್ಲಿಯೇ ತೊಡಗಿ ನನ್ನನ್ನೇ ಉಪಾಸಿಸುವವರೋ, ಯಾರು ಇಂದ್ರಿಯಗಳನ್ನು ನಿಗ್ರಹಿಸಿ, ಎಲ್ಲದರಲ್ಲಿಯೂ ಸಮಬುದ್ಧಿಯುಳ್ಳವನಾಗಿ ಸಮಸ್ತ ಜೀವರಾಶಿಗಳ ಹಿತಚಿಂತಕನಾಗಿ ಸರ್ವವ್ಯಾಪಿ, ನಿತ್ಯ ಮತ್ತು ಅಚಿಂತ್ಯನೂ, ಅವ್ಯಕ್ತನೂ ಆದ ಭಗವಂತನನ್ನು ಉಪಾಸನೆ ಮಾಡುವನೋ ಅವರು ನನ್ನನ್ನು ಸೇರುವರು. ನಿರ್ಗುಣೋಪಾಸಕರಿಗಿಂತಲೂ ಸಗುಣೋಪಾಸಕರೇ ಭಕ್ತಿಯೋಗದ ತತ್ತ್ವವೇತ್ತರು. ಅವರೇ ಮುಕ್ತಿಗೆ ಅರ್ಹರು ಎಂದು ಸ್ಪಷ್ಟವಾಗಿ ತಿಳಿಸುತ್ತಾನೆ ಶ್ರೀಕೃಷ್ಣ. ಅಲ್ಲದೆ ಯಾರು ನಾನು ವಿವರಿಸಿರುವ ಧರ್ಮ ಸಮ್ಮತವಾದ ಮತ್ತು ಮೋಕ್ಷಕ್ಕೆ ಕಾರಣವಾಗಿರುವ ಈ ಸಾಧನೆಯನ್ನು ಶ್ರದ್ಧೆಯಿಂದ ನನ್ನಲ್ಲಿ ನಡೆಸುವರೋ ಅಂಥ ಭಕ್ತರು ನನಗೆ ಅತ್ಯಂತ ಪ್ರಿಯರು ಎಂದು ಹೇಳುತ್ತಾನೆ. ಭಗವದ್ಗೀತೆಯಲ್ಲಿ ಮೂರು ಷಟ್ಕಗಳಲ್ಲಿ ಒಂದು ಷಟ್ಕವನ್ನು ಭಗವಂತನಾದ ಕೃಷ್ಣನು ಭಕ್ತಿಯೋಗದ ಸೂಕ್ಷ್ಮ ವಿಚಾರಗಳಿಗೆ ಮೀಸಲಿಟ್ಟಿದ್ದಾನೆ. ಮತ್ತೆ ಮತ್ತೆ ಅವನು ಭಕ್ತಿಯ ಮಹತ್ವವನ್ನು ಅವಕಾಶ ದೊರತಾಗಲ್ಲೆಲ್ಲ ಒತ್ತಿ ಹೇಳಿದ್ದಾನೆ. ಯೋಗಿಗಳು ವ್ರತ, ತಪಸ್ಸು, ಜ್ಞಾನಸಂಪಾದನೆ ಮೊದಲಾದುವನ್ನು ಮಾಡುವ ಸಾಧಕರಿಗಿಂತಲೂ ಶ್ರೇಷ್ಠ. ಅಂಥ ಯೋಗಗಳಿಗಿಂತಲೂ ಶ್ರದ್ಧೆ ಭಕ್ತಿಗಳಿಂದ ಭಗವಂತನನ್ನು ಭಜಿಸುವ ಭಕ್ತಿ ಯೋಗಿಯು ಅತ್ಯಂತ ಶ್ರೇಷ್ಠ (೬-೪೬,೪೭). ಭಕ್ತಿ ಎಂಬುದು ಅತಿಗೋಪ್ಯವೂ, ಪವಿತ್ರವೂ, ಜ್ಞಾನಸಾಧಕವೂ, ಆಚರಣೆಗೆ ಅತಿ ಸುಲಭವೂ ಆದ ರಾಜವಿದ್ಯೆ ಎನ್ನಿಸಿಕೊಂಡಿದೆ. (೯-೨) ಇಂಥ ಅನನ್ಯ ಭಕ್ತಿಯಿಂದಲೇ ಪರಮಾತ್ಮನನ್ನು ಹೊಂದುವುದು ಸಾಧ್ಯ (೮-೨೨) ಸಾಮಾನ್ಯವಾಗಿ ಉಳಿದ ಯೋಗಗಳ ಅಭ್ಯಾಸಕ್ಕೆ ಪ್ರಾರಂಭದಲ್ಲಿಯೇ ಶುದ್ಧಿ ಸಿದ್ಧತೆ ಅವಶ್ಯಕ. ಆದರೆ ಭಕ್ತಿಯ ಯೋಗಕ್ಕೆ ಹಾಗಲ್ಲ. ಈ ಯೋಗ ಸಾಧನೆಗೆ ಬೇಕಾದ ಶುದ್ಧ ಜ್ಞಾನಗಳನ್ನು ಕ್ರಮೇಣ ಸಾಧಕನಿಗೆ ಆ ಭಕ್ತಿಯೇ ತಂದುಕೊಡುತ್ತದೆ. (೯-೩೦,೩೧).

ಈ ಶ್ರದ್ಧೆ ಯಾವ ಭಕ್ತಿಯುಳ್ಳವನಿಗೆ ಇರುತ್ತದೆಯೋ, ಆ ಭಕ್ತನ ಹೃದಯದಲ್ಲಿ ಹತ್ತುವ ಜ್ಞಾನದೀಪ ಅಲ್ಲಿರುವ ಕತ್ತಲೆಯನ್ನು ಖಂಡಿತವಾಗಿಯೂ ಕಳೆಯುತ್ತದೆ (೧೦-೧೦,೧೧) ಪರಮಾತ್ಮನ ಜ್ಞಾನ, ದರ್ಶನ ಪ್ರಸಾದ - ಅಂದರೆ ಮುಕ್ತಿ. ಇಂಥ ಭಕ್ತಿಯೇ ಏಕತ್ರ ಸಾಧನ (೧೧-೫೪) - ಎಂದು ಮುಂತಾಗಿ ಭಕ್ತಿಯೋಗದ ಅನೇಕ ವಿವರಗಳನ್ನು ನೀಡಿದ್ದಾನೆ.

---

೧. ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಂ ಆತ್ಮಾನಂ ಮತ್ಪರಾಯಣಃ ॥
*- ಭಗವದ್ಗೀತೆ, ೯ನೇ ಅಧ್ಯಾಯ, ೩೪ನೇ ಶ್ಲೋ.*

## ೭

ಅಧ್ಯಾತ್ಮ ರಾಮಾಯಣದಲ್ಲಿ ವೇದವ್ಯಾಸರು ಭಕ್ತಿಯೋಗದ ಇನ್ನಿತರ ಮುಖಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ.

ಈ ಗ್ರಂಥದ ಆರಂಭದಲ್ಲಿಯೇ ಪಾರ್ವತಿಯು ವೈಷ್ಣವಾಗ್ರಣಿಯಾದ ಮಹಾರುದ್ರ ದೇವರನ್ನು ಕೇಳುತ್ತಾಳೆ :

*"ಅಖಿಲ ಲೋಕಗಳೂ ಸಾರಭೂತವೆನಿಸಿದ ಶ್ರೀರಾಮಚಂದ್ರನಲ್ಲಿನ ಅತ್ಯಂತಿಕ ಭಕ್ತಿಯು ಸಂಸಾರ ಸಾಗರವನ್ನು ದಾಟಿಸಬಲ್ಲ ದೃಢವಾದ ದೋಣಿ ಇದ್ದಂತೆ ಇದೆ. ಏಕೆಂದರೆ ಜನನ ಮರಣ ರೂಪವಾದ ಸಂಸಾರ ಬಂಧನದಿಂದ ಮುಕ್ತನಾಗಲು ಪರಮಾತ್ಮನಲ್ಲಿನ ಅತ್ಯಂತಿಕ ಭಕ್ತಿಯಿಲ್ಲದೆ ಮತ್ತಾವುದೂ ಸಾಧನವಾಗಲಾರವು"* -ಎಂಬುದಾಗಿ ಸ್ಪಷ್ಟವಾಗಿ ತಿಳಿಸುತ್ತಾಳೆ.[೧]

*"ದೇವ ನಿನ್ನ ಅಡಿದಾವರೆಗಳಲ್ಲಿ ಅತ್ಯಂತ ಭಕ್ತರಾದವರೊಳಗೆ ನಿನ್ನ ವಿಶ್ವಾಸವು ನಿನ್ನ ಪತ್ನಿ ಲಕ್ಷ್ಮೀದೇವಿಯಲ್ಲಿ ನೀನಿಟ್ಟಿರುವ ಪ್ರೇಮಕ್ಕಿಂತಲೂ ಹೆಚ್ಚು. ಈ ರಹಸ್ಯವನ್ನರಿತ ನಿನ್ನ ಭಕ್ತರು ನಿನ್ನಲ್ಲಿ ನಿತ್ಯಭಕ್ತಿಯನ್ನೇ ಬೇಡುತ್ತಾರೆ. ಏಕೆಂದರೆ ಸಂಸಾರದ ಬೇಗೆಗೆ ಒಳಗಾದವರಿಗೆ ನಿನ್ನಲ್ಲಿನ ಭಕ್ತಿಯೇ ಅವರನ್ನು ತಂಪಾಗಿರಿಸಬಲ್ಲ ದಿವ್ಯೌಷಧಿ "*[೨] -ಎಂದು ಬ್ರಹ್ಮದೇವರು ವಿಷ್ಣುವನ್ನು ಪ್ರಾರ್ಥಿಸುತ್ತಾರೆ.

ಅಹಲ್ಯೆಯು ಶ್ರೀರಾಮನನ್ನು ಹೀಗೆ ಬೇಡುತ್ತಾಳೆ ; *"ದೇವ ನಾನು ಎಲ್ಲೇ ಇರಲಿ ಸದಾ ನಿನ್ನ ಅಡಿದಾವರೆಗಳಲ್ಲಿನ ಭಕ್ತಿ ದೃಢವಾಗಿ ನನ್ನಲ್ಲಿ ನೆಲೆಸಿರುವಂತೆ ಅನುಗ್ರಹಿಸು."*[೩]

---

೧. ಶ್ರೀರಾಮಚಂದ್ರಽಖಿಲಲೋಕಸಾರೇ
ಭಕ್ತಿರ್ದೃಢಾ ನೌಃ ಭವತಿ ಪ್ರಸಿದ್ಧಾ ।
ಭಕ್ತಿ ಪ್ರಸಿದ್ಧಾ ಭವಮೋಕ್ಷಣಾಯ
ನಾನ್ಯಃ ತತಃ ಸಾಧನ ಮಸ್ತಿ ಕಿಂಚಿತ್ ॥ - *ಅ॥ ರಾ ॥೧ನೇ ಅಧ್ಯಾಯ.*

೨. ಅತಃ ತ್ವತ್ಪಾದ ಭಕ್ತೇಷು ತವ ಭಕ್ತಿಃ ಶ್ರೀಯೋಧಿಕಾ ।
ಭಕ್ತಿ ಮೇವಾಭಿ ವಾಂಛತಿ ತದ್ಭಕ್ತಾಃ ಸಾರವೇದಿನಃ ।
ಸಂಸಾರ ತಾಪಯುಕ್ತಾನಾಂ ಭೇಷಜಂ ಭಕ್ತಿರೇವ ಹಿ ॥ - *ಅ ॥ ರಾ ॥ ಸರ್ಗ ೧೧.*

೩. ದೇವ ಮೇ ಯತ್ರ ಕುತ್ರಾಪಿ ಸ್ಥಿತಯಾ ಅಪಿ ಸರ್ವದಾ ।
ತ್ವತ್ಪಾದ ಕಮಲೇ ಸಕ್ತಾ ಭಕ್ತಿರೇವ ಸದ್ವಾಸ್ತು ಮೇ ॥
ಅತಃ ತ್ವತ್ಪಾದಯುಗಳೇ ಭಕ್ತಿರ್ಮೇ ಜನ್ಮಜನ್ಮನಿ ।
ಸ್ಯಾತ್ ತ್ವದ್ಭಕ್ತಿಮತಾಂ ಸಂಗೋಽವಿದ್ಯಾಯಾಭ್ಯಾಂ ವಿನಶ್ಯತಿ ॥
ಲೋಕೇ ತ್ವದ್ಭಕ್ತಿ ನಿರತಾಃ ತ್ವದ್ಧರ್ಮಾಮೃತವರ್ಷಿಣಃ ।
ಪುನಂತಿ ಲೋಕಮಖಿಲಂ ಕಿಂಪುನಃ ಸ್ವಕುಲೋದ್ಭವಾನ್ ॥
ನಮ್ಮೋಸ್ತು ಜಗತಾಂ ನಾಥ ಸಮಸ್ತೇ ಭಕ್ತಿಭಾವನ ।
ಯದಿ ಮೇನುಗ್ರಹೋ ರಾಮ ತವಾಸ್ತಿ ಮಧುಸೂದನ ॥
ತ್ವದ್ಭಕ್ತಸಂಗಃ ತ್ವತ್ಪಾದೇ ದೃಢಾ ಭಕ್ತಿಃ ಸದಾಽಸ್ತು ಮೆ - ಅ ॥ ರಾ॥

ಇನ್ನೊಂದು ಸ್ವಾರಸ್ಯದ ಪ್ರಸಂಗ. ಶ್ರೀರಾಮನಿಗೂ, ಪರಶುರಾಮನಿಗೂ ಯಾವುದೇ ಭೇದ ಇರುವುದಿಲ್ಲ. ಹೀಗೆ ಅವತಾರಗಳಲ್ಲಿ ಭೇದವೆಣಿಸುವವನು ನರಕಕ್ಕೆ ಹೋಗುತ್ತಾನೆಂದು ಶ್ರುತಿ ಸ್ಮೃತಿಗಳು ಸಾರುವುವು. ಆದರೂ ಲೋಕ ಮೋಹನಾರ್ಥವಾಗಿ ಪರಶುರಾಮನು ಶ್ರೀರಾಮನನ್ನು ಕುರಿತು ಅವನು ಮಾತ್ರ ಪರಮೇಶ್ವರನೆಂದು ವಿಡಂಬನೆ ಮಾಡುತ್ತಾನೆ.

*"ಓ ರಾಮಚಂದ್ರ, ನನಗೆ ಪ್ರತಿ ಜನ್ಮದಲ್ಲಿಯೂ ನಿನ್ನಲ್ಲಿ ದೃಢಭಕ್ತಿ ಮತ್ತು ನಿನ್ನ ಭಕ್ತರ ಸಂಗ - ಇವೆರಡೂ ಅನುಗ್ರಹಿಸು. ಏಕೆಂದರೆ ಇವೆರಡೂ ಅಜ್ಞಾನ ನಾಶಕ್ಕೆ ಮುಖ್ಯ ಕಾರಣಗಳು. ಅಜ್ಞಾನ ನಾಶದಿಂದ ತತ್ವಜ್ಞಾನವುಂಟಾಗಿ ಆ ಮೂಲಕ ಕೈವಲ್ಯವು ದೊರಕುವುದು. ಈ ಕಾರಣ ಭಕ್ತಿಯೇ ಮುಕ್ತಿಗೆ ಕಾರಣವೆಂದಾಯಿತು. ಈ ಲೋಕದಲ್ಲಿ ನಿನ್ನಲ್ಲಿ ಭಕ್ತಿ ನೆಲೆಗೊಂಡಿರುವವರು, ನಿನ್ನ ಕೃಪೆಯಿಂದ ಅಮೃತದ ಮಳೆಗರೆವವರು ಸಮಸ್ತ ಲೋಕವನ್ನು ಪಾವನಗೊಳಿಸುವವರೆಂದ ಮೇಲೆ ತಮ್ಮ ವಂಶದವರನ್ನು ಪವಿತ್ರಗೊಳಿಸುವರೆಂಬುದನ್ನು ಹೇಳಬೇಕೆ? ಓ ದೇವದೇವ, ಭಕ್ತಿ ಭಾವನ, ಇಗೋ ನಿನ್ನಡಿಗಳಿಗೆ ಪ್ರಣಾಮಗಳು. ನೀನು ನನಗೆ ಅನುಗ್ರಹಿಸುವುದಾದರೆ ನಿನ್ನ ಭಕ್ತರ ಸಂಗ ಎಂದಿಗೂ ಚಲಿಸದೆ ನಿನ್ನಲ್ಲಿನ ಭಕ್ತಿಯು ಸದಾ ನನ್ನಲ್ಲಿ ನೆಲೆಸಲಿ"* - ಎಂಬುದಾಗಿ ಬೇಡಿಕೊಂಡಿದ್ದಾನೆ - ಶ್ರೀರಾಮನು ಪರಶುರಾಮನ ಗರ್ವಭಂಗ ಮಾಡಿದ ಸಂದರ್ಭದಲ್ಲಿ.

ಇದರಂತೆಯೇ ಅರಣ್ಯ ಕಾಂಡದಲ್ಲಿ ಶ್ರೀರಾಮನ ಅನುಗ್ರಹದ ಮೂಲಕ ಶಾಪದಿಂದ ಮುಕ್ತನಾದ ವಿರಾಧನು, ಶ್ರೀರಾಮನಿಗೆ ಮಣಿದು ಅವನ ಅನುಗ್ರಹವನ್ನು ಬೇಡಿಕೊಂಡಾಗ ಶ್ರೀರಾಮನು ಹೇಳುವನು.[೧]

*"ನನ್ನಲ್ಲಿ ಭಕ್ತಿಯು ನೆಲೆಗೊಳ್ಳುವುದೆಂದರೆ ಅತಿ ಕಷ್ಟ. ಅದು ಲಭಿಸಿದುದೇ ಆದರೆ ಮುಕ್ತಿಗೆ ಸುಲಭವಾದ ಹಾದಿ ಅದರಿಂದ ಒದಗುತ್ತದೆ. ನೀನು ನನ್ನ ಭಕ್ತರಲ್ಲಿ ಅಗ್ರಗಣ್ಯನೆನಿಸಿರುವುದರಿಂದ ನನ್ನ ಪರಮ ಪದವನ್ನು ನೀನು ಪಡೆಯುವೆ. ಇದೇ ನನ್ನ ಅನುಗ್ರಹದ ಫಲ."*

ಮತ್ತೊಂದು ಪ್ರಸಂಗ, ಕಿಷ್ಕಿಂಧಾ ಕಾಂಡದಲ್ಲಿ ಶ್ರೀರಾಮನನ್ನು ಶಬರಿಯು ತನ್ನ ನಿರ್ಮಲ ಭಕ್ತಿಯಿಂದ ಸೇವಿಸಿ, ಸಂತೃಪ್ತಿ ಪಡಿಸುತ್ತಾಳೆ. ಅವಳ ಭಕ್ತಿಗೆ ಮೆಚ್ಚಿದ ಶ್ರೀರಾಮನು ಅವಳಿಗೆ ಹೀಗೆ ಅನುಗ್ರಹಿಸುತ್ತಾನೆ.

*"ಓ ಶಬರಿ, ನನ್ನನ್ನು ಸೇರಲು ಲಿಂಗ ಬೇಧಗಳಾಗಲೀ, ಯೋನಿ ಭೇದಗಳಾಗಲಿ, ಜಾತಿ ಆಶ್ರಮಗಳ ಭೇದವಾಗಲೀ ಕಾರಣಗಳಲ್ಲ. ಭಕ್ತಿಯೊಂದೇ ಇದಕ್ಕೆ ಮುಖ್ಯ ಸಾಧನವೆಂದು ತಿಳಿ. ನನ್ನಲ್ಲಿ ಭಕ್ತಿ ಇರದವರು ನನ್ನನ್ನು ಎಂದಿಗೂ ಸೇರಲಾರರು. ಇಂಥ ಆತ್ಯಂತಿಕ ಭಕ್ತಿಗೆ ಸಾಧನಗಳಾವುವೆಂಬುದನ್ನು ನಿನಗೆ ತಿಳಿಸುವೆನು[೨] ಕೇಳು. ಮೊದಲನೆಯದು ಸತ್ಪುರುಷರ ಸಂಗ.*

---

೧. ಮದ್ಭಕ್ತಿಃ ದುರ್ಲಭಾ ಲೋಕೇ ಜಾತಾ ಚೇತ್ ಮುಕ್ತಿದಾಯಿಕಾ ।
ಅತಃ ತ್ವಂ ಭಕ್ತಿ ಸಂಪನ್ನಃ ಪರಂ ಯಾಹಿ ಮಮಾಜ್ಞಯಾ ॥

೨. ಪುಂಸ್ತ್ವೇ ಸ್ತ್ರೀತ್ವೇ ವಿಶೇಷೋ ವಾ ಜಾತಿನಾಂ ಆಶ್ರಮಾದಯಃ ।
ನ ಕಾರಣಂ ಮದ್ಭಜನೇ ಭಕ್ತಿರೇವ ಹಿ ಕಾರಣಮ್ ॥
ನೈವ ದ್ರುಷ್ಟುಂ ಅಹಂ ಶಕ್ಯೋ ಮದ್ಭಕ್ತಿ ವಿಮುಖೈಃ ಸದಾ
ತಸ್ಮಾತ್ ಭಾಮಿನಿ ವಕ್ಷ್ಯೇಹಂ ಸಂಕ್ಷೇಪಾತ್ ಭಕ್ತಿ ಸಾಧನಮ್ ॥

ಎರಡನೆಯದು ನನ್ನ ಕಥಾಲಾಪ. ನನ್ನ ಸಂಬಂಧವಾದ ಅನಂತ ಕಲ್ಯಾಣ ಗುಣಗಳಲ್ಲಿ ಆದರವೇ ಮೂರನೆಯದು; ನಾಲ್ಕನೆಯದೆಂದರೆ ನನಗೆ ಸಂಬಂಧಿಸಿದ ಆಖ್ಯಾನವನ್ನು ಹೇಳುವುದು ಮತ್ತು ಅವನ್ನು ಆಸಕ್ತಿಯಿಂದ ಕೇಳುವುದು. ಆಚಾರ್ಯೋಪಾಸನೆ, ಪುಣ್ಯಶೀಲತ್ವ, ನನ್ನ ಪೂಜೆಯಲ್ಲಿ ನಿಷ್ಠೆ ಮತ್ತು ಮಂತ್ರೋಪಾಸನೆ ಇವು ಕ್ರಮವಾಗಿ ಐದು ಆರು ಮತ್ತು ಏಳನೆಯ ಬಗೆಗಳು; ಎಂಟನೆಯದು ನನ್ನ ಭಕ್ತರ ಪೂಜೆ. ಸಮಸ್ತ ಭೂತಗಳಲ್ಲಿಯೂ ನಾನಿರುವೆನೆಂಬ ಭಾವ, ಬಾಹ್ಯ ವಸ್ತುಗಳಲ್ಲಿ ವೈರಾಗ್ಯ ಮತ್ತು ಶಮಾದಿ ಷಟ್ಕ ಸಂಪತ್ತಿ; ನನ್ನ ತತ್ವವನ್ನು ಮಥಿಸಿ ತಿಳಿಯುವುದೇ ಅತಿಮುಖ್ಯವೂ ಮತ್ತು ಮುಕ್ತಿದಾಯಕವೂ ಆದ ಒಂಭತ್ತನೆಯ ಸಾಧನವು. ಭಕ್ತಿಯೆಂಬುದು ಪ್ರೇಮದ ಲಕ್ಷಣ. ಇಂಥ ಭಕ್ತಿ ಮೂಡಿದೊಡನೆಯೇ ಅದೇ ಜನ್ಮದಲ್ಲಿಯೇ ಮುಕ್ತಿ ಸಿಗುವುದು ಖಂಡಿತ. ಈ ಕಾರಣದಿಂದ ಭಕ್ತಿಯು ಮುಕ್ತಿಗೆ ಯುಕ್ತಿ ಸಾಧನವೆಂದು ತಿಳಿ.[೧]"

ಹೀಗೆ ಹೇಳಿದ ಸ್ವಾಮಿಯು ಶಬರಿಗೆ ನವವಿಧ ಭಕ್ತಿಯನ್ನು ಉಪದೇಶಿಸುವನು. ಈ ನವವಿಧ ಭಕ್ತಿಯನ್ನು ಭಾಗವತದಲ್ಲಿ ಪ್ರಹ್ಲಾದರಾಜರು ತಮ್ಮ ಸ್ನೇಹಿತರಾದ ದೈತ್ಯ ಬಾಲಕರಿಗೆ ಹೇಳಿರುವ ನವವಿಧ ಭಕ್ತಿಯೊಡನೆ ಹೋಲಿಸಿದರೆ ಸ್ವಾರಸ್ಯಕರ ಸಂಗತಿಗಳು ತಿಳಿಯುವುವು.

ಇಲ್ಲಿ ನಾವು ನವವಿಧ ಭಕ್ತಿಯನ್ನು ಅಧ್ಯಾತ್ಮ ರಾಮಾಯಣಾನುಸಾರವಾಗಿ ಹೀಗೆ ತಿಳಿದುಕೊಳ್ಳಬಹುದು.

೧. ಸತಾಂ ಸಂಗತಿ,

೨. ಮತ್ಕಲಾಪಃ ,

೩. ಮದ್ಗುಣೇರಣಂ,

೪. ವ್ಯಾಖ್ಯಾತೃತ್ವಂಮದ್ವಾಚಸಾ,

೫. ಆಚಾರ್ಯೋಪಾಸನಂ,

೬. ಪುಣ್ಯಶೀಲತ್ವಂ,

೭. ಮಮ ಮಂತ್ರೋಪಾಸಕತ್ವಂ,

೮. ಮತ್ಪೂಜನೇನಿತ್ಯನಿಷ್ಠಾ, ಮದ್ಭಕ್ತೇಷ್ವದಿಕಾ ಪೂಜಾ, ಸರ್ವಭೂತೇಷು ಮನ್ಮತೀಃ ಬಾಹ್ಯಾರ್ಥೇಷು ವಾರಿಗಿತ್ವಂ, ಶಮಾದಿ ಸಹಿತಂ,

೯. ಮಮ ತತ್ತ್ವವಿಚಾರಃ - ಏವಂ ನವವಿಧಂ ಭಕ್ತೇಃ ಸಾಧಕಂ.

ಅಧ್ಯಾತ್ಮ ರಾಮಾಯಣದ ಮುಖ್ಯ ಬೋಧೆ ಏನು? ಉದ್ಧಾರವಾಗಬೇಕಾದರೆ

---

೧. ಭಕ್ತಿಃ ಸಂಜಾಯಿತೇ ಪ್ರೇಮ ಲಕ್ಷಣಾ ಶುಭ ಲಕ್ಷಣೇ
ಭಕ್ತಿಃ ಸಂಜಾತ ಮಾತ್ರಾಯಾಂ ಮುಕ್ತಿಃ ತತ್ರೈವ ಜನ್ಮನಿ
ಸ್ಯಾತ್ ತಸ್ಮಾತ್ ಕಾರಣಾತ್ ಮೋಕ್ಷಸ್ಸೇವ ಸುನಿಶ್ಚಿತಮ್
- ಎಂಬುದು ಶ್ರೀರಾಮಚಂದ್ರ ಮೂರ್ತಿಯ ನಿಶ್ಚಿತವಾಕ್ಯ.

ಭಗವಂತನಲ್ಲಿ ಭಕ್ತಿ ಮಾಡಿರಿ; ಬೇರೆ ಮಂತ್ರಗಳನ್ನು ಬದಿಗಿಟ್ಟು ಶ್ರೀರಾಮ ಮಂತ್ರವನ್ನು ಉಪಾಸಿಸಿ ಎಂಬುದೇ ಆಗಿದೆ.[೧]

*"ಓ ಮಾನವರೇ ಕೇಳಿ, ಭಗವತ್ಸ್ವರೂಪಿಯಾದ ಶ್ರೀರಾಮಚಂದ್ರನ ಅಡಿದಾವರೆಗಳಲ್ಲಿ ನೆಡುವ ಭಕ್ತಿಯು ಮುಕ್ತಿ ಸ್ಥಾನಕ್ಕೆ ಒಯ್ಯುತ್ತದೆ. ಆ ಕಾರಣ ನೀವು ಆತನ ಪಾದಪದ್ಮಗಳನ್ನು ಅತ್ಯಾದರದಿಂದ ಸೇವಿಸಲು ತೊಡಗಿರಿ. ಓ ಜ್ಞಾನಿಗಳೇ, ಯಾವನ ಮಂಗಳ ಮೂರ್ತಿಯನ್ನು ಮನ್ಮಥನನ್ನು ದಹಿಸಿದ ಪರಶಿವನು ನಿಷ್ಠೆಯಿಂದ ಎಡೆಬಿಡದೆ ಧ್ಯಾನಿಸುತ್ತಿರುವನೋ, ಆ ತಾರಕ ಮಂತ್ರಾಧಿಷ್ಠಿತನಾದ ಶ್ರೀರಾಮನನ್ನೇ ನಿರಂತರವೂ ನೀವು ಧ್ಯಾನಿಸುತ್ತಿರಿ. ಆ ರಾಮತಾರಕ ಮಂತ್ರವನ್ನುಳಿದು ಇತರ ಮಂತ್ರಗಳೆಲ್ಲವೂ ಅಜ್ಞಾನಕ್ಕೆ ಕಾರಣಗಳಾದುದರಿಂದ ಅವೆಲ್ಲವನ್ನು ಒತ್ತರಿಸಿ ಶ್ರೀರಾಮ ಮಂತ್ರವನ್ನೇ ಭಕ್ತಿಯಿಂದ ಮತ್ತು ನಿಷ್ಠೆಯಿಂದ ಜಪಿಸಿದುದೇ ಆದರೆ ಅದು ನಿಮಗೆ ಮುಕ್ತಿ ಪದವಿಯನ್ನು ಸೆಳೆದು ಕೊಡುತ್ತದೆ."*

ಇದಕ್ಕಿಂತಲೂ ಸ್ಪಷ್ಟವಾದ ಭರವಸೆಯ ಮಾತುಗಳು ಬೇಕೆ?

ಇದೇ ಮಾತನ್ನು ಶ್ರೀರಾಮನು ಭಕ್ತಾಗ್ರಣಿಯಾದ ಹನುಮಂತನಿಗೆ ಹೇಳುವನು.

*"ಮಹಾ ಬುದ್ಧಿ ಸಂಪನ್ನನಾದ ಹನುಮಂತನೇ ಕೇಳು. ಅತ್ಯಂತಿಕ ಮೋಕ್ಷ ಸಾಧನ ಮಾರ್ಗ ಯಾವುದೆಂಬುದನ್ನು ನಿನಗೆ ತಿಳಿಸುತ್ತೇನೆ, ಸಮಾಧಾನದಿಂದ ಆಲಿಸು. ಶ್ರೀಮಹಾ ವಿಷ್ಣುವಿನಲ್ಲಿ ನಿಷ್ಕಳಂಕವಾದ ಭಕ್ತಿಯು ಯಾವ ಭಕ್ತನಲ್ಲಿ ಇರುವುದೋ ಅವನೇ ನಿಜವಾದ ಜ್ಞಾನಿಯು. ಅಂಥ ನಿರ್ಮಲ ಜ್ಞಾನದಿಂದಲೇ ಅವನಿಗೆ ಮುಕ್ತಿ ಸಾಧನೆಯಾಗುವುದೆಂದು ತಿಳಿ. ಹೇಗೆಂದರೆ ಪರಮಾತ್ಮ ತತ್ತ್ವಜ್ಞಾನದ ಅನುಭವವಾಯಿತೆಂದರೆ ಪರಮ ಪದವೆನಿಸಿದ ಮುಕ್ತಿ ಸ್ಥಿತಿಯ ನಿತ್ಯವಾದ ಸ್ವರೂಪಾನಂದಕ್ಕೆ ಭಾಗಿಯಾಗುವುದು ನಿಜವೆಂದು ತಿಳಿ."*

ಮಹಾ ಭಾಗವತಾಗ್ರಣಿಯಾದ ವಿಭೀಷಣನು ಶ್ರೀರಾಮನಲ್ಲಿ ಹೀಗೆ ಬೇಡುತ್ತಾನೆ. *"ತತ್ಪಾದ ಕರ್ಮಲೇ ನಿತ್ಯಂ ಭಕ್ತಿರೇವ ಸದ್ವಾಽಸ್ತು ಮೇ"* –ಅಂದರೆ ಭಗವತ್ ಸ್ವರೂಪನಾದ

---

೧. ಭಕ್ತಿಃ ಮುಕ್ತಿ ವಿದಾಯಿನೀ ಭಗವತಃ ಶ್ರೀರಾಮಚಂದ್ರಸ್ಯಹೇ ।
ಲೋಕಾಃ ಕಾಮದುಘಾಂಘ್ರಿಪದ್ಮ ಯುಗಳಂ ಸೇವಧ್ವ ಮತ್ಯುತ್ಸುಕಾಃ ॥
ನಾನಾ ಜ್ಞಾನ ವಿಶೇಷ ಮಾತ್ರವಿತತಿಂ ತ್ಯಕ್ತ್ವಾ ಸುದೂರೇ ಭೃಶಮ್ ।
ರಾಮಂ ಶ್ಯಾಮತನುಂ ಸ್ಮರಾರಿ ಹೃದಯೇ ಭಾತಂ ಭಜಧ್ವಂ ಬುಧಾಃ ॥
ಅತೋಽಹ ಮಾತ್ಯಂತಿಕ ಮೋಕ್ಷ ಸಾಧನಂ ।
ವಕ್ಷ್ಯೇ ಶೃಣುಷ್ವಾವಹಿತೋ ಮಹಾಮತೇ ॥
ವಿಷ್ಣೋರ್ಹಿ ಭಕ್ತಿಃ ಸುವಿಶೋಧನಂ ಧಿಯಃ ।
ತತೋ ಭವೇತ್ ಜ್ಞಾನ ಮತೀವ ನಿರ್ಮಲಮ್ ॥
ವಿಶುದ್ಧ ತತ್ತ್ವಾನುಭವೋ ಭವೇತ್ ತತಃ ।
ಸಮ್ಯಕ್ ವಿದಿತ್ವಾ ಪರಮಂ ಪದಂ ಪ್ರಜೇತ್ ॥ – ಅ ॥ ರಾ.

ಶ್ರೀರಾಮಚಂದ್ರ, ನೀನು ನನಗೆ ಅನುಗ್ರಹಿಸುವುದಾದರೆ ಸರ್ವದಾ ನಿನ್ನ ಪಾದಪದ್ಮದಲ್ಲಿ ನನ್ನ ಭಕ್ತಿ ನೆಲೆಸಲಿ.[೧]

ರಾಕ್ಷಸನಾದ ರಾವಣನಿಗೆ ಶ್ರೀರಾಮಚಂದ್ರನ ಮಹಿಮೆಯನ್ನು ತಿಳಿಸುವುದು ಮೂರ್ಖತನವೆಂದು ಅರಿತರೂ ಮಾಲ್ಯವಾನ್ ಎಂಬ ದೈತ್ಯನು ಹೀಗೆ ಅವನಿಗೆ ಉಪದೇಶಿಸುವನು. "*ರಾವಣಾ, ಶ್ರೀರಾಮನನ್ನು ಏನೆಂದು ತಿಳಿದಿರುವೆ? ಅವನು ಸಾಕ್ಷಾತ್ ನಾರಾಯಣ ನೆಂದೇ ತಿಳಿ. ಅಂಥ ರಾಘವನಲ್ಲಿ ದ್ವೇಷವನ್ನು ಬಿಡು. ಆ ದೇವನ ಪಾದ ಕಮಲವೆಂಬ ದೋಣಿಯನ್ನು ಹತ್ತಿ ಭಕ್ತಾಗ್ರಣಿಗಳಾದ ಜ್ಞಾನಿಗಳು ನಿತ್ಯ ಸಂಸಾರ ಸಾಗರವನ್ನು ದಾಟುತ್ತಾರೆ. ಈ ಕಾರಣದಿಂದ ಶ್ರೀರಾಮನನ್ನು ಸಾಮಾನ್ಯ ಮಾನವನೆಂದು ಎಣಿಸದಿರು. ಆತನನ್ನು ಭಕ್ತಿಭಾವ ದಿಂದ ಶರಣು ಹೊಂದು. ನೀನು ದುರಾಚಾರಿ ಎನಿಸಿದರೂ ಕೂಡ ಆತನ ಭಕ್ತಿಯೆಂಬ ನಾವೆಯನ್ನು ಹಿಡಿದುದೇ ಆದರೆ ನೀನೂ ಸಂಸಾರ ಸಮುದ್ರವನ್ನು ದಾಟಿ ಮುಕ್ತಿ ಪದವನ್ನು ಖಂಡಿತವಾಗಿ ಪಡೆಯುವೆ. ನನ್ನ ಮಾತನ್ನು ನಂಬು.*" ಆದರೆ ದುರಾತ್ಮನಾದ ಅವನಿಗೆ ಈ ಉಪದೇಶ ಹೇಗೇ ನಾಟುವುದು?

ಮತ್ತೆ ಕುಂಭಕರ್ಣನೂ ರಾವಣನಿಗೆ ಉಪದೇಶಿಸಿ ನಿರಾಶನಾಗುವನು. ಅವನು ರಾವಣನಿಗೆ ಹೀಗೆ ಬುದ್ಧಿ ಹೇಳುವನು. "*ಅಣ್ಣಾ, ಭಗವತ್ಸ್ವರೂಪಿಯಾದ ಶ್ರೀರಾಮನು ತನ್ನನ್ನು ಭಕ್ತಿಯಿಂದ ಭಜಿಸಿದವರಿಗೆ ತನ್ನನುಗ್ರಹ ನೀಡುತ್ತಾನೆ. ಏಕೆಂದರೆ ಭಗವಂತನಲ್ಲಿನ ಅತ್ಯಧಿಕ ಭಕ್ತಿಯು ನಿರ್ಮಲವಾದ ಜ್ಞಾನೋತ್ಪಾದನೆಗೆ ಕಾರಣವಾಗುತ್ತದೆ. ಅಂಥ ಸತ್ವಜ್ಞಾನದಿಂದ ಮುಕ್ತಿಯು ಸುಲಭವಾಗಿ ಲಭಿಸುತ್ತದೆ. ಆದುದರಿಂದ ಭಗವಂತನಲ್ಲಿ ನಿಚ್ಚಳವಾದ ಭಕ್ತಿಯು ಮೋಕ್ಷವನ್ನೂ ಕೊಡುವಂಥದು. ಭಕ್ತಿಯಿಲ್ಲದೆ ಮಾಡುವ ಕಾರ್ಯಗಳೆಲ್ಲವೂ ಅಸತ್ ಎಂದರ ವ್ಯರ್ಥವೆಂದೇ ಹೇಳಬೇಕು.*"[೨]

ನಾರದರು ರಾಮನನ್ನು ಉದ್ದೇಶಿಸಿ "*ಭಗವಾನ್ ತದ್ಭಕ್ತಿ ಸಂಗಿನಾಂ ರಾಮ ಸಂಸಾರೋ ಗೋಷ್ಪದಾಯತೇ.*" ಹೇ ರಾಮಚಂದ್ರ, ನಿನ್ನಲ್ಲಿ ಅವಿಚ್ಛಿನ್ನ ಭಕ್ತಿಯುಳ್ಳವರಿಗೆ ಸಂಸಾರದ ಸಮುದ್ರವೆಂಬುದು ಗೋವಿನ ಹೆಜ್ಜೆಯಂತೆ ದಾಟಲು ಸುಲಭವಾಗುತ್ತದೆ - ಎಂದು ಹೇಳುವರು.

ಮಹಾರುದ್ರನು ಶ್ರೀರಾಮನಾಮ ಸಂಸರ್ಗದಿಂದ ಪರಮ ವೈಷ್ಣವರಾದರು; ಪಾರ್ವತಿಯು ಪರಮ ಮಂಗಳೆಯಾದಳು. ಇಂಥ ರುದ್ರನು ರಾಮನನ್ನು ಕುರಿತು "*ದೇವ, ನಿನ್ನನ್ನು ನಿಶ್ಚಲ ಭಕ್ತಿಯಿಂದ ಸೇವೆ ಮಾಡುತ್ತ ಆ ಮೂಲಕ ಚಿತ್ತ ಶುದ್ಧಿಯನ್ನು ಪಡೆದವರಿಗೆ ಪರಮಾರ್ಥ*

---

೧. ರಾಮಾ ನಾರಾಯಣಂ ವಿದ್ಧಿ ವಿದ್ವೇಷಂ ತ್ಯಜ ರಾಘವೇ ।
ತ್ವತ್ಪಾದಪೋತಮಾಶ್ರಿತ್ಯ ಜ್ಞಾನಿನೋ ಭವಸಾಗರಂ ॥
ತರಂತಿ ಭಕ್ತಿ ಪೂತಾಂತಾಃ ತತೋ ರಾಮೋ ನ ಮಾನುಷಃ ।
ಭಜಸ್ವ ಭಕ್ತಿ ಭಾವೇನ ರಾಮಂ ಸರ್ವಹೃದಾಲಯಮ್ ॥
ಯದ್ಯಪಿ ತ್ವಂ ದುರಾಚಾರೋ ಭಕ್ತಿ ಪೂತೋ ಭವಿಷ್ಯಸಿ । - ಅ ॥ ರಾ.

೨. ಭಜತೋ ಭಕ್ತಿಭಾವೇನ ಪ್ರಸೀದತಿ ರಘೂತ್ತಮಃ ।
ಭಕ್ತಿರ್ಜನಿತ್ರಿ ಜ್ಞಾನಸ್ಯ ಭಕ್ತಿಃ ಮೋಕ್ಷಪ್ರದಾಯಿನೀ ॥
ಭಕ್ತಿ ಹೀನೇನ ಯತ್ಕಿಂಚಿನ್ ಕೃತಂ ಸರ್ವಂ ಅಸದ್ಭವೇತ್ ॥

ತತ್ತ್ವವು ತಾನಾಗಿ ತಿಳಿಯುತ್ತದೆ. ಆಂತರಿಕ ತತ್ತ್ವವನ್ನು ತಿಳಿದು ಬಾಹ್ಯಾರ್ಥಗಳಲ್ಲಿ ಆಸಕ್ತರಾದ ಬ್ರಹ್ಮಾದಿಗಳು ಕೂಡಾ ನಿನ್ನ ಪರಮಾರ್ಥ ತತ್ತ್ವವನ್ನು ತಿಳಿಯದವರಾಗಿರುತ್ತಾರೆ. ಈ ಕಾರಣದಿಂದಲೇ ಜ್ಞಾನಿಯಾದವನು ನಿನ್ನ ಈ ಸಗುಣ ರೂಪವನ್ನೇ ಅತ್ಯಂತಿಕ ಭಕ್ತಿಯಿಂದ ಭಜಿಸಿ ನಿತ್ಯಾನಂದಾತ್ಮಕವಾದ ಮುಕ್ತಿಯನ್ನು ತಕ್ಷಣ ಪಡೆಯುತ್ತಾನೆ."[೧]

ಎಂದ ಮೇಲೆ ಆತ್ಯಂತಿಕ ಭಕ್ತನು ಪರಮಾತ್ಮನಿಗೆ ಎಷ್ಟು ಪ್ರಿಯನೆಂದು ಬೇರೆ ಹೇಳಬೇಕೆ?

೮

ಶ್ರೀವೇದವ್ಯಾಸ ಪ್ರಣೀತವಾದ ಶ್ರೀಮದ್ಭಾಗವತವನ್ನು ಮೋಕ್ಷ ಶಾಸ್ತ್ರವೆಂದು ಕರೆಯುತ್ತಾರೆ. ಜಗತ್ತಿನಲ್ಲಿ ವಿವಿಧ ಸಾಂಸಾರಿಕ ಶಾಪಗಳಿಂದ ಪೀಡಿತರಾದ ಸಜ್ಜನರಿಗೆ ಈ ಪಾಪ ಪರಿಹಾರಕ್ಕೂ ಪರಮ ಪುರುಷಾರ್ಥ ಪ್ರಾಪ್ತಿಗೂ ಸಾಧನವಾದ ಈ ಮೋಕ್ಷ ಶಾಸ್ತ್ರವನ್ನು ಶ್ರೀವೇದವ್ಯಾಸರು ಭಕ್ತ ಜನರ ಮೇಲಣ ಅನುಕಂಪದಿಂದ ರಚಿಸಿದ್ದಾರೆ. ಈ ಭಾಗವತವು ಸಕಲ ವೇದಾರ್ಥ ನಿರ್ಣಯಗಳನ್ನು ಒಳಗೊಂಡಿದೆ.[೨] ಅವುಗಳನ್ನು ಮಥಿಸಿ ಸಾರ ರೂಪವಾದ ನವನೀತವನ್ನು ಮುಮುಕ್ಷುಗಳಿಗೆ ನೀಡಿದೆ. ಮಂದಮತಿಗಳಿಗಾಗಿ ಅನೇಕ ದೃಷ್ಟಾಂತರಗಳನ್ನು ಹೇಳಿದೆ. ಇಂಥ ಭಾಗವತಾಮೃತವನ್ನು ಪಾನ ಮಾಡುವ ಸಜ್ಜನರು ಭಗವಂತನಲ್ಲಿ ಯಥಾರ್ಥ ಜ್ಞಾನರೂಪದಿಂದ ಬರುವ ಭಕ್ತಿಯನ್ನು ಮಾಡಿ, ಈ ಜನ್ಮದಲ್ಲಿ ಸುಖಶಾಂತಿಗಳನ್ನು ಹೊಂದಿ ಮುಂದಿನ ಜನ್ಮದಲ್ಲಿ ಶಾಶ್ವತವಾದ ಪರಮಪದವನ್ನು ಹೊಂದುವರೆಂದು ಭಗವಂತನ ವಚನವಿದೆ.

ಶ್ರೀಮದ್ಭಾಗವತವು ಸಾಕ್ಷಾತ್ ಶ್ರೀಮನ್ನಾರಾಯಣನಿಂದ-ಶ್ರೀವೇದವ್ಯಾಸರಿಂದ-ಪ್ರಣೀತವಾದುದು. ಸರ್ವಸ್ವಾಮಿಯೂ, ಅನಂತ ಕಲ್ಯಾಣಗುಣಪೂರ್ಣನೂ, ನಿರ್ದೋಷಿಯೂ, ಸರ್ವಜ್ಞನೂ ಆದ ಶ್ರೀ ವೇದವ್ಯಾಸರೂಪಿ ಪರಮಾತ್ಮನಿಂದ ಸಕಲ ಸಜ್ಜನರ ವಿಚಾರದ ಸಲುವಾಗಿ ಪರಮಪವಿತ್ರವೂ, ಸಚ್ಛಾಸ್ತ್ರಗಳಿಗೆ ಮುಕುಟ ಪ್ರಾಯವೂ ಆಗಿರುವ ಭಾಗವತ - ಧರ್ಮಕ್ಕೆ ಪ್ರಮಾಣ ಗ್ರಂಥ. ಭಕ್ತರಿಗೆ ಮೋಕ್ಷ ಮಾರ್ಗದ ಕೈಪಿಡಿಯಾಗಿರುವ ಈ ಭಾಗವತ ಗ್ರಂಥವನ್ನು ರಚಿಸಿ, ಮಹೋಪಕಾರ ಮಾಡಿದ್ದಾರೆ. ಈ ಭಾಗವತ ಪುರಾಣವನ್ನು - ಮೋಕ್ಷಶಾಸ್ತ್ರವನ್ನು ಭಕ್ತಾನುಕಂಪಿತರಾದ ಪಾತಾಳಲೋಕದಲ್ಲಿ ಸ್ಥಿತರಾಗಿರುವ ಸಂಕರ್ಷಣ ದೇವರು ಸನತ್ಕುಮಾರ ಮುನಿಗಳಿಗೂ, ಅವರಿಂದ ಸಾಂಖ್ಯಾಯನರಿಗೂ, ಅವರಿಂದ ಪರಾಶರರಿಗೂ, ಪರಾಶರರಿಂದ ಉಪದೇಶ

---

೧. ತ್ವದ್ಭಕ್ತ ಸೇವಾಮಲ ಮಾನಸಾನಾಂ ।
ವಿಭಾತಿ ತತ್ತ್ವಂ ಪರಮೇಕಮೈಶಮ್ ॥
ಬ್ರಹ್ಮಾದಯಸ್ತೇ ನ ವಿದು ಸ್ವರೂಪಮ್ ।
ಚಿದಾತ್ಮತತ್ತ್ವಂ ಬಹಿರರ್ಥ ಭಾವಾಃ ॥
ತತೋಬುಧಃ ತ್ವಾಮಿದಮೇವ ರೂಪಮ್ ।
ಭಕ್ತ್ಯಾಭಜನ್ ಮುಕ್ತಿ ಮುಪೈತಿ ಸದ್ಯಃ ॥ - ೮ ॥ ರಾ.

೨. ಸರ್ವ ವೇದಾಂತ ಸಾರಂಹಿ ಶ್ರೀಭಾಗವತ ಮಿಷ್ಯತೇ ।
ತದ್ರಸಾಮೃತ ತೃಪ್ತಸ್ಯ ನಾನ್ಯತ್ರಸ್ಯಾದ್ರತಿಃ ಕ್ವಚಿತ್ ॥

ಪಡೆದು ಮೈತ್ರೇಯರೂ, ಅವರಿಂದ ವಿದುರನೂ ಬೋಧಿಸಿದನೆಂದು ಹೇಳುತ್ತಾರೆ. ಇನ್ನೊಂದು ಸಂಪ್ರದಾಯದಂತೆ ಶ್ರೀಮನ್ನಾರಾಯಣನಿಂದ ಬ್ರಹ್ಮದೇವರೂ, ಅವರಿಂದ ನಾರದರೂ, ಅವರಿಂದ ವೇದವ್ಯಾಸರೂ, ಅವರಿಂದ ಶುಕಾಚಾರ್ಯರೂ ಉಪದೇಶ ಪಡೆದರು. ಪರೀಕ್ಷಿತ ರಾಜನಿಗೆ ಸೂತ ಪುರಾಣಿಕರಿಂದ ಅನುಗ್ರಹವಾಯಿತೆಂದು ನಂಬುತ್ತಾರೆ.

ಭಾಗವತದಲ್ಲಿ ಮೋಕ್ಷಕ್ಕೆ ಸಾಕ್ಷಾತ್ ಸಾಧನವಾದ ದೃಢಭಕ್ತಿಯ ಸ್ವರೂಪವನ್ನು ಬಹಳ ಚೆನ್ನಾಗಿ ನಿರೂಪಿಸಿದ್ದಾರೆ.

ಭಗವಂತನಲ್ಲಿ ಶ್ರದ್ಧೆ, ಭಗವತ್ಪರವಾದ ಧರ್ಮಾಚರಣೆ, ಆಧ್ಯಾತ್ಮ ಯೋಗ ವಿಷಯಿಕ ಜಿಜ್ಞಾಸೆ, ಶ್ರೀಪಾದನುಗ್ರಹಶಕ್ತರಾದ ಮಹಾತ್ಮರ ನಿರಂತರ ಸೇವೆ, ಪುಣ್ಯಕೀರ್ತಿಯಾದ ಶ್ರೀಹರಿಯ ನಿತ್ಯಕಥಾ ಶ್ರವಣ, ಇಂದ್ರಿಯ ನಿಗ್ರಹ, ಸುಖದಾಯಕವಾದ ಐಹಿಕ ಐಶ್ವರ್ಯಗಳಲ್ಲಿ ನಿರಪೇಕ್ಷೆ, ಪಾರತ್ರಿಕ ಲೋಕಾಂತರ ಸುಖಭೋಗ ತ್ಯಾಗ, ಏಕಾಂತದಲ್ಲಿ ಶ್ರೀಹರಿಗುಣಾಮೃತಪಾನ ಮಾಡದ ವಿನಹ ಮನಸ್ಸಂತೋಷವಾಗದಿರುವಿಕೆ, ಅಹಿಂಸೆ, ಮುಕುಂದನ ಶ್ರೇಷ್ಠ ಚರಿತ್ರೆಗಳ ನಿತ್ಯ ಸ್ಮರಣೆಯಿಂದ ಉಂಟಾದ ನಿಷ್ಕಾಮವರ್ತನೆ, ಯಮನಿಯಮಗಳು *(ಅಹಿಂಸಾ, ಸತ್ಯ, ಅಸ್ತೇಯ, ಅಸಂಗ್ರಹ, ಅಸಂಚಯ, ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮಾ ಮತ್ತು ಅಭ್ಯಯ- ಇವು ಯಮಗಳು. ಶೌಚ, ಜಪ, ತಪ, ಹೋಮ, ಶ್ರದ್ಧಾ, ಆತಿಥ್ಯ, ದೇವತಾರ್ಚನ, ತೀರ್ಥಾಟನ, ಪರಾರ್ಥೇಹಾ, ತುಷಟಿ, ಗುರುಸೇವೆ, ಅಭಯ-ಇವು ನಿಯಮಗಳು)* ಯದೃಚ್ಛಲಾಭ, ಸಂತುಷ್ಟಿ, ಸುಖ ದುಃಖ ದ್ವಂದ್ವ ಸಹನೆ, ಕರ್ಣ ಭೂಷಣಗಳಾದ ಮುಕುಂದ ನಾಮಕೀರ್ತನೆ- ಇವೇ ಮೊದಲಾದವು ಭಾಗವತ ಧರ್ಮಾಚರಣೆಗಳು. ದೇಹ ಇಂದ್ರಿಯಗಳಲ್ಲಿದ್ದು ಅವುಗಳ ಕರ್ತನೂ, ಸರ್ವಪ್ರೇರಕನೂ, ಅಪ್ರಾಕೃತ ಗುಣಪರಿಪೂರ್ಣನೂ, ಆದ ಬ್ರಹ್ಮನಲ್ಲಿ ದೃಢವಾದ ಭಕ್ತಿಯನ್ನು, ವಿಜೃಂಭಿಸಲು ಅವಶ್ಯಕವಾದ ಅಸಂಗವನ್ನು ಸಾಧಿಸಿಕೊಡುತ್ತವೆ.[೧]

---

೧ ಯಚ್ಛ್ರದ್ಧಯಾ ಭಗವದ್ಧರ್ಮಚರ್ಯಯಾ
ಜಿಜ್ಞಾಸಯಾಽಧ್ಯಾತ್ಮಿಸಯೋಗನಿಷ್ಠಯಾ ।
ಯೋಗೇಶ್ವರೋಪಾಸನಯಾ ಚ ನಿತ್ಯಂ
ಪುಣ್ಯಶ್ರವಃ ಕಥಯಾ ಪುಣ್ಯಯಾ ಚ ॥
ಅರ್ಥೇಂದ್ರಿಯಾರಾಮಗುಣೇಷ್ವತೃಷ್ಣಯಾ
ತತ್ಸಮ್ಮತಾನಾಮಪರಿಗ್ರಹೇಣ ಚ ।
ವಿವಿಕ್ತರುಚ್ಯಾಽಪರಿತೋಷ ಆತ್ಮ
ನ್ವಿನಾ ಹರೇರ್ಗುಣಪಿಯೂಷ ಪಾನಾತ್ ॥
ಅಹಿಂಸಯಾ ಪರಮಹಂಸ್ಯಚರ್ಯಯಾ
ಸ್ಮೃತ್ಯಾ ಮುಕುಂದಾ ಚಾರಿತಾಗ್ರ್ಯಸೀಧುನಾ ॥
ಯಮೈರಕಾಮೈರ್ನಿಯ ಮೈರನಿಂದಯಾ
ನಿರೀಹಯಾ ದ್ವಂದ್ವ ತಿತಿಕ್ಷಯಾ ಚ ॥
ಹರೇರ್ಮುಹುಸ್ತತ್ಪರಕರ್ಣಪೂರಯಾ
ಗುಣಾಭಿದಾನೇನ ವಿಜೃಂಭಮಾಣಯಾ ।
ಭಕ್ತ್ಯಾಹ್ಯಸಂಗಃ ಸದಸತ್ತ ರಾತ್ಮನಿ
ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾರತಿಃ ॥ *-ಭಾಗವತ ೮-೨೨ (೨೨, ೨೩, ೨೪, ೨೫)*

ಈ ಸಾಧನೆಗಳಿಂದ ಅಧಿಕಾರಿಯು ಜ್ಞಾನ ವೈರಾಗ್ಯಗಳ ಉದ್ರೇಕದಿಂದ ಸ್ವಾಭಾವಿಕವಾದ ಪಕ್ವ ಭಕ್ತಿಯನ್ನು ಹೊಂದುವನು. ಈ ಭಕ್ತಿಯು ಮರದ ತುಂಡಿನಿಂದ ಹುಟ್ಟಿ ಪ್ರಜ್ವಲಿಸುವ ಅಗ್ನಿಯಂತೆ ಅವನ ಬಾಹ್ಯ ವಿಷಯಾಸಕ್ತಿಗಳನ್ನು ದಹಿಸಿ, ಭಗವದೋಪಾಸನೆಯಲ್ಲಿ ಮನಸ್ಸು ನೆಡುವಂತೆ ಮಾಡುತ್ತದೆ.

ಮೋಕ್ಷ ರೂಪ ಶಾಶ್ವತ ಸುಖಕ್ಕೆ ಭಗವಂತನ ಪ್ರಸಾದವು ಅತ್ಯಾವಶ್ಯಕ. ಭಗವತ್ಪ್ರಸಾದವು ಅವನ ಮಹಾತ್ಮ್ಯ ಜ್ಞಾನ ಪೂರ್ವಕ ಮಾಡುವ ಸದೃಢ ಭಕ್ತಿಯಿಂದ ಬರುತ್ತದೆ. ಶ್ರದ್ಧೆ, ಅಹಿಂಸೆ, ದ್ವಂದ್ವ ಸಹಿಷ್ಣುತೆ, ನಿಷ್ಕಾಮಕರ್ಮ, ವೈರಾಗ್ಯ, ಯಮನಿಯಮಗಳು ಭಗವಂತನ ಮಹಾತ್ಮ್ಯ ಜ್ಞಾನಕ್ಕೆ ಅಧಿಕಾರವನ್ನು ಸಂಪಾದಿಸಿ ಕೊಡುವ ಸೋಪಾನ ಮಾರ್ಗಗಳು. ತತ್ವಜ್ಞಾನಕ್ಕೆ ಮುಖ್ಯಾಂಗವೆಂದರೆ ವೈರಾಗ್ಯ.

ವೈರಾಗ್ಯವೆಂದರೆ ವಿಷಯ ಸುಖಗಳಿಗೆ ಕಾರಣವಾಗುವ ಮನೋವ್ಯಾಪಾರಗಳಲ್ಲಿ ಅನಾಸಕ್ತಿ ಎಂದು ಹೇಳಬಹುದು. ಭಗವಂತನ ವಿಷಯಕವಾದ ಜ್ಞಾನ ಭಕ್ತಿಗಳ ಸ್ಥಿರೀಕರಣಕ್ಕೆ ವೈರಾಗ್ಯವು ಅವಶ್ಯಕವು.

ದೇಹವುಳ್ಳ ಜೀವಿಯು ವೈರಾಗ್ಯವನ್ನು ಪಡೆಯಲು ತಾನು ಹೇಗೆ ಈ ಲೋಕದಲ್ಲಿ ಅವತರಿಸಿದೆನೆಂಬುದನ್ನು ನೆನೆಯಬೇಕು. ಮಾನವ ಶಿಶುವು ಮಾತೃ ಗರ್ಭದಲ್ಲಿ ರಕ್ತ, ಕ್ರಿಮಿ, ಮಲ ಮೂತ್ರಗಳಲ್ಲಿ ಬಿದ್ದಿದ್ದು, ಜಠರಾಗ್ನಿಯಿಂದ ಸುಡಲ್ಪಟ್ಟ ದೇಹಧಾರಿಯಾಗಿರುತ್ತಾನೆ. ಇಂಥ ಮಾತೃ ಗರ್ಭದಲ್ಲೂ ಪರಮಾತ್ಮನು ಜೀವಿಯನ್ನು ರಕ್ಷಿಸುವನೆಂದರೆ ಅವನೆಂಥ ಕರುಣಾಶಾಲಿ ! ಆದರೆ ಜೀವನು ಹುಟ್ಟಿದ ಮೇಲೆ ಸ್ವಾಮಿಯನ್ನು ಮರೆಯುತ್ತಾನೆ. ಅವನು ಎಷ್ಟೇ ವೇದ ಶಾಸ್ತ್ರ ಪಾರಂಗತನಾದರೂ ಸ್ತ್ರೀ ಮೋಹದಿಂದ ಭವಬಂಧನಕ್ಕೆ ಸಿಲುಕುತ್ತಾನೆ. ಎಂಥ ಬಲಾಢ್ಯರಾದರೂ ಸ್ತ್ರೀವಶರಾಗಿ ಅವರ ಕ್ರೀಡಾಮೃಗಗಳಾಗುತ್ತಾರೆ. ಅವನು ಎಂಥ ವಿದ್ವಾಂಸನಾದರೂ ಕುಟುಂಬ ಪೋಷಣೆಯಲ್ಲಿ ನಿರತನಾದನೆಂದರೆ ಅಜ್ಞಾನಿಯಂತೆ ನಡೆದು, ಮೂಢ ಯೋನಿಗಳಲ್ಲಿ ಬೀಳುತ್ತಾನೆ.[೧] ಆಶ್ಚರ್ಯವೆಂದರೆ ಈ ಎಲ್ಲ ಅನರ್ಥಗಳನ್ನು ತಿಳಿದು ಭಗವಂತನ ಮಾಯೆಯಿಂದ ಬಂಧಿತನಾಗಿ ಹಾಗೆ ಪ್ರವೃತ್ತನಾಗುತ್ತಾನೆ! ಎಂಥ ಚಕ್ರವರ್ತಿಯೇ ಇರಲಿ ಕಾಲಗತಿಯಿಂದ ಮಡಿದರೆ, ಬಂಗಾರದಿಂದ ಅಲಂಕೃತವಾದ ರತ್ನಾಭರಣಗಳಿಂದ ಕೂಡಿದ ಅವನ ದೇಹವನ್ನು ಶವವೆಂದು ದೂರೀಕರಿಸುತ್ತಾರೆ. ಆದರೆ ಜ್ಞಾನಿಗಳು ಮಾತ್ರ ತಾನು ದೇಹವೆಂದು ತಿಳಿಯದೆ, ವಿಷಯ ಸುಖಗಳಲ್ಲಿ ಸಿಲುಕಿಕೊಳ್ಳದೆ, ಗೃಹಸ್ಥನಾಗಿದ್ದರೂ ಕಾಮಕ್ರೋಧಾದಿಗಳಲ್ಲಿ ಸಿಕ್ಕಿಕೊಳ್ಳದೆ ಶ್ರೀಹರಿವಾಯುಗಳ ಚರಣಗಳನ್ನು ನಂಬಿ ಇಹಪರಗಳನ್ನು ಈ ದೇಹದಿಂಲೇ ಸಾಧಿಸಿಕೊಳ್ಳುತ್ತಾರೆ. ಸೌಭರಿ ಎಂಬ ಋಷಿಗಳು ಸಾವಿರ ವರ್ಷ ತಪಸ್ಸು ಮಾಡಿ ಕಾಡಿನಲ್ಲಿದ್ದರೂ ಒಮ್ಮೆ ಮತ್ಸ್ಯದಂಪತಿಗಳ ಲೀಲೆಯನ್ನು ನೋಡಿ

---

೧. ವಿದ್ವಾನಪೀತ್ಥಂ ದನುಜಾಃ ಕುಟುಂಬಂ
ಪುಷ್ಣನ್ ಸ್ವಲೋಕಾಯ ವಕಲ್ಪತೇ ವೈ ।
ಯತ್ಸ್ವೀಯ ಪಾರಕ್ಯ ವಿಭಿನ್ನಭಾವ
ಸ್ತಮ ಪ್ರಪದ್ಯೇತಯಥಾ ವಿಮೂಢಃ - ಭಾಗವತ ೭-೬-೩೩.

ಪ್ರಾಪಂಚಿಕ ಸುಖಕ್ಕೆ ಮನತೆತ್ತು ಐವತ್ತು ಮಂದಿ ಪತ್ನಿಯರನ್ನು ವಿವಾಹವಾದರಂತೆ ! ಇನ್ನು ಉಳಿದವರ ಮಾತು ಬೇಡ ! ಜಡಭರತರಾಜನು ಒಂದು ಜಿಂಕೆ ಮರಿಯ ಸಂಸರ್ಗದಿಂದ ಮತ್ತೊಂದು ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಬೇಕಾಯಿತು.

ಮನುಷ್ಯನ ಮನಸ್ಸು, ಚಂಚಲ, ಅವನು ಪ್ರಕೃತಿದತ್ತವಾದ ಸ್ತ್ರೀ, ಮೃದುಶಯ್ಯೆ, ವಸ್ತ್ರ, ಅಭರಣಾದಿ ವಸ್ತುಗಳಲ್ಲಿ ಮೂಢನಂತೆ, ಪತಂಗವು ಬೆಂಕಿಗೆ ಬೀಳುವಂತೆ ಬಿದ್ದು, ಭೋಗಾಪೇಕ್ಷೆಯಿಂದ ಆತ್ಮನಾಶ ಮಾಡಿಕೊಳ್ಳುತ್ತಾನೆ. ಸಂಪತ್ತು, ಹೆಂಡತಿ, ಗೋವು ಇವೆ ಮೊದಲಾದ ಪಶುಪುತ್ರರು, ಬಂಧುಗಳು, ಹೊಲ, ಮನೆ, ಆನೆ, ಕೋಶಗಳು ಸ್ವಲ್ಪ ಕಾಲವಿದ್ದು ನಾಶ ಹೊಂದುವುವು. ಅಸ್ಥಿರವಾದ ಈ ವಸ್ತುಗಳು ಮೃತ್ಯುವಶನಾದ ಮನುಷ್ಯನಿಗೆ ಏನು ಸಂತೋಷ ಕೊಡಬಲ್ಲವು! ಹೀಗೆ ತಿಳಿದಾಗ ಮಾತ್ರ ಅವನಿಗೆ ನಶ್ವರ ಭೋಗಗಳಲ್ಲಿ ವೈರಾಗ್ಯ ಪ್ರಾಪ್ತವಾಗುವುವು.

ಆದುದರಿಂದ ಜೀವನು ತಾನು ಯಾವ ದೇಹದಿಂದ ಭೋಗಾನುಭವಗಳನ್ನು ಹೊಂದುತ್ತಾನೋ ಆ ದೇಹದ ಉತ್ಪತ್ತಿ ಸ್ವರೂಪ ಮತ್ತು ಹೇಯತಾ ಜ್ಞಾನದಿಂದ ಅದು ಜೀವನ ಇಚ್ಛಾದೀನವಲ್ಲವೆಂದು ತಿಳಿದು ವೈರಾಗ್ಯ ಪಡೆಯಬೇಕು. ದೇಹದ ವಿಯೋಗವು ಅವನ ಅಧೀನವಲ್ಲವೆಂದ ಮೇಲೆ ಈ ಜಗತ್ತಿನ ಬದುಕು ಸ್ವಪ್ನಪ್ರಾಯವಲ್ಲವೆ? ಇಂಥ ಶಾಸ್ತ್ರಜನ್ಯ ಜ್ಞಾನದಿಂದ ಮನೋನಿಗ್ರಹವನ್ನು ಸಾಧಿಸಿ ಶಾಶ್ವತ ಆನಂದವನ್ನು ಕೊಡುವ ಭಗವಂತನ ಕಡೆಗೆ ಮನಸ್ಸು ಕೊಡಬೇಕು ; ಇದೇ ವೈರಾಗ್ಯ. ಕರ್ಮಾನುಸಾರ ದೇಹದಾರಾಪುತ್ರಾದಿಗಳ ಸಂಬಂಧವಾದರೂ ಅದು ಪರಮಾತ್ಮನಿಂದ ದತ್ತವಾದುದೆಂದು ತಿಳಿದು ಅವುಗಳಲ್ಲಿ ಆಸಕ್ತನಾಗದೆ ಜೀವನ ಯಾತ್ರೆ ನಡೆಸುವುದೇ ವೈರಾಗ್ಯ. ಇಂದ್ರಿಯಗಳಿಗೂ, ಅರ್ಥಗಳಿಗೂ ಸಂಯೋಗವಾಗದಂತೆ ಜಾಗರೂಕನಾಗಿದ್ದು ವಿರಕ್ತಿಯನ್ನು ಸಂಪಾದಿಸುವುದು ಇನ್ನೊಂದು ಮಾರ್ಗ. ಪರಮಾತ್ಮನ ಇಚ್ಛೆಯಿಂದ ಸಂಸಾರದಲ್ಲಿ ವಿರಕ್ತಿಯನ್ನು ಹೊಂದುವುದು ಮೂರನೆಯ ವಿಧ. ಪರಮಾತ್ಮನ ಭಕ್ತಿಗೆ ವಯಸ್ಸು ಕಾರಣವಲ್ಲ. ಭಗವಂತನ ಆಶ್ರಯ, ಮಹಾತ್ಮರ ಅನುಗ್ರಹದಿಂದ ವೈರಾಗ್ಯವು ಪ್ರಾಪ್ತಿಯಾಗುತ್ತದೇ ಹೊರತು ಅನ್ಯಥಾ ಇಲ್ಲ.

ಇಂಥ ಚಂಚಲವಾದ ಮನಸ್ಸನ್ನು ಯೋಗ್ಯ ವಿಷಯಗಳಲ್ಲಿ ಪ್ರವೃತ್ತವಾಗುವಂತೆ ಮಾಡುವುದು ಜ್ಞಾನಿಗಳ ಲಕ್ಷಣ. ಅದನ್ನು ಭಗವದ್ವಿಷಯದಲ್ಲಿ ನಿಲ್ಲುವಂತೆ ಪ್ರಯತ್ನಿಸಬೇಕು.[೧] ಶ್ರೇಯಸ್ಸಾಧನೆಗೆ ಇದೇ ಶ್ರೇಷ್ಠ ಮಾರ್ಗವು. ಪರಮಾತ್ಮನ ಕಲ್ಯಾಣಗುಣಗಳನ್ನು, ಅವನ ಮಹಿಮೆಗಳನ್ನು ಸದಾ ಸಜ್ಜನರು ಚಿಂತಿಸುತ್ತಿರುತ್ತಾರೆ. ಇಂಥ ಮಹಾತ್ಮರ, ಭಾಗವತರ ಸಹವಾಸದಿಂದ ಭಗವಂತನ ಜ್ಞಾನ ದೊರಕುತ್ತದೆ. ಅವರ ಸೇವೆಯಿಂದ ಬಿಂಬರೂಪಿ ಪರಮಾತ್ಮನ ಅಪರೋಕ್ಷ ಜ್ಞಾನವಾಗುತ್ತದೆ. ಅಂಥ ನಿಯತ ಗುರುಗಳು ಸಾಧಕರು ಪಕ್ವಸ್ಥಿತಿಗೆ ಬಂದಾಗ ದೊರಕುತ್ತಾರೆ. ಅವರಿಂದ ಅವನ ಭಕ್ತಿ ಮಾರ್ಗ ನಿಷ್ಕಂಟಿತವೂ, ಸದೃಢವೂ ಆಗುತ್ತದೆ.

ಪ್ರತಿಯೊಂದು ಜೀವನು ಸತ್ವರಜಸ್ತಮಗಳೆಂಬ ಪ್ರಾಕೃತ ಗುಣಗಳಿಂದ ಬಂಧಿತ

---

೧. ಯತೋ ಯತೋ ನಿಶ್ಚರತಿ ಮನಶ್ಚಂಚಲ ಮಸ್ಥಿರಂ
ತತಸ್ತತೋನಿಯಮ್ಯೈ ತದಾತ್ಮನ್ಯೇವ ವಶಂ ನಯೇತ್ - ಭಗವದ್ಗೀತೆ.

ನಾಗಿರುತ್ತಾ, ಕರ್ಮವಶನಾಗಿ ಭಗವಂತನ ಇಚ್ಛೆಯಿಂದಲೇ ಜನನ ಮರಣ ರೂಪವಾದ ಸಂಸಾರದಲ್ಲಿ ಕಷ್ಟ ಪಡುತ್ತಿರುತ್ತಾನೆ. ಅವನಿಗೆ ಪರಮಾತ್ಮನ ಸ್ಮೃತಿ ನಷ್ಟವಾಗಿರುತ್ತದೆ. ಮಹಾತ್ಮರ, ಸಜ್ಜನರ ಸಂಗದಿಂದ ಭಗವಂತನ ಸ್ಮೃತಿ ದೊರಕುತ್ತದೆ. ಅವನು ಉದ್ಧೃತನಾಗುತ್ತಾನೆ.[೧]

ಕೋಪರಹಿತರೂ, ಸದಾ ಶಾಂತರೂ, ಸರ್ವತ್ರ ಭಗವಂತನನ್ನ ಚಿಂತಿಸುವ ಸಮಚಿತ್ತರೂ, ಪ್ರಸನ್ನ ಮನಸ್ಕರೂ, ಅನಿಮಿತ್ತ ಲೋಕೋಪಕಾರಿಗಳೂ ಆದ ಸಾಧುಗಳೇ, ಸಜ್ಜನರೇ ಮಹಾತ್ಮರೆನಿಸುವರು. ಇವರ ಸೇವೆಯೇ ಮುಕ್ತಿಗೆ ದ್ವಾರವು. ಇದರಂತೆ ಮಿಥ್ಯಾಜ್ಞಾನಿಗಳ ಸಹವಾಸವು ತಮಸ್ಸಿಗೆ ಕಾರಣವೆಂದು ಜ್ಞಾನಿಗಳು ಹೇಳುತ್ತಾರೆ.[೨] ಇಂಥ ಮಹಾತ್ಮರ ದಾರಾಪುತ್ರಮಿತ್ರ ದ್ರವ್ಯಾದಿ ಲೌಕಿಕ ವಸ್ತುಗಳಲ್ಲಿ ಆಸಕ್ತಿ, ದೇಹ ಪೋಷಣೆಗಾಗಿಯೇ ಪ್ರವೃತ್ತಿಯುಳ್ಳ ಜನರಲ್ಲಿ ಪ್ರೀತಿಯುಕ್ತರಾಗದೇ ಸ್ವಾಮಿಯಾದ ಭಗವಂತನಲ್ಲಿ ಸ್ಥಿರವಾದ ಪ್ರೇಮ ಹೊಂದುವುದೇ ಪರಮ ಪುರುಷಾರ್ಥವೆಂದು ಈ ಸಾಧುಗಳು, ಮಹಾತ್ಮರು ತಿಳಿಯುತ್ತಾರೆ.

ಸದಾ ಭಗವಂತನನ್ನು ನೋಡುತ್ತಾ, ಅವನ ನಾಮ ಸಂಕೀರ್ತನೆಯಲ್ಲಿ ಆಸಕ್ತರಾಗಿ, ಅವನ ಗುಣಗಾನ ಮಾಡುವ ಸಜ್ಜನರಾದ ಮಹಾತ್ಮರ ಸೇವೆಯಿಂದ, ಸಹವಾಸದಿಂದ ಅವನಿಗೂ ಭಗವಂತನ ದರ್ಶನ ಲಾಭವಾಗುತ್ತದೆ. ಸ್ತಬ್ಧವಾದ ಕನ್ನಡಿಯಲ್ಲಿ ಪ್ರತಿಬಿಂಬ ಕಾಣುವಂತೆ ಬಿಂಬ ಮೂರ್ತಿಯ ದರ್ಶನವಾಗುತ್ತದೆ. ಅಂಥವರ ಪಾದೋದಕವು ಅಧರ್ಮಾಚರಣೆಯಿಂದ ಪಾಪಿಗಳಾದ ಕಿರಾತ, ಹೂಣರೇ ಮೊದಲಾದ ನೀಚ ಯೋನಿಗಳಲ್ಲಿ ಬಂದವರ ಪಾಪಗಳನ್ನು ಕಳೆದು ಪುನೀತರನ್ನಾಗಿ ಮಾಡಿ ಭಗವಂತನ ಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ ಎಂದ ಮೇಲೆ ಅವರ ಸಹವಾಸದಿಂದ ಅವನು ಉದ್ಧಾರವಾಗುವುದಿಲ್ಲವೆ? ಸಾಧು ಸಜ್ಜನರ ಸೇವೆಯು ಹೇಗೆ ಮಹಾಫಲವನ್ನು ಕೊಡುವುದೆಂಬುದಕ್ಕೆ ರಹೂಗಣ ರಾಜನೇ ಸಾಕ್ಷಿ. ಆದರೆ ಒಂದು ಎಚ್ಚರಿಕೆ.

ಭಗವದ್ಭಕ್ತರಿಗಾದ ಅಪಚಾರವನ್ನು ಭಗವಂತನು ಕ್ಷಮಿಸುವುದಿಲ್ಲ, ಅಂಥವರಿಗೆ ಮಾಡಿದ ಅಪಚಾರಕ್ಕೆ ಮಹಾರುದ್ರ ದೇವರೂ ಶಿಕ್ಷೆಯನ್ನು ಅನುಭವಿಸಬೇಕಾಯಿತೆಂದು ಭಾಗವತವು ತಿಳಿಸುತ್ತದೆ. ಪರಮ ವೈಷ್ಣವನಾದ ರುದ್ರನಿಗೆ ಮಾಡಿದ ಅಪಚಾರಕ್ಕೆ ದಕ್ಷಪ್ರಜೇಶ್ವರನು ದಂಡ ತೆರಬೇಕಾಯಿತೆಂಬುದನ್ನು ನಾವು ಮರೆಯಬಾರದು.

ಭಗವದ್ಭಕ್ತರು ಇನ್ನೊಂದು ವಿಷಯದಲ್ಲಿ ಎಚ್ಚರದಿಂದ ಇರಬೇಕು. ಅದು ಆತ್ಮ ಪ್ರಶಂಸೆ-

---

೧. ಯನ್ಮಯಯೋರು ಗುಣಕರ್ಮ ನಿಬಂಧನೇಽಸ್ಮಿನ್
ಸಂಸಾರಿಕೇಪಥಿ ಚರನ್ ಪದತಿ ಶ್ರಮೇಣ ।
ನಷ್ಟ ಸ್ಮೃತಿಃ ಪುನರಯಂ ಪ್ರವೃಣೀತ ಲೋಕೋ
ಯುಕ್ತ್ಯಾಕಯಾ ಮಹದನುಗ್ರಹ ಮಂತರೇಣ ॥ - *ಭಾಗವತ, ೩-೩೨-೨೬*

೨. ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇ
ಸ್ತಮೋದ್ವಾರಾಂ ಯೋಷಿತಾಂ ಸಂಗಿಸಂಗಂ ।
ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ
ವಿಮನ್ಯವಃ ಸುಹೃದಃ ಸಾಧವೋ ಯೇ - *ಭಾಗವತ ೫-೫-೨.*

ವಿ.ಸೂ ; ಯೋಷಿತಾ ಅಂದರೆ ವಿಷ್ಣುವಿನಲ್ಲಿ ಅನ್ಯತಾ ಜ್ಞಾನವುಳ್ಳವನು.

ಆತ್ಮಪ್ರಶಂಸೆಯು ಅನರ್ಥಕಾರಿ. ಸ್ತೋತ್ರ ಮಾಡುವುದಾದರೆ ಸರ್ವಗುಣ ಪರಿಪೂರ್ಣನಾದ ಭಗವಂತನನ್ನೇ ಸ್ತೋತ್ರ ಮಾಡಬೇಕೇ ಹೊರತು ನರಸ್ತುತಿ ಮಾಡಬಾರದು. ಮಹಾತ್ಮರ ಅವಹೇಳನವು ಅನರ್ಥಕಾರಿ ಎಂದು ನಾರದರ ಅನುಭವದ ನುಡಿಗಳಿವೆ. ಭಕ್ತನಾದವನು ಸ್ವೋತ್ಕರ್ಷ ಮತ್ತು ಪರಾಕರ್ಷಗಳನ್ನು ತ್ಯಾಗ ಮಾಡಬೇಕು. ಇದು ಅವನ ಸಾಧನೆಗೆ ಅಡ್ಡಿಯಾಗುತ್ತದೆ ಎಂಬುದನ್ನು ಮರೆಯಬಾರದು.

ಮುಂದಿನದು ಇಂದ್ರಿಯ ಜಯ. ವಿಷಯ ಭೋಗವು ಆತ್ಮೋದ್ಧಾರಕ್ಕೆ ಕಾರಣ ವಾಗುವುದಿಲ್ಲ. ಹೆಂಡತಿ ಮಕ್ಕಳ ಪಾಲನವು ಭಗವದ್ಭಕ್ತಿಗೆ ಕಾರಣವೆಂದು ಭಾವಿಸಿ, ಮಹಾತ್ಮರ ಸೇವೆ ಮಾಡಬೇಕು. ಆತ್ಮ ಪ್ರಶಂಸಾದಿಗಳನ್ನು ಬಿಟ್ಟು ಮನಸ್ಸನ್ನು ಭಗವಂತನಲ್ಲಿ ಇಡುವುದನ್ನು ಅಭ್ಯಾಸಮಾಡಿ ಇಂದ್ರಿಯ ಜಯವನ್ನು ಸಾಧಿಸಬೇಕು. ಮನಸ್ಸನ್ನು ಬಹಿರ್ವಿಷಯಗಳಲ್ಲಿ ಹೋಗದಂತೆ ನಿರ್ಬಂಧಿಸಿ ಅದನ್ನು ಭಗವಂತನ ಪಾದಾರವಿಂದಗಳಲ್ಲಿ ನಿಲ್ಲಿಸಬೇಕು. ಮೌನ ವ್ರತಾಚರಣೆಗಳಿಂದ ಮನಸ್ಸನ್ನು ಜಯಿಸಬೇಕು. ಕರ್ಮೇಂದ್ರಿಯಗಳನ್ನು ನಿರ್ಬಂಧಿಸಿ, ಮನಸ್ಸಿನಲ್ಲಿ ವಿಷಯ ಸುಖಗಳನ್ನು ಸ್ಮರಿಸುವುದು ಡಾಂಭಿಕತೆ ಎನಿಸುವುದು.[೧] ನಿಜವಾದ ಭಕ್ತನು ಡಾಂಭಿಕ ಭಕ್ತಿಯಿಂದ ದೂರವಿರಬೇಕು. ಅವನು ತ್ರಿಕರಣಗಳಲ್ಲೂ ಅಂದರೆ ಮನಸ್ಸು ಮಾತು ನಡೆಗಳಲ್ಲಿ ಭಗವಂತನನ್ನು ಉಪಾಸಿಸಬೇಕು.

ಭಕ್ತನು ತಾನು ಉಪಾಸಿಸುವ ಭಗವಂತನ ಮುಖ್ಯ ಲಕ್ಷಣವನ್ನು ಅವನ ಮಹಿಮೆಯನ್ನು ಅರಿಯಲೆತ್ನಿಸಬೇಕು. ಭಗವಂತನು ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಂಬ ಅಷ್ಟ ಕರ್ತೃವಾಗಿದ್ದಾನೆ. ಅವನು ಕಲ್ಯಾಣಗುಣ ಪರಿಪೂರ್ಣ, ಸರ್ವ ದೋಷ ದೂರ, ಸರ್ವೋತ್ತಮ. ಸಕಲ ಜೀವರ ಪ್ರಯೋಜನಕ್ಕಾಗಿ ತನ್ನ ಅಧೀನವಾದ ತ್ರಿಗುಣಾತ್ಮಕ ಪ್ರಕೃತಿಯನ್ನು ಉಪಾದಾನ ಕಾರಣವಾಗಿ ಸ್ವೀಕರಿಸಿ, ತಾನು ಮುಖ್ಯ ಕಾರಣನಾಗಿ ಲೀಲೆಯಿಂದ ಜಗತ್ತಿನ ಸೃಷ್ಟಿಯ ವ್ಯಾಪಾರಗಳನ್ನು ಮಾಡುತ್ತಾನೆ. ಚೇತನರು ಈ ಮಾಯೆಯಲ್ಲಿ ಸಿಕ್ಕಿ ಬೀಳದೆ ಭಗವಂತನ ಉಪಾಸನೆ ಮಾಡಿದರೆ ಅವರನ್ನು ಉದ್ಧರಿಸಿ ಶಾಶ್ವತವಾದ ಮೋಕ್ಷ ನೀಡುತ್ತಾನೆ. ಈ ಸೃಷ್ಟಿಯ ಕ್ರಮವನ್ನು ಅನ್ಯಥಾ ತಿಳಿದು ನಡೆದವರು ದುಃಖಭಾಗಿಗಳಾಗುತ್ತಾರೆ ಎಂಬ ಸಂಗತಿ ಯನ್ನು ಅವರು ಸತ್ಸಂಗದಿಂದ ತಿಳಿದು ಭಗವಂತನನ್ನು ಉಪಾಸಿಸಬೇಕು. ಸರ್ವವೂ ಭಗವಧೀನ ವೆಂದು ತಿಳಿದು ಮಾಡುವ ನಿಷ್ಕಾಮಕರ್ಮ ಭಗವಂತನ ಪ್ರಸಾದವನ್ನು ದೊರಕಿಸಿಕೊಡುತ್ತದೆ. ಅದರಿಂದ ಅವನು ಉದ್ಧೃತನಾಗುತ್ತಾನೆ.[೨]- ಎಂದು ಶ್ರೀಮಧ್ವಾಚಾರ್ಯರು ಹೇಳುತ್ತಾರೆ.

---

೧. ಕರ್ಮೇಂದ್ರಿಯಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥಾಚಾರಸ್ಸ ಉಚ್ಯತೇ ॥ - ಗೀತಾ

೨. ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರಸ್ಯಚ್ಚ ತತ್ತಂತ್ರಮಿತಿ ಸಮ್ಯಗ್ವಿನಿರ್ಣಯಃ ॥
ನಿರ್ದೋಷತ್ವಂ ರಮಾಯಾಶ್ಚ ತದವಂತರತಾ ತಥಾ ।
ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ ॥
- ಅನುವ್ಯಾಖ್ಯಾನ ತೃ. ಅಧ್ಯಾಯ ತೃ. ಪಾದ

ಗುರುಪ್ರಸಾದದಿಂದ ದೊರಕಿದ ಭಗವಂತನ ಜ್ಞಾನೋಪದೇಶವನ್ನು ಹೊಂದಿದ ಭಕ್ತನು ಇಡಬೇಕಾದ ಮುಂದಿನ ಹೆಜ್ಜೆ ಎಂದರೆ ಆ ಮಾರ್ಗದಲ್ಲಿ ಪರಮಾತ್ಮನನ್ನು ಉಪಾಸಿಸಿ ಅವನ ಪ್ರಸನ್ನತೆಯನ್ನು ಪಡೆಯಲು ಭಾಗವತಾಚರಣೆಯಲ್ಲಿ ಉದ್ಯುಕ್ತನಾಗಬೇಕು. ಜೀವಿಗೆ ಕರ್ಮ ಮಾಡದಿರುವಿಕೆ ಹೊಂದುವುದಿಲ್ಲ. ಆದರೆ ಫಲದ ಆಸಕ್ತಿಯನ್ನು ಮಾತ್ರ ತೊರೆಯಬೇಕು.

ಕರ್ಮದಲ್ಲಿ ಪ್ರವೃತ್ತ ಮತ್ತು ನಿವೃತ್ತವೆಂದು ಎರಡು ವಿಧ. ಫಲಾಪೇಕ್ಷೆಯಿಂದ ಮಾಡುವ ಕರ್ಮವು ತ್ಯಾಜ್ಯ. ಭಗವಂತನ ಪ್ರೀತಿಗಾಗಿ ಮಾಡುವ ನಿಷ್ಕಾಮ ಕರ್ಮವು ಭಗವಂತನಿಗೆ ಪ್ರಿಯ. ಅದೇ ನಿವೃತ್ತ ಕರ್ಮ. ಅದು ಅಕ್ಷಯ ಸುಖವನ್ನು ಕೊಡುವುದು. ಪ್ರವೃತ್ತ ಕರ್ಮಗಳನ್ನು ಯಾರೇ ಉಪದೇಶಿಸಿದರೂ ಅವು ತ್ಯಾಜ್ಯ. *ಗುರೂಕ್ತ ಮಪಿ ನಗ್ರಾಹ್ಯಂ ಯದನರ್ಥೇಽಥಕಲ್ಪಿನಂ.* ಪ್ರವೃತ್ತ ಕರ್ಮಪರವಾದ ಉಪದೇಶವು ಯಾರಿಂದಲೇ ಬರಲಿ ಅದನ್ನು ಅಂಗೀಕರಿಸಬಾರದು. ಭಕ್ತನಾದವನು ಭಗವಂತನ ಪ್ರೀತ್ಯರ್ಥವಾಗಿ ಮಾಡುವ ನಿವೃತ್ತ ಕರ್ಮಗಳಲ್ಲಿ ಮಾತ್ರ ಆಸಕ್ತನಾಗಿರ ಬೇಕು. ಇದರಿಂದ ಕರ್ಮಗಳ ಫಲರೂಪಿಯಾದ ಜನನ ಮರಣಗಳ ಲೋಪ ಅವನಿಗೆ ಅಂಟುವುದಿಲ್ಲ.

ಭಕ್ತನು ಅಪೇಕ್ಷಿಸುವ ಮುಕ್ತಿಯು ದ್ವಿದಳಾತ್ಮಕವಾದುದು. ದುಃಖ ನಿವೃತ್ತಿ ಮತ್ತು ಸುಖ ಪ್ರಾಪ್ತಿ. ಪ್ರವೃತ್ತ ಕರ್ಮಾಚರಣೆಯನ್ನು ಬಿಡುವುದರಿಂದ ದುಃಖ ನಿವೃತ್ತಿಯೂ, ನಿವೃತ್ತಿ ಕರ್ಮಾಚರಣೆಯಿಂದ ಸುಖ ಪ್ರಾಪ್ತಿಯೂ ಸಿದ್ಧಿಸುತ್ತದೆ. ಆದರಿಂದ ಪಾಕೃತವಾದ ಲಿಂಗ ಶರೀರದಿಂದ ಮುಕ್ತನಾಗುತ್ತಾನೆ. ತಾನು ಮಾಡುವ ಎಲ್ಲ ಕರ್ಮಗಳೂ, ಸಕಲ ವ್ಯಾಪಾರಗಳೂ ಭಗವಂತನ ಪ್ರೇರಣೆಯಿಂದ ಮಾಡುವೆನೆಂಬ ಜ್ಞಾನಪೂರ್ವಕ ಅನುಸಂಧಾನದಿಂದ, ಮಾಡಿದ ಕರ್ಮಗಳಿಂದ ಭಗವಂತನು ಪ್ರೀತನಾಗಲಿ ಎಂಬ ಅರ್ಪಣ ಭಾವದಿಂದ ಮಾಡುವ ಕರ್ಮಗಳು ಭಗವಂತನ ವಿಷಯಕವಾದ ಜ್ಞಾನ- ವಿಜ್ಞಾನಗಳಿಗೆ ಸಾಧನೆಯಾಗುತ್ತದೆ.

ಋಷಭಾವತಾರಿಯಾದ ಪರಮಾತ್ಮನು ತನ್ನ ಮಕ್ಕಳಿಗೆ ಹೀಗೆ ತತ್ತ್ವೋಪದೇಶ ಮಾಡುತ್ತಾನೆ:

*"ನನ್ನಲ್ಲಿ ಮತ್ತು ಗುರುವಿನಲ್ಲಿ ಮಾಡುವ ಭಕ್ತಿ ಮತ್ತು ಸೇವೆ: ವಿಷಯದ ಆಸೆಯನ್ನು ಬಿಡುವುದು, ಸುಖ ದುಃಖ ದ್ವಂದ್ವಗಳ ಸಹನೆ, ತಪಸ್ಸು, ಹರಿಕಥಾ ಶ್ರವಣ, ನಾಮ ಮತ್ತು ಪಾದಸ್ಮರಣೆ, ಅಹಿಂಸೆ, ಸಮದೃಷ್ಟಿ, ಮನಶ್ಶಾಂತಿ, ಅವಲಂಬನೆ, ದೇಹಗೇಹಾದಿಗಳಲ್ಲಿ ಅನಾಸಕ್ತಿ, ಅಧ್ಯಾತ್ಮನಿಷ್ಠೆ, ಏಕಾಂತಭಕ್ತಿ, ಮನೋನಿಗ್ರಹ, ಭಗವತ್ಪರ ಶ್ರದ್ಧೆ, ಬ್ರಹ್ಮಚರ್ಯ, ಅಪ್ರಮಾದ, ವಾಕ್, ಜಿಹ್ವಾನಿಗ್ರಹ, ಭಗವದ್ ಜ್ಞಾನ, ಬಿಂಬೋಪಾಸನೆ, ಧ್ಯಾನ, ಅಹಂಕಾರ ತ್ಯಾಗ - ಹೀಗೆ ಮಾಡುವ ನಿವೃತ್ತ ಕರ್ಮಗಳಿಂದ ಭಗವಂತನ ಸಾಕ್ಷಾತ್ಕಾರವಾಗುವುದು."*

ಕಲಿಯುಗದಲ್ಲಿ ಭಗವಂತನ ನಾಮಸ್ಮರಣೆಯೇ ಮುಕ್ತಿಗೆ ಇರುವ ರಾಜಮಾರ್ಗ. ಮನುಷ್ಯ ದೇಹದಲ್ಲಿ ಭಗವಂತನ ಜ್ಞಾನ ಪ್ರಾಪ್ತಿಗೆ ಅವಶ್ಯಕವಾದ ಸಲಕರಣೆಗಳನ್ನು, ಬುದ್ಧಿ - ಇತ್ಯಾದಿ ಸಾಮಗ್ರಿಗಳು ಕೊಡಲ್ಪಟ್ಟಿದೆ. ದೇಹವು ಶೀಘ್ರವಾಗಿ ಮೃತ್ಯುವಶವಾಗುವುದರಿಂದ ಇರುವ ಆಯುಷ್ಯದಲ್ಲಿ ಸಾಧನ ಮಾಡಿಕೊಳ್ಳಬೇಕು. ಅನೇಕ ಜನ್ಮಗಳ ಪುಣ್ಯ ವಿಶೇಷದಿಂದ ದೊರಕಿರುವ ಈ ಸಾಧನ ಶರೀರವನ್ನು, ಸದಜನ್ಮವನ್ನು ವ್ಯರ್ಥಗೊಳಿಸಿಕೊಳ್ಳದೆ, ಮೋಕ್ಷ ಹೊಂದುವುದಕ್ಕೆ ಪ್ರಯತ್ನಿಸಬೇಕು. ಭಕ್ತಿಯೇ ಮೋಕ್ಷಕ್ಕೆ ಒಯ್ಯುವ ದಾರಿ ಭಕ್ತನಿಗೆ. ಭಗವಂತನ ನಾಮ ಸ್ಮರಣೆಯೇ ಸುಲಭವಾದ ಮಾರ್ಗ.

ಭಗವಂತನ ಅಪರೋಕ್ಷ ಜ್ಞಾನಕ್ಕೆ ಸಾಧಕವಾಗುವ ಮನೋವೃತ್ತಿಗಳು ಮೂರು ವಿಧ. ಧ್ಯಾನ, ಧಾರಣ ಮತ್ತು ಸಮಾಧಿ. ಧ್ಯಾನವೆಂದರೆ ಅಖಂಡವಾದ ಸಂತತವಾದ ಚಿಂತನೆ. ಸಮಾಧಿಯೆಂದರೆ ಸ್ವಾಭಾವಿಕವಾದ ಚಿಂತಿತ ವಿಷಯದಲ್ಲಿ ಮನಸ್ಸು ನಿಲ್ಲುವುದು. ದಾರಾಣವೆಂದರೆ ಅಖಂಡವಾದ ಚಿಂತನ ವ್ಯಾಪಾರ, ತನ್ನಲ್ಲಿರುವ ಬಿಂಬರೂಪದ ಉಪಾಸನೆ ಭಕ್ತನಿಗೆ ಬರುವುದು ಕಷ್ಟ. ಇದಕ್ಕೆ ಅವಿರತ ಅಭ್ಯಾಸಬೇಕು. ಧ್ಯಾನ ಧಾರಣ ಸಮಾಧಿಗಳಿಂದ ತನ್ನ ಉಪಾಸ್ಯ ಮೂರುತಿಯನ್ನು ಹೃದಯ ಮಂದಿರದಲ್ಲಿ ಇಟ್ಟುಕೊಂಡು ಸಂತತವಾಗಿ ಸಾಧನೆ ಮಾಡಿದವರಿಗೆ ಮಾತ್ರ ಪರಮಾತ್ಮನ ಅನುಗ್ರಹದಿಂದ ಅವನಿಗೆ ಬಿಂಬಮೂರ್ತಿಯ ಅಪರೋಕ್ಷ ಜ್ಞಾನವಾಗುತ್ತದೆ, ಅನ್ಯಥಾ ಇಲ್ಲ.

ಶಂಖ ಚಕ್ರ ಗದಾ ಪದ್ಮಗಳಿಂದಲೂ, ಕಾಂಚಿ ಕಂಕಣ ನೂಪುರ ಉಂಗುರ ಕೌಸ್ತುಭ ವನಮಾಲೆಗಳಿಂದಲೂ ಅಲಂಕೃತನಾದ ಪರಮ ಮಂಗಳ ರೂಪನಾದ ಶ್ರೀಹರಿಯನ್ನು ಧ್ಯಾನಿಸಿದರೆ ಅವನು ಭಕ್ತರಿಗೆ ಅನುಗ್ರಹ ಮಾಡುತ್ತಾನೆ ; ಅವನ ಪಾದಾರವಿಂದಗಳಲ್ಲಿ ಮನಸ್ಸಿಟ್ಟು ಧ್ಯಾನ ಮಾಡುವ ಯೋಗಿಗಳು ಪರಮಧನ್ಯಾತ್ಮರು. ಅವರಿಗೆ ಮೋಕ್ಷವು ನೆರಮನೆ ಇದ್ದಂತೆ ಸುಲಭ ಸಾಧ್ಯ- ಎನ್ನುತ್ತದೆ ಭಾಗವತ.

೬

ಸದಾ ಲೌಕಿಕ ವಿಷಯಗಳಲ್ಲೇ ಆಸಕ್ತವಾದ ಮನಸ್ಸಿಗೆ ಅಹಂಕಾರ ಮಮಕಾರಗಳಿಂದ ಕೂಡಿದ ಚಿತ್ತಕ್ಕೆ ಮನಶ್ಶುದ್ಧಿಯಿಂದ ದೊರಕಬಹುದಾದ ಶಾಂತಿ ಹೇಗೆ ದೊರಕೀತು? ಇದನ್ನು ದೊರಕಿಸಿಕೊಳ್ಳಲು ಇರುವ ಸುಲಭೋಪಾಯವೆಂದರೆ ಹರಿನಾಮ ಸ್ಮರಣೆ. ಅವನ ಚರಿತ್ರೆಯ ಶ್ರವಣ ಮತ್ತು ಕೀರ್ತನೆಗಳು ಮನಸ್ಸನ್ನು ಆಶ್ಚರ್ಯವೆನಿಸುವ ರೀತಿಯಲ್ಲಿ ಶುದ್ಧಿಗೊಳಿಸಿ ಚಿತ್ತದ ಮಲಿನತೆಯನ್ನು ಕಳೆದು ಶಾಂತಿ ನೀಡುತ್ತವೆ. ಅಂಜನ ಲೇಪದಿಂದ ಹೇಗೆ ಕಣ್ಣು ಶುದ್ಧವಾಗಿ ಸೂಕ್ಷ್ಮ ವಸ್ತುಗಳನ್ನು ನೋಡಲು ಸಮರ್ಥವಾಗುವುದೋ, ಹಾಗೆಯೇ ಸಂತತ ಮಾಡುವ ಹರಿನಾಮ ಸ್ಮರಣೆ- ಕೀರ್ತನೆಗಳಿಂದ ಮನಸ್ಸು ಶುದ್ಧವಾಗಿ, ಪಾಪ ವಾಸನೆಗಳನ್ನು ಕಳೆದುಕೊಂಡು ಜ್ಞಾನ ಭಕ್ತಿ ವೈರಾಗ್ಯಗಳ ಕಡೆಗೆ ತಿರುಗುತ್ತದೆ. ಅದರಿಂದ ಭಗವಂತನ ಮಹಿಮಾ ಜ್ಞಾನ ಲಭಿಸಿ ಅವನ ಪ್ರಸಾದಕ್ಕೆ ಪಾತ್ರವಾಗುತ್ತಾನೆ.

ಆದರೆ ಮನಸ್ಸಿನ ಶುದ್ಧಿಯೊಂದೇ ಮುಕ್ತಿ ಸಾಧನವಲ್ಲ. ತನ್ನೊಳಗಿನ ಹರಿಯನ್ನು ತಾನು ಅರಿಯದ ವಿನಹ ಅಂದರೆ ಬಿಂಬಾಪರೋಕ್ಷವಿಲ್ಲದೆ ಮುಕ್ತಿ ದೊರಕದೆಂದು ಶಾಸ್ತ್ರಗಳು ಸಾರುತ್ತವೆ. ಬಿಂಬನೆಂದರೆ ಯಾರು? ತನ್ನೊಳಗೆ ಇರುವ ಬಿಂಬರೂಪ ಯಾವುದು? ಅದರ ದರ್ಶನ ಹೇಗೆ ಸಾಧ್ಯ ಎಂಬಿವೇ ವಿಚಾರಗಳು ಸದ್ಗುರುವಿನ ಉಪದೇಶದಿಂದ ಮಾತ್ರ ದೊರಕುತ್ತದೆ. ಈ ಕಾರಣದಿಂದ ನಿಯತ ಗುರುವನ್ನು ಪಡೆಯುವುದು ಭಕ್ತನ ಆದ್ಯ ಕರ್ತವ್ಯ. ಇಂಥ ಸದ್ಗುರುವಿನ ಲಕ್ಷಣವೇನು?

ಶ್ರೀಹರಿಯ ಭಕ್ತಿ ಪಾಶದಿಂದ ಭದ್ರವಾಗಿ ಯಾರ ಮನಸ್ಸು ಹರಿಪಾದಗಳಲ್ಲಿ ಬಂಧಿಸಲ್ಪಟ್ಟಿರುವುದೋ ಆತನೇ ಸದ್ಗುರು. ಆತನೇ ವೈಷ್ಣವೋತ್ತಮ. ಆತನೇ ಭಾಗವತೋತ್ತಮ. ಅವನು ಸದಾ ಬಿಂಬಮೂರ್ತಿಯನ್ನು ಕಾಣುತ್ತ ಆನಂದವಶನಾಗಿರುವನು. ಅಪರೋಕ್ಷ ಜ್ಞಾನ ಪಡೆದ

ಇಂಥವನೇ ಶಿಷ್ಯನಿಗೆ ಬಿಂಬೋಪಾಸನೆಗೆ ಮಾರ್ಗ ತೋರುವ ಸದ್ಗುರುವು, ನಿಯತ ಗುರುವು. ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ಒಳ ಹೊರಗೆ ಇದ್ದುಕೊಂಡು ಆಯಾ ನಾಮ ರೂಪಗಳಿಂದ ವ್ಯಾಪಾರ ಮಾಡಿ, ಮಾಡಿಸಿ, ಸಜ್ಜನರನ್ನು ಅನುಗ್ರಹಿಸುವನೆನ್ನುವ ದೃಢ ವಿಶ್ವಾಸ ಅವನಿಗಿರಬೇಕು. ಪರಮಾತ್ಮನ ಸರ್ವಕರ್ತೃತ್ವ, ಸರ್ವಸ್ವಾತಂತ್ರ್ಯಗಳನ್ನು ತಿಳಿದು, ತದ್ವಿರುದ್ಧವಾದ ಮಿಥ್ಯಾಜ್ಞಾನವನ್ನು ದೂರಮಾಡಿ ಅಂಥ ಗುರುವಿನ ಅನುಗ್ರಹಕ್ಕೆ ಬೇಕಾದ ಗುರುಭಕ್ತಿಯನ್ನು ಸಾಧನವೆಂದು ತಿಳಿದು ಸ್ವಯೋಗ್ಯ ಗುರುಪ್ರಾಪ್ತಿಯಾಗಿ ಸರ್ವದಾ ಭಾಗವತರ ಸೇವೆಯಲ್ಲಿ ತೊಡಗಬೇಕು.

ಪರಮಾತ್ಮನ ಸ್ವರೂಪವನ್ನು ಜೀವ ಪರಮಾತ್ಮರ ಸಂಬಂಧವನ್ನು ತಿಳಿಸುವುದು ಆಧ್ಯಾತ್ಮ ಶಾಸ್ತ್ರ. ಪರಮಾತ್ಮನು ಸರ್ವೋತ್ತಮನೂ, ಗುಣಪೂರ್ಣನೂ, ನಿರ್ದೋಷಿಯೂ ಆಗಿದ್ದಾನೆ. ಅವನು ಯೋಗೀಶ್ವರನು. ಸ್ವತಂತ್ರನಾಗಿ ಭಕ್ತರ ಭಕ್ತಿ ದಾರ್ಢ್ಯತೆಯನ್ನು ನೋಡಿ ಅದಕ್ಕೆ ಅನುಸಾರ ಫಲಗಳನ್ನು ಕೊಡುತ್ತಾನೆ. ದೇವತೆಗಳೂ, ದಾನವರೂ, ಮನುಷ್ಯರೂ ಇರುವ ಜಗತ್ತಿನಲ್ಲಿ ಅವರವರ ಭಕ್ತಿಗೆ ಅನುಗುಣವಾಗಿ ತಾರತಮ್ಯವಾದ ಫಲಗಳನ್ನು ಕೊಡುತ್ತಾನೆ. ದೇವತೆಗಳು ಅಮೃತವನ್ನು ಪಡೆದರೆ ದೈತ್ಯರು ವಾರುಣಿಯನ್ನು ಹೊಂದಿದರು. ಜೀವರ ಯೋಗ್ಯಾತಾನುಸಾರ ಫಲವನ್ನು ಕೊಡುವುದು ಪರಮಾತ್ಮನ ಸಮದರ್ಶಿತ್ವವನ್ನು ತೋರಿಸುತ್ತದೆ. ಭಗವಂತನು ಕರುಣೆ, ಭಕ್ತರ ಭಕ್ತಿದಾರ್ಢ್ಯವನ್ನು ಪರೀಕ್ಷಿಸಿ ಅದಕ್ಕೆ ಅನುಗುಣವಾಗಿ ಫಲಗಳನ್ನು ನೀಡುತ್ತಾನೆ. ಇದಕ್ಕೆ ಬಲಿಚಕ್ರವರ್ತಿಯು ಸಾಕ್ಷಿ. ಶ್ರೀಹರಿಯನ್ನು ನಂಬಿ ಭಜಿಸಿದವರಿಗೆ ಅವನು ತನ್ನನ್ನೇ ನೀಡುವನು, ನಂಬದವರಿಗೆ ಅವನು ಸಿಗನು.

ಪರಮಾತ್ಮನ ಸೃಷ್ಟ್ಯಾದಿ ವ್ಯಾಪಾರಗಳು ಜೀವರ ಉದ್ಧಾರಕ್ಕಾಗಿಯೇ. ಪೂರ್ಣ ಕಾಮನಾದ ಶ್ರೀಹರಿಗೆ ಯಾವ ಪ್ರಯೋಜನವೂ ಇಲ್ಲ. ಅವನನ್ನು ವೇದಗಳು ಅನಿಮಿತ್ತ ಬಂಧುವೆಂದು ಕರೆಯುತ್ತದೆ. ಅವನು ಜಗತ್ತಿನ ಸ್ವಾಮಿಯಾದರೂ ಭಕ್ತಾನುಕಂಪಿ. ಅವನನ್ನು ಪಿತೃತ್ವೇನ, ಸ್ವಾಮಿತ್ವೇನ, ಸುಹೃತ್ವೇನ, ಬಂಧುತ್ವೇನ, ಸಖಿತ್ವೇನ, ಗುರುತ್ವೇನ ಸಕಲ ಸಜ್ಜನರೂ ಶರಣು ಹೊಂದಬೇಕು. ಅವನ ಪ್ರಸಾದದಿಂದಲೇ ಮುಕ್ತಿ.

ಶ್ರೀ ವೇದವ್ಯಾಸರು ಭಾಗವತ ಧರ್ಮಾಚರಣೆಯೂ ಮುಕ್ತಿಗೆ ಮುಖ್ಯ ಸಾಧನವೆಂದು ಸ್ಪಷ್ಟವಾಗಿ ಹೇಳುತ್ತಾರೆ. ಈ ಭಾಗವತಾಚರಣೆ ಎಂದರೇನು? ಈ ಭಾಗವತ ಧರ್ಮದ ರಹಸ್ಯವನ್ನು ಅವರು ಏಳು ಎಂಟನೆಯ ಸ್ಕಂದಗಳಲ್ಲಿ ನಿರೂಪಿಸಿದ್ದಾರೆ. ಇವು ಯಾವುದೆಂದರೆ :

೧. ಭಗವಂತನು ಸರ್ವೋತ್ತಮನೆಂಬ ನಿಶ್ಚಯ ಬುದ್ಧಿಯಿಂದ ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತನಾಗದೆ, ನಿಷ್ಕಾಮ ಕರ್ಮ ಮಾಡುವುದು. ಸರ್ವಪ್ರಾಣಿಗಳಲ್ಲೂ ಕನಿಕರ, ಸ್ನೇಹ, ಪೂಜ್ಯ ಭಾವನೆಗಳಿಂದ ಸೇವೆ ಮಾಡುವುದು.

೨. ಸಾಧು ಸಂಗ : ಭಗವದ್ಭಕ್ತರ ಸಹವಾಸ.

೩. ಶೌಚಂ : ಬಾಹ್ಯ ಶುದ್ಧಿ ಮಾತ್ರವಲ್ಲದೆ ಅಂತರಂಗ ಶುದ್ಧಿಯನ್ನು ಸಂಪಾದಿಸುವುದು, ಸದ್ಭಾವನೆ, ಆಶೆಗಳನ್ನು,

ಕರ್ಮ ಫಲಗಳನ್ನು ಬಿಡುವುದು ಅಂತರಂಗ ಶುದ್ಧಿ, ಸ್ನಾನಾದಿಗಳು ಬಹಿರಂಗ ಶುದ್ಧಿ.

೪. ತಪಸ್ಸು : ಮನಸ್ಸನ್ನು ಪಾಪಕರವಾದ ಆಲೋಚನೆಗಳಿಂದ ದೂರ ಇಡುವುದು.

೫. ತಿತಿಕ್ಷಾ : ದುಃಖೋದ್ವೇಗಗಳನ್ನು ಸಹಿಸುವುದು.

೬. ಮೌನಂ : ಸರ್ವದಾ ಪರಮಾತ್ಮನ ಗುಣಗಳನ್ನು ಚಿಂತಿಸುವುದು. ಮೌನವೆಂದರೆ ಮಾನಸಿಕ ಚಿಂತನೆ.

೭. ಸ್ವಾಧ್ಯಾಯ : ಸಕಲ ಶಬ್ದಗಳೂ ಪರಮಾತ್ಮನನ್ನು ಮುಖ್ಯ ವೃತ್ತಿಯಿಂದ ಬೋಧಿಸುವುದೆಂಬ ಜ್ಞಾನದಿಂದ ಶಾಸ್ತ್ರ ಅಧ್ಯಯನ.

೮. ಆರ್ಜವ : ಮನೋವಾಕಾಯಗಳಿಂದ ಏಕಪ್ರಕಾರ ವರ್ತನೆ.

೯. ಬ್ರಹ್ಮಚರ್ಯ : ಸ್ಮರಣ, ಕೀರ್ತನ, ಕೇಳೀ, ಪ್ರೇಕ್ಷಣ ಗುಪ್ತ ಭಾಷಣ, ಸಂಕಲ್ಪ, ಅಧ್ಯವಸಾಯ, ಕ್ರಿಯಾ ನಿವೃತ್ತಿಗಳೆಂಬ ಅಷ್ಟಾದಿ ಮೈಥುನದಿಂದ ವಿಮುಖ ನಾಗುವುದು ಮಾತ್ರವಲ್ಲ, ಪರಮಾತ್ಮನ ಪ್ರೀತ್ಯರ್ಥವಾಗಿ, ಪರಬ್ರಹ್ಮ ವಸ್ತುವಿನಲ್ಲಿ ಸಂತತ ರತಿಯಾಗಿ ಉಳ್ಳವನಾಗಿರುವುದು.

೧೦. ಅಹಿಂಸೆ : ಪರಹಿಂಸೆಗೆ ಮೂಲ ಕಾರಣವೂ, ಅಜ್ಞಾನದಿಂದ ಬಂಧಿಸುವುದೂ, ಅರಿಷಡ್ವರ್ಗ ಗಳಲ್ಲಿ ಮುಖ್ಯವೂ ಆದ ಕಾಮವನ್ನು ಗೆಲ್ಲುವುದೇ ಅಹಿಂಸೆ.

೧೧. ಸಮತ್ವಂ : ಸುಖ-ದುಃಖಗಳನ್ನು ಪರಮಾತ್ಮನೇ ಕೊಡುವನೆಂದು ತಿಳಿದು ವಿಷಯ ಭ್ರಮೆಯನ್ನು ಬಿಡಲು ಯತ್ನಿಸುವುದು.

೧೨. ಸರ್ವತ್ರ ಆತ್ಮೇಶ್ವರಾನ್ವಿಕ್ಷಾ : ಪರಮಾತ್ಮನ ಮಂಗಳ ರೂಪವನ್ನು ಸರ್ವದಾ ಕಾಣುವುದು. ಸರ್ವದಾ ಚಿಂತಿಸುವುದು. ಭಗವಂತನನ್ನು ಸರ್ವರೂಪಗಳಲ್ಲಿ ಸಮನೆಂದು ತಿಳಿದು ಆರಾಧಿಸುವುದು ವ್ಯಾಪ್ತೋಪಾಸನೆ.

೧೩. ಕೈವಲ್ಯ : ತಾನು ಸ್ವತಂತ್ರಕರ್ತನೆಂಬುದನ್ನು ಮರೆತು ತ್ಯಾಗ, ಸನ್ಯಾಸ ಮತ್ತು ಅಸ್ತೇಯಗಳಿಂದ ಪರಮಾತ್ಮನಲ್ಲಿ ಶರಣು ಹೊಂದಿ ಇತರ ವಸ್ತುಗಳನ್ನು ಆಶ್ರಯಿಸದೆ ಇರುವುದು.

೧೪. ಅನಿಕೇತನ : ಮನೆ ಮುಂತಾದ ಸ್ಥಳಾಭಿಮಾನವನ್ನು ತೊರೆದು ಭಗವಂತನು ಸರ್ವರಕ್ಷಕನೆಂದು ತಿಳಿದು ಮುಕ್ತಿ ಸ್ಥಾನವನ್ನು ಬಯಸುವುದು.

೧೫. ವಿವಿಕ್ತ ದೇಶ ಸೇವಿತ್ವಂ : ಅಪ್ರಾಕೃತನಾದ ಭಗವಂತನನ್ನು ತನ್ನದೆಂಬ ದುರಭಿಮಾನವನ್ನು ತೊರೆದು ವಿವೇಕದಿಂದ ಅವನಲ್ಲಿ ವಾಸಿಸುವುದು.

೧೬. ಚೀರವಸನಂ : ದೇಹಾಂತರ ಬಾರದಂತೆ ನಿವೃತ್ತ ಕರ್ಮೋಸಕ್ತನಾಗುವುದು.

೧೭. ಸಂತೋಷಂ ಯೇನಕೇನಚಿತ್ : ಯೋಗ್ಯ ಉಪಜೀವಿಕೆಯನ್ನು ಆಶ್ರಯಿಸಿ ದೊರಕುವ ಫಲದಿಂದ ಶ್ರೀಹರಿಯ ಪೂಜೆಗೆ ಪ್ರತಿಬಂಧಕವಾಗದಂತೆ ಬದುಕುವುದು.

೧೮. ಪರಾರ್ಥೇಽಹೇಕ್ಷಾ : ತಪ್ಪು ದಾರಿಯಲ್ಲಿರುವವರನ್ನು ಸನ್ಮಾರ್ಗಕ್ಕೆ ತರುವುದು. ಪರೋಪಕಾರ.

೧೯. ಸತ್ಯಂ : ಭೂತಹಿತ ಸಾಧಕ ವಾಕ್ಯವೇ ಸತ್ಯ. ಯಥಾರ್ಥಜ್ಞಾನ.

೨೦. ಅಭಯಂ : ಪ್ರಾಣಿಗಳಿಗೆ ಅಭಯ. ಭಯ ನಿವಾರಣೆ, ಸರ್ವಪ್ರಾಣಿಗಳಿಗೂ ಅಭಯ ಕೊಡುವುದು ಮತ್ತು ಸರ್ವಪ್ರಾಣಿಗಳಿಂದಲೂ ತಾನೂ ಅಭಯ ಪಡೆಯುವುದು).

೨೧. ಶಮ-ದಮ : ಭಗವಂತನಲ್ಲಿ ಮನಸ್ಸನ್ನು ಸ್ಥಿರವಾಗಿಡುವುದು. ಇಂದ್ರಿಯ ನಿಗ್ರಹ.

೨೨. ಶ್ರವಣಂ : ಭಗವಂತನ ಮಹಿಮೆಗಳನ್ನು ಆದರದಿಂದ ಕೇಳುವುದು.

೨೩. ಕೀರ್ತನಂ : ಶ್ರೀಹರಿಯ ಗುಣಗಾನ.

೨೪. ಸ್ಮರಣಂ : ಭಗವಂತನ ಮಹಿಮೆಯ ಚಿಂತನೆ.

೨೫. ಸೇವಾ : ಭಗವಂತನೇ ತನ್ನ ಸ್ವಾಮಿ ಎಂದು ತಿಳಿದು ಮಾಡುವ ಕಾರ್ಯ.

೨೬. ಪೂಜಾ : ಭಗವಂತನನ್ನು ಪುಷ್ಪಾದಿಗಳಿಂದ ಅರ್ಚಿಸುವುದು.

೨೭. ಅವನತಿ : ಶ್ರೀಹರಿಗೆ ನಮಸ್ಕಾರಗಳನ್ನು ಮಾಡುವುದು.

೨೮. ಸಖ್ಯಂ : ಶ್ರೀಹರಿಯು ತನಗೆ ಹಿತಸಾಧಕನೆಂದು ದೃಢವಾದ ನಂಬಿಕೆ.

೨೯. ದಾಸ್ಯಂ : ಶ್ರೀಹರಿಯದಾಸನೆಂದು ತಿಳಿಯುವುದು.

೩೦. ಆತ್ಮಸಮರ್ಪಣಂ : ಸರ್ವಸ್ವವನ್ನು, ತನ್ನನ್ನು, ಭಗವಂತನಿಗೆ ಅರ್ಪಿಸಿ ಶರಣು ಬರುವುದು.

ಇವುಗಳಲ್ಲಿ ಪ್ರಹ್ಲಾದರಾಜರು ಒಂಭತ್ತನ್ನು ಆರಿಸಿ, ನವವಿಧ ಭಕ್ತಿ ಎಂದು ಕರೆದಿದ್ದಾರೆ. ಅವು -ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ.[೧]

ಇವುಗಳಿಗೆ ವಿರುದ್ಧವಾದ ನವವಿಧ ದ್ವೇಷಗಳನ್ನು ಭಕ್ತನಾದವನು ಮಾಡಬೇಕೆಂದು ಭಾಗವತ ಧರ್ಮ ತಿಳಿಸುತ್ತದೆ. ಅವು ಯಾವುದೆಂದರೆ :-

೧. ಜೀವನು ಹರಿಯಿಂದ ಅಭಿನ್ನನೆಂದು ತಿಳಿಯುವುದು.

೨. ಶ್ರೀಹರಿಯು ಆನಂದಾದಿಗುಣಶೂನ್ಯನೆಂದು ತಿಳಿಯುವುದು.

೩. ಅವನು ಗುಣವುಳ್ಳವನಾದರೂ ಅಪೂರ್ಣಗುಣನೆಂದು ತಿಳಿಯುವುದು.

---

೧. ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

*ಇವುಗಳಿಗೆ ವಿರುದ್ಧವಾದ ನವವಿಧ ದ್ವೇಷಗಳು ಹೀಗಿದೆ.*

ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಮಾಧಿಕ್ಯೇ ತದನ್ಯೇಷಾ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇ ಖಿಲಾ ಮತಾಃ ॥

- *ಮಹಾಭಾರತ ತಾತ್ಪರ್ಯ ನಿರ್ಣಯ.*

೪. ಶ್ರೀಹರಿಯಿಂದ ಭಿನ್ನರಾದ ರಮಾರುದ್ರಾದಿಗಳಿಗೆ ಶ್ರೀಹರಿಯು ಸಮನೆಂದು ತಿಳಿಯುವುದು.

೫. ಅನ್ಯರನ್ನು ಶ್ರೀಹರಿಗೆ ಅಧಿಕನೆಂದು ತಿಳಿಯುವುದು.

೬. ಶ್ರೀಹರಿಯ ಅವತಾರಗಳಲ್ಲಿ ಆಗಲಿ, ಪ್ರತಿಯೊಂದು ರೂಪಕ್ಕೂ, ಅದರ ಕರಚರಣಾದಿ ಅವಯವಗಳಲ್ಲಿ ಆಗಲಿ ಪರಸ್ಪರ ಭೇದವನ್ನು ತಿಳಿಯುವುದು.

೭. ಶ್ರೀಹರಿಯ ಅವತಾರಗಳನ್ನು ವಿರುದ್ಧವಾಗಿ ಎಂದರೆ ಸಾಮಾನ್ಯ ಮನುಷ್ಯ ಅಥವಾ ಪ್ರಾಕೃತ ದೇಹವುಳ್ಳವನೆಂದು ತಿಳಿಯುವದು.

೮. ಹರಿಭಕ್ತರನ್ನು ದ್ವೇಷಿಸುವುದು.

೯. ಹರಿಯನ್ನು ಪ್ರತಿಪಾದಿಸುವ ವೇದಾದಿಗಳ ಪ್ರಮಾಣವನ್ನು ನಿಂದಿಸುವುದು.

ಅವನು ತನ್ನ ನಾಮಸ್ಮರಣೆ ಮಾಡಿದವರ ಅನೇಕ ಜನ್ಮಗಳ ಪಾಪ ಸಮೂಹವನ್ನು ಮನೋವಾಕ್ಕಾಯಗಳಿಂದ ಮಾಡಿದ ಸಂಚಿತ ಪಾಪಗಳನ್ನು ಅಪಹರಿಸಿ ಬಿಡುತ್ತಾನೆ.[೧] ಇದರಿಂದ ಭಗವನ್ನಾಮ ಸ್ಮರಣೆಯ ಮಹಿಮೆ ಎಷ್ಟೆಂಬುದು ತಿಳಿಯುತ್ತದೆ.

ಇನ್ನು ಭಗವಂತನ ಧ್ಯಾನದ ಮಹಿಮೆ. ಯಾರು ದೇವೋತ್ತಮನಾದ ಶ್ರೀಹರಿಯ ಧ್ಯಾನವನ್ನು ಎಡೆಬಿಡದೆ ಮಾಡುವನೋ ಅವನು ಗಂಗಾದಿ ಸ್ನಾನಫಲ, ಕೃಚ್ಛ್ರ ಚಾಂದ್ರಾಯಣಾದಿ ವ್ರತೋಪವಾಸದ ಫಲ, ಸಚ್ಛಾಸ್ತ್ರಾಲೋಚನ ರೂಪದ ತಪಸ್ಸಿನ ಫಲ, ಅಗ್ನಿಷ್ಟೋಮಾದಿಯಾಗ ಫಲ, ಶಾಸ್ತ್ರಪಠಣ ಪ್ರವಚನಗಳಿಂದ ಬರುವ ಫಲಗಳಿಗಿಂತ ಅಧಿಕ ಫಲ ಬರುವುದೆಂದು ಹೇಳುತ್ತಾರೆ.[೨] ಭಗವಂತನ ಅನೇಕ ನಾಮಗಳನ್ನು ಕುರಿತು ಮಾಡುವ ಧ್ಯಾನವು ಮತ್ತೆ ಮಾತೃಗರ್ಭಕ್ಕೆ ತರುವುದಿಲ್ಲ. ಅವನು ಜನನ ಮರಣಗಳಿಂದ ಬಿಡುಗಡೆ ಹೊಂದುತ್ತಾನೆ. ಭಗವಂತನ ಧ್ಯಾನವು ಸಂಸಾರ ಬಂಧನ ನಿವರ್ತಕವು. ಸರ್ವಶಾಸ್ತ್ರಗಳು ನಾರಾಯಣನೊಬ್ಬನೇ ಪರದೈವವೆಂದು ನಿರ್ಣಯಿಸಿವೆ. ವೇದ ವೇದಾಂತ, ಭಾರತ, ರಾಮಾಯಣ ಇತಿಹಾಸ ಪುರಾಣಗಳೂ, ಪಂಚರಾತ್ರ ಮುಂತಾದ ಸಮಸ್ತ ಶಾಸ್ತ್ರಗಳೂ, ಉಪಕ್ರಮ, ಉಪಸಂಹಾರ ಅಭ್ಯಾಸಾದಿಗಳಿಂದ ನಾರಾಯಣನೊಬ್ಬನೇ ಸರ್ವರಿಂದ ಧ್ಯಾನಿಸಲ್ಪಡತಕ್ಕವನೆಂದು ನಿರ್ಣಯಿಸಿರುವಾಗ ಮೋಕ್ಷಾರ್ಥಿಗೆ ಅವನ ಧ್ಯಾನ ಇಹಪರಗಳಿಗೆ ಸಾಧನವಾಗುವುದಿಲ್ಲವೆ?

ವೇದಶಾಸ್ತ್ರಗಳ ಅಭ್ಯಾಸ, ಯಜ್ಞಗಳು, ಶಾಸ್ತ್ರಾಲೋಚನ ರೂಪವಾದ ತಪಸ್ಸು,

---

೧. ನಾರಾಯಣೋ ನಾಮ ನರೋ ನರಾಣಾಂ
ಪ್ರಸಿದ್ಧ ಚೋರಃ ಕಥಿತಃ ಪೃಥಿವ್ಯಾಂ ।
ಅನೇಕಜನ್ಮಾರ್ಜಿತ ಪಾಪಸಂಚಯಂ
ಹರತ್ಯ ಶೇಷಂ ಸ್ಮೃತಿ ಮಾತ್ರ ಏವ ॥

೨. ಕಿಂ ತಸ್ಯ ಬಹುಭಿಃ ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ
ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣ ಮನನ್ಯಭೀಃ ॥

ಷೋಡಶ ಮಹಾದಾನ, ಗಂಗಾದಿ ಸರ್ವತೀರ್ಥ ಸ್ನಾನ, ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳು, ಅಗ್ನಿಹೋತ್ರ, ತಪಸ್ಸು, ಸತ್ಯವಾಕ್ಯಪಾಲನೆ, ವೇದಾಧ್ಯಯನ, ಅಧ್ಯಾಪನ, ಅತಿಥಿ ಸತ್ಕಾರ, ವೈಶ್ವದೇವ, ಕೆರೆಕುಂಟೆಗಳ ನಿರ್ಮಾಣ- ಇವುಗಳಿಂದ ಬರಬಹುದಾದ ಸಮಸ್ತ ಫಲಗಳು ಭಗವಂತನನ್ನು ಕುರಿತು ಮಾಡುವ ಧ್ಯಾನದಿಂದ ಬರುತ್ತದೆ.[೧] ಇಂಥ ಭಕ್ತನು ಧ್ಯಾನದಿಂದ ಮಹತ್ಫಲವಾದ ಮೋಕ್ಷವನ್ನು ಪಡೆಯುವನೆಂದ ಮೇಲೆ ಧರ್ಮಾರ್ಥ ಕಾಮಗಳೂ, ಸ್ವರ್ಗಾದಿ ಸುಖಗಳು ಇಚ್ಛಿಸದೆ ಹೊಂದುವನು. ಆದುದರಿಂದ ಧ್ಯಾನದಿಂದ ಬರತಕ್ಕ ಫಲಗಳು ಅನಂತವೆಂದು ತಿಳಿಯಬಹುದು.

ಇನ್ನು ಭಗವಂತನ ಕೀರ್ತನೆ. ಮೈತ್ರೇಯನೆಂಬ ಋಷಿಯನ್ನು ಕುರಿತು ಮಾಡಿದ ಉಪದೇಶದಲ್ಲಿ ಕೀರ್ತನೆಯ ಫಲಗಳನ್ನು ಕುರಿತು ಹೀಗೆ ಹೇಳಿದೆ :

*"ಶ್ರೀಹರಿಯ ಶ್ರೀರಾಮಕೃಷ್ಣಾದಿ ನಾಮಗಳನ್ನು ಕೀರ್ತಿಸುವುದರಿಂದ ಅವನ ಮನೋವಾಕ್ಕಾಯಗಳಲ್ಲಿ ಮಾಡಿದ ಮತ್ತು ಜನ್ಮಾಂತರಗಳಲ್ಲಿ ಆರ್ಜಿಸಿದ ಸಮಸ್ತ ಪಾಪಗಳು ಬೆಂಕಿಯಲ್ಲಿ ಸುವರ್ಣಾದಿ ಧಾತುಗಳು ಬೆಂದಾಗ ಕೊಳೆಯು ನಷ್ಟವಾಗುವಂತೆ, ಸುಟ್ಟು ಹೋಗಿ ಅವನು ಪವಿತ್ರನಾಗುವನು"*[೨] ಆದುದರಿಂದ ಭಗವನ್ನಾಮ ಸಂಕೀರ್ತನೆಯು ಕಲಿಯುಗದಲ್ಲಿ ಮಹಾ ವರಪ್ರಸಾದ.

ಶ್ರೀಮಧ್ವಾಚಾರ್ಯರು ಹೇಳುತ್ತಾರೆ. ಭಗವಂತನ ನಾಮಸ್ಮರಣೆ ಕೀರ್ತನೆಗಳಿಂದ ನಾಶವಾಗದಷ್ಟು ಪಾಪಗಳನ್ನು ಮನುಷ್ಯನಿಂದ ಮಾಡಲು ಸಾಧ್ಯವಿಲ್ಲವೆಂದು - ಎಂದ ಮೇಲೆ ಭಗವಂತನ ಕೀರ್ತನದ ಮಹಿಮೆ ಎಷ್ಟೆಂದು ಊಹಿಸಲು ಸಾಧ್ಯ. ಕಲಿಯುಗದಲ್ಲಿ ಕಲಿ ಮೊದಲಾದ ದೈತ್ಯರ ಪ್ರೇರಣೆಯಿಂದ ಬಂದ ಮನೋವಾಕ್ಕಾಯ ಕೃತವಾದ ಕಲ್ಮಷವು ಅನೇಕ ವಿಧ; ಅತ್ಯಂತ ಕ್ರೂರ, ಅಸಹ್ಯ. ನಾನಾ ಬಗೆಯ ನರಕದ ದುಃಖಭಾಜನ. ಇವೆಲ್ಲ ಪಾಪ ಸಮುದಾಯವು ನಾರಾಯಣ, ಗೋವಿಂದ, ಹರೇ ಎಂಬ ನಾಮದ ಸಂಕೀರ್ತನೆಯು ನಾಶ ಮಾಡಬಲ್ಲದೆಂದರೆ ಭಗವನ್ನಾಮ ಸಂಕೀರ್ತನೆಯ ಮಹಿಮೆ ಏನೆಂದು ಹೇಳುವುದು? ಅವನ ಸಂಕೀರ್ತನದಿಂದ ಅನಾಯಾಸೇನಯಾಂತಿ ಮುಕ್ತಿ - ಎಂದು ಜ್ಞಾನಿಗಳ ಹೇಳಿಕೆ. ಬಹುವಿಧ ಪಾಪಗಳನ್ನು ಮಾಡಿದ ಪಾಷಂಡಿಗಳೂ ಒಮ್ಮೆ ಹರಿಕೀರ್ತನೆ ಮಾಡಿದರೆ ಪಾಪಗಳಿಂದ ಮುಕ್ತರಾಗುತ್ತಾರೆ. ಚತುಃಸಾಗರ ಮಧ್ಯದಲ್ಲಿರುವ ಉತ್ತಮವಾದ ತೀರ್ಥ, ಪುಣ್ಯಕ್ಷೇತ್ರಗಳಿಂದ ತುಂಬಿರುವ ಈ ಜಂಬೂದ್ವೀಪದಲ್ಲಿ ಮಾನವರಿಗೆ ಪಾಪಗಳನ್ನು ಪರಿಹರಿಸಿ ಮುಕ್ತಿಯನ್ನು ಕೊಡುವವನು ಕೇಶವನ ಹೊರತು ಮತ್ತೊಬ್ಬರಿಲ್ಲ. ಕೃತಯುಗದಲ್ಲಿ ಶ್ರೀಹರಿಯನ್ನು ನೂರುವರ್ಷ ಭಕ್ತಿಯಿಂದ ಪೂಜಿಸಿದರೆ ಬರುವಷ್ಟು ಪುಣ್ಯ ಸಂಪಾದನೆಯು ಕಲಿಯುಗದಲ್ಲಿ ಕೇಶವನಾಮ ಸಂಕೀರ್ತನೆಯಿಂದ ಲಭಿಸುವುದೆಂದು ಜ್ಞಾನಿಗಳ ಮತ.[೩] ನಾರಾಯಣ ಮಂತ್ರವು ನಾನಾ ವಿಧ ಸಂಸಾರಿಕ ದುಃಖಗಳಿಂದ

---

೧. ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ತೀರ್ಥೇಷು ವ್ರತೇಷು ಯಚ್ಚ ।
ಇಷ್ಟೇಷು ಪೂರ್ತೇಷು ಚಯತ್ತದಿಷ್ಟ ಪುಣ್ಯಂಸ್ಮೃತೇ ತತ್‌ಫಲು ವಾಸುದೇವೇ ॥

೨. ಯನ್ನಾಮಕೀರ್ತನಂ ಭಕ್ತ್ಯಾ ವಿಲಾಪನಮನುತ್ತಮಂ ।
ಮೈತ್ರೇಯಾಶೇಷಪಾಪಾನಾಂ ಧಾತುನಾ ಮಿವ ಪಾವಕ ॥

೩. ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಶತೈರಪಿ ।
ಫಲಂ ಸಂಪ್ರಾಪ್ಯತೇ ಸರ್ವಂ ಕಲೌ ಸಂಕೀರ್ತ್ಯ ಕೇಶವಂ ॥

ಆರ್ತರಾದವರ ಪಾಲಿಗೆ ದಿವ್ಯೌಷಧ. ಜರಾ, ವ್ಯಾಧಿ, ರಾಜ-ಚೋರ ಭಯ, ಪಾರ್ಶ್ವವಾಯು, ಕ್ಷಯ, ಪಾಂಡುರೋಗ ಮುಂತಾದ ಐಹಿಕ ಬಾಧೆಗಳು ನಾರಾಯಣನೆಂಬ ನಾಮ ಸಂಕೀರ್ತನೆಯಿಂದ ನಾಶವಾಗಿ ಅವರ ದುಃಖ ನಿವೃತ್ತಿಯಾಗುವುದು.[೧]

ಹೇ ಕೃಷ್ಣ, ಹೇ ರಾಮ ಎಂಬ ಭಗವಂತನ ನಾಮ ಸಂಕೀರ್ತನೆಯಲ್ಲಿ ಕರ್ಮಶೇಷದಿಂದ ಪ್ರಾಪ್ತವಾಗುವ ತಾಯಿಯ ಗರ್ಭವಾಸಾದಿಗಳ ದುಃಖ, ನರಕದ ಭೀತಿ ನಾಶವಾಗುವುದೆಂದು ವಿಶ್ವಾಮಿತ್ರರು ಅಭಿಪ್ರಾಯ ಪಡುತ್ತಾರೆ.[೨]

ನಾಲಿಗೆಯು ಹರಿನಾಮ ಸ್ಮರಣೆ ಮಾಡಲಿ. ಶ್ರೀಹರಿಯು ಸಂಸಾರ ಸಾಗರವನ್ನು ದಾಟಲು ಹಡಗಿನಂತೆ ಇರುವನೆಂದು ಒಬ್ಬ ಭಕ್ತನು ಜಿಹ್ವಾಭಿಮಾನಿ ದೇವತೆಯನ್ನು ಪ್ರಶ್ನಿಸಿದ್ದಾನೆ.[೩] ಶ್ರುತಿ ಸ್ಮೃತಿಗಳು ಹರಿನಾಮ ಸಂಕೀರ್ತನೆಯಿಂದ ಕುರುಕ್ಷೇತ್ರ, ಕಾಶಿ, ಪುಷ್ಕರಗಳ ತೀರ್ಥಸ್ನಾನ ಫಲ ದೊರಕುವುದೆಂದು ಸಾರಿವೆ.[೪] ಭಗವಂತನ ನಾಮಸ್ಮರಣೆ ಮಾಡಿದವನಿಗೆ ವೈಕುಂಠಾದಿಗಳಲ್ಲಿ ಭೋಗ ಭಾಗ್ಯಗಳು ದೊರಕುವುದಲ್ಲದೆ, ಹತ್ತು ಲಕ್ಷ ಅಶ್ವಮೇಧಯಾಗದ ಫಲ ಬರುವುದೆಂದು ಹೇಳುತ್ತವೆ.[೫]

ಮನುಷ್ಯನಿಗೆ ಮಾನವ ಜನ್ಮ ದೊರಕಿರುವುದು ಭಗವಂತನ ಪ್ರಸಾದದಿಂದ. ಇದು ಸಾಧನ ಶರೀರ. ಇಂಥ ಜನ್ಮವನ್ನು ಪಡೆಯಲು ದೇವತೆಗಳೂ ಆಸೆ ಪಡುತ್ತಾರೆ. ಅಂದ ಮೇಲೆ ಅದನ್ನು ಸಾರ್ಥಕ ಪಡಿಸಿಕೊಂಡು ಉದ್ಧಾರವಾಗುವುದು ಅವನ ಕೈಲೇ ಇದೆ.

ಜೀವನಿಗೆ ಶರೀರವು ರಥ. ಬುದ್ಧಿಯು ಸಾರಥಿ, ಚಕ್ಷುರಾದಿ ದಶ ಇಂದ್ರಿಯಗಳು

---

೧. ಆರ್ತಾ ವಿಷಣ್ಣಾ ಶಿಥಿಲಾಶ್ಚ ಭೀತಾಃ
ಘೋರೇಷು ಚ ವ್ಯಾಧಿಷು ವರ್ತಮಾನಾಃ ।
ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ ।
ವಿಮುಕ್ತ ದುಃಖಾಃ ಸುಖಿನೋ ಭವಂತಿ ॥

೨. ಸಕೃದುಚ್ಚರಿತಂ ಯೈಸ್ತು ಕೃಷ್ಣೇತಿ ನ ವಿಶಂತಿ ತೇ ।
ಗರ್ಭಾಗಾರ ಗೃಹಂ ಮಾತುಃ ಯಮಲೋಕಂ ಚ ದುಃಸಹಂ ॥

೩. ಹೇ ಜಿಹ್ವೇ ರಸಸಾರಜ್ಞೇ ಹರಿಂ ಕಿಂನು ನ ಭಾಷಸೇ ।
ಹರಿಂ ವದಸ್ವ ಕಲ್ಯಾಣಿ ಸಾಂಸಾರೋದಧಿನೌರ್ಹರಿಃ ॥

೪. ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ ಪುಷ್ಕರೇಣ ಕಿಂ ।
ಜಿಹ್ವಾಗ್ರೇ ವರ್ತತೇ ಯಸ್ಯ ಹರಿಂತ್ಯಕ್ಷರದ್ವಯಂ ॥

೫. ವಿಚಿತ್ರ ರತ್ನ ಪರ್ಯಂಕೇ ಮಹಾಭೋಗೇ ಚ ಭೋಗಿನಃ ।
ರಮಂ ತೇ ನಾಕಿರಾಮಾ ಭಿಃ ಕೇಶವ ಸ್ಮರಣಾತ್ ಫಲಂ ॥
ಅಶ್ವಮೇಧ ಸಹಸ್ರಾಣಾಂ ಸಹಸ್ರಂ ಯಃ ಸಮಾಚರೇತ್ ।
ನಾಸೌ ತತ್ಫಲಮಾಪ್ನೋತಿ ತದ್ಭಕ್ತೈರ್ಯದವಾಪ್ಯತೇ ॥
ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥
ಇಂದ್ರಿಯಾಣಿ ಹಯಾನ್ಯಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ -ಕಾಠಕೋಪನಿಷತ್ತು.

ಕುದುರೆಗಳು, ಮನಸ್ಸು ಲಗಾಮು, ಶಬ್ದ ಸ್ಪರ್ಶ ರೂಪ ರಸ ಗಂಧಗಳು ಈ ಕುದುರೆಯು ಸಂಚಾರ ಮಾಡುವ ದೇಶ. ಆತ್ಮನು ವಿವೇಕದಿಂದ ಈ ದೇಹ ರಥವನ್ನು ನಡೆಸಿದರೆ ಅವನ ಉದ್ಧಾರವಾಗುತ್ತದೆ; ಅವಿವೇಕಿಯಾದರೆ, ಸರ್ವನಾಶ ಮಾಡಿಕೊಳ್ಳುತ್ತಾನೆ.

ಉತ್ತಮ ಅಧಿಕಾರಿಯಾದ ಮನುಷ್ಯನು ಭಗವಂತನು ಕೊಟ್ಟಿರುವ ಕಣ್ಣು, ಕಿವಿ, ಮೂಗು, ನಾಲಿಗೆ, ಸ್ಪರ್ಶೇಂದ್ರಿಯ, ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಇಂದ್ರಿಯಗಳನ್ನು ಮನಸ್ಸೆಂಬ ಹಗ್ಗದಿಂದ ಬಂಧಿಸಿ, ಬುದ್ಧಿ ಎಂಬ ಸಾರಥಿಯಿಂದ ಭಗವಂತನ ಉಪಾಸನೆಯಲ್ಲಿ ಮನಸ್ಸು ಹರಿಸಿದಾಗ ಈ ದಶ ಇಂದ್ರಿಯಗಳಿಂದ ಸಾಧನೆಯಾಗಿ, ಭಗವಂತನ ಪ್ರಸಾದಕ್ಕೆ ಅವನು ಪಾತ್ರನಾಗಿ, ಜನನ ಮರಣ ರೂಪದ ಸಂಸಾರದಿಂದ ಅವನು ಮುಕ್ತನಾಗುತ್ತಾನೆ- ಎಂದು ಜ್ಞಾನಿಗಳು ನಂಬುತ್ತಾರೆ.

## ೧೦

ಭಾರತೀಯ ದರ್ಶನ ಗ್ರಂಥಗಳಾದ ವೇದ ಉಪನಿಷತ್ತುಗಳು, ಶ್ರುತಿಸ್ಮೃತಿ ಪುರಾಣ ಇತಿಹಾಸ ಶಾಸ್ತ್ರಗಳಲ್ಲಿ ಭಕ್ತಿಯನ್ನು ಕುರಿತು ಹೇಳಿರುವ ಮಾತುಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

ವೈದಿಕ ಧರ್ಮದ ಮೂಲತತ್ವವೇ ಎಲ್ಲ ಪ್ರಾಣಿಗಳಲ್ಲಿ ಒಂದೇ ಆತ್ಮ-ಪರಮಾತ್ಮ ನೆಲೆಸಿದ್ದಾನೆ. ಈ ಭಗವಂತನನ್ನು ಪಡೆಯಲು ಅವನನ್ನು ಅರಿಯಲು ನಮಗೆ ಮಾನವ ಜನ್ಮ ದೊರೆತಿದೆ. ಅದನ್ನು ಸಾರ್ಥಕ ಮಾಡಿಕೊಂಡು, ಭಗವಂತನನ್ನು ಕಾಣಬೇಕೆಂಬುದು ಎಲ್ಲ ವೇದಾಗಮಗಳ ಸಾರವೆಂದು ಜ್ಞಾನಿಗಳು ಹೇಳುತ್ತಾರೆ. ಭಗವಂತನನ್ನು ಅರಿಯಲು ವೇದೋಪನಿಷತ್ತುಗಳೇ ರಾಜಮಾರ್ಗವೆಂದು ಮಂತ್ರದ್ರಷ್ಟುಗಳಾದ ಋಷಿಗಳು ನುಡಿದಿದ್ದಾರೆ. ಈ ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನವೆಂದರೆ ಧರ್ಮಾನುಷ್ಠಾನ.

ಧರ್ಮವೆಂದರೇನು? ಅದರ ಲಕ್ಷಣಗಳೇನು? ಧರ್ಮದ ಸ್ವರೂಪವನ್ನು ಧರ್ಮಶಾಸ್ತ್ರಕಾರನಾದ ಮನು ಸುಂದರವಾಗಿ ನಿರೂಪಿಸಿದ್ದಾನೆ. ಅವನು ಸನಾತನ ಮಾನವ ಧರ್ಮಕ್ಕೆ ಒರೆಗಲ್ಲಾಗಿ ನಾಲ್ಕು ಲಕ್ಷಣಗಳನ್ನು ತಿಳಿಸಿದ್ದಾನೆ. ವೇದ, ಸ್ಮೃತಿ, ಸದಾಚಾರ ಮತ್ತು ಯಾವುದರಿಂದ ಆತ್ಮಕ್ಕೆ ಸಂತೋಷವಾಗುತ್ತದೆಯೋ ಅದು ಅಂದರೆ ಧರ್ಮಾನುಷ್ಠಾನ. ಚತುರ್ಮುಖ ಬ್ರಹ್ಮನ ನಾಲ್ಕು ಮುಖಗಳಿಂದ ಭಗವಂತನಾದ ಶ್ರೀಹರಿಯ ಸ್ತೋತ್ರರೂಪವಾಗಿ ಹೊರಬಿದ್ದ ವೇದಗಳು ಸಂಹಿತೆ, ಬ್ರಾಹ್ಮಣ, ಅರಣ್ಯಕ ಮತ್ತು ಉಪನಿಷತ್ತುಗಳನ್ನು ಒಳಗೊಂಡಿದೆ. ಸ್ಮೃತಿ ಅಂದರೆ ಆರು ವೇದಾಂಗಗಳಾದ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದ, ಜ್ಯೋತಿಷಗಳು, ಧರ್ಮಶಾಸ್ತ್ರ, ಇತಿಹಾಸ, ಪುರಾಣಗಳು, ನೀತಿಯ ಸಮಸ್ತ ಗ್ರಂಥಗಳು ಸ್ಮೃತಿ ಎನಿಸಿವೆ. ಮನುಸ್ಮೃತಿ ಅಂದರೆ ಮಾನವ ಧರ್ಮಶಾಸ್ತ್ರ, ಯಾಜ್ಞವಲ್ಕ್ಯ ಸ್ಮೃತಿ, ಅತ್ರಿ ಸ್ಮೃತಿ, ವಿಷ್ಣು ಸ್ಮೃತಿ, ಆಪಸ್ತಂಬ ಸ್ಮೃತಿ, ಪರಾಶರ ಸ್ಮೃತಿ, ವ್ಯಾಸಸ್ಮೃತಿ, ವಸಿಷ್ಠ ಸ್ಮೃತಿ -ಮುಂತಾದವು ಮಾನವನ ಇಹಲೋಕದ ಬಾಳು ಹೇಗೆ ಧರ್ಮಮೂಲವಾಗಿ ನಡೆದರೆ ಇಹಪರಗಳ ಕ್ಷೇಮಕ್ಕೆ ಕಾರಣವಾಗುವುದೆಂಬುದನ್ನು ಸೂತ್ರಗಳಿಂದಲೂ, ಸುಂದರ ದೃಷ್ಟಾಂತಗಳಿಂದಲೂ ವಿವರಿಸುತ್ತವೆ.

ಧರ್ಮದ ಆಧಾರವನ್ನು ಕುರಿತು ಅಥರ್ವಣವೇದದಲ್ಲಿ ಹೇಳುತ್ತಾ ಈ ಪೃಥ್ವಿಯನ್ನು ಸತ್ಯ, ಋತ, ದೀಕ್ಷಾ, ತಪ, ಬ್ರಹ್ಮ ಮತ್ತು ಯಜ್ಞಗಳು ಧಾರಣೆ ಮಾಡಿರುವುದಾಗಿ ತಿಳಿಸುತ್ತದೆ.[೧] ಆದುದರಿಂದಲೇ ಅದು ಹೀಗೆ ಕರೆ ನೀಡುತ್ತದೆ. *"ಬನ್ನಿ ಇಂದ್ರಾಂತರ್ಗತನಾದ ಭಗವಂತನನ್ನು ಉಪಾಸನೆ ಮಾಡೋಣ. ಅವನು ಸತ್ಯ; ಅಸತ್ಯ ಅಲ್ಲ."* [೨] ಇದು ಪ್ರತಿಪಾದಿಸುವ ಋತವೆಂದರೆ ಸದಾಚಾರ ಮತ್ತು ನ್ಯಾಯಗಳು. ಸತ್ಯ ಋತಗಳು ಜ್ಞಾನ ವಿಜ್ಞಾನಗಳನ್ನು ಒತ್ತಿ ಹೇಳುತ್ತವೆ. ಸಮಾಜದ ರಥ ನಿಂತಿರುವುದು ಈ ಚಕ್ರಗಳ ಮೇಲೆ. ಇನ್ನೆರಡು ಚಕ್ರಗಳೆಂದರೆ ದೀಕ್ಷಾ ಮತ್ತು ತಪ. ಅಂತಲೆ ಯಜುರ್ವೇದದಲ್ಲಿ ವ್ರತದಿಂದ ದೀಕ್ಷೆ, ದೀಕ್ಷೆಯಿಂದ ದಕ್ಷಿಣೆ, ದಕ್ಷಿಣೆಯಿಂದ ಶ್ರದ್ಧೆ, ಶ್ರದ್ಧೆಯಿಂದ ಸತ್ಯ ಲಭಿಸುವುದೆಂದು ತಿಳಿಸುತ್ತದೆ.[೩]

ತಪವೆಂದರೆ ಇಂದ್ರಿಯ ಸಂಯಮವೆಂದು ಅರ್ಥ. ಯಾವುದೇ ಗುರಿಯನ್ನು ಸಾಧಿಸಬೇಕಾದರೆ ಅದಕ್ಕಾಗಿ ಏಕಾಗ್ರಚಿತ್ತದಿಂದ ನಿರಂತರ ಪ್ರಯತ್ನ ನಡೆಸಬೇಕು, ಇದೇ ತಪಸ್ಸು. ಧರ್ಮವನ್ನು ಸಾಧಿಸಲೂ ತಪಸ್ಸು ಅಗತ್ಯ. ಬ್ರಹ್ಮಚರ್ಯ ಜೀವನದಲ್ಲೂ ತಪಸ್ಸು ಅಗತ್ಯ.

ಬ್ರಹ್ಮಯಜ್ಞವೆಂದರೆ ವೈದಿಕ ಮಂತ್ರಗಳ ವಿಧಿಪೂರ್ವಕ ಪಾಠ ಅಂದರೆ ಮಂತ್ರಗಳ ಜಪ. ಪರಮಾತ್ಮನ ಸ್ತುತಿ, ಪ್ರಾರ್ಥನೆ. ಯಜ್ಞಗಳನ್ನು ಮಾಡುವವನು ಸದಾಚಾರಿಯಾಗಿರಬೇಕು. ಇಲ್ಲದಿದ್ದರೆ ಅವನ ಪ್ರಾರ್ಥನೆ, ಯಜ್ಞಗಳು ಫಲಕಾರಿಯಾಗುವುದಿಲ್ಲ. ಅಂತಲೇ *"ಋಗ್ವೇದ ಋತಸ್ಯ ಪರಿಧಾನ ತರನ್ತಿ ದುಷ್ಕೃತಃ"* ಎಂದು ಹೇಳಿರುವುದು.

ವೇದಗಳು ಅನಂತ. ಅನಾದಿ, ಅಪೌರುಷೇಯವೆನಿಸಿದ್ದರೂ ಕಲಿಯುಗದ ಮಂದ ಅಧಿಕಾರಿಗಳ ಸಲುವಾಗಿ ವೇದವ್ಯಾಸರು ಅವುಗಳನ್ನು ಕೇವಲ ನಾಲ್ಕು ಭಾಗಗಳಾಗಿ ವಿಂಗಡಿಸಿದರು. ವೇದವೆಂದರೆ ಜ್ಞಾನರಾಶಿ. ಇದಕ್ಕೆ ಶ್ರುತಿ ಎಂದೂ ಹೆಸರು ಇದೆ. ದ್ರಷ್ಟುಗಳಾದ ಋಷಿಗಳಿಗೆ ಅವು ಭಗವಂತನಿಂದ ಕಂಡದ್ದರಿಂದ, ಅವರ ಬಾಯಲ್ಲಿ ಅವು ಮೂಡಿದವು. ಎಲ್ಲಕ್ಕಿಂತ ಹಳೆಯ ವೇದವಾದ ಋಗ್ವೇದ ಹತ್ತು ಮಂಡಲಗಳು ಇದ್ದು ೧೦೫೫೨ ಮಂತ್ರಗಳಿವೆ. ಈ ಎಲ್ಲ ಮಂತ್ರಗಳನ್ನು ಋಚೆಗಳೆಂದು ಕರೆಯುತ್ತಾರೆ. ಇಲ್ಲಿ ದೇವತೆಗಳ ಸ್ತೋತ್ರ, ಪ್ರಾರ್ಥನೆ ಮುಖ್ಯವಸ್ತು. ವೇದಗಳಲ್ಲಿ ಏಕದೇವೋಪಾಸನೆ ಇಲ್ಲವೆಂದು ಕೆಲವು ವಿಮರ್ಶಕರು ಹೇಳುವ ಮಾತು ಸುಳ್ಳೆಂದು ಮಧ್ವಾಚಾರ್ಯರು ಋಗ್ಭಾಷ್ಯದಲ್ಲಿ ಸಕಲ ವರ್ಣಗಳೂ, ಶಬ್ದಗಳೂ ಭಗವಂತನನ್ನು ವರ್ಣಿಸಲು ಹೊರಟಿವೆ ಎಂಬುದನ್ನು ಆಧಾರದೊಂದಿಗೆ ತೋರಿಸಿದ್ದಾರೆ.

ಈ ಪರಮಾತ್ಮನು ಪಂಚಭೂತಗಳಲ್ಲಿ ರಮಿಸುತ್ತಿದ್ದಾನೆ. ಸಮಸ್ತ ಪ್ರಾಣಿಗಳ ಒಳಗಡೆ ವ್ಯಾಪಿಸಿದ್ದಾನೆ. ಆತ್ಮದಲ್ಲಿ ಎಲ್ಲ ಭೂತಗಳೂ, ಎಲ್ಲ ಭೂತಗಳಲ್ಲಿ ಆತ್ಮವೂ ಬೆರತಿದೆ. ಇದನ್ನೇ

---

೧. ಸತ್ಯಂ ಬೃಹದ್ ಋತಂ ಉಗ್ರಂ ।
ದೀಕ್ಷಾ ತಪೋ ಬ್ರಹ್ಮಯಜ್ಞಃ ಪೃಥಿವೀಂ ಧಾಯರನ್ತಿ ।

೨. ಸತ್ಯಮಿದ್ ವಾ ಉತಂ ವಯಮ್ ಇಂದ್ರಂ ಸ್ತವಾಮನಾನೃತಂ ।

೩. ವ್ರತೇವ ದೀಕ್ಷಾಮಾಪ್ನೋತಿ ದೀಕ್ಷಾಯಾSಪ್ನೋತಿ ದಕ್ಷಿಣಮ್ ।
ದಕ್ಷಿಣಾ ಶ್ರದ್ಧಮಾಪ್ನೋತಿ ಶ್ರದ್ಧಯಾ ಸತ್ಯಮಾಪ್ಯತೇ ॥

'ಪಂಚಸ್ವಂತಃ ಪುರುಷ ಆವಿವೇಶ ತಾನ್ಯಂತಃ ಪುರುಷೇ ಅರ್ಪಿತಾನಿ'- ಎಂಬ ವೇದಮಂತ್ರದಲ್ಲಿ ಹೇಳಿದೆ. ಈ ಪರಮಾತ್ಮನೇ ಅಗ್ನಿ, ಆದಿತ್ಯ, ವಾಯು, ಚಂದ್ರ, ಶುಕ್ರ, ಜಲ, ಪ್ರಜಾಪತಿ ಹೀಗೆ ಎಲ್ಲ ದೇವತೆಗಳಲ್ಲಿ ನಿಂತು ಕೆಲಸ ಮಾಡುತ್ತಿರುವನು ಅವನೇ ಎಂದು ಹೇಳುತ್ತದೆ.[೧] ಇದು ಏಕದೇವೋಪಾಸನೆ ಅಲ್ಲವೆ?

ಭಗವಂತನ ಪ್ರಸಾದ ರೂಪವಾಗಿ ಬಂದಿರುವ ಈ ಜಗತ್ತಿನಲ್ಲಿ ಅವನ ಪ್ರೀತ್ಯರ್ಥವಾಗಿ ಕರ್ಮ ಮಾಡುವುದು ಮನುಷ್ಯನ ಕರ್ತವ್ಯ. ಅಂತಲೇ ಉಪನಿಷತ್ತುಗಳು ಲೋಕದಲ್ಲಿ ಕರ್ಮ ಮಾಡುತ್ತ ನೂರುವರ್ಷ ಬದುಕಲು ಬಯಸೋಣ. ಈ ರೀತಿ ನಿಷ್ಕಾಮದಲ್ಲಿ ಕರ್ಮ ಮಾಡುವುದರಿಂದ ನಿನಗೆ ಕರ್ಮ ಅಂಟದು. ಇದೇ ಮುಕ್ತಿಯ ದಾರಿ- ಎಂದು ಸ್ಪಷ್ಟವಾಗಿ ತಿಳಿಸುತ್ತದೆ.[೨] ವೇದಗಳು ಜೀವರ ಸ್ವರೂಪವಾದ ಚಾತುರ್ವರ್ಣ್ಯವನ್ನು ಸ್ಪಷ್ಟವಾಗಿ ಬೋಧಿಸುತ್ತದೆ.

ಬ್ರಾಹ್ಮಣರನ್ನು ಬದುಕಗೊಟ್ಟರೆ ಬುದ್ಧಿ ಬೆಳೆಯುತ್ತದೆ. ಕ್ಷತ್ರಿಯರನ್ನು ಬದುಕಗೊಟ್ಟರೆ ವೀರತ್ವ ಬೆಳೆಯುತ್ತದೆ, ಧೇನುವನ್ನು ಬದುಕಗೊಟ್ಟರೆ ಜನತೆಯ ಶಕ್ತಿ ಬೆಳೆಯುತ್ತದೆ. ನಿಜವಾದ ಸುಖವನ್ನು ಪಡೆಯಲು ಕ್ಷತ್ರಿಯರ ಬಲದ ಜೊತೆಗೆ ಅಧ್ಯಾತ್ಮಿಕ ಬಲವೂ ಅಗತ್ಯವೆಂದು ಅದು ತಿಳಿಸುತ್ತದೆ.[೩]

ಮನುಷ್ಯನು ಪ್ರಯತ್ನಶಾಲಿಯಾಗಬೇಕು. ಕುಳಿತಿರುವವನ ಭಾಗ್ಯವೂ ಕುಳಿತೇ ಇರುತ್ತದೆ - ಮುಂದಕ್ಕೆ ಸಾಗದು. ಎದ್ದು ನಿಂತು ನಡೆಯುವವನ ಭಾಗ್ಯವು ಮುಂದಕ್ಕೆ ಸಾಗುತ್ತದೆ ಎಂದು ಹೇಳಿ ಮಲಗಿದವನು ಕಲಿ, ನಿದ್ರೆ ಬಿಟ್ಟವನು ದ್ವಾಪರ, ಎದ್ದವನು ತ್ರೇತ, ಮುನ್ನಡೆದವನು ಕೃತ- ಎಂದು ಹೇಳುತ್ತದೆ. ಆದುದರಿಂದ ಅದು ಚರೈವೇತಿ- ಎಂದು ಎಚ್ಚರಿಸುತ್ತದೆ.

ಎಲ್ಲ ವೇದಗಳ ಋಷಿಗಳು ಪರಮಾತ್ಮನಲ್ಲಿ ಬೇಡಿಕೊಳ್ಳುವುದು ಒಂದೇ- ಸ್ವಾಮಿ, ನಮ್ಮನ್ನು ಕೆಟ್ಟದ್ದರಿಂದ ಒಳಿತಿಗೆ ಒಯ್ಯಿ.[೪] ಕತ್ತಲೆಯಿಂದ ಬೆಳಕಿನೆಡೆಗೆ ಒಯ್ಯಿ, ಸಾವಿನಿಂದ ಸಾವಿಲ್ಲದ ಅಮೃತ ತತ್ವದ ಎಡೆಗೆ ಒಯ್ಯಿ. ಇಂಥ ಅಮೃತವಾದ ಮುಕ್ತಿಯನ್ನು ಪಡೆಯಬೇಕಾದರೆ ಅದನ್ನು ಭಗವಂತನ ಪ್ರಸಾದ ರೂಪವಾಗಿ ಪಡೆಯಬೇಕು. ಅವನ ಪ್ರಸಾದ ಪಡೆಯಬೇಕಾದರೆ ಅವನನ್ನು ಯಥಾರ್ಥ ಜ್ಞಾನದಿಂದ ಅರಿತು, ಭಕ್ತಿ ಮಾಡಿ ಮೆಚ್ಚಿಸಬೇಕು. ಯಥಾರ್ಥ ಜ್ಞಾನವೆಂದರೆ ಏನು?

---

೧. ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದುಚಂದ್ರಮಾಃ ।
ತದೇವ ಶುಕ್ರಂ ತದ್ ಬ್ರಹ್ಮತಾ ಅಪಃ ಸ ಪ್ರಜಾಪತಿಃ ॥

೨. ಕುರ್ವನ್ನೇವೇಹ ಕರ್ಮಾಣಿ ಜಿಜೀವಿಶ್ಷೇತ್ ಶತಗುಂ ಸಮಾ ।
ಏವಂ ತ್ವಯಿನಾನ್ಯಥೇ ತೋಽಸ್ತಿ ಕರ್ಮಲಿಪ್ಯತೇ ನರೇ ॥

೩. ಬ್ರಹ್ಮ ಜಿನ್ವತ ಮುತ ಜಿನ್ವತಂಧಿಯಂ ।
ಕ್ಷತ್ರ ಜಿನ್ವತಮುತ ಜಿನ್ವತಂ ನ್ನನ್ ।
ದೇನೂರ್ಜಿನ್ವತ ಜಿನ್ವತಂ ವಿಶಂ ॥

೪. ಅಸತೋ ಮಾ ಸದ್ಗಮಯ । ತಮಸೋ ಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾ ಅಮೃತಂ ಗಮಯೇತಿ ॥

ಅವನು ಸರ್ವೋತ್ತಮನೆಂದೂ, ಸಕಲಗುಣಪರಿಪೂರ್ಣನೆಂದೂ ಸಚ್ಚಿದಾನಂದ ರೂಪನೆಂದೂ, ಸರ್ವತಂತ್ರ ಸ್ವತಂತ್ರನೆಂದೂ ಅರಿತು ಮಾಡುವ ಸಮರ್ಪಣ ಭಾವದ ಭಕ್ತಿ. ಇಂಥ ನಿರ್ಮಲ ಭಕ್ತಿಗೆ ಭಗವಂತನು ಒಲಿಯುತ್ತಾನೆ. ಆತನನ್ನು ಹುಟ್ಟು ಸಾವುಗಳಿಂದ ಬಿಡುಗಡೆ ಮಾಡುತ್ತಾನೆ.[೧] ಈ ಸ್ವಾಮಿಯು ಕಿವಿಯ ಕಿವಿ, ಮನಸ್ಸಿನ ಮನಸ್ಸು, ವಾಣಿಯ ವಾಣಿ, ಅವನೇ ಪ್ರಾಣದ ಪ್ರಾಣ, ಕಣ್ಣಿನ ಕಣ್ಣು - ಹೀಗೆ ಅರಿತ ಧೀರಪುರುಷನು ಈ ಸಂಸಾರದಿಂದ ಮುಕ್ತನಾಗಿ ಅಮರ ನಾಗುತ್ತಾನೆ.[೨] ಈ ಭಗವಂತನ ದರ್ಶನ ಅಪರೋಕ್ಷ ಜ್ಞಾನ ಆಯಿತೆಂದರೆ ಅವನ ಹೃದಯದ ಗಂಟು ಬಿಚ್ಚುತ್ತದೆ. ಎಲ್ಲ ಸಂಶಯಗಳು ನಿವಾರಣೆಯಾಗುತ್ತದೆ. ಈ ಜೀವದ ಕರ್ಮ ನಷ್ಟವಾಗುತ್ತದೆ. ಅವನು ಸ್ವರೂಪಾನಂದವನ್ನು ಅನುಭವಿಸುತ್ತಾನೆ. ಭಗವಂತನು ಆನಂದಮಯನು, ಆನಂದವೇ ಬ್ರಹ್ಮ. ಆನಂದಮಯವಾದ ಅವನಿಂದಲೇ ಎಲ್ಲ ಜೀವರು ದೇಹಧಾರಿಗಳಾಗಿ ಹುಟ್ಟುತ್ತಾರೆ. ಆನಂದ ರೂಪವಾದ ಅವನ ಪ್ರಸಾದದಿಂದ ಅವು ಬದುಕುತ್ತದೆ. ಪ್ರಳಯ ಕಾಲದಲ್ಲಿ ಆನಂದರೂಪವಾದ ಅವನ ಗರ್ಭದಲ್ಲಿ ಲೀನವಾಗುತ್ತವೆ. ಆದುದರಿಂದ ಸಮಸ್ತವೂ ಭಗವಂತನ ಆವಾಸಸ್ಥಾನ. ಮನುಷ್ಯನಲ್ಲಿ ನಿಂತು ವ್ಯಾಪಾರ ನಡೆಸುವವನೂ ಅವನೇ. ಅವನನ್ನು ಶಾಂತಿ ಭಕ್ತಿಗಳಿಂದ ಉಪಾಸನೆ ಮಾಡಿ ಮನುಷ್ಯ ಜನ್ಮದಿಂದ ಮುಕ್ತನಾಗಬೇಕೆಂದು ಉಪನಿಷತ್ತುಗಳು ಸಾರುತ್ತದೆ.[೩]

ಪರಬ್ರಹ್ಮನಾದ ಶ್ರೀಹರಿಯಲ್ಲಿ ಯಾವ ದೋಷವೂ ಇಲ್ಲ. ಅವನು ಸರ್ವ ದೋಷ ರಹಿತ. ಅವನು ಸಕಲಗುಣ ಪರಿಪೂರ್ಣ. ಇಂಥ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಮುಕ್ತಿ. ಬ್ರಹ್ಮ ವಿದ್ಯೆಯಿಂದ ಜ್ಞಾನಪೂರ್ವಕವಾಗಿ ಮಾಡುವ ಭಕ್ತಿಯೇ ಮುಕ್ತಿಗೆ ಸಾಧನವೆಂದು ಶ್ರುತಿಗಳು ತಿಳಿಸುತ್ತವೆ.

ಇಂಥ ಭಗವಂತನನ್ನು ಒಲಿಸಿಕೊಳ್ಳಲು ಹರಿದಾಸ ದೀಕ್ಷೆಯು ಸುಲಭದ ದಾರಿ. ವೈಷ್ಣವ ನಾರೆಂದರೆ ಯಾರ ಚಿತ್ತ ಪ್ರಶಾಂತವೋ, ಕೋಮಲವೋ, ಅಂಥವನು ವೈಷ್ಣವ. ಜಿತೇಂದ್ರಿಯ, ಮನೋವಾಕ್ಕಾಯ ಕರ್ಮಗಳಿಂದ ಅವ್ವೆರ,ಕಳವು ಹಿಂಸೆಗಳಿಂದ ದೂರ, ಸದ್ಗುಣ ಪಕ್ಷಪಾತಿ, ಸದಾಚಾರಿ, ಭೂತ ಅನುಕಂಪ, ಕರ್ಮನಿರತ, ಎಲ್ಲ ಪ್ರಾಣಿಗಳಲ್ಲಿ ಭಗವಂತನಾದ ಶ್ರೀಹರಿಯನ್ನು

---

೧. ಸಪರ್ಯಗಾಚ್ಛುಕ್ರಮಕಾಯಕಮವ್ರಣಮಸ್ನಾವಿರಂ ಶುದ್ಧಮ ಪಾಪವಿದ್ಧಂ ।
ಕನಿರ್ಮನಿಷೀ ಪರಿಭೂಃವಯಂ ಭೂರ್ಯಾಥಾತಥ್ಯತೋऽರ್ಥಾನ್
ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ॥

೨. ಶ್ರೋತ್ರಸ್ಯ ಶೋತ್ರಂ ಮನಸೋಮನೋ ಯದ್ವಾಚೋಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ । ಚಕ್ಷುಷಶ್ಚಕ್ಷುರತಿ ಮುಚ್ಯಧೀರಾಃ ಪ್ರೇತ್ಯಾಸ್ಮಾ ಲೋಕಾದಮೃತಾ ಭವನ್ತಿ ॥

೩. ಬಿದ್ಯತೇ ಹೃದಯ ಗ್ರಂಥಿಶ್ಚಿದ್ಯಂತೇ ಸರ್ವ ಸಂಶಯಾಃ ।
ಕ್ಷೀಯನ್ತೆ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥
ಆನಂದೋ ಬ್ರಹ್ಮೇತಿ....ಆನಂದಾದ್ಧ್ಯೆವ ಖಲ್ವಿಮಾನಿಭೂತಾನಿ ಜಾಯಂತೇ ।
ಆನಂದೇನ ಜಾತಾನಿ ಆನಂದ ಪ್ರಯಸ್ತ್ಯಭಿಸಂ ವಿಶನ್ತೀತಿ ॥
ಸರ್ವಂ ಖಲ್ವಿದಂಬ್ರಹ್ಮ ತಜ್ಜಲಾನೀತಿ ಶಾಂತ ಉಪಾಸೀತ ॥

ಕಂಡು ಈರ್ಷ್ಯಾರಹಿತನಾದವನು, ಬಡವರಲ್ಲಿ ಕನಿಕರ, ಪರಹಿತ, ಅನ್ಯರ ದೋಷಗಳನ್ನು ಕ್ಷಮಿಸುವವನು, ಸದಾ ಭಗವಂತನಲ್ಲಿ ಮನಸ್ಸನ್ನು ಇರಿಸಿ ಸತ್ಯ, ತಪಸ್ಸು ಜ್ಞಾನ, ಧ್ಯಾನಗಳ ಮೂಲಕವಾಗಿ ತನ್ನ ಪಾಲಿನ ಕರ್ಮದಲ್ಲಿ ತೊಡಗಿ ತಾನು ಅಸ್ವತಂತ್ರನೆಂದು ತಿಳಿದು ಸ್ವಾಮಿಯನ್ನು ಸೇವಿಸುವನೋ ಅವನು ಜನನ ಮರಣಗಳಿಂದ ಕೂಡಿದ ಸಂಸಾರದಿಂದ ಬಿಡುಗಡೆ ಹೊಂದುವನು- ಎಂಬುದಾಗಿ ವೇದೋಪನಿಷತ್ತುಗಳು ತಿಳಿಸುತ್ತದೆ.

೧೧

ವೇದೋಪನಿಷತ್ತು, ಶ್ರುತಿ, ಸ್ಮೃತಿಗಳು ತಿಳಿಸುವ ಉಪಾಸನಾ ವಿಧಾನವನ್ನು ವಿಚಾರ ಮಾಡೋಣ. ಭಗವಂತನನ್ನು ನಾವು ಏಕೆ ಉಪಾಸಿಸಬೇಕು- ಎಂದರೆ ಘೋರವಾದ ಈ ಸಂಸಾರದಲ್ಲಿ ಜನನ, ರೋಗ ಮೊದಲಾದ ಉಪದ್ರವಗಳಿಂದ ಕೂಡಿದ ಜೀವನು ಸಂಸಾರ ಪಂಕದಲ್ಲಿ ಬಿಡುಗಡೆ ಕಾಣದೆ ತೊಳಲುತ್ತಿದ್ದಾನೆ. ಹಾರೀತಸ್ಮೃತಿಯು ತಿಳಿಸುವಂತೆ ಮಾನವ ದೇಹ ಬಂದಿರುವಾಗ ಶ್ರೀಮದಧೋಕ್ಷಜನ ಪೂಜೆ ಮಾಡುವುದೇ ಪರಮಲಾಭ.[೧] ಉತ್ತಮವಾದ ಮನುಷ್ಯ ಜನ್ಮ ಬಂದಿರುವಾಗ ಶ್ರೀಹರಿಯ ಅನುಗ್ರಹವನ್ನು ಪೂಜಾದಿಗಳಿಂದ ಅಂದರೆ ಅರ್ಚನ, ಸ್ಮರಣ, ಧ್ಯಾನ, ಕೀರ್ತನ, ಕಥನ, ಶ್ರವಣಗಳಿಂದ ಪೂಜಿಸಿ ಶ್ರೀಹರಿಯ ಅನುಗ್ರಹವನ್ನು ಪಡೆದವನ ಕುಲವು ಅವನಿಂದ ಅಲಂಕೃತವಾಗುತ್ತದೆ. ಸಮಸ್ತ ಭೂತ ಪ್ರಾಣಿಗಳಿಗೂ ಅವನೇ ಆಧಾರ. ಅವನಿಂದ ಎಲ್ಲರೂ ನರಕದಿಂದ ಉದ್ಧಾರವಾಗುತ್ತಾರೆ.[೨]

ಕಲಿಯುಗದಲ್ಲಿ ಶ್ರೀಹರಿಯ ಆರಾಧನೆಯ ಜ್ಯೋತಿಷ್ಟೋಮಾದಿ ಯಜ್ಞಗಳು, ಕಚ್ಛ ಚಾಂದ್ರಾಯಣ ಮುಂತಾದ ವ್ರತೋಪವಾಸ, ರೂಪವೇದಗಳು, ವೈದಿಕ ದೇವತೆಗಳಾದ ಅಗ್ನಿ, ವಾಯು, ಇಂದ್ರ, ವರುಣ, ಮಿತ್ರ, ಅಶ್ವಿನಿ ದೇವತೆಗಳು, ಮಿತ್ರಿ, ಮರುತ್, ಆದಿತ್ಯ, ಯಮ ರುದ್ರ ಮುಂತಾದ ದೇವತೆಗಳನ್ನು ಸ್ತೋತ್ರ ಮಾಡಿದ್ದರೂ, ಈ ಪ್ರಾರ್ಥನೆ ಅವರ ಅತರ್ಗತವಾಗಿ ನಿಂತು ಕೆಲಸ ಮಾಡಿಸುತ್ತಿರುವ ಭಗವಂತನೊಬ್ಬನಿಗೇ ಸೇರುತ್ತವೆಂದು ಇಲ್ಲಿ ನಾವು ಅರಿಯಬೇಕು. ಈ ಬ್ರಹ್ಮವಸ್ತು ಅಂದರೆ ಶ್ರೀಹರಿನಾಮಕ ಪರಮಾತ್ಮನು ವಿಶ್ವಂಭರನಾಗಿ ಇದ್ದು ಜಗತ್ತನ್ನು ವ್ಯಾಪಿಸಿದ್ದಾನೆ. ಎಲ್ಲರ ಒಳಗೂ, ಹೊರಗೂ ಇರುವುದು ಅವನೇ. ನಾನಾ ರೂಪ, ಅಧಿಷ್ಠಾನಗಳಿದ್ದರೂ, ಒಬ್ಬನೇ ಆದ ಸ್ವಾಮಿ-ಈಶ್ವರ ಲೋಕಗಳನ್ನೆಲ್ಲಾ ತುಂಬಿದ್ದಾನೆ. ಅವನಿಂದಲೇ ಸಮಸ್ತ ಲೋಕಗಳ ಸೃಷ್ಟಿ, ಸ್ಥಿತಿ ಸಂಹಾರಾದಿ ವ್ಯಾಪಾರಗಳು ನಡೆಯುತ್ತದೆ- ಎಂದು ವೇದದ ಋಷಿಗಳು ತಿಳಿದಿದ್ದರು.

ಅವರು ಧರ್ಮಪಾಲನೆಯನ್ನು ಒತ್ತಿ ಹೇಳಿದ್ದಾರೆ. ಸದಾಚಾರವನ್ನು ಪಾಪಗಳಿಂದ ದೂರ

---

೧. ಸಂಸಾರೇಸ್ಮಿನ್ ಮಹಾಘೋರೇ ಜನ್ಮರೋಗ ಭಯಾಕುಲೇ ।
ಅಯಮೇವ ಮಹಾಲಾಭಃ ಪೂಜ್ಯತೇ ಯದಧೋಕ್ಷಜಃ ॥

೨. ಸ ನಾಮ ಸುಕೃತೀ ಲೋಕೇ ಕುಲಂ ತೇನಾಭ್ಯಲಂಕೃತಂ।
ಆಧಾರಃ ಸರ್ವಭೂತಾನಾಂ ಯೇನ ವಿಷ್ಣುಃ ಪ್ರಸಾದಿತಃ ॥

ಮಾಡಬೇಕೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಮನುಷ್ಯನ ಜೀವನ ಪವಿತ್ರ. ಅದು ಅಲಭ್ಯ ಲಭ್ಯ. ಇದನ್ನು ಭಗವಂತನ ಉಪಾಸನೆ ಮಾಡಿ, ಸಾರ್ಥಕ ಪಡಿಸಿಕೊಳ್ಳಿರೆಂದು ಅವರ ಉಪದೇಶದ ತಿರುಳು. ಮನುಷ್ಯರು ಒಟ್ಟುಗೂಡಿ, ದುಡಿಯೋಣ, ಶ್ರಮಿಸೋಣ, ಬಂದಫಲವನ್ನು ಭಗವದರ್ಪಣ ಮಾಡಿ, ಅವನು ಕೊಟ್ಟಿದ್ದನ್ನು ಒಟ್ಟಾಗಿ ಹಂಚಿಕೊಂಡು ಭೋಗಿಸೋಣ – ಇದೇ ಎಲ್ಲ ಋಷಿಗಳ ಆಶಯವಾಗಿದೆ. ಮನುಷ್ಯರು ಪ್ರೇಮಮಯ, ಆನಂದಮಯ, ಪವಿತ್ರಮಯ ಜೀವನವನ್ನು ನಡೆಸಬೇಕು. ಬ್ರಹ್ಮನನ್ನು ಅರಿಯಬೇಕು. ಅಣುರೇಣು ತೃಣಕಾಷ್ಟಗಳಲ್ಲಿ ಸಚ್ಚಿದಾನಂದ ಸ್ವರೂಪನಾದ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು– ಇದೇ ವೇದಗಳ ಸಾರ, ಸಂದೇಶ.

ವೇದಗಳಲ್ಲಿ ಹೇಳಿರುವುದೇನು?

ಜಗತ್ತಿನಲ್ಲಿ ಇರುವ ಸ್ಥಾಪಕ ಮತ್ತು ಜಂಗಮ ವಸ್ತುಗಳೆಲ್ಲವೂ ಭಗವಂತನಿಂದ ವ್ಯಾಪ್ತವಾಗಿದೆ. ಶ್ರೀಹರಿಯು ಅವುಗಳ ಹೊರಗೆ ಒಳಗೆ ಆವರಿಸಿದ್ದಾನೆ– ಎಂದು ವೇದ ಹೇಳುತ್ತದೆ. ಮನುಷ್ಯನು ಈ ನಾನಾ ಪ್ರಕಾರದ ಸೃಷ್ಟಿ ಯಾವುದರಿಂದ ಬೆಳಗುತ್ತಿದೆಯೋ, ಇದನ್ನು ಧಾರಣೆ ಮಾಡುವವನು, ಪ್ರಳಯ ಮಾಡುವವನೂ ಯಾರೋ, ಈ ಜಗತ್ತಿನ ಸ್ವಾಮಿ ಯಾರೋ, ಯಾರೊಳಗಿಂದ ಈ ಜಗತ್ತು ಹುಟ್ಟಿತೋ, ಯಾರಲ್ಲಿ ನಿಂತಿದೆಯೋ, ಯಾರಲ್ಲಿ ಲಯವಾಗುತ್ತದೆಯೋ ಅವನೇ ಪರಮಾತ್ಮ, ಅವನನ್ನು ಅರಿತುಕೋ. ಅವನನ್ನು ಸಮಸ್ತ ಮಂಗಳ ಕರ್ಮಗಳಿಂದ ಪೂಜೆ ಮಾಡು. ಅದು ಮೋಕ್ಷಾದಿ ವಿಶಿಷ್ಟ ಫಲಗಳನ್ನು ಕೊಡುತ್ತದೆ.[೧]

ಈ ಕಲಿಯುಗದಲ್ಲಿ ರಾಗದ್ವೇಷಾದಿ ಅರಿಷಡ್ವರ್ಗಗಳಿಂದ ಬಂದ ಕಲ್ಮಷವನ್ನು ನಾಶ ಮಾಡಲು ವಿಷ್ಣುವಿನ ಆರಾಧನೆಯ ಹೊರತು ಶ್ರೇಯಸ್ಕರವಾದುದೂ, ಸುಲಭವಾದುದು ಮತ್ತೊಂದು ಮಾರ್ಗವಿಲ್ಲ. ಆದುದರಿಂದ ಸರ್ವಪಾಪ ಪರಿಹಾರಕನಾದ ಶ್ರೀಹರಿಯನ್ನು ಪೂಜಿಸುವವರು ಪುಣ್ಯಾತ್ಮರು. ಅವರು ಲೋಕದಲ್ಲಿ ಪೂಜಾರ್ಹರು.[೨] ಇಂಥ ಹರಿಭಕ್ತರು ಶ್ರೀಹರಿಯಂತೆಯೇ ವಂದನಾರ್ಹರು.

ಶಂಖ ಚಕ್ರ ಗಧಾ ಪದ್ಮ ಧಾರಿಯೂ, ಸಮಸ್ತ ದೇವತೆಗಳಿಗೆ ಸ್ವಾಮಿಯೂ, ಸರ್ವದೇವ ನಿಯಮಕನೂ, ಸರ್ವಾಂತರ್ಯಾಮಿಯೂ – ಆದ ಶ್ರೀಹರಿಯನ್ನು ಪೂಜಿಸಿದರೆ ಸಮಸ್ತ ದೇವತೆಗಳನ್ನು ಪೂಜಿಸಿದಂತೆ ಆಗುತ್ತದೆ.[೩]

ಗೋವರ್ಧನನೂ ವೇದಪ್ರತಿಪಾದ್ಯನು ಆದ ಗೋವಿಂದನನ್ನು ಒಂದು ಬಾರಿ ಪೂಜಿಸಿದರೆ, ಒಂದು ದಳ ಬಿಲ್ವಪತ್ರೆ (ತುಳಸಿ)ಯಿಂದ ಅರ್ಚಿಸಿದರೆ ಸಮಸ್ತ ಕರ್ಮಕ್ಷಯವಾಗಿ ಮುಕ್ತಿ ಭಾಗಿಯಾಗುತ್ತಾನೆ.

---

೧. ಯಜ್ಞಾನಾಂ ಚೈವ ತಪಸಾಂ ಶುಭಾನಾಂ ಚೈವ ಕರ್ಮಣಾಂ ।
ತದ್ವಿಶಿಷ್ಟ ಫಲಂ ನೃಣಾಂ ಸರ್ವೈವಾರಾಧನಂ ಹರೇಃ ॥

೨. ನಾಸ್ತಿ ಶ್ರೇಯಸ್ತಮಂ ನೃಣಾಂ ವಿಷ್ಣೋರಾಧನಾನ್ಮುನೇ ।
ಯುಗೇಸ್ಮಿಂಸ್ತಾಮಸೇ ಲೋಕೇ ಸತತಂ ಪೂಜ್ಯತೇ ನೃಭಿಃ ॥

೩. ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ ।
ಅರ್ಚಿತಾಃ ಸರ್ವದೇವಾಸ್ಯುಃ ಯತಃ ಸರ್ವಗತೋ ಹರಿಃ ॥

ಮಹಾರುದ್ರದೇವರು, ಸರ್ವತ್ರ ವ್ಯಾಪ್ತನೂ, ಪೂರ್ಣ ತೇಜಸ್ವಿಯೂ, ಯಜ್ಞ ವರಾಹನೂ ಆದ ಶ್ರೀಹರಿಯನ್ನು ಯಾರು ನಮಸ್ಕರಿಸುತ್ತಾರೊ ಅಂಥವರು ನಮಸ್ಕಾರಕ್ಕೆ ಅರ್ಹರೆಂದು ಹೇಳುತ್ತಾರೆ.[೧]

ಭಕ್ತಿಯಿಂದ ಒಂದು ಸಲ ಕೃಷ್ಣನಿಗೆ ನಮಸ್ಕಾರ ಮಾಡಿದರೆ ಅದು ಹತ್ತು ಅಶ್ವಮೇಧ ಯಾಗವನ್ನು ಮಾಡಿ, ಅವಭೃತ ಸ್ನಾನ ಮಾಡಿದಷ್ಟು ಪುಣ್ಯವನ್ನು ಕೊಡುತ್ತದೆ. ಅಶ್ವಮೇಧ ಯಾಗ ಮಾಡಿದವನಿಗೆ ಸ್ವರ್ಗಾದಿ ಭೋಗದ ನಂತರ ಪುನರ್ಜನ್ಮವಿದೆ. ಆದರೆ ಶ್ರೀಕೃಷ್ಣನಿಗೆ ನಮಸ್ಕರಿಸಿದ ಮನುಷ್ಯನಿಗೆ ಪುನರ್ಜನ್ಮ ಇರುವುದಿಲ್ಲ.[೨]

ಹೀಗೆ ಶ್ರೀಹರಿಯ ಉಪಾಸನೆಯಿಂದ ದೊರಕುವ ಫಲದ ಬಗ್ಗೆ ಮಾರ್ಕಂಡೇಯನೂ, ಮರೀಚಿಗಳೂ, ಆಂಗೀರಸರೂ, ಪುಲಸ್ತ್ಯರೂ, ಪುಲಹರೂ, ಅತ್ರಿಋಷಿಯೂ, ಮುಕ್ತಕಂಠದಿಂದ ಹೊಗಳಿದ್ದಾರೆ. ಚತುರ್ಮುಖ ಬ್ರಹ್ಮದೇವರೂ ಮೋಕ್ಷವನ್ನು ಪಡೆಯಲಿಚ್ಛಿಸುವ ಜೀವರು ಭಗವಂತನನ್ನು ಪೂಜಿಸಬೇಕೆಂದು ಹೇಳಿದ್ದಾರೆ.[೩]

ಭಗವಂತನ ಪೂಜೆ ಸುಲಭವೂ ಹೌದು; ಕಷ್ಟವೂ ಹೌದು. ನಿರ್ಮಲ ಹೃದಯದಿಂದ ಮಾಡುವ ಭಕ್ತರು ಅರ್ಪಿಸುವ ಒಂದು ದಳ ತುಳಸಿಗೆ ಸ್ವಾಮಿಯು ಸುಪ್ರೀತನಾದರೆ ಡಂಭಾಚಾರದಿಂದ ಮಾಡುವ ವಿಜೃಂಭಣೆಯ ಪೂಜೆಗೆ ಅವನು ಒಲಿಯುವುದಿಲ್ಲ. ಇದೇ ಮಾತನ್ನು ಅತ್ರಿ ಮಹರ್ಷಿಗಳು ಭಕ್ತನು ನೀಡುವ ಒಂದು ಗರಿಕೆ ಹುಲ್ಲಿನಿಂದ ಸುಪ್ರೀತನಾಗಿ ನೀಡುವ ಫಲವನ್ನು ಭಕ್ತಿ ಇಲ್ಲದೆ ಮಾಡುವ ಸರ್ವ ಯಜ್ಞದಿಂದಲೂ ಕೊಡುವುದಿಲ್ಲವೆಂದಿದ್ದಾರೆ.[೪] ಈ ಮಾತಿಗೆ ಗೀತೆಯಲ್ಲಿ ಹೇಳಿರುವ "ಪತ್ರಂ ಪುಷ್ಪ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ"-ಎಂಬ ಗೀತಾಚಾರ್ಯನ ಮಾತು ಸಾಕ್ಷಿಯಾಗಿದೆ.

ಪೂಜೆಯಂತೆಯೇ ಶ್ರೀಹರಿಯ ಸ್ಮರಣೆಯೂ ಭಗವಂತನನ್ನು ಸುಪ್ರೀತಗೊಳಿಸುವುದೆಂಬುದಕ್ಕೆ ಅನೇಕ ಸ್ಮೃತಿ ಶ್ರುತಿ ವಾಕ್ಯಗಳು ಆಧಾರವಾಗಿವೆ.

ಶ್ರೀಕೃಷ್ಣನ ನಾಮವನ್ನು ಅನವರತ ಸ್ಮರಣ ಮಾಡುವುದರಿಂದ ಮನೋವಾಕ್ಕಾಯಗಳಿಂದ ಮಾಡಲ್ಪಟ್ಟ ಸಂಚಿತಗಾಮಿ ಪಾಪರೂಪ ಸಂಘಾತಕ್ಕೆ ಆಶ್ರಯ ಭೂತವಾದ ಈ ಪಂಚಭೌತಿಕ ಸ್ಥೂಲ ಮತ್ತು ಸೂಕ್ಷ್ಮ ದೇಹಾದಿಗಳು ವಜ್ರಾಯುಧದಿಂದ ಭೇದಿಸಲ್ಪಟ್ಟ

---

೧. ಯಸ್ಯ ಯಜ್ಞವರಾಹಸ್ಯ ವಿಷ್ಣುರಮಿತತೇಜಸಃ ।
ಪ್ರಣಾಮಂ ಯೋ ಪ್ರಕುರ್ವಂತಿ ತೇಷಾಮಪಿ ನಮೋ ನಮಃ ॥

೨. ಏಕೋಽಪಿ ಕೃಷ್ಣಸ್ಯ ಸಕೃತ್ಪ್ರಣಾಮೋ ದಶಾಶ್ವಮೇಧಾವಭೃತೇನ ತುಲ್ಯಃ ।
ದಶಾಶ್ವಮೇಧಿ ಪುನರೇಪಿ ಜನ್ಮ ಕೃಷ್ಣ ಪ್ರಣಾಮೋ ನ ಪುನರ್ಭವಾಯ ॥

೩. ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪ್ರಮಾನ್ ಭುವಿ
ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತು ಮಿಚ್ಛತಿ ॥

೪. ಭಕ್ತ್ಯಾ ದೂರ್ವಾಂಕುರೈಃ ಪುಂಭೀಪೂಜಿತಃ ಪುರುಷೋತ್ತಮಃ ।
ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಂ ॥

ಪರ್ವತವು ಚೂರಾಗಿ ಹೋಗಿ ನಾಶ ಹೊಂದುವಂತೆ ನಾಶವಾಗುವುವೆಂಬುದಾಗಿ ಅಗಸ್ತ್ಯ ಮಹರ್ಷಿಗಳ ವಾಕ್ಯವಿದೆ.[೧] ಅವರ ಅಭಿಪ್ರಾಯದಲ್ಲಿ ಶ್ರೀಕೃಷ್ಣನ ಸ್ಮರಣೆ ಮಾಡುವವರು ಯಜ್ಞಹುತನಾದ ಪರಮಾತ್ಮನಿಗೆ ಹವಿಸ್ಸು ಸೇರುವಂತೆ, ಭಕ್ತರು ಸ್ಮರಣೆ ಮಾತ್ರದಿಂದ ವೈಕುಂಠವನ್ನು ಹೊಂದುವರು. ಭಗವಂತನನ್ನು ಕ್ಷಣಕಾಲವಾದರೂ ಸ್ಮರಿಸದವನ ಜೀವನ ವ್ಯರ್ಥಾಯುರ್ಹರಣ ವಾಗುವುದೆಂದು ಹೇಳುತ್ತಾರೆ.

## ೧೨

ವಿಂಧ್ಯಗಿರಿಯ ಆಚಿನ ಭೂಭಾಗವನ್ನು ದಕ್ಷಿಣಾಪಥವೆಂದು ಕರೆಯುತ್ತಾರೆ. ಇದನ್ನು ದ್ರಾವಿಡ ದೇಶವೆಂದೂ ಕರೆಯುತ್ತಾರೆ. ಪದ್ಮಪುರಾಣದ ಉಕ್ತಿಯಂತೆ ಭಕ್ತಿಪಂಥವು ಜನ್ಮತಾಳಿದ್ದೇ ದ್ರಾವಿಡ ದೇಶದಲ್ಲಿ. ಅಂದರೆ ತಮಿಳುನಾಡಿನ ಹೃದಯದಂತಿರುವ ಪಾಂಡ್ಯ ನಾಡಿನಲ್ಲಿ. ಶಿವ ಪಾರಮ್ಯವನ್ನು ಎತ್ತಿಹಿಡಿದ ಶೈವ ಸಂತರೂ, ಮತಾಚಾರ್ಯರೂ, ವಿಷ್ಣು ಪಾರಮ್ಯವನ್ನು ಎತ್ತಿ ಹಿಡಿದ ವೈಷ್ಣವ ಸಂತರೂ, ಮತಾಚಾರ್ಯರೂ ಈ ದಕ್ಷಿಣ ದೇಶದ ಗಂಗೆ ಎಂದು ಹೊಗಳಲ್ಪಟ್ಟಿರುವ ಕಾವೇರಿ ತೀರದ ಜಲನಯನ ಭೂಮಿಯಲ್ಲಿ ಹುಟ್ಟಿ ಬೆಳೆದು ಸಂವೃದ್ಧವಾದ ದರ್ಶನದ ಬೆಳೆಯನ್ನು ನಾಡಿಗೆ ನೀಡಿದರೆಂದು ಹೇಳುತ್ತಾರೆ. ಕೆಲವು ವಿದ್ವಾಂಸರ ಪ್ರಕಾರ ಭಾರತದ ಪ್ರಾಚೀನ ಸಂಸ್ಕೃತಿಯಾದ ಸೈಂಧವ ಸಂಸ್ಕೃತಿಯು ದಕ್ಷಿಣ ದೇಶದ ಶೈವ ಧರ್ಮದಿಂದ ಪ್ರಭಾವಿತವಾಗಿದೆಯಂತೆ. ಎಂದ ಮೇಲೆ ದಕ್ಷಿಣ ಭಾರತವು ಧಾರ್ಮಿಕ ಜೀವನಕ್ಕೆ ನೀಡಿದ ಪರಂಪರೆ ಅತ್ಯಂತ ಅಮೋಘವಾದುದು.

ವಿಷ್ಣು ಭಕ್ತರಾದ ಆಳ್ವಾರರು ಸರ್ವೋತ್ತಮನಾದ ಶ್ರೀಮಹಾವಿಷ್ಣುವಿನ ಭಕ್ತರಾಗಿ ಭಕ್ತಿ ಪ್ರಪತ್ತಿಗಳ ಮಾರ್ಗದಿಂದ ಉಪಾಸನೆ ಮಾಡಿದರೆ, ಶಿವಭಕ್ತರಾದ ಸಂತರು ಭಕ್ತಿ ಜ್ಞಾನ ವೈರಾಗ್ಯಗಳಿಂದ ತುಂಬಿ ಶಿವನ ಮಹಿಮೆಯನ್ನು ಕುರಿತು ಹಾಡಿದರು. ಇವರನ್ನು ನಾಯನ್ಮಾರರೆಂದೂ, ಅಡಿಯಾರರೆಂದೂ ಕರೆಯುತ್ತಾರೆ. ಈ ಶೈವ ಸಂತರು ಹಾಡಿದ ಭಕ್ತಿ ಗೀತೆಗಳಿಗೆ *ತೇವಾರಂ* ಎಂದು ಹೆಸರು. ಇವು ಆಳ್ವಾರರ ದಿವ್ಯ ಪ್ರಬಂಧಗಳಂತೆಯೇ ಭಕ್ತಿ ಅನುಭವಗಳಿಂದ ತುಂಬಿದ್ದು ಜನತೆಗೆ ಸಾಕ್ಷಾತ್ಕಾರ ಮಾರ್ಗ ತೋರಿಸಿದವು.

ದಕ್ಷಿಣ ದೇಶದ ಶೈವ ಸಿದ್ಧಾಂತಕ್ಕೆ ಹನ್ನೆರಡು ಪ್ರಮಾಣ ಗ್ರಂಥಗಳೆಂದು ಹೇಳುತ್ತಾರೆ. ಇವುಗಳಲ್ಲಿ ಒಂದು "ತಿರುಮುರೈ" ಸಂಕಲನ ಗ್ರಂಥ. ಈ ತಿರುಮುರೈ ಗ್ರಂಥದಲ್ಲಿ ನಂಬಿ ಆಂಡಾರ್‌ನಂಬಿ ಎಂಬ ಶಿವಭಕ್ತರು ಅನೇಕ ಶೈವಸಂತರ ತೇವಾರಂಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಇವರು ರಾಜರಾಜ ಚೋಳನ ಆಳ್ವಿಕೆಯಲ್ಲಿದ್ದರು. ಈ ಸಂಗ್ರಹದಲ್ಲಿ ತಿರುಜ್ಞಾನಸಂಬಂಧರೂ, ತಿರುನಾವುಕ್ಕರಸರೂ, ಸುಂದರನಂಬಿಯೂ ಕಟ್ಟಿ ಹಾಡಿದ ತೇವಾರಂ ಸ್ತೋತ್ರಗಳು ಏಳು ಗ್ರಂಥಗಳಾಗಿ ಬಂದಿವೆ. ಹನ್ನೆರಡನೆಯ ತಿರುಮುರೈ ಗ್ರಂಥವೇ ಶೇಕ್ಕಿರಾರ್ ಎಂಬುವರು ರಚಿಸಿದ

---

೧. ಸ್ಮರಣಾದೇವ ಕೃಷ್ಣಸ್ಯ ಪಾಪಸಂಘಾತ ಪಂಜರಂ ।
ಶತಧಾ ಭೇದಮಾಯಂತಿ ಗಿರಿರ್ವಜ್ರಹತೋ ಯಥಾ ॥

ಪೆರಿಯ ಪುರಾಣವೆಂಬ ಪವಿತ್ರ ಗ್ರಂಥವೆಂದು ಪ್ರಸಿದ್ಧವಾಗಿದೆ. ಅರುಳ್‌ಮಳಿ ದೇವರೆಂದು ಪ್ರಸಿದ್ಧವಾದ ಈ ಗ್ರಂಥಕರ್ತರು ಅನಪಾಯನ ಚೋಳನ ಕಾಲದಲ್ಲಿ ಇದ್ದರಂತೆ. ಈ ಪೆರಿಯ ಪುರಾಣದಲ್ಲಿ ತಮಿಳು ನಾಡಿನಲ್ಲಿ ಈ ಹಿಂದೆ ಆಗಿಹೋದ ಶೈವ ಸಂತರಲ್ಲಿ ಅರವತ್ತು ಮೂರು ಜನರ ಕಥೆಗಳನ್ನೂ, ಅವರ ಭಕ್ತಿಯ ಸಾಧನೆಯನ್ನೂ ವರ್ಣಿಸಿದ್ದಾರೆ. ಈ ನಾಯನ್ಮಾನರ ಭಕ್ತಿ ಸಾಧನೆಯನ್ನು ಅರಿಯಲು ಮೊದಲು ಅವರು ತುಳಿದ ಭಕ್ತಿ ಮಾರ್ಗದ ಬಗ್ಗೆ ಕೆಲವು ಮಾತುಗಳನ್ನು ಪರಿಶೀಲಿಸಬಹುದಾಗಿದೆ.

ತಮಿಳುನಾಡಿನ ಸಾಧು ಸಂತರಲ್ಲಿ ಸಮನವಾಗಿ ಎದ್ದು ಕಾಣುವ ಒಂದು ಅಂಶವೆಂದರೆ ಅವರು ಎಲ್ಲ ಜಾತಿಯಿಂದ ಬಂದವರು. ಈ ಸಾಧು ಸಂತರು ಜಾತಿ, ಮತ, ಲಿಂಗ, ಅಂತಸ್ತುಗಳು ಪರಮಾತ್ಮನ ಕೃಪೆಗೆ ಪಾತ್ರವಾಗಲು ಪ್ರತಿಬಂಧಕಗಳಲ್ಲ ಎಂಬುದನ್ನು ತಮ್ಮ ಜೀವನದಿಂದ ಎತ್ತಿ ತೋರಿಸಿದರು. ನಿಜವಾದ ಸಂತನೆಂದರೆ ಎಲ್ಲ ಸಂಕುಚಿತ ಭಾವನೆಗಳಿಂದ ದೂರವಾದವನು. ಸ್ತ್ರೀ ಸ್ವಾತಂತ್ರ್ಯ ಇಲ್ಲದಿದ್ದ ಕಾಲದಲ್ಲಿ, ಜಾತಿಮತಗಳ ಕಟ್ಟಳೆ ತೀವ್ರವಾಗಿದ್ದ ಸಮಯದಲ್ಲಿ ಈ ಸಂತರು ಈ ಎಲ್ಲ ಕಟ್ಟನ್ನು ಮೀರಿ ನಿಂತು ಜನತೆಗೆ ಜ್ಞಾನೋಪದೇಶ ಮಾಡಿದರು; ಮುಕ್ತಿಗೆ ಭಕ್ತಿ ಮಾರ್ಗವನ್ನು ತೋರಿದರು.

ಲೋಕದಲ್ಲಿ ದೇವರ ಪ್ರಸನ್ನತೆಯನ್ನು ಪಡೆದ ಮಾನವರು ಲೋಕದ ಕಟ್ಟುಪಾಡುಗಳನ್ನು ಅಷ್ಟಾಗಿ ಗಮನಿಸುವುದಿಲ್ಲ. ಅವರು ದ್ವಂದ್ವಾತೀತರು. ಭಕ್ತಿ ಸೂತ್ರದಲ್ಲಿ ಇಂಥ ಭಕ್ತನನ್ನು ಕುರಿತು "ಗದ್ಗದ ಕಂಠದಿಂದ, ರೋಮಹರ್ಷದಿಂದ, ಭಾಷ್ಪಪೂರಿತ ನೇತ್ರಗಳಿಂದ ಅವರು ಪರಸ್ಪರ ಮಾತನಾಡಿಕೊಳ್ಳುವರು, ಭಕ್ತ ಶ್ರೇಷ್ಠರು ತಮ್ಮ ಕುಂಟುಂಬಗಳನ್ನು ಮಾತ್ರವಲ್ಲ ಲೋಕವನ್ನೇ ಪವಿತ್ರಗೊಳಿಸುವರು. ಸತ್ಕಾರ್ಯಗಳನ್ನೆಸಗುವರು. ಆಚರಣೆಯಿಂದ ಶಾಸ್ತ್ರಗಳಿಗೆ ಪ್ರಮಾಣಗಳನ್ನು ಕೊಡುವರು. ಅವರಲ್ಲಿ ಜನ್ಮ, ವಿದ್ಯೆ, ರೂಪ, ಕುಲ, ಐಶ್ವರ್ಯ, ಉದ್ಯೋಗ ಇತ್ಯಾದಿಯಿಂದ ಉಂಟಾಗುವ ಭೇದಬುದ್ಧಿ ಇರುವುದಿಲ್ಲ- ಎಂಬುದಾಗಿ ವರ್ಣಿಸಲಾಗಿದೆ.

ಶೈವ ಸಂತರಲ್ಲಿ ಒಬ್ಬರಾದ ತಿರುನಾಮಕ್ಕರಸರು ಒಂದು ಸಂದರ್ಭದಲ್ಲಿ "*ತಾವು ಐಶ್ವರ್ಯ ಅಧಿಕಾರಗಳನ್ನು ಗೌರವಿಸುವುದಿಲ್ಲ. ಆದರೆ ಭಗವದ್ಭಕ್ತರನ್ನು, ಅವರು ಭಯಂಕರ ಕುಷ್ಠರೋಗಿಗಳಾಗಿರಲಿ ಅಥವಾ ಹೀನ ಕುಲಜರಾಗಿ ಗೋಮಾಂಸ ಭಕ್ಷಕರಾಗಿರಲಿ, ಅವರನ್ನು ಪೂಜಿಸುವೆವು*" - ಎಂಬುದಾಗಿ ಹಾಡಿದ್ದಾರೆ.

ದಿವ್ಯ ದೃಷ್ಟಿಯಿಂದ ಧನ್ಯರಾದ ಸಂತರಿಗೆ ಉಚ್ಚನೀಚ ಭೇದ ನಿಜವಾಗಿಯೂ ಇರುವುದಿಲ್ಲ. ಅವರು ಭಗವದ್ಗೀತೆಯ ಮಾತನ್ನು ಅಂದರೆ ವಿದ್ಯಾವಿನಯ ಸಂಪನ್ನನಾದ ವಿಪ್ರನಿರಲಿ, ಪಶುವಿರಲಿ, ಆನೆಯಿರಲಿ, ನಾಯಿಯಿರಲಿ, ಚಂಡಾಲನಿರಲಿ, ಯಾರೇ ಇರಲಿ ಎಲ್ಲರನ್ನು ಸಮ ದೃಷ್ಟಿಯಿಂದ ಕಾಣುವ ಪಂಡಿತ ಅಂದರೆ ಜ್ಞಾನಿಯಂತೆ ನಡೆಯುತ್ತಿದ್ದರು. ಅವರು ವಿಶ್ವಮಾನವರು. ಅಖಿಲ ಮಾನವ ಕುಲಕ್ಕೆ ಸೇರಿದವರು. ಅವರಿಗೆ ಸಂಕುಚಿತ ಭಾವನೆಗಳು ಇರುವುದಿಲ್ಲ- ಈ ಮಾತಿಗೆ ಅನೇಕ ನಾಯನ್ಮಾರರ ಜೀವನಗಳು ಉಜ್ವಲ ನಿದರ್ಶನಗಳನ್ನು ನೀಡಿವೆ.

ದಕ್ಷಿಣ ದೇಶದ ಸಂತರನ್ನು ಎರಡು ಗುಂಪಾಗಿ ವಿಗಂಡಿಸಬಹುದು. ಸಮಾಯಾಚಾರ್ಯರು ಅಂದರೆ ಧರ್ಮೋಪದೇಶಕರು ಮತ್ತು ಸಂತನಾಚಾರ್ಯರು ಅಂದರೆ ದಾರ್ಶನಿಕರು.

ಸಮಯಾಚಾರ್ಯರೆನಿಸಿಕೊಂಡ ತಿರುಜ್ಞಾನ ಸಂಬಂಧರಿಗೆ ಜೀವನ ದರ್ಶನವೊಂದಿತ್ತು. ಇದರಂತೆ ಮೆಯ್ಕಂಡರೆಂಬ ಸಂತನಾಚಾರ್ಯರು ದೊಡ್ಡ ಸಂತರಾಗಿದ್ದರು. ಇವರಲ್ಲಿ ಕೆಲವರು ಮಹಾಜ್ಞಾನಿಗಳಾಗಿದ್ದರೆ ಮತ್ತೆ ಕೆಲವರು ಮಹಾಭಕ್ತರಾಗಿದ್ದರು. ಇನ್ನು ಕೆಲವರು ಭಕ್ತಿ ಜ್ಞಾನ ವೈರಾಗ್ಯಗಳ ತ್ರಿವೇಣಿ ಸಂಗಮದಂತಿದ್ದರು. ಅವರು ಗೀತಾರ್ಥದಲ್ಲಿ ನಿಜವಾದ ಜ್ಞಾನಿಯೋಗಿಗಳೂ, ಭಕ್ತಿಯೋಗಿಗಳೂ, ಕರ್ಮಯೋಗಿಗಳೂ ಆಗಿದ್ದರು. ಶುಕಾಚಾರ್ಯರಂಥ ಜ್ಞಾನಿಗಳು, ನಾರದರಂಥ ಭಕ್ತರು, ವಿಶ್ವಾಮಿತ್ರರಂಥ ರಾಜಯೋಗಿಗಳು, ಜನಕನಂಥ ಕರ್ಮಯೋಗಿಗಳು ಸಂತರೇ ಆಗಿದ್ದಾರೆ. ಜ್ಞಾನಿ ಶುಕರು ಭಕ್ತರೂ ಆಗಿದ್ದರು; ಭಕ್ತನಾರದರು ಜ್ಞಾನಿಯೂ ಆಗಿದ್ದರು. ವಿಶ್ವಾಮಿತ್ರನಂಥವರು ರಾಜಯೋಗಿ ಕರ್ಮಯೋಗಿಗಳಾಗಿದ್ದರೂ, ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಭಕ್ತರೇ ಆಗಿದ್ದರು.

ಪ್ಯಾಶ್ಚಾತ್ಯ ಪಂಡಿತನಾದ ಏಕ್ಹಾರ್ಟ ಎಂಬುವವನು ಭಕ್ತಿಯ ಬಗ್ಗೆ ಒಂದು ಸುಂದರ ಮಾತು ಹೇಳಿದ್ದಾನೆ. ಧ್ಯಾನದ ಮೂಲಕ ಮಾನವನು ಒಳಗೆ ತುಂಬಿಕೊಂಡುದನ್ನು ಪ್ರೀತಿಯ ಮೂಲಕ ಹೊರಗೆಡಹಬೇಕೆಂದು ಅಭಿಪ್ರಾಯ ಪಟ್ಟಿದ್ದಾನೆ. ಸದ್ಗುಣಗಳಲ್ಲಿ ಅನುಕಂಪಕ್ಕೆ ಅಗ್ರಸ್ಥಾನವಿದೆ. ಜನತಾ ಜನಾರ್ದನನ ಸೇವೆ ಮಾಡುವುದಕ್ಕೆ ಈ ಸಂತರು ಹಂಬಲಿಸುತ್ತಿದ್ದರು. ಅವರ ಪಾಲಿಗೆ ದೀನದಲಿತರ ಸೇವೆ ಪರಮಾತ್ಮನ ಸೇವೆಯೇ ಆಗಿತ್ತು. ಮೃಗಪಕ್ಷಿಗಳನ್ನು ಅವರು ಅನುಕಂಪದಿಂದ ನೋಡುತ್ತಿದ್ದರು. ನಾಯನ್ಮಾರರ ಜೀವನದಲ್ಲಿ ಇಂಥ ದೃಷ್ಟಾಂತಗಳನ್ನು ಕಾಣುತ್ತೇವೆ.

ಸಂತರು ಪೂರ್ಣ ಸತ್ಯಾವಬೋಧರೂ, ಬಂಧಮುಕ್ತರೂ ಆಗಿದ್ದರು. ವೇದಗಳಲ್ಲಿ ಇಂಥವರನ್ನು *ಕವಯಃ ಸತ್ಯಶ್ರುತಾಃ* -ಎಂದೂ, *ಸದನಂ ಋತಸ್ಯ ಋತಸ್ಯ ಪಂಥಾಃ* -ಮಾರ್ಗ ಹಿಡಿದವರೆಂದೂ ಹೇಳಲಾಗಿದೆ. ಸಂತನಾದವನು ಆಕಾಂಕ್ಷಾರಹಿತನೆಂದು ಮಂಡುಕ, ಕಠೋಉಪನಿಷತ್ತುಗಳು ಸಾರಿವೆ. ಸಂತರನ್ನು ಗುಣಾತೀತರು, ಸ್ಥಿತಪ್ರಜ್ಞರು, ಭಕ್ತರು, ಯೋಗಿಗಳು, ಬ್ರಹ್ಮಭೂತರು -ಎಂದೆಲ್ಲ ಗೀತೆಯಲ್ಲಿ ವರ್ಣಿಸಲಾಗಿದೆ.

ಸ್ಥಿತಪ್ರಾಜ್ಞನಾದ ಸಂತನು ನಿಷ್ಕಾಮ ಬುದ್ಧಿಯಿಂದ ವರ್ತಿಸುತ್ತ ಆತ್ಮನಲ್ಲಿ ಪರಿಪೂರ್ಣವಾದ ತೃಪ್ತಿಯನ್ನು ಪಡೆಯುತ್ತಾನೆ. ಅವನು ನೋವಿನಿಂದ ಕುಗ್ಗುವುದಿಲ್ಲ. ಸುಖದಿಂದ ಹಿಗ್ಗುವುದೂ ಇಲ್ಲ. ಕಾಮಕ್ರೋಧಾದಿ ಅರಿಷಡ್ವರ್ಗಗಳಿಂದ ದೂರನಾಗಿರುವನು. ಆತ್ಮ ಬೋಧೆಯುಳ್ಳವನೂ, ಅಹಂಕಾರ ರಹಿತನೂ ಆಗಿರುವನು. ಸಂತನು ತ್ರಿಗುಣಾತೀತನು. ಆ ಗುಣಗಳೇ ಕ್ರಿಯಾನಿರ್ವಾಹಕಗಳಲ್ಲದೆ ತಾನಲ್ಲವೆಂಬ ಅರಿವು ಅವನಿಗೆ ಸದಾ ಇರುತ್ತದೆ. ಸುಖ ದುಃಖಗಳು ಅವನನ್ನು ಬಾಧಿಸಲಾರವು. ಅವನಿಗೆ ಮಣ್ಣು ಕಲ್ಲು ಹೊನ್ನು ಎಲ್ಲವೂ ಒಂದೆ. ಸ್ತುತಿ ನಿಂದೆಗಳು, ಮಾನಾಪಮಾನಗಳೂ ಅವನಿಗೆ ಸಮಾನವಾಗಿವೆ. ಶತ್ರುಮಿತ್ರರೂ ಅಷ್ಟೇ. ನಿಜವಾದ ಭಕ್ತನಿಗೆ ಯಾವ ಪ್ರಾಣಿಗಳಲ್ಲೂ ದ್ವೇಷವಿರುವುದಿಲ್ಲ. ಸರ್ವಭೂತಗಳಲ್ಲಿಯೂ ಮೈತ್ರಿ ಅನುಕಂಪಗಳಿವೆ. ತಾನು ತನ್ನದು ಎಂಬ ಭಾವವಿಲ್ಲದೆ ಸುಖದುಃಖಗಳನ್ನು ಸಮನಾಗಿ ತಿಳಿದು ಸಹನ ಶಕ್ತಿಯುಳ್ಳವನಾಗಿರುವನು. ಅವನು ಸರ್ವದಾ ತೃಪ್ತನು. ನಿಚ್ಚಲ ಚಿತ್ತ, ಆತ್ಮಸಂಯಮಿ, ದೃಢ ನಿಶ್ಚಯವುಳ್ಳವನು. ಎಲ್ಲವೂ ಭಗದರ್ಪಣವೆಂದು ನಡೆದುಕೊಳ್ಳುವನು. ಮೌನಿ, ಸ್ಥಿರಮತಿ ; ಅವನ

ಏಕೈಕ ಗುರಿ ದೇವರು. ಇಂಥ ಚಿತ್ತ ಸಮತೆಯಿಂದ ಯೋಗಿ ಎನಿಸಿಕೊಳ್ಳುವನು. ಯೋಗಿಯಾದವನಿಗೆ ಇಂದ್ರಿಯಗಳು ವಶದಲ್ಲಿರುವುವು. ಅವನು ಸರ್ವಭೂತಗಳನ್ನು ಕಾಣುವನು. ಇಂಥವನು ಬ್ರಹ್ಮನನ್ನು ಸೇರುವನು. ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವನು. ಬ್ರಹ್ಮಭೂತನು, ಸಂತನು ಅವನೇ. ಗೀತಾಚಾರ್ಯನು ವರ್ಣಿಸುವ ಭಕ್ತನ, ಜ್ಞಾನಿಯ, ಯೋಗಿಯ ಲಕ್ಷಣಗಳನ್ನು ನಾಯನ್ಮಾರರ ಜೀವನದಲ್ಲಿ ನಾವು ನೋಡುತ್ತೇವೆ.

ಭಗವಂತನಿಗೆ ಇಂಥ ಸಂತರು ಪ್ರಿಯರಾಗುತ್ತಾರೆ. ತುಲಸಿದಾಸರ ರಾಮಾಯಣದಲ್ಲಿ ಶ್ರೀರಾಮನು ಹೀಗೆ ಹೇಳಿದ್ದಾನೆ. *"ಸಂತರಿಗೆ ಇಂದ್ರಿಯ ಸುಖಾಪೇಕ್ಷೆ ಇರುವುದಿಲ್ಲ. ಪ್ರಿಯತೆ ಇತ್ಯಾದಿ ಸದ್ಗುಣಗಳ ಮೂರ್ತಿಗಳವರು. ಅವರು ಇತರರ ಕಷ್ಟಗಳಿಗೆ ಮರುಗುವರು. ಇತರರ ಸುಖಗಳಲ್ಲಿ ಆನಂದಿಸುವರು. ಸಮದೃಷ್ಟಿಯುಳ್ಳವರಾಗಿ ಯಾರನ್ನೂ ದ್ವೇಷಿಸುವುದಿಲ್ಲ. ಆಡಂಬರ ಆವೇಶಗಳನ್ನರಿಯದೆ ಲೋಭ, ಕ್ರೋಧ, ಭಯ ಇತ್ಯಾದಿಗಳನ್ನು ಜಯಿಸಿರುವವರು. ಕೋಮಲಾಂತಃಕರಣಗಳು. ಆರ್ತರಲ್ಲಿ ಅನುಕಂಪೆಯುಳ್ಳವರು. ನನ್ನಲ್ಲಿ ತ್ರಿಕರಣ ಶುದ್ಧವಾದ ಭಕ್ತಿ ಇಡುತ್ತಾರೆ. ಎಲ್ಲರನ್ನು ಗೌರವಿಸುತ್ತಾ ತಾವು ವಿನೀತರಾಗುತ್ತಾರೆ."*

*"ಯಾವನ ಹೃದಯವು ಶಾಂತಿ ನಿರ್ವಂಚನೆ ಸ್ನೇಹ ಇತ್ಯಾದಿ ಸದ್ಗುಣಗಳ ಆವಾಸವಾಗಿದೆಯೋ ಅಂಥವನನ್ನು ನಿಜವಾದ ಸಂತನೆಂದು ತಿಳಿಯುವುದು. ಸಂತರಿಗೆ ತಮ್ಮ ಮನಸ್ಸು ಮತ್ತು ಇಂದ್ರಿಯಗಳ ಮೇಲೆ ಎಂದಿಗೂ ಸ್ವಾಧೀನ ತಪ್ಪುವುದಿಲ್ಲ. ಧರ್ಮಮಾರ್ಗ ಶೀಲಗಳನ್ನು ಬಿಡದೆ ಸದಾ ಮೃದು ಭಕ್ತಿಗಳಾಗಿರುವರು. ನಿಂದೆ ಸ್ತುತಿಗಳನ್ನು ಸಮತೆಯಿಂದ ಕಾಣುತ್ತಾ ನನ್ನ ಚರಣ ಕಮಲಗಳನ್ನು ಮಾತ್ರ ಬಯಸುವರು. ಅಂಥ ಸಂತರು ನನಗೆ ಜೀವದಷ್ಟೇ ಪ್ರಿಯರು."* [೧]

ತಮಿಳುನಾಡಿನ ಶೈವ ಹಾಗೂ ವೈಷ್ಣವ ಸಂತರು ಈ ಎಲ್ಲ ಮಾತಿಗೆ ಉಜ್ವಲ ವ್ಯಾಖ್ಯಾನದಂತೆ ಬಾಳಿದ್ದಾರೆ. ದಕ್ಷಿಣ ದೇಶದ ನಾಯನ್ಮಾರರು ತಮ್ಮ ತೇವಾರಂಗಳಲ್ಲಿ ಹಾಡಿರುವುದು ಇದನ್ನೇ. ಅವರ ಜೀವನ ಸಂದೇಶವೂ ಇದೇ. ತಮ್ಮ ಎಲ್ಲವನ್ನು ಸಮರ್ಪಣ ಭಾವದಿಂದ ಭಗವಂತನಿಗೆ ಅರ್ಪಿಸಿ, ನಿಷ್ಕಾಮ ಬುದ್ಧಿಯಿಂದ ಅವನನ್ನು ಭಕ್ತಿಯಿಂದ ಸೇವಿಸುವುದೇ ಅವರ ಜೀವನ- ಹಾಗೂ ಸಾಧನೆಯಾಗಿತ್ತು. ಭಗವಂತನ ಸಾಕ್ಷಾತ್ಕಾರವೇ ಅವರ ಜೀವಿತದ ಗುರಿಯಾಗಿತ್ತು. ತಮಿಳುನಾಡಿನಲ್ಲಿ ಆಗಿಹೋದ ಅರವತ್ತುಮೂರು ಪುರಾತನರ, ಶಿವಭಕ್ತರ ಕಥೆಗಳೆಲ್ಲ ಈ ಸಮಾನ ಸೂತ್ರದಿಂದ ಬಂಧಿಸಲ್ಪಟ್ಟವೆ.

ಇವರಲ್ಲಿ ತಿರುನೀಲಕಂಠ, ಇಹಪ್ಪಗೆಯಾಂಡ, ಇಳೆಯಾಂಡ ಗುಡಿಮಾರ, ಚೇದಿರಾಜ, ಮರೆಮಿಂಡ ದೇವರು, ಅಮರನೀತಿ ಇರೆಭಕ್ತ, ಏನಿಶಾದಿನಾಥ, ಕಣ್ಣಪ್ಪ, ಕೆಂಗಲಿಯಕಲಿ, ಮಾಸಕಂಜರು, ಅರಿವಾಳ್ತಾಂಡ, ಆನಯನಾರ್, ಒಲಫುಂಡ ಮೂರ್ತಿ, ನಮಃ ಶಿವಾಯ, ಮುರುಘ, ರುದ್ರಪಶುಪತಿ, ತಿರುನಾಳ್‌ಪೋದರು, ತಿರುಕುರುಪೆಕೊಂಡರು, ಚಂಡೇಶಪಿಳ್ಳೇ, ವಾಗೀಶ, ಕಾರಿಕಾಲೆಮ್ಮ, ಮಾದಾರ ಚನ್ನಯ್ಯ, ನಂಬಿಯಣ್ಣ -ಮುಂತಾದವರ ಜೀವನ ಚರಿತ್ರೆಗಳು ಹರಿಹರನಂಥ ಭಕ್ತ ಕವಿಗಳಿಗೆ ಸ್ಫೂರ್ತಿಯನ್ನು ನೀಡಿ ಕಾವ್ಯವಸ್ತುವಾಗಿದ್ದಾರೆ.

---

೧. - (ಸಂತರ ಚರಿತ್ರ ಪು XIV) ಟಿ. ಎಂ.ಪಿ. ಮಹದೇವನ್ ಅನು ; ಎಂ. ಮರಿಯಪ್ಪ ಭಟ್ಟ.

ತಿರುಜ್ಞಾನ ಸಂಬಂಧ, ತಿರುನಾವುಕ್ಕರಿಸಿ, ಸುಂದರಮೂರ್ತಿ, ಮಾಣಿಕ್ಯ ವಾಚಕರ ಭಕ್ತಿ ಸಾಧನೆಯನ್ನು ಪಶುಪತಿ ಭಾವದಿಂದ ವರ್ಣಿತವಾಗಿದೆ.

ನಾಯನ್ಮಾರರು ಆಳ್ವಾರರಂತೆ ಏಕದೇವೋಪಾಸಕರು. ಅವರ ಅಭಿಮಾನ, ಭಕ್ತಿ ಗೌರವಗಳಿಗೆ ಪಾತ್ರನಾದವನು ತ್ರಿಮೂರ್ತಿಗಳಲ್ಲಿ ಶಿವ. ಶಿವನೇ ಪರಬ್ರಹ್ಮವಸ್ತು. ಅವನನ್ನು ತಿಳಿಯುವುದರಿಂದ ಜಗತ್ತಿನ ಬಂಧನದಿಂದ ಮುಕ್ತಿ ಎಂದು ನಂಬಿದ್ದರು. ಅವನನ್ನು ತಿಳಿಯುವ ಬಗೆ ಹೇಗೆ? ಈ ಪ್ರಶ್ನೆ ಉಪನಿಷತ್ಕಾರರ ಕಾಲದಲ್ಲಿ ಪ್ರಶ್ನೆಯಾಗಿ ಉಳಿದಿತ್ತು.

ಕೋನೋಪನಿಷತ್ತಿನಲ್ಲಿ ಅವರ ಅಂದಿನ ಪ್ರಶ್ನೆಗಳು, ಸಂದೇಹಗಳು ಸುಂದರವಾಗಿ ಮೂಡಿದೆ.[೧]

ಅವರು ಬಾಹ್ಯ ಪ್ರಪಂಚದ ವೈಚಿತ್ರ್ಯಗಳನ್ನು ನೋಡಿ ಆಶ್ಚರ್ಯಚಕಿತರಾಗಿ, ಕುತೂಹಲ ವಿಷ್ಟರಾಗಿ, ವಿಚಾರಪರರಾಗಿ ವಿಶ್ವದ ಮೂಲವನ್ನು ಅದರ ಮರ್ಮವನ್ನು ಕಂಡುಹಿಡಿಯುವ ಪ್ರಯತ್ನಮಾಡಿದರು. ಈ ಪ್ರಯತ್ನದಲ್ಲಿ ಅವರ ಮುಂದೆ ಬಂದ ಪ್ರಶ್ನೆಗಳು ಮನುಷ್ಯನ ಇಂದ್ರಿಯಾದಿಗಳು, ಮನಸ್ಸು, ಪ್ರಾಣ ಇವು ಹೇಗೆ ಕೆಲಸ ಮಾಡುತ್ತವೆ? ಇವುಗಳಿಗೆ ಚೈತನ್ಯ ಎಲ್ಲಿಂದ ಬರುತ್ತದೆ? ಅವರು ಈ ಪ್ರಶ್ನೆಗಳಿಗೆ ಅಂತರ್ಮುಖರಾಗಿ ಪ್ರತಿಬೋಧದಿಂದ ಉತ್ತರ ಕಂಡುಕೊಳ್ಳಲೆತ್ನಿಸಿದರು.

ಈ ವಿಶ್ವಾತ್ಮನಿಗೂ, ಅಂತರಾತ್ಮನಿಗೂ ಇರುವ ಏಕಭಾವವನ್ನು ಅಂದರೆ ಬ್ರಹ್ಮಾಂಡ ಪಿಂಡಾಂಡಗಳಲ್ಲಿಯ ಚೈತನ್ಯಾತ್ಮರುಗಳ ಏಕಮೇವಾ ದ್ವಿತೀಯವಾದ ಆತ್ಮವೊಂದನ್ನು ಪರಮಾತ್ಮನನ್ನು ಅರಿಯುವ ಶೋಧನ ಮಾಡಿದರು. ತಮ್ಮ ದರ್ಶನವನ್ನು ಉಪನಿಷತ್ತುಗಳಾಗಿ ಮೂಡಿಸಿದರು.

ಯಾವುದು ಮನಸ್ಸು, ಪ್ರಾಣ, ಮಾತು ಇವುಗಳಿಗೆ ಪ್ರೇರಕವಾಗಿದ್ದು ಇವುಗಳಿಂದ ಕೆಲಸ ಮಾಡಿಸುತ್ತಿದೆಯೋ, ಯಾವುದು ಕಣ್ಣು ಕಿವಿಗಳಿಗೆ ಆಜ್ಞೆ ಮಾಡುತ್ತದೆಯೋ ಅದೇ ಪರಬ್ರಹ್ಮ, ಅದೇ ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು, ಕಿವಿಗೆ ಕಿವಿ ಎಂದು ತಿಳಿದರು. ಈ ಪರಮಾತ್ಮನು ಮಾತ್ರ ಆಯಾ ಇಂದ್ರಿಯಗಳಿಗೆ ಚೈತನ್ಯದಾಯಕನಾಗಿದ್ದರೂ, ತಾನು ಮಾತ್ರ ಯಾವ ಇಂದ್ರಿಯಕ್ಕೂ ಗೋಚರಿಸದೆ ಗೂಢನಾಗಿದ್ದಾನೆ ವಾಙ್ಮನಕ್ಕೆ ಅಗೋಚರವಾಗಿರುವ ಆ ಪರತತ್ವವನ್ನು ಬ್ರಹ್ಮವಸ್ತುವೆಂದು ಉಪನಿಷತ್ಕಾರರು ಕರೆದರು. ಗಾರ್ಗಿ, ಯಾಜ್ಞವಲ್ಕ್ಯರನ್ನು ಕುರಿತು- ವಿಶ್ವದ

---

೧. ಕೇನೇಷಿತಂ ಪತತಿ ಪ್ರೇಷಿತಂ ಮನಃ ।
ಕೇನಪ್ರಾಣಂ ಪ್ರಥಮಂ ಪ್ರೈತಿಯುಕ್ತಃ ॥
ಕೇನೇಷಿತಾಂ ವಾಚಮಿಮಾಂ ವದನ್ತಿ ।
ಚಕ್ಷುಃ ಶ್ರೋತ್ರಂ ಕಲುದೇವೋಯುನಕ್ತಿ ।
ಶ್ರೋತ್ರಸ್ಯ ಶ್ರೋತಂ ಮನಸೋ ಮನೋಯದ್ ।
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ॥
ಚಕ್ಷುಷಶ್ಚಕ್ಷುರತಿ ಮುಚ್ಯಧೀರಾ ।
ಪ್ರೇತ್ಯಾಸ್ಮಾಲ್ಲೋಕಾದ ಮೃತಾ ಭವನ್ತಿ ॥
ಯತ್ಪ್ರಾಣೇನ ನ ಪ್ರಾಣತಿ ಯೇನ ಪ್ರಾಣಃ ಪ್ರಣೀಯತೇ ॥
ತದೇವ ಬ್ರಹ್ಮತ್ವಂ ಬುದ್ಧಿನೇದಂ ಯದಿದಮುಪಾಸತೇ ॥ - *ಕೇನೋಪನಿಷತ್ತು.*

ಮೂಲ ಯಾವುದು? ಆಕಾಶಕ್ಕೆ ಆಧಾರ ಯಾವುದು? ಅದೆಲ್ಲಿಂದ ಬಂದಿತು? ಈ ಪ್ರಶ್ನೆಗಳಿಗೆ ಉತ್ತರ ಪರಬ್ರಹ್ಮವಸ್ತುವೇ ಎಲ್ಲಕ್ಕೂ ಮೂಲ. ಅದು ಪರಮ ಸ್ವತಂತ್ರವಾದದ್ದು. ಅದಕ್ಕೆ ಅಧೀನವಾಗಿ ಅದರ ಭಯದಿಂದ ಎಲ್ಲವೂ ನಡೆಯುತ್ತದೆ. ಈ ಪರಬ್ರಹ್ಮ ವಸ್ತುವು ಮೂವತ್ತಾರು ತತ್ವಗಳಿಗೆ ಮೀರಿದ್ದು, ನಿರಾಕಾರ, ನಿಷ್ಕಲ, ನಾಮರೂಪ ಕ್ರಿಯಾದಿಗಳಿಲ್ಲ. ಅದು ಬ್ರಹ್ಮ ವಿಷ್ಣು ರುದ್ರಾದಿಗಳಿಗೆ ಮೀರಿದ್ದು- ಎಂದು ಅವರು ವ್ಯಾಖ್ಯಾನಿಸಿದರು.

ನಚಿಕೇತನು ಕೇಳಿದ ಪ್ರಶ್ನೆಗಳಿಗೆ ಯಮನು ನೀಡುವ ಉತ್ತರದಲ್ಲಿ ಈ ಭಾವವಿದೆ. ಅವನು ಹೇಳಿದಂತೆ ಈ ಪರಬ್ರಹ್ಮ ವಸ್ತುವು ಮಹತ್ ತತ್ವಕ್ಕೆ ಮೀರಿದುದಾಗಿಯೂ, ನಿತ್ಯವಾಗಿಯೂ ಅನಾದಿ ಅನಂತಗಳಾಗಿಯೂ, ಧ್ರುವವಾಗಿಯೂ ಇದೆ. ಆದುದರಿಂದಲೇ ಅದು ತ್ರಿಮೂರ್ತಿಗಳನ್ನು ಮೀರಿದ್ದೆಂದು ಅವರ ವರ್ಣನೆ. ಅವನು **ಅಣೋರಣಿಯಾನ್ ಮಹತೋ ಮಹೀಯಾನ್** ಆಗಿದ್ದಾನೆ.[೧]

ಇಂಥ ವಿರಾಟ ಕಲ್ಪನೆಗೆ ಅವರು ಪರಮೇಶ್ವರನೆಂದು ಸಂಬೋಧಿಸಿದರು. ಅವನು ದೇವರ ದೇವ. ಅವನು ಎಲ್ಲ ದೇವತೆಗಳಿಗಿಂತಲೂ ಅಧಿಕ. ಪರಮೇಶ್ವರ ಪರಶಿವ. ಅವನೇ ಹರಿಹರ ಬ್ರಹ್ಮಾದಿಗಳಿಗೆ, ದೇವತೆಗಳಿಗೆ ಕಾರಣಕರ್ತ. ದೇವತೆಗಳಲ್ಲಿರುವ ಶಕ್ತಿಯನ್ನು ಕೊಟ್ಟವನು ಅವನು. ಶಿವನು ತನ್ನ ಶಕ್ತಿಯ ಒಂದಂಶವನ್ನು ಅವರಲ್ಲಿ ಇಟ್ಟಿರುವುದರಿಂದ ಅವರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಆದಿಶೇಷ, ಆದಿಕೂರ್ಮ ಅಷ್ಟದಿಗ್ಗಜಗಳು ತಮ್ಮ ಶಕ್ತಿಯಿಂದ ವಿಶ್ವವನ್ನು ಧರಿಸಿಲ್ಲ. ಶಿವನು ಕೊಟ್ಟ ಶಕ್ತಿಯಿಂದ ಹೊತ್ತುಕೊಂಡಿದೆ. ಅವನ ಕೃತಿಗಳೂ, ಸೃಷ್ಟಿಗಳೂ, ಮಹಿಮೆಗಳೂ ಆಶ್ಚರ್ಯವಾಗಿದೆ.

ಮರದೊಳಗಿನ ಚೈತನ್ಯವು ಪ್ರವಹಿಸಿದಾಗ ಹೇಗೆ ಮರಕ್ಕೆ ಫಲಪುಷ್ಪಗಳು ಕಾಣಿಸಿಕೊಳ್ಳುವುದೋ ಅಂತೆಯೇ ಪರಮೇಶ್ವರನು ಸೃಷ್ಟಿಲೀಲೆ ಕೈಗೊಳ್ಳುವಾಗ ಉಮಾಪತಿಯಾಗಿ ಶಕ್ತಿಯನ್ನು ವ್ಯಕ್ತಗೊಳಿಸಿ ಪ್ರಕೃತಿಯ ಸಹಚರ್ಯೆಯನ್ನು ಪಡೆಯುತ್ತಾನೆ. ಸೃಷ್ಟಿ ಸಂಹಾರ ಕಾರ್ಯದಲ್ಲಿ ಎಲ್ಲವನ್ನೂ ಸೆಳೆದುಕೊಂಡು, ತನ್ನಲ್ಲಿ ಅಡಗಿಸಿಕೊಂಡು ಪ್ರಕೃತಿ ಶಕ್ತಿಗಳು ಕಾಣದಂತೆ ಸ್ವಯಂಭುವಾಗಿ ನಿಲ್ಲುತ್ತಾನೆ. ಇಂಥ ವಿರಾಟ್ ಪುರುಷನನ್ನು ಶೈವರು ಪರಬ್ರಹ್ಮ ಸ್ವರೂಪಿಯಾದ ಶಿವನೆಂದು ಕರೆದು ಅವನನ್ನು ಹಲವು ಬಗೆಯಲ್ಲಿ ಸಾಕ್ಷಾತ್ಕರಿಸಿಕೊಳ್ಳಲೆತ್ನಿಸಿದರು.

ಇಂಥ ಪ್ರಯತ್ನದ ಫಲರೂಪವಾಗಿ ಶೈವ ಸಿದ್ಧಾಂತಗಳು ಉಗಮವಾದವು.

ಶಿವಪುರಾಣಗಳು ಬಾದರಾಯಣರಿಂದ ರಚಿತವಾದವುಗಳಾದರೂ ಶಿವಾಗಮ ಮಾತ್ರ ಸಾಕ್ಷಾತ್ ಶಿವನಿಂದ ಭಕ್ತರಾದ ದೇವತೆಗಳು ಮತ್ತು ಮನುಷ್ಯರಿಗೆ ಉಪದಿಷ್ಟವಾಗಿ ವೇದಗಳಂತೆ

---

೧. ಅ ಶಬ್ದಮಸ್ಪರ್ಶಮರೂಪಮವ್ಯಯಂ ।
ತಥಾऽರಸಂ ನಿತ್ಯಮಗನ್ಧವಚ್ಚ ಯತ್ ॥
ಅನಾದ್ಯನಂತಂ ಮಹತಃ ಪರಂ ಧ್ರುವಂ ।
ನಿಚಾಯ್ಯ ತನ್ಮೃತ್ಯುಮುಖಾತ್ ಪ್ರಮುಚ್ಯತೇ ॥ - ಕಠೋಪನಿಷತ್

ಅನಾದಿಯಾಗಿ ಪ್ರಚುರ್ಯದಲ್ಲಿದೆ ಎಂದು ಕೆಲವರ ಅಭಿಪ್ರಾಯ. ಆದರೂ ವೇದಗಳನ್ನೂ ನಿರಾಕರಿಸಿ ಶಿವಾಗಮಗಳು ಪ್ರವೃತ್ತವಾಗಿಲ್ಲ. *ಸಿದ್ಧಾಂತೋವೇದಸಾರತ್ವಾತ್* -ಎಂಬುದರಿಂದ ಆದವೆಂದು ಹೇಳುತ್ತಾರೆ. ಶಿವಾಗಮಗಳು ಒಟ್ಟು ಇಪ್ಪತ್ತೆಂಟು. ಇವುಗಳಲ್ಲಿ ಹತ್ತು ಆಗಮಗಳು ಶಿವನಿಂದ ಉಪದಿಷ್ಟವೆಂದೂ ಉಳಿದವುಗಳು ಮನುಷ್ಯ ಸಾಕ್ಷಾತ್ಕೃತವೆಂದೂ ಹೇಳುತ್ತಾರೆ.[೧]

ಈ ಶೈವ ಸಿದ್ಧಾಂತದಲ್ಲಿ ೧) ನಕುಲೀಶ ಪಾಶುಪತ ದರ್ಶನ, ೨) ಪಾಶುಪತ ಶಾಸ್ತ್ರಗಳೆಂದೂ, ೩) ಪ್ರತ್ಯಾಭಿಜ್ಞಾ ದರ್ಶನವೆಂದೂ, ೪) ರಸೇಶ್ವರ ಮತವೆಂದೂ, ೫) ಶಕ್ತಿ ಮತವೆಂದೂ ಬೇರೆ ಬೇರೆ ಪ್ರಕಾರಗಳಿವೆ ಇದಲ್ಲದೆ ಶಕ್ತಿ ವಿಶಿಷ್ಟಾದ್ವೈತವೆಂಬ ವೀರಶೈವ ಪ್ರಭೇದವೂ ಇದೆ.

ತಮಿಳುನಾಡಿನ ಶಿವಭಕ್ತರು ಶಿವಾಗಮಗಳಲ್ಲಿ ಪ್ರಣೀತವಾದ ಶೈವ ಧರ್ಮವನ್ನು ಒಪ್ಪಿ, ಭಗವಂತನಾದ ಶಿವನನ್ನು ಆಕಾರ, ನಿರಾಕಾರ ರೂಪದಲ್ಲಿ ಭಕ್ತಿ ಮಾಡಿ, ಸಾಕ್ಷಾತ್ಕರಿಸಿಕೊಂಡ ಮಹಾನುಭಾವರು.

ಶಿವಭಕ್ತರಾದ ನಾಯನ್ಮಾರರು ತಮಿಳು ತೇವಾರಗಳಲ್ಲಿ ವ್ಯಕ್ತಗೊಳಿಸಿದ ಶಿವ ಸರ್ವೋತ್ತಮತ್ವ ಭಾವವನ್ನು ಹರಿಹರ ಕವಿಯು ಕನ್ನಡದಲ್ಲಿ ಸುಂದರವಾಗಿ ಮೂಡಿಸಿದ್ದಾನೆ.

*ಸರ್ವಬ್ರಹ್ಮಾಂಡ ಸಾರ್ವಭೌಮನೆನಿಪ ಶ್ರೀ ಸಂಗಮೇಶ್ವರನಂಘ್ರಿಯಂ ಮಹಾ ಪದವಿಗಳು ಓಲೈಸುತಿಪ್ಪಲ್ಲಿ ಸಂಪದದೊಳ್ಳನಿತಂ ಕುಡೆ ಕುಬೇರನಾದಂ, ಕಾಂತಿಯೊಳಗಿ ನಿತ ನೀಯೆ ಭಾಸ್ಕರನಾದಂ, ವೀರದಳೊಂದು ಲೇಸನೀಯೆ ವೀರಭದ್ರನಾದಂ, ಚೆಲವಿನೊಳನಿತೀ ಸಿಡಿಯೆ ಕಾಮನಾದಂ, ನಿತ್ಯದ ಕಡೆ ಸೆರಗಿನ ಸೊಂಕಂ ಕುಡೆ ಸೋಮಜನಾದನು.*

ಚೆಲುವಿನ ಚೆಲುವು ಅವನು, ಮೃದುವಿನ ಮೃದು, ಬೆಳಗಿನ ಬೆಳಗು, ತಿಳಿವಿನ ತಿಳಿವು, ತಾನುಳಿದು ಎಲ್ಲವನ್ನು ಅಳಿಯ ಬಲ್ಲವನು, ರೌದ್ರಕ್ಕೆ ರುದ್ರನು, ಮಂಗಳಕ್ಕೆ ಮಂಗಳನು, ಸುಖಕ್ಕೆ ಸುಖವನ್ನು ನೀಡುವವನು. *ಭಕ್ತಜನ ಬಾಂಧವಂ ಪ್ರೇಮಜನ ಕಾಮದಂ ಪ್ರಣಯಾಜನ ಪ್ರಾಣಮಿತ್ರಂ, ನಂಬಿದರ ಬೆಂಬಲಂ ನೆಚ್ಚಿದರಚ್ಚು ಮೆಚ್ಚಿದರ ಮೆಚ್ಚು ಅಗಲದರಾನಂದಂ ಕಾರುಣ್ಯ ಪಾರಾವಾರಂ*- ಎಂದು ಮುಂತಾಗಿ ಪರಮೇಶ್ವರನನ್ನು ತನ್ನ ಕೃತಿಗಳಲ್ಲಿ ವರ್ಣಿಸಿದ್ದಾನೆ.

ಲೋಕ ನಾಟಕ ಈ ಸ್ವಾಮಿಗೆ ಒಂದು ಲೀಲೆ. ಇದನ್ನು ಹರಿಹರ ಕವಿಯು ಸುಂದರವಾಗಿ ವರ್ಣಿಸಿದ್ದಾನೆ.

*ಕೂಸಂ ಚಿವುಟುವೈ ತೊಟ್ಟಲು ತೂಗುವೈ*
*ನೋಡುವೊಡೆ ತಪ್ಪ ನಾ ನಿನ್ನ ಮೇಲಿಡುವೆನೈ*

---

೧. i) ಕಾಮಿಕ, ಯೋಗಜ, ಚಿಂತ್ಯ, ಕರಣ, ಅಥವಾ ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಾಹಸ್ರಕ ಅಥವಾ ಸಹಸ್ರ, ಅಂಶುಮಾನ್ ಅಥವಾ ಅಂಶುಮತ್ ಮತ್ತು ಸುಪ್ರಭಾ ಅಥವಾ ಸುಪ್ರಬೋಧ ಇವು ಹತ್ತು ಶಿವಕೃತ ಆಗಮಗಳು.

ii) ವಿಜಯ, ನಿಶ್ವಾಸ, ಸ್ವಾಯಂಭೂವ ಅಥವಾ ಸ್ವಾಯಂಭೂ, ಆಗ್ನೇಯಕ, ಭದ್ರ, ತಾರವ, ಮಾಕುಟ, ವಿಮಲ, ಚಂದ್ರಹಾಸ, ಮುಖಬಿಂಬ, ಉದ್ಗೀತ, ಲಲಿತ, ಸಿದ್ಧ, ಸಂತಾನ, ನಾರಸಿಂಹ ಅಥವಾ ಶಾರ್ವೋಕ್ತ, ಪರಮೇಶ್ವರ, ಕೃಷ್ಣ ಮತ್ತು ವರ ಅಥವಾ ವಾತೂಲ ಇವು ಹದಿನೆಂಟು ಮನುಷ್ಯಕೃತ ಆಗಮಗಳು.

*- ಭಾರತೀಯ ತತ್ವಶಾಸ್ತ್ರ, ಸಂಗ್ರಹ, ಪುಟ, ೬೨೦-೨೧*

ಪ್ರೇರಕನು ನೀನೆಂದೊಡೆನ್ನ ಕಾರಣವುಂಟೆ
ಕಾರಣಕೆ ಕಾರಣನೀನೆಂದೊಡೆನಗುಂಟೆ
ಸೂರಳಿಸುವಂ ನೀನೆ ತಪ್ಪಿಸುವವಂ ನೀನೆ
ಹಾರೈಸುವವಂ ನೀನೆ ಹಾಡಿಸುವವಂ ನೀನೆ
ಪುಟ್ಟಿಸುವಭವ ನೀನೆ ರಕ್ಷಿಸುವ ಮೃಡನೀನೆ
ಪುಟ್ಟಿತೆಲ್ಲವನರೆದು ಸಣ್ಣಿಸುವ ಹರ ನೀನೆ
ನೆನೆಯುವ ಪ್ರೇರಕಂ ನುಡಿಯಿಪ ಗಿರೀಶ ನೀನೆ
ಅನುನಯದಿ ನಡೆಯಿಸುವ ಯಂತ್ರವಾಹಕ ನೀನೆ

– ಎಂದು ಅದ್ಭುತವಾಗಿ ವರ್ಣಿಸಿದ್ದಾನೆ.

ಶಿವಭಕ್ತ ವಾಗೀಶರು ಸ್ವಾಮಿಯ ಮಹಿಮೆಯನ್ನು ಹೀಗೆ ಕೊಂಡಾಡಿದ್ದಾರೆ.

ನೀಂ ನೆನೆಯೆ ಹರಿಬೊಮ್ಮ ಸುರಪರಾಗರೆ ದೇವ
ನೀಂ ನೆನೆಯೆ ಸಕಲ ಬೊಮ್ಮಾಂಡವಾಗದೆ ದೇವ
ನೀಂ ಮರೆಯೆ ಹರಿಬೊಮ್ಮ ಸುರಪರೆಂಬುವರುಂಟೆ
ನೀಂ ಮುಳಿಯೆ ನೀನಲ್ಲದಿನ್ನೊಂದು ತಲೆಯುಂಟೆ?

ಹರಿಹರನಿಗೆ ಶಿವನು ಈ ಎಲ್ಲ ಭಕ್ತರ ಪಾಲಿಗೆ ಪರಮ ಸ್ವಾಮಿ.

ಆದ್ಯಂತರಹಿತ ಸ್ವತಂತ್ರ ಸ್ವಯಂಭುವೇ
ಚೋದ್ಯಕ್ಕೆ ಚೋದ್ಯನೆನಿಸುವ ಭಕ್ತ ಬಂಧುವೇ
ಕಮಲಭವ ಮಸ್ತಕ ಹಸ್ತ ಪಲ್ಲವನೇ – ಎಂದು ಸ್ತುತಿಸಿದ್ದಾನೆ.

ಆ

ಪ್ರಧಾನ ಮತ ಧರ್ಮಗಳಲ್ಲಿ ಜೀವಾತ್ಮರ ಅಂದರೆ ಭಕ್ತರು–ಭಗವಂತನ ಸಂಬಂಧವನ್ನು ಕುರಿತು ಸ್ಥೂಲವಾಗಿ ಪರಿಶೀಲಿಸಿದ ಮೇಲೆ ಭಾರತೀಯ ದರ್ಶನ ಶಾಸ್ತ್ರಗಳಲ್ಲಿ ಪ್ರಧಾನವಾಗಿರುವ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಭಕ್ತಿಯ ಸ್ವರೂಪ ಸಾಧನ ಮಾರ್ಗಗಳನ್ನು ವಿವರವಾಗಿ ತಿಳಿಯಬಹುದಾಗಿದೆ.

ಶಂಕರಾಚಾರ್ಯರು ಕೇರಳದ ಕಾಲಟಿಯಲ್ಲಿ ಜನ್ಮತಾಳಿದರು. ಅವರು ಜ್ಞಾನಭಕ್ತಿ ವೈರಾಗ್ಯಗಳ ತ್ರಿವೇಣಿ ಸಂಗಮದಂತಿದ್ದರು. ಅವರು ಮಾಡಿದ ಮಹೋಪಕಾರವೆಂದರೆ, ಜೈನ ಮತ್ತು ಬೌದ್ಧ ಮತಗಳು ಪ್ರಭಲಿಸಿ, ಜನತೆಯಲ್ಲಿ ನಾಸ್ತಿಕ ಭಾವವನ್ನು ಬಿತ್ತಿ, ಸಮಾಜ ಜೀವನದಲ್ಲಿ ಏರುಪೇರನ್ನೂ, ಅನೀತಿಯನ್ನೂ ಆ ಮೂಲಕ ಭ್ರಷ್ಟಾಚಾರವನ್ನು ತರಲೆತ್ನಿಸಿದ ದಾರುಣ ಸಂದರ್ಭದಲ್ಲಿ, ಸಮಾಜದಲ್ಲಿ ಬಿತ್ತಲ್ಪಟ್ಟ ನಾಸ್ತಿಕ್ಯದ ಕಂಟಕಗಳನ್ನು ನಿರ್ಮೂಲಗೊಳಿಸಿ, ಜನತೆಯ ಚಿತ್ತಭಿತ್ತಿಯಲ್ಲಿ ಮತ್ತೆ ಭಗವಂತನಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳ ಹೆದ್ದಾರಿಯನ್ನು ನಿರ್ಮಿಸಿ, ಆ ಮೂಲಕ ವೈದಿಕ ಧರ್ಮದ ಪುನರುತ್ಥಾನದ ಕಾರ್ಯದಲ್ಲಿ ಮಹತ್ವದ ಪಾತ್ರವಹಿಸಿದರು. ಅಲ್ಪ ವಯಸ್ಸಿನಲ್ಲಿ ಅವರು ಮಾಡಿದ ಈ ಕಾರ್ಯವನ್ನು ನೋಡಿದವರು ಅವರನ್ನು ಭಗವಾನ್ ಶಂಕರನ ಅವತಾರವೆಂದು ನಂಬುವಂತೆ ಆಯಿತು.

ಶಂಕರಾಚಾರ್ಯರು ಮಾಡಿದ ಮಹತ್ಕಾರ್ಯವೆಂದರೆ, ಜನ ಸಾಮಾನ್ಯರಿಗೆ ಅಪೌರುಷೇಯವಾದ ವೇದಧರ್ಮದಲ್ಲಿ ಶ್ರದ್ಧೆಯನ್ನು ಬೆಳೆಸಿದ್ದು. ಅವರು ಮುಖ್ಯವಾಗಿ ಜ್ಞಾನಮಾರ್ಗವನ್ನು ಪ್ರತಿಪಾದಿಸಿದರೂ, ಈ ಜ್ಞಾನ ಮಾರ್ಗದ ಸಾಧ್ಯಾಸಾಧ್ಯತೆಗಳನ್ನು, ಇತಿ ಮಿತಿಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಜನಸಾಮಾನ್ಯರಿಗೆ ದೊಡ್ಡ ದೊಡ್ಡ ತತ್ವಗಳನ್ನು ಹೇಳಿದರೆ ಅವು ಅವರ ಮನಸ್ಸಿಗೆ ನಾಟುವುದಿಲ್ಲವೆಂದು ಅನುಭವದಿಂದ ಗ್ರಹಿಸಿದ ಅವರು ಜನ ಸಾಮಾನ್ಯರ ಸಲುವಾಗಿ, ಸ್ತ್ರೀ ಶೂದ್ರಾದಿಗಳ ಸಲುವಾಗಿ ಅನೇಕ ದಿವ್ಯವಾದ ಸ್ತೋತ್ರ ಸಾಹಿತ್ಯವನ್ನು ರಚಿಸಿ, ಉಪಕಾರ ಮಾಡಿದರು. ಅವರು ರಚಿಸಿದ ಸ್ತೋತ್ರ ಸಾಹಿತ್ಯವನ್ನು ನೋಡಿದರೆ ಶಂಕರಾಚಾರ್ಯರು ಐತಿಹಾಸಿಕ ಕಾಲದಲ್ಲಿ ಆಗಿ ಹೋದ ಮಹಾಭಕ್ತರೆಂದು ಹೇಳಬಹುದಾಗಿದೆ.

ಶಂಕರಾಚಾರ್ಯರು ವೇದಾಂತ ವ್ಯಾಸಂಗದಿಂದ ಭಕ್ತಿ ಜ್ಞಾನ ವೈರಾಗ್ಯಗಳು ಜೀವಾತ್ಮರಿಗೆ ಉಂಟಾಗುವುದೆಂದು ಅಚಲವಾಗಿ ನಂಬಿದ್ದರು. ಈ ವೇದಾಂತ ವ್ಯಾಸಂಗಕ್ಕೆ ವ್ಯಕ್ತಿಗಳಿಗೆ ಕನಿಷ್ಟ ಅರ್ಹತೆ ಇರಬೇಕಾಗಿತ್ತು. ಅವೆಂದರೆ ನಿತ್ಯಾನಿತ್ಯ ವಸ್ತು ವಿವೇಚನೆ, ಇಹದಲ್ಲಿ ಪರದಲ್ಲಿ ಭೋಗದಲ್ಲಿ ವೈರಾಗ್ಯ, ಶಮದಮ ಮುಂತಾದ ಸಾಧನ ಸಂಪತ್ತು, ಮೋಕ್ಷಾಪೇಕ್ಷೆ -ಇವುಗಳು ಇದ್ದರೆ ಮಾತ್ರ ಧರ್ಮ ಜಿಜ್ಞಾಸೆಗೆ ಅಧಿಕಾರ ಪಾತ್ರವಾಗುತ್ತದೆ. ಆಮೇಲೆ ಬ್ರಹ್ಮ ಜಿಜ್ಞಾಸೆ ಮಾಡಲು ಸಾಧ್ಯ. ಇಂಥ ಅಧಿಕಾರವಿಲ್ಲದ ಮಂದಮತಿಗಳಿಗೆ ವೇದಾಂತ ಹಿಡಿಸುವುದಿಲ್ಲ; ಅದು ಶುಷ್ಕವೆನಿಸುತ್ತದೆ -ಎಂಬುದರ ಬಗ್ಗೆ ಸ್ಪಷ್ಟವಾಗಿ ಅಭಿಪ್ರಾಯವಿತ್ತು. ಅವರು ಶಾಶ್ವತವಾದ ಆತ್ಮನನ್ನು ಪರಮಾತ್ಮನನ್ನು ತಿಳಿಯದ ಅಜ್ಞಾನಿಗಳನ್ನು ಆತ್ಮಹಂತಕರೆಂದು ಕರೆದಿದ್ದಾರೆ. ಅಂಥ ಅಜ್ಞಾನಿಗಳು ಅಜ್ಞಾನದ ಫಲವಾಗಿ ದುಃಖವು ಅತಿಶಯವಾಗಿರುವ ದೇವ ಮಾನವ ಪ್ರಾಣಿಪ್ರೇತ ಮುಂತಾದ ದೇಹಗಳಲ್ಲಿ ಹುಟ್ಟಿ ಜನ್ಮ, ಜರೆ, ಮೃತ್ಯು, ರೋಗ ಮೊದಲಾದುವುಗಳನ್ನು ಅನುಭವಿಸುತ್ತಾರೆ. ಇದರಿಂದ ಬಿಡುಗಡೆಯಾಗಲು ಜ್ಞಾನವೊಂದೇ ದಾರಿ ಎಂದು ಅವರು ಹೇಳುತ್ತಾರೆ. ಭಗವಂತನ ಸ್ವಭಾವ, ವ್ಯಾಪಾರಗಳನ್ನು ತಿಳಿಯಲು ಕರ್ಮಯೋಗ ಮತ್ತು ಭಕ್ತಿಯೋಗಗಳು ಅಗತ್ಯವೆಂದು ಹೇಳಿದ್ದಾರೆ.

ಭಗವದ್ಗೀತೆಯಲ್ಲಿ ಭಗವಂತನು ನಾಲ್ಕು ವಿಧವಾದ ಭಕ್ತರನ್ನು ಕುರಿತು ಹೇಳಿದ್ದಾನೆ. ಆರ್ತರು, ಅರ್ಥಾರ್ಥಿಗಳು, ಜಿಜ್ಞಾಸುಗಳು ಮತ್ತು ಜ್ಞಾನಿಗಳು. ಇವುಗಳಲ್ಲಿ ಮೊದಲೆರಡು ಗುಂಪಿನವರು ಕೇವಲ ಶ್ರೇಯಸ್ಸನ್ನು ಅಂದರೆ ಐಹಿಕ ಅಭ್ಯುದಯವನ್ನು ಮಾತ್ರ ಬಯಸುತ್ತಾರೆ. ಅವರ ಅಪೇಕ್ಷೆಗಳು ಪೂರ್ಣಗೊಂಡರೆ ಅವರು ಭಗವಂತನ ಕಡೆಗೆ ಜ್ಞಾನಪಿಪಾಸುಗಳಾಗಿ ಮುಕ್ತಿಗಾಗಿ ಮುಖತಿರುವುತ್ತಾರೆ. ಆದುದರಿಂದ ಕರ್ಮ ಮತ್ತು ಭಕ್ತಿಗಳು ಜ್ಞಾನಮಾರ್ಗಕ್ಕೆ ಒಯ್ಯುವ ಕಾಲುದಾರಿಗಳಿದ್ದಂತೆ. ಪರಮಾತ್ಮನ ಅನುಗ್ರಹವಾಯಿತೆಂದರೆ ಜ್ಞಾನ ಸಿದ್ಧಿಸುತ್ತದೆ. ಜ್ಞಾನದಿಂದ ಮೋಕ್ಷ ಸಿಕ್ಕುತ್ತದೆ-"*ತದನುಗ್ರಹ ಹೇತು ಕೇನೈವ ವಿಜ್ಞಾನೇನ ಮೋಕ್ಷ ಸಿದ್ಧಿ ರ್ಭವತುಮರ್ಹತಿ*"- ಎಂದು ಶಂಕರಾಚಾರ್ಯರು ಸೂತ್ರ ಭಾಷ್ಯದಲ್ಲಿ ಹೇಳಿದ್ದಾರೆ.[೧]

---

೧. ನಿತ್ಯಾನಿತ್ಯವಸ್ತು ವಿವೇಕಃ ಇಹ ಮುತ್ರಾರ್ಥ ಭೋಗವಿರಾಗಃ
ಶಮದಮಾದಿ ಸಾಧನಸಂಪತ್ ಮುಮುಕ್ಷುತ್ವಂ ಚ ತೇಷು ಹಿ ಸತ್ಸು
ಪ್ರಾಗಪಿ ಧರ್ಮ ಜಿಜ್ಞಾಸಾಯಾ ಊರ್ಧ್ವಂ ಚ ಶಕ್ಯತೇ ಬ್ರಹ್ಮ ಜಿಜ್ಞಾಸಿತುಂ ಚನ ವಿಪರ್ಯಯೋ
**- *ಬ್ರ.ಸೂ.ಭಾ. I ii.***

ಭಕ್ತನು ಪರಮಾತ್ಮನನ್ನು ಅನೇಕ ರೂಪಗಳಲ್ಲಿ, ಅನೇಕ ಹೆಸರುಗಳಲ್ಲಿ ಪೂಜಿಸ ಬಹುದು. ತನ್ನ ಅಚಿಂತ್ಯವಾದ ಮಹಿಮಾದಿಗಳಿಂದ ಭಗವಂತನು ಬೇರೆ ಬೇರೆ ರೂಪಗಳನ್ನು, ಹೆಸರುಗಳನ್ನು ಪಡೆಯುವನು. ಅವನು ಭಕ್ತರು ಆಚರಿಸುವ ಭಕ್ತಿಗೆ ತಕ್ಕಂತೆ, ಅವರವರಿಗೆ ಇಷ್ಟವಾದ ದೇವತಾ ರೂಪಗಳಲ್ಲಿ, ನಾಮರೂಪಗಳಲ್ಲಿ ಕಾಣಿಸಿಕೊಂಡು ಒಗೊಡುತ್ತಾನೆ. ಅವರ ಸಾಧನಕ್ಕೆ ಸಿದ್ಧಿಯನ್ನು ಒದಗಿಸುತ್ತಾನೆ. ಧರ್ಮಕ್ಕೆ ಹಾನಿಯುಂಟಾದಾಗ ಭಗವಂತನು ಹೀಗೆ ಅವತಾರಗಳನ್ನು ಮಾಡುತ್ತಾನೆ. ಶರೀರರಹಿತನೂ, ಅಭವನೂ ಆದ ಅವನು ಇತರರನ್ನು ಮೋಹಗೊಳಿಸಲು ಲೋಕವಿಡಂಬನ ಮಾಡಲು ದೇಹದಾರಿಯಂತೆ ಕಾಣುತ್ತಾನೆ. ಭಕ್ತರ ಮೇಲೆ ಅನುಗ್ರಹವನ್ನು ಮಾಡುವದಕ್ಕಾಗಿಯೇ ವಿಗ್ರಹಗಳಾಗಿ ಕಾಣಿಸಿಕೊಳ್ಳುತ್ತಾನೆ. ಭಕ್ತರು ಪ್ರತಿಮೆ ಗಳಲ್ಲಿ ತಮ್ಮ ಶ್ರದ್ಧಾ ಭಕ್ತಿಯಿಂದ ಜೀವ ತುಂಬಿ, ಭಗವಂತನ ಅಧಿಷ್ಠಾನಗೊಳಿಸುತ್ತಾರೆ. ಅದರಲ್ಲಿ ಭಗವಂತನನ್ನು ಅಧಿಷ್ಠಾನಗೊಳಿಸಿದರೂ, ಅವನು ಸರ್ವಜ್ಞನೂ, ಸರ್ವಾಂತರ್ಯಾಮಿಯೂ, ಸರ್ವಶಕ್ತನೆಂದೂ, ಜಗತ್‌ಸ್ವಾಮಿ ಎಂದೂ ತಿಳಿದು ಮಾಡು ಭಕ್ತಿ ನಿರೀಕ್ಷಿಸಿದ ಫಲ ದೊರಕಿಸಿ ಕೊಡುತ್ತದೆ. ಇದು ಕಷ್ಟವಾದರೂ, ಮುಂದೆ ಭಕ್ತಿಯ ತೀವ್ರತೆಯಿಂದ ಸಾಧ್ಯವಾಗುತ್ತದೆ. ಇಂಥ ಸಾಮಾನ್ಯ ಭಕ್ತರ ಸಲುವಾಗಿ ಭಗವಂತನು ನಾಮ ರೂಪಗಳನ್ನು ಸ್ವೀಕರಿಸುವನೆಂದು ಶಂಕರಾ ಚಾರ್ಯರು ಹೇಳುತ್ತಾರೆ. ಆದರೆ ಇದು ಸಂಕುಚಿತವಾದ, ಒರಟಾದ ಪೂಜಾ ಪದ್ಧತಿ. ಅದು ಮೊದಲ ಮೆಟ್ಟಲು ಅಷ್ಟೇ. ಅವನು ಒಂದೊಂದೇ ಮೆಟ್ಟಲನ್ನು ಹತ್ತಿ ಕಡೆಗೆ ಜ್ಞಾನದ ಸೋಪಾನವನ್ನು ಏರಿದರೆ, ಇಂಥ ಭಕ್ತಿಯೋಗಕ್ಕೆ, ಜ್ಞಾನಯೋಗಕ್ಕೆ ಇರುವಷ್ಟೇ ಮಹತ್ವ ವಿರುತ್ತದೆ. ಭಕ್ತಿಯು ಇಲ್ಲಿ ಜ್ಞಾನಕ್ಕೆ ಸಾಧನವಾಗುತ್ತದೆ. ಅಂಥ ನುರಿತ ಅಧಿಕಾರಿಗಳ ಸಲುವಾಗಿಯೇ ಪ್ರತಿಮೆಗಳೂ, ಪೂಜಾ ವಿಧಾನಗಳು ಇರುವುದೆಂದು ಆಚಾರ್ಯರು ಹೇಳಿದ್ದಾರೆ.

*ಪ್ರಥಮಾ ಪ್ರತಿಮಾ ಪೂಜಾ ಜಪಸ್ತೋತ್ರಾಣಿ ಮಧ್ಯಾಮಾ ।*
*ಉತ್ತಮಾ ಮಾನಸೀ ಪೂಜಾ ಸೋಹಂ ಪೂಜೋತ್ತಮೋತ್ತಮಾ ॥*

-ಎಂದು ಆಚಾರ್ಯರು ಹೇಳಿದ್ದಾರೆ. ಪ್ರಥಮ ಹಂತವು ವಿಗ್ರಹಾರಾಧನೆ. ಮುಂದಿನದು ಜಪ ಮತ್ತು ಸೋತ್ರ ಧ್ಯಾನಗಳಿಂದ ಕೂಡಿರುತ್ತದೆ. ಅದಕ್ಕಿಂತ ಮೇಲಿನದು ಮಾನಸಿಕ ಪೂಜೆ. ಸೋಹಂ -ಎಂದು ತಿಳಿಯುವುದೇ ಅತ್ಯುತ್ತಮ ಪೂಜೆಯೆಂದು ಶಂಕರಾಚಾರ್ಯರ ಮತ.

ಧ್ಯಾನದಿಂದ ಭಗವಂತನ ಬಗ್ಗೆ ಜ್ಞಾನ ಉಂಟಾಗುತ್ತದೆ. ಜ್ಞಾನದಿಂದ ಮುಂದಿನ ಜನ್ಮ ದಲ್ಲಾದರೂ, ಈ ಕಲ್ಪದ ಕೊನೆಗಾದರೂ ಬ್ರಹ್ಮ ಜ್ಞಾನವುಂಟಾಗಿ ಅವನು ಜೀವನ್ಮುಕ್ತನಾಗುತ್ತಾನೆ -ಎಂದು ಶಂಕರಾಚಾರ್ಯರು ಹೇಳುತ್ತಾರೆ. ಅನಂತ ಜ್ಞಾನ ಐಶ್ವರ್ಯ ಶಕ್ತಿ ಬಲವೀರ್ಯ ತೇಜಸ್ಸು ಮುಂತಾದವುಗಳಿಂದ ಸದಾ ಸಂಪನ್ನನಾದ ಪರಮಾತ್ಮನು, ತ್ರಿಗುಣಾತ್ಮಕವಾದ ಮೂಲ ಪ್ರಕೃತಿಯಾದ ಮಾಯೆಯನ್ನು ವಶದಲ್ಲಿ ಇಟ್ಟುಕೊಂಡೇ ಅವತಾರ ಮಾಡುತ್ತಾನೆ. ಅವನು ನಿತ್ಯ ಶುದ್ಧ ಬದ್ಧಮುಕ್ತ ಸ್ವಭಾವವುಳ್ಳವನಾಗಿರುವುದರಿಂದ ಸ್ವಮಾಯೆಯಿಂದ ಶರೀರಿಯಂತೆ ಹುಟ್ಟಿದವನಂತೆ, ಲೋಕಾನುಗ್ರಹ ಮಾಡುವಂತೆ ಕಾಣುತ್ತಾನೆ ಅಷ್ಟೇ. ಅವನಿಗೆ ಸ್ವಪ್ರಯೋಜನ

ವಿಲ್ಲದಿದ್ದರೂ ಭೂತಾನುಗ್ರಹಕ್ಕಾಗಿ ಹೀಗೆ ಮಾಡುತ್ತಾನೆಂದು ಶಂಕರಾಚಾರ್ಯರು ಭಗವದ್ಗೀತಾ ಭಾಷ್ಯದ ಭೂಮಿಕೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.[೧]

- ಹೀಗೆ ಭಗವಂತನನ್ನು ಕುರಿತು ಭಕ್ತರು ನಿರ್ಮಲ ಮನಸ್ಸಿನಿಂದ ಉಪಾಸನ ಮಾಡುತ್ತಾರೆ. ಇಂಥ ಧ್ಯಾನ ಎಣ್ಣೆಯು ಹರಿಯುವಂತೆ ಒಂದೇ ಒಂದು ರೀತಿಯ ನಂಬಿಕೆಯನ್ನು ಮುಂದುವರೆಸುತ್ತಾ, ಒಂದೇ ಎಡೆಯಲ್ಲಿ ಬಹುಕಾಲ ಮನಸ್ಸನ್ನು ತೊಡಗಿಸುತ್ತಾರೆ.

ಭಕ್ತನು ಹೇಗೆ ಧ್ಯಾನ ಮಾಡಬೇಕೆಂಬುದರ ಬಗ್ಗೆ ಆತ್ಮ ಬೋಧದಲ್ಲಿ ಹೀಗೆ ಹೇಳಿದ್ದಾರೆ.

*ವಿವಿಕ್ತದೇಶ ಆಸೀನೋ ವಿರಾಗೋ ವಿಜಿತೇಂದ್ರಿಯಃ ।*
*ಭಾವಯೇದೇಕಮಾತ್ಮಾನಂ ತಮನನ್ತಮನನ್ಯಧೀಃ ॥*

ಅಂದರೆ ಏಕಾಂತ ಪ್ರದೇಶದಲ್ಲಿ ಕುಳಿತು ವೈರಾಗ್ಯದಿಂದ ಇಂದ್ರಿಯಗಳನ್ನು ನಿಗ್ರಹಿಸಿ ಮತ್ತಾವುದನ್ನು ಕುರಿತು ಯೋಚಿಸದೆ ಅನಂತವಾದ ಪರಮಾತ್ಮನನ್ನು ಕುರಿತು ಭಾವಿಸಬೇಕು - ಎಂದು ಸೂಚಿಸಿದ್ದಾರೆ.

ಇಂಥ ಭಕ್ತಿಗೆ ಭಗವಂತನನ್ನು ಒಲಿಸಿಕೊಳ್ಳುವ ಶಕ್ತಿ ಇರುತ್ತದೆ. ಈ ಮಾತಿಗೆ ಶಂಕರಾಚಾರ್ಯರು ಬಾಲ್ಯದಲ್ಲಿ ಮಾಡಿದ ಕನಕಧಾರಾ ಸ್ತೋತ್ರ ಸಾಕ್ಷಿಯಾಗಿದೆ.

ಕನಕಧಾರಾ ಸ್ತೋತ್ರದ ಶ್ಲೋಕಗಳು ಹೀಗಿವೆ.

*ಆದಿ :- ಅಂಗಂ ಹರೇಃ ಪುಲಕಭೂಷಣ ಮಾತ್ರಯಂತೀ ।*
*ಭೃಂಗಾಂಗನೇವ ಮುಕುಲಾಭರಣಂ ತಮಾಲಂ ॥*
*ಅಂಗೀಕೃತಖಿಲವಿಭೂತಿರಪಾಂಗ ಲೀಲಾ ।*
*ಮಾಂಗಳ್ಯದಾಸ್ತು ಮಮ ಮಂಗಳಂ ದೇವತಾಯಾಃ ॥*

*ಅಂತ್ಯ :- ಸ್ತವಂತಿ ಯೇ ಸ್ತುತಿಭರ ಮೂಭಿರನ್ವಹಂ ।*
*ತ್ರಯೀಮಯಿಂ ತ್ರಿಭುವನಮಾತಂ ರಮಾಂ ॥*
*ಗುಣಾಧಿಕಾ ಗುರಧನ ಭಾಗ್ಯಭಾಗಿನೋ ।*
*ಭವಂತಿ ತೇ ಭವ ಮನು ಭವಿಕಾಶಯಾಃ ॥*

ಶಂಕರಾಚಾರ್ಯರು ಗುರುಕುಲದಲ್ಲಿ ವಿದ್ಯಾರ್ಥಿಯಾಗಿದ್ದಾಗ ನಡೆದ ಸಂಗತಿ ಇದು. ಆಗ ಇನ್ನು ಅವರಿಗೆ ಐದು ಆರು ವಯಸ್ಸು, ಗುರುಕುಲಕ್ಕೆ ಸೇರಿದ್ದರು. ಗುರುಕುಲದ ನಿಯಮದಂತೆ ಒಂದು ದಿನ ಅವರು ಒಬ್ಬ ವೃದ್ಧೆಯ ಮನೆಗೆ ಹೋಗಿ *ಭವತಿ ಭಿಕ್ಷಾಂದೇಹಿ* - ಎಂದು ಕೂಗಿದರು. ಹೊರಗೆ ಬಂದ ವೃದ್ಧೆ ಕಣ್ಣೀರು ತುಂಬಿ "ಮಗು ನನಗೆ ನೀಡಲು ಮನೆಯಲ್ಲಿ ಏನು ಇಲ್ಲ. ನಾನು ಅಷ್ಟು ಬಡವಿ. ಏನು ಮಾಡಲಿ" - ಎಂದಳು.

"ಮನೆಯಲ್ಲಿರುವುದನ್ನೇ ನೀಡಿ ತಾಯಿ, ಸಂತೋಷದಿಂದ ಸ್ವೀಕರಿಸುತ್ತೇನೆ" - ಎಂದರು ಬಾಲಕ ಶಂಕರ.

---

೧. ಸಚ ಭಗವಾನ್ ಜ್ಞಾನೈಶ್ವರ್ಯ ಶಕ್ತಿ ಬಲವೀರ್ಯತೇ ಜೋಭಿಃ ಸದಾ ಸಂಪನ್ನಃ........... ಸ್ವಪ್ರಯೋಜನಾಭಾವೇಹಿ ಭೂತಾನು ಜಿಘೃಕ್ಷಯಾ ॥

ಅವಳು ಅದರಂತೆ ಮನೆಯಲ್ಲಿದ್ದ ಒಂದು ನಲ್ಲಿಕಾಯನ್ನು ತಂದು ಶಂಕರರಿಗೆ ನೀಡಿದಳು. ಶಂಕರರು ದಾನ ಅಕ್ಷಯವಾಗಲೆಂದು ಹರಸಿ, ಲಕ್ಷ್ಮೀದೇವಿಯನ್ನು ಆ ಬಡವಿಗೆ ಸಂಪತ್ತನ್ನು ನೀಡಲು ಪ್ರಾರ್ಥಿಸಿದರು. ಅದೇನು ಆಶ್ಚರ್ಯ? ಬಾಲಕನ ಕಲ್ಯಭಾಷೆಗೆ, ಭಕ್ತಿಗೆ ಮೆಚ್ಚಿದ ಮಹಾಲಕ್ಷ್ಮಿಯು ಆ ಬಡವಿಯು ನೀಡಿದ ನೆಲ್ಲಿಕಾಯಿಗೆ ಪ್ರತಿಯಾಗಿ ಸುವರ್ಣ ನೆಲ್ಲಿಕಾಯಿಗಳನ್ನು ವೃಷ್ಟಿಯಾಗಿ ಕರೆದಳು. ಇದು ಶಂಕರಾಚಾರ್ಯರು ತೀರಾ ಸಣ್ಣ ವಯಸ್ಸಿನಲ್ಲಿ ಮಾಡಿದ ಒಂದು ಪವಾಡ.

ಶಂಕರಾಚಾರ್ಯರು ಅದ್ವೈತ ಮತವನ್ನು ಪ್ರಚಾರ ಮಾಡಿ ವೈದಿಕ ಧರ್ಮವನ್ನು ಎತ್ತಿ ಹಿಡಿದರು. ಪ್ರಸ್ಥಾನತ್ರಯಗಳಾದ ಬ್ರಹ್ಮಸೂತ್ರ, ಗೀತಾ, ಉಪನಿಷತ್ತುಗಳಿಗೆ ಅದ್ವೈತ ಪರವಾದ ವ್ಯಾಖ್ಯಾನ ಮಾಡಿ, ಅಪೌರುಷೇಯವಾದ ವೇದಗಳ ಪಾರಮ್ಯವನ್ನು ಎತ್ತಿಹಿಡಿದರು. ಇವರ ಗುರುಗಳು ಗೋವಿಂದ ಭಗವತ್ಪಾದರು. ಅವರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಪರಮ ಗುರುಗಳಾಗಿದ್ದ ಗೌಡಪಾದರ ಸಂಪ್ರದಾಯದ ಅದ್ವೈತಾನುಸಾರ ವೇದೋಪನಿಷತ್ತುಗಳಿಗೆ ವ್ಯಾಖ್ಯಾನ ಮಾಡಿದರು. ಅನಂತರ ತಮ್ಮ ಅದ್ವೈತ ಮತ ಪ್ರಚಾರಕ್ಕಾಗಿ ನಾಲ್ಕು ಜನ ಶಿಷ್ಯರಿಗೆ ಆಶ್ರಮವಿತ್ತು ದೇಶದಲ್ಲಿ ಚತುರ್ ಅಮ್ನಾಯ ಪೀಠಗಳನ್ನು ಸ್ಥಾಪಿಸಿ, ತಮ್ಮ ಅವತಾರ ಕಾರ್ಯ ಮುಗಿಯುತ್ತಲೇ ಕೇದಾರದಲ್ಲಿ ಗುಹಾಪ್ರವೇಶ ಮಾಡಿದರು.

ಶಂಕರಾಚಾರ್ಯರು ಪ್ರಚಾರ ಮಾಡಿದ ಅದ್ವೈತದ ತಿರುಳು ಇದು.

೧) ವಿಶ್ವವಾಗಲೀ, ಜೀವವಾಗಲಿ ವ್ಯಾವಹಾರಿಕವಾಗಿ ಮಿಥ್ಯೆಯಲ್ಲಿದಿದ್ದರೂ ಪಾರಮಾರ್ಥಿಕವಾದ ಸತ್ಯ ಬ್ರಹ್ಮ ಒಂದೇ. ಅದಕ್ಕೆ ಭಿನ್ನವಾದ ಪ್ರಕೃತಿಯಾಗಲೀ, ಜೀವವಾಗಲೀ ಇರುವುದಿಲ್ಲ.

೨) ಆ ಬ್ರಹ್ಮ ತಮಸ್ಸು, ರಜಸ್ಸು, ಸತ್ವವೆಂಬ ಮೂರು ಗುಣಗಳಿಂದ ಅತೀತ. ಯಾವ ಕಳಂಕವು ಇಲ್ಲದ ವಸ್ತು. ಸತ್‌ಚಿತ್ ಆನಂದ ರೂಪಗಳೂ ಕೂಡ ಅದರ ಮಹಿಮೆಯನ್ನು ತಿಳಿಸಲಾರವು.

೩) ಇದರಲ್ಲಿ ಅಂತರ್ಗತವಾದ ಅದ್ಭುತ ಶಕ್ತಿ ಮಾಯೆ.

೪) ಈ ಮಾಯೆಯೇ ಸದ್ಗುಣ ಬ್ರಹ್ಮ - ಜಗತ್ತು ಜೀವ ಭೇದಗಳ ಹುಟ್ಟಿಗೆ ಕಾರಣ.

೫) ಈ ಭೇದವನ್ನು ಹರಿಸುವುದಕ್ಕೂ ಅದೇ ಕಾರಣ; ಬಂಧನಕ್ಕೂ ಕಾರಣ. ಮೋಕ್ಷಕ್ಕೂ ಕಾರಣ. ಇದನ್ನು ತಿಳಿಯುವುದೇ ವಿದ್ಯೆ ; ಇದನ್ನು ತಿಳಿಯದಿರುವುದೇ ಅವಿದ್ಯೆ.

ಈ ಪ್ರಮೇಯಗಳನ್ನು ಅವರು ತಮ್ಮ ಅದ್ವೈತ ಗ್ರಂಥಗಳಾದ ಪ್ರಸ್ಥಾನತ್ರಯ ಭಾಷ್ಯಗಳಲ್ಲೂ, ಇತರ ಪ್ರಕರಣ ಗ್ರಂಥಗಳಲ್ಲಿ ಪ್ರತಿಪಾದಿಸಿದರು. ಇವುಗಳಲ್ಲಿ ಅದ್ವೈತಾನುಭೂತಿ, ಆತ್ಮಭೋದೆ, ಉಪದೇಶ ಸಹಸ್ರ, ತತ್ವಬೋಧೆ, ನಿರ್ವಾಣ ಷಟ್ಕ, ಯೋಗತಾರಾವಳಿ, ವಿವೇಕ ಚೂಡಾಮಣಿ -ಮುಂತಾದ ಗ್ರಂಥಗಳು ಮುಖ್ಯವಾದವು.

ಶಂಕರಾಚಾರ್ಯರು ಕೇವಲ ಜ್ಞಾನಿಗಳು ಮಾತ್ರವಾಗಿರಲಿಲ್ಲ. ಅವರು ಅನುಭವಿಗಳೂ ಆಗಿದ್ದರು. ಅವರು ಭಕ್ತಿಯೋಗವು ಜ್ಞಾನಯೋಗಕ್ಕೆ ಪೂರಕವೆಂದು ತಿಳಿದಿದ್ದರು. ಪಾಮರರ ಸಲುವಾಗಿ ಎಲ್ಲರಿಗೂ ಅರ್ಥವಾಗುವ ಅತ್ಯಂತ ರಮಣೀಯವಾದ ಸ್ತೋತ್ರಗಳನ್ನು ರಚಿಸಿ,

ಸ್ತೋತ್ರ ಸಾಹಿತ್ಯಕ್ಕೆ ಪಿತಾಮಹರಾದರು. ಇವರು ಶಿವಾನಂದ ಲಹರಿ, ದಕ್ಷಿಣಾಮೂರ್ತಿ ಸ್ತೋತ್ರ ಮೊದಲಾದ ಶಿವಸ್ತೋತ್ರಗಳನ್ನೂ, ಸೌಂದರ್ಯಲಹರಿ, ಆನಂದಲಹರಿ, ಅನ್ನಪೂರ್ಣಾಷ್ಟಕ, ಮೀನಾಕ್ಷಿ ಸ್ತೋತ್ರ, ಲಲಿತಾ ಪಂಚರತ್ನ- ಮುಂತಾದ ದೇವೀಸ್ತೋತ್ರಗಳನ್ನೂ, ನದಿತೀರ್ಥ ಗಳನ್ನೂ ಕುರಿತು ಗಂಗಾಷ್ಟಕ, ಯಮುನಾಷ್ಟಕ ಮುಂತಾದ ಸ್ತೋತ್ರಗಳನ್ನು ಯುಗಳದೇಹಗಳನ್ನು ಕೊಂಡಾಡುವ ಉಮಾಮಹೇಶ್ವರ ಅರ್ಧನಾರೀಶ್ವರಾಷ್ಟಕ, ಲಕ್ಷ್ಮೀನೃಸಿಂಹ ಕರಾವಲಂಬ ಸ್ತೋತ್ರಗಳನ್ನೂ ರಚಿಸಿದ್ದಾರೆ.

ಇವರು ವಿಷ್ಣು ಪರವಾಗಿ ವಿಷ್ಣುಭುಜಂಗ ಪ್ರಯಾತ, ಕೃಷ್ಣಾಷ್ಟಕ, ವಿಷ್ಣುಪದಾದಿ ಕೇಶಾಂತ ಅಚ್ಯುತಾಷ್ಟಕ, ರಾಮಭುಜಂಗ ಪ್ರಯಾತ, ಪಾಂಡುರಂಗಾಷ್ಟಕ, ಭಗವನ್ಮಾನಸಪೂಜಾ, ಗೋವಿಂದಾಷ್ಟಕ, ಜಗನ್ನಾಥಾಷ್ಟಕ ಮತ್ತು ಹರಿಮೀಡೇ ಸ್ತೋತ್ರಗಳನ್ನು ರಚಿಸಿ, ಭಕ್ತಿ ಮಾರ್ಗದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. ಅವರು ಈ ಸ್ತೋತ್ರಗಳಲ್ಲಿ ಭಗವಂತನ ನಾಮಸ್ಮರಣೆಯಿಂದ ಭವರೋಗವಾದ ಸಂಸಾರದಿಂದ ಬಿಡುಗಡೆಯಾಗುವುದೆಂಬ ಸಂಗತಿಯನ್ನು ಒತ್ತಿ ಹೇಳಿದ್ದಾರೆ.

ಅವರು ಬರೆದಿರುವ *ಭಜಗೋವಿಂದಂ* ಎಂಬ ಸ್ತೋತ್ರ ಮೋಹಮುದ್ಗರವೆಂಬ ಹೆಸರಿನಲ್ಲಿ ವೇದಾಂತದ ತಿರುಳನ್ನು ಅತ್ಯಂತ ಪರಿಣಾಮಕಾರಿಯಾಗಿ ಅಬಾಲವೃದ್ಧರಿಗೂ ತಿಳಿಯುವಂತೆ ನೀಡಿದ್ದಾರೆ. ಇದರ ಹದಿನಾಲ್ಕು ಶ್ಲೋಕಗಳನ್ನು ಅವರ ಶಿಷ್ಯರು ಹೇಳಿದರೆಂಬ ಪ್ರತೀತಿ ಇದೆ. ಈ ಸ್ತೋತ್ರದಲ್ಲಿ ಮೂವತ್ತೆರಡು ಶ್ಲೋಕಗಳಿವೆ ಎಂದು ವಿದ್ವಾಂಸರು ಹೇಳುತ್ತಾರೆ.

"ಶಂಕರರು ಮಾಯೆಯೆಂಬ ಸಾಗರವನ್ನು, ಸಾಗು ಭೂಮಿಯಲ್ಲಿರುವ ಒಂದು ಚಿಕ್ಕ ಕಾಲುವೆಯನ್ನು ದಾಟುವಷ್ಟು ಸುಲಭವಾಗಿ ದಾಟಿದರು. ಆತ್ಮಜ್ಞಾನವನ್ನು ಬೋಧಿಸಲು ಅವರು ಅನೇಕ ವೇದಾಂತ ಗ್ರಂಥಗಳನ್ನು ಬರೆದರು. ಜನರ ಹೃದಯದಲ್ಲಿ ಭಕ್ತಿ ಭಾವನೆಯನ್ನು ಬೆಳೆಸಲು ಅನೇಕ ಸ್ತೋತ್ರಗಳನ್ನು ರಚಿಸಿದರು. ಇದನ್ನು ಅವರು ಮಾಡಿದ ಅತಿ ದೊಡ್ಡ ಸೇವೆಯೆಂದು ಪರಿಗಣಿಸುತ್ತೇನೆ"- ಎಂಬುದಾಗಿ ರಾಜಗೋಪಾಲಾಚಾರಿ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಶಂಕರಾಚಾರ್ಯರ ಅಭಿಮತದಂತೆ ವಿವೇಕವು ಜೀವನದೊಂದಿದೆ ಬೆರೆತು ಕಾರ್ಯದಲ್ಲಿ ತೊಡಗಿದಾಗ ಭಕ್ತಿಯಾಗುವುದು. ಪಕ್ವವಾದ ಜ್ಞಾನವು ಭಕ್ತಿ. ಜ್ಞಾನವು ಭಕ್ತಿಯ ರೂಪಕ್ಕೆ ಪರಿವರ್ತನೆಯಾಗದಿದ್ದರೆ ಅಂಥ ಜ್ಞಾನ ಉಪಯೋಗವಿಲ್ಲದ ತಳಕು ಎನ್ನುತ್ತಾರೆ ಅವರು. ಜ್ಞಾನ ಭಕ್ತಿಗಳು ಒಂದೇ ಎಂದು ತೋರಿಸಲು ಭಜಗೋವಿಂದ ಸ್ತೋತ್ರವನ್ನು ರಚಿಸಿದ್ದಾರೆ. ಇದರಲ್ಲಿ ವೇದಾಂತದ ಸಾರವನ್ನು, ಭಕ್ತಿ ಜ್ಞಾನಗಳ ಮೇಳವನ್ನು ಕಿವಿಗೆ, ಭಾವಕ್ಕೆ, ಬುದ್ಧಿಗೆ ಆಹ್ಲಾದವನ್ನುಂಟುಮಾಡುವ ರೀತಿಯಲ್ಲಿ ಈ ಸೋತ್ರದಲ್ಲಿ ಶಂಕರರು ನೀಡಿದ್ದಾರೆಂದು ರಾಜಾಜಿ ಅಭಿಪ್ರಾಯಪಟ್ಟಿದ್ದಾರೆ.

*ಭಜ ಗೋವಿದಂ ಭಜ ಗೋವಿಂದಂ*
*ಗೋವಿಂದಂ ಭಜ ಮೂಢಮತೇ ।*
*ಸಂಪ್ರಾಪ್ತೇ ಸನ್ನಿಹಿತೇ ಕಾಲೇ (ಮರಣೇ)*
*ನ ಹಿ ನಹಿ ರಕ್ಷತಿ ಪ್ರಕೃಜ ಕರಣೇ ॥*

-ಎಂದು ಆರಂಭಿಸಿ, ಜ್ಞಾನಕ್ಕೆ ಕಾರಣವಾಗುವ ವ್ಯಾಕರಣಾದಿಗಳ ಅಭ್ಯಾಸದಿಂದ ಜನನ ಮರಣ ಹೇತುವಾದ ಅಜ್ಞಾನವನ್ನು ಕಳೆದುಕೊಳ್ಳಲು ಸಾಧ್ಯವಿಲ್ಲವೆಂದೂ, ಗೋವಿಂದನಲ್ಲಿ ಮಾಡುವ ಭಕ್ತಿಯೊಂದೇ ಮುಕ್ತಿಗೆ ಮಾರ್ಗವೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಶಂಕರಾಚಾರ್ಯರು ಸಾರವಿಲ್ಲದ ಸಂಸಾರಕ್ಕೆ ಅಂಟಿಕೊಳ್ಳಬೇಡ, ನಿನ್ನ ಒಲವಿಗೆ ಪಾತ್ರವಾಗಬೇಕಾದ ಒಂದೇ ವಸ್ತುವೆಂದರೆ ಗೋವಿಂದನ ಪಾದಗಳು. ಅದಕ್ಕೆ ಅಂಟಿಕೊಂಡು ಭವಸಮುದ್ರವನ್ನು ದಾಟು- ಎಂದು ಉಪದೇಶ ನೀಡಿದ್ದಾರೆ.

*ಸತ್ಸಂಗತ್ವೇ ನಿಸ್ಸಂಗತ್ವಂ*
*ನಿಸ್ಸಂಗತ್ವೇ ನಿರ್ಮೋಹತ್ವಂ*
*ನಿರ್ಮೋಹತ್ವೇ ನಿಶ್ಚಲಚಿತ್ತಂ*
*ನಿಶ್ಚಲಚಿತ್ತೇ ಜೀವನ್ಮುಕ್ತಿಃ*

- ಎಂದು ಮುಕ್ತಿಯ ಸೂತ್ರವನ್ನು ಸರಳವಾಗಿ ತಿಳಿಸಿದ್ದಾರೆ.

ಮುಕ್ತಿ ಪಡೆಯಬೇಕಾದರೆ ಸಾಧು ಸಜ್ಜನರ ಸಂಗದಲ್ಲಿ ಸಾಧ್ಯವೆನ್ನುತ್ತಾರೆ. ದೈವಭಕ್ತರ ಸಹವಾಸವನ್ನು ಮಾಡಬೇಕು. ನಂಬಿಕೆ ಇಲ್ಲದವರ ಸಹವಾಸ ಬಿಡಬೇಕು. "ನನ್ನ ಭಗವಂತನು ನನ್ನ ಹೃದಯ ತನ್ನ ಭಕ್ತಿಯಿಂದ ತುಂಬಿದನು"- ಎಂಬ ಭಾವದಿಂದ ಮೋಹ ನಾಶವಾಗುತ್ತದೆ.

ಭಕ್ತಿ ಇಲ್ಲದವರಿಗಾಗಿ ನಾವು ವಿಷಾದಪಡಬೇಕು. ನಿಜವಾದ ವೈಷ್ಣವನು ಯಾರೆಂದರೆ ಯಾರು ತನ್ನನ್ನು ತಾನು ತಿಳಿದುಕೊಳ್ಳಬಲ್ಲನೋ, ಯಾರಿಗೆ ಇತರರ ಕಷ್ಟಗಳಿಂದ ಅವನಿಗೆ ದುಃಖ ವಾಗುವುದೋ ಅವನೇ ನಿಜವಾದ ವೈಷ್ಣವ- ಎನ್ನುತ್ತಾರೆ ಒಂದು ವೈಷ್ಣವ ಗ್ರಂಥದಲ್ಲಿ.

ಭಗವಂತನಾದ ಗೋವಿಂದನನ್ನು ಆರಾಧಿಸಲು ಕಾಲವಿಲ್ಲವೆನ್ನುತ್ತಾರೆ. ಲೋಕದ ಜನ ಬಾಲ್ಯದಲ್ಲಿ ಕ್ರೀಡೆ, ಯೌವನದಲ್ಲಿ ಸ್ತ್ರೀಮೋಹ, ವೃದ್ಧಾಪ್ಯದಲ್ಲಿ ಚಿಂತೆ, ಇನ್ನು ಗೋವಿಂದಸ್ಮರಣೆಗೆ ಕಾಲವೆಲ್ಲಿ? ಆದರೆ ಈ ದಾರಾ ಪುತ್ರಾದಿಗಳು ಎಲ್ಲಿಯತನಕ ಜತೆಗೆ ಬರುತ್ತಾರೆ? ಇಹ ಲೋಕದಲ್ಲಿದ್ದಾಗ ಅವರು ಬಂಧುಗಳು. ಪರಲೋಕಕ್ಕೆ ಅವನ ಪಾಪಪುಣ್ಯಗಳು ಮಾತ್ರ ಬಂದಾವು, ಅಷ್ಟೇ. ಆದುದರಿಂದಲೇ ದೃಢ ಭಕ್ತಿಯನ್ನು ಒತ್ತಿ ಹೇಳುತ್ತಾರೆ.

*ಭಗವದ್ಗೀತಾ ಕಿಂಚಿದಧೀತಾ*
*ಗಂಗಾಜಲಲವ ಕಣಿಕಾಪೀತಾ ।*
*ಸಕೃದಪಿ ಯೇನ ಮುರಾರಿ ಸಮರ್ಚಾ*
*ಕ್ರಿಯತೇ ತಸ್ಯ ಯಮೇನನ ಚರ್ಚಾ ॥*

ನೀನು ಮುರಾರಿಯನ್ನು ಅಂದರೆ ಗೋವಿಂದನನ್ನು ಭಕ್ತಿಯಿಂದ ಆಗಾಗ್ಗೆ ಯಾದರೂ ಪೂಜಿಸಿದರೆ ಮುಕ್ತಿಯನ್ನು ಹೊಂದುವೆ - ಎನ್ನುತ್ತಾರೆ ಶಂಕರಾಚಾರ್ಯರು. ಈ ಶ್ಲೋಕದಲ್ಲಿ ಅವರು ಭಕ್ತಿ, ವಿವೇಕ ಹಾಗೂ ವ್ರತ ನಿಯಮಗಳನ್ನು ಕುರಿತು ಹೇಳಿದ್ದಾರೆ. ಕಿಂಚಿತ್ ಅಧಿತಾ ಅಂದರೆ ಸ್ವಲ್ಪವನ್ನಾದರೂ ಓದು, ಒಂದು ತೊಟ್ಟು ಗಂಗೆಯನ್ನಾದರೂ ಕುಡಿ, ಯಾವುದಾದರೂ ಒಂದು ಕ್ಷಣ ಕಾಲವಾದರೂ ಗೋವಿಂದನ ನಾಮಸ್ಮರಣೆ ಮಾಡು, ಆಗ ನೀನು ಮೃತ್ಯು ಪಾಶದಿಂದ

ಬಿಡುಗಡೆಯಾಗುತ್ತಿ - ಎಂದು ಭರವಸೆಯ ಮಾತಾಡಿದ್ದಾರೆ.

ತಮಿಳುನಾಡಿನ ವೈಷ್ಣವ ಕವಿಗಳೂ ಇದೇ ಭಾವಗಳನ್ನು ವ್ಯಕ್ತ ಪಡಿಸಿದ್ದಾರೆ. ಭಗವಂತನು ದ್ವೇಷಗಳನ್ನು ಲೆಕ್ಕಿಸದೆ ಗುಣಗಳನ್ನು ಮೆಚ್ಚುವನು. ತನ್ನನ್ನು ಶರಣು ಹೋಗುವವರ (ಭವ) ರೋಗವನ್ನು ಗುಣಪಡಿಸುವನು, ಅವನು ವೀಣೆಯ ಗಾನದಂತೆ ಮಧುರನು.

ಕೊನೆಗೆ ಶಂಕರರು ಹೀಗೆ ಪರಮಾತ್ಮನಲ್ಲಿ ಬೇಡಲು ಜೀವರಿಗೆ ಹೇಳುತ್ತಾರೆ.

*" ಪುನರಪಿ ಜನನಂ ಪುನರಪಿ ಮರಣಂ*
*ಪುನರಪಿ ಜನನೀ ಜಠರೇ ಶಯನಮ್*
*ಇಹ ಸಂಸಾರೇ ಬಹುದುಸ್ತಾರೇ*
*ಕೃಪೆಯಾऽ ಪಾರೇ ಪಾಹಿ ಮುರಾರೇ ॥*

ಈ ಜನನ ಮರಣದ ಸಂಸಾರದಿಂದ ಬಿಡುಗಡೆ ಹೊಂದಬೇಕಾದರೆ ಪರಮಾತ್ಮನ ಕೃಪೆಯಿಂದ ಮಾತ್ರ. ಅವನ ಅನುಗ್ರಹವಿಲ್ಲದ ಬೇರೆ ಯಾವುದೂ ನಮ್ಮನ್ನು ಕಾಪಾಡಲಾರದು. ನಾವು ಮುರಾರಿಯನ್ನು ಪೂಜಿಸಿ ಅವನ ಅನುಗ್ರಹವನ್ನು ಯಾಚಿಸೋಣ. ಅವನು ನಮ್ಮನ್ನು ರಕ್ಷಿಸುತ್ತಾನೆ. ಈ ಮಾತಿನ ಹಿಂದೆ *ಸರ್ವಧರ್ಮಾನ್ ಪರಿತಜ್ಯ ಮಾಮೇಕಂ ಶರಣಂವ್ರಜ* - ಎಂಬ ಭಗವಂತನ ವಾಣಿ ನೆನಪಿಗೆ ಬರುತ್ತದೆ. ಇಂಥ ಏಕಮೇವಾದ್ವಿತೀಯನಾದ ವಿಷ್ಣುವನ್ನು ಶರಣು ಬಾ -ಎನ್ನುತ್ತಾರೆ ಶಂಕರರು.

ಸಂಸಾರದಿಂದ ಬಿಡುಗಡೆಯ ದಾರಿಯನ್ನು ಅವರು ಪಾಮರರಿಗೆ ಸೂಚಿಸುತ್ತಾರೆ. ಅವರದು ಅದೆಂಥಹ ಕರುಣೆ?

*ಗೇಯಂ ಗೀತಾನಾಮ ಸಹಸ್ರಂ*
*ಧ್ಯೇಯಂ ಶ್ರೀಪತಿ ರೂಪಮಜಸ್ರಮ್ ।*
*ನೇಯಂ ಸಜ್ಜನ ಸಂಗೇ ಚಿತ್ತಂ*
*ದೇಯಂ ದೀನ ಜನಾಯಚ ವಿತ್ತಮ್ ॥*

ಗೀತೆಯಲ್ಲಿ ಹೇಳಿರುವ ಭಗವಂತನಾದ ಶ್ರೀಹರಿಯ ಸಾವಿರ ನಾಮಗಳನ್ನು ಹಾಡಿ ಕೀರ್ತನೆ ಮಾಡು. ಲಕ್ಷ್ಮೀಪತಿಯನ್ನು ಬಿಡದೆ ಎಡಬಿಡದೆ ಧ್ಯಾನಿಸು. ಮನಸ್ಸನ್ನು ಸಜ್ಜನರ ಸಂಗಕ್ಕೆ ತಿರುಗಿಸು. ನಿನ್ನ ಸಂಪತ್ತನ್ನು ದೀನರಿಗೆ ಧಾರೆ ಎರೆ. ಎಂಥ ಭವ್ಯವಾದ ಉಪದೇಶಾಮೃತ.

ಭಜಗೋವಿಂದಂ ಸ್ತೋತ್ರದ ಕಡೆಯಲ್ಲಿ ಶಂಕರಾಚಾರ್ಯರು ಹೇಳುತ್ತಾರೆ.

*ಗುರು ಚರಣಾಮ್ಬುಜನಿರ್ಭರ ಭಕ್ತಃ*
*ಸಂಸಾರರಚಿರಾದ್ಭವ ಮುಕ್ತ ।*
*ಸೇಂದ್ರಿಯ ಮಾನಸ ನಿಯಮಾಗೇನಂ*
*ದ್ರಷ್ಯಸಿ ನಿಜಹೃದಯಸ್ಥಂ ದೇವಮ್ ॥*

ಗುರುವನ್ನು ಆಶ್ರಯಿಸು, ಅವನನ್ನು ನಂಬು, ಅವನ ಉಪದೇಶದಂತೆ ನಡೆ. ಆಗ ನೀನು ಸಂಸಾರ ಸಮುದ್ರವನ್ನು ಗೋವಿಂದನಾಮವೆಂಬ ತೆಪ್ಪದ ಸಹಾಯದಿಂದ ಸುಲಭವಾಗಿ ದಾಟಬಲ್ಲೆ ಎನ್ನುತ್ತಾರೆ ಶಂಕರಾಚಾರ್ಯರು.

ಶಂಕರಾಚಾರ್ಯರು ಹೃದಯಸ್ಥನಾದ ಭಗವಂತನು ಕೈಲಿರುವ ಲಾಂದ್ರದಂತೆ ಕಾಯುತ್ತಾನೆ ಎಂದು ಹೇಳುತ್ತಾರೆ. ಜ್ಞಾನದ ಬೆಳಕಿನಲ್ಲಿ ಅವನು ಗೋಚರಿಸುತ್ತಾನೆ. ಆಗ ಮಾಯೆಯ ತೆರೆ ಹರಿಯುತ್ತದೆ. ಅವನು ಜೀವನ್ಮುಕ್ತನಾಗುತ್ತಾನೆ ಎನ್ನುತ್ತಾರೆ. ಇದನ್ನೇ ಶ್ರೀಮಧ್ವಾಚಾರ್ಯರು ಹೃದಯವಾಸಿಯಾದ ಭಗವಂತನ ಅಪರೋಕ್ಷ ಜ್ಞಾನವಾದ ಕೂಡಲೇ ಸಂಶಯದ ಗ್ರಂಥಗಳು ಬಿಚ್ಚಿ ಅವನಿಗೆ ಸ್ವಾಮಿಯಾಗಿ ಕಾಣುತ್ತಾನೆ- ಅವನ ಉಪಾಸನೆಯಿಂದ ಅನುಗ್ರಹವಾಗುತ್ತದೆ. ಈ ಭಕ್ತಿಯಿಂದ ಮುಕ್ತನಾಗುತ್ತಾನೆ ಎಂದು ಹೇಳಿದ್ದಾರೆ.

## ೧೪

ಶಂಕರಾಚಾರ್ಯರು ಭಕ್ತಿಯಿಂದ ಉಂಟಾಗುವ ಜ್ಞಾನ ವೈರಾಗ್ಯಗಳಿಂದ ಜೀವನ್ಮುಕ್ತಿ ದೊರಕುವುದೆಂದು ಹೇಳಿದರೆ, ರಾಮಾನುಜಾಚಾರ್ಯರು ಭಕ್ತಿ ಪ್ರಪತ್ತಿಗಳಿಂದಲೇ ಮುಕ್ತಿ ದೊರಕುವುದೆಂದು ತಿಳಿಸುತ್ತಾರೆ. ಅವರ ಸಿದ್ಧಾಂತಕ್ಕೆ ವಿಶಿಷ್ಟಾದ್ವೈತವೆಂದು ಹೆಸರು. ಇವರು ಶಂಕರಾಚಾರ್ಯರಂತೆ ಜಗತ್ತು ಭ್ರಮಾಧೀನವೆಂದು ಹೇಳುವುದಿಲ್ಲ. ಜಗತ್ತು ಸತ್ಯ. ಭಗವಂತನೂ ಸತ್ಯ. ಅವನ ಅನುಗ್ರಹಕ್ಕೆ ಭಕ್ತಿಯಿಂದ ಪ್ರಾಪ್ತವಾಗುವ ಶರಣಾಗತಿಯೇ ದಾರಿ. ಆದರೆ ಜಗಜ್ಜನನಿಯಾದ ಲಕ್ಷ್ಮೀದೇವಿಯ ದ್ವಾರಾ ಭಗವಂತನ ಅನುಗ್ರಹವಾಗಿ ಮುಕ್ತನಾದ ಜೀವನು ಮುಕ್ತಿಯ ದೆಸೆಯಲ್ಲಿ ಭಗವಂತನಲ್ಲಿ ಅದ್ವೈತ ಆನಂದವನ್ನು ಅನುಭವಿಸುವನು- ಎಂದು ತಿಳಿಸುತ್ತಾರೆ. ಹೀಗಾಗಿ ಅವರದು ವಿಶಿಷ್ಟಾದ್ವೈತ.

ರಾಮಾನುಜಾಚಾರ್ಯರು ತಮಿಳುನಾಡಿನ ಪೆರಂಬದೂರಿನಲ್ಲಿ ಜನ್ಮತಾಳಿದರು. ಇವರು ಆಳ್ವಾರರು ಪ್ರತಿಪಾದಿಸಿದ ಸಿದ್ಧಾಂತವನ್ನು ವಿಷ್ಣು ಭಕ್ತಿಯನ್ನು ಎತ್ತಿ ಹಿಡಿದರು ; ಇದಕ್ಕೆ ಪ್ರಪತ್ತಿ ಮಾರ್ಗವನ್ನು ಜೋಡಿಸಿದರು.

ತಮಿಳುನಾಡಿನ ವೈಷ್ಣವ ಭಕ್ತರನ್ನು ಆಳ್ವಾರರೆಂದು ಕರೆಯುತ್ತಾರೆ. ಇವರು ವೇದಾಗಮಗಳಲ್ಲಿ ಪ್ರೋಕ್ತವಾದ ವೈಷ್ಣವ ಭಕ್ತಿಯನ್ನು ಸುಲಭವಾಗಿ, ಜನಸಾಮಾನ್ಯರಿಗೂ ತಿಳಿಯುವಂಥ ತಮಿಳು ಭಾಷೆಯಲ್ಲಿ ಸ್ತೋತ್ರ ರೂಪವಾಗಿ ರಚಿಸಿ, ಆ ಮೂಲಕ ಜನಸಾಮಾನ್ಯರಲ್ಲಿ ವೈಷ್ಣವ ಭಕ್ತಿಯನ್ನು ಬೆಳೆಸಲು ನೆರವಾದರು. ಈ ಮೊದಲು ದಕ್ಷಿಣ ದೇಶದಲ್ಲಿ ಜೈನ ಬೌದ್ಧ ಧರ್ಮಗಳು ಪ್ರಸಿದ್ಧವಾಗಿದ್ದವು. ಅನಂತರ ವೈದಿಕ ಶೈವ ಧರ್ಮವು ಅದನ್ನು ಮೂಲೆಗೊತ್ತಿ ಜನರಲ್ಲಿ ಆಸ್ತಿಕತೆಯನ್ನು ಬೆಳೆಸಿತು. ಅರವತ್ತಮೂರು ಪುರಾತನರೆಂಬ ಹೆಸರಿನಲ್ಲಿ ಪುರಾತನ ಶೈವಭಕ್ತರು ಶಿವನನ್ನು ಸರ್ವೋತ್ತಮನೆಂದು ಸ್ವೀಕರಿಸಿ, ಶೈವಭಕ್ತಿ ಪಂಥವನ್ನು ವೇದಾಗಮಗಳ ಮೇಲೆ ನಿಲ್ಲಿಸಲು ಪ್ರಯತ್ನಿಸಿದರು. ಇವರಿಗೆ ನಾಯನ್ಮಾರರೆಂದು ಕರೆಯುತ್ತಾರೆ. ಅವರು ಶಿವನಿಗೆ ನೀಡಿದ ಸ್ಥಾನವನ್ನು ಅಂದರೆ ಸರ್ವೋತ್ತಮ ಪದವಿಯನ್ನು ವೈಷ್ಣವ ಸಂತರಾದ ಆಳ್ವಾರರು ಶ್ರೀವಿಷ್ಣುವಿಗೆ ನೀಡಿ, ಸುಂದರವಾದ, ಭಕ್ತಿಭಾವದಿಂದ ತುಂಬಿ ಹರಿಯುವ ವೈಷ್ಣವ ಪ್ರಬಂಧಗಳನ್ನು ರಚಿಸಿ, ಆ ಮೂಲಕ ತಮ್ಮ ಭಕ್ತಿಗಂಗೆಯನ್ನು ನಾಡಿನಲ್ಲೆಲ್ಲಾ ಹರಿಯುವಂತೆ ಮಾಡಿದರು. ಈ ಆಳ್ವಾರರಲ್ಲಿ ಹನ್ನೆರಡು ಜನರು ಐತಿಹಾಸಿಕ ವ್ಯಕ್ತಿಗಳೆಂದು ಪರಿಗಣಿತರಾಗಿದ್ದಾರೆ. ಅವರ ಭಕ್ತಿಯ ಪರಿಚಯವನ್ನು ಇಲ್ಲಿ ಸ್ಥೂಲವಾಗಿ ಮಾಡಿಕೊಡಲಾಗಿದೆ.

ಆಳ್ವಾರರೆಂದರೆ ಮುಳುಗಿದವರೆಂದು ಅರ್ಥ. ಇವರು ಲೌಕಿಕ ವಿಷಯಗಳಲ್ಲಿ ಮುಳುಗದೆ, ಭಕ್ತಿ ಎಂಬ ಭಾಗೀರಥಿಯಲ್ಲಿ ಮುಳುಗಿ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡರು. ಇವರ ರಚನೆಗಳನ್ನು ದಿವ್ಯ ಪ್ರಬಂಧಗಳೆಂದೂ, ಪಾಶುರಗಳೆಂದೂ ಕರೆಯುತ್ತಾರೆ. ಈ ಕೃತಿಗಳು, ಜನತೆಯಲ್ಲಿ ಎಷ್ಟರ ಮಟ್ಟಿಗೆ ಪ್ರಭಾವ ಬೀರಿತೆಂದರೆ ಸಂಸ್ಕೃತಕ್ಕೆ ದೊರತಷ್ಟೇ ಗೌರವ ಈ ಪ್ರಾಕೃತ ಭಾಷೆಗೂ ಲಭ್ಯವಾಯಿತು. ಇದರಿಂದ ತಮಿಳು ಭಾಷೆಯು ಪರಿಪುಷ್ಟವಾಗಿ ಬೆಳೆದುದಲ್ಲದೆ ಭಕ್ತಿ ಸಾಹಿತ್ಯಕ್ಕೆ ಜೀವಕಳೆ ಬಂದಂತಾಯಿತು. ಆಳ್ವಾರರ ಪ್ರಬಂಧಗಳನ್ನು ನಾಲಾಯರ ಪ್ರಬಂಧಗಳೆಂದೂ, ದ್ರಾವಿಡ ವೇದವೆಂದೂ, ದ್ರಾವಿಡೋಪನಿಷತ್ತುಗಳೆಂದೂ ಕರೆದು ಗೌರವಿಸುತ್ತಾರೆ.

ಆಳ್ವಾರರನ್ನು ಹನ್ನೆರಡು ಜನರೆಂದು ಗುರುತಿಸುತ್ತಾರೆ. ಸಾಂಪ್ರದಾಯಿಕವಾಗಿ ಕ್ರಿಸ್ತಪೂರ್ವ ಮೂರು ನಾಲ್ಕು ಸಾವಿರ ವರ್ಷಗಳ ಹಿಂದಿನವರೆಂದು ಜನರು ನಂಬುತ್ತಾರಾದರೂ, ಚರಿತ್ರೆಯ ದೃಷ್ಟಿಯಿಂದ ಇವರು ಕ್ರಿ.ಶ. ಏಳನೇ ಶತಮಾನದಿಂದ ಒಂಭತ್ತನೇ ಶತಮಾನದ ಅಂತರದಲ್ಲಿ ಇವರು ಜೀವಿಸಿದ್ದರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಆಳ್ವಾರರು ಭಾಗವತ ಮತದ ಅನುಯಾಯಿಗಳು. ಇವರ ಮತಕ್ಕೆ ಪಂಚರಾತ್ರವು ಆಧಾರ ಗ್ರಂಥ. ಇದನ್ನು ಪಂಚರಾತ್ರಾಗಮದ ಮತವೆಂದೂ, ಏಕಾಂತಿಕ ಪ್ರಪತ್ತಿಗಳ ಮತವೆಂದೂ ಕರೆಯುವುದುಂಟು.[೧] ಇದನ್ನು ಸಾತ್ವತ ಮತವೆಂದು ಹೇಳುತ್ತಾರೆ. ಇದರಲ್ಲಿ ಏಕದೇವೋಪಾಸನೆ, ದೇವತಾಂತರ ಪರಿತ್ಯಾಗ, ಭಕ್ತಿ, ಪ್ರಪತ್ತಿಗಳ ಪಾರಮ್ಯ, ಭಗವಂತನು ಪ್ರೇಮ ಪೂರಿತನು, ಕೃಪಾಪರಿಪೂರ್ಣನು, ಜಾತಿಕುಲ ಸ್ತ್ರೀಪುರುಷ ಭೇದಗಳಿಲ್ಲದೆ ಎಲ್ಲರಿಗೂ ಒಲಿಯುವನು ಎಂಬ ನಂಬಿಕೆ – ಇವು ಅದರ ಮುಖ್ಯ ತತ್ವಗಳು.[೨]

ಭಾಗವತ ಸಂಪ್ರದಾಯವು ಬಹು ಪ್ರಾಚೀನ ಮತವು. ಆಳ್ವಾರರು ಬೋಧಿಸಿದ್ದು ಈ ಮತವನ್ನೆ. ಭಾಗವತ ಧರ್ಮಕ್ಕೆ ಪ್ರಮಾಣ ಗ್ರಂಥಗಳಾದ ಪಂಚರಾತ್ರಾಗಮಗಳು, ಮಹಾಭಾರತ, ಶಾಂತಿ ಪರ್ವದ ನಾರಾಯಣೀಯ, ಭಗವದ್ಗೀತೆ, ಭಾಗವತ ಪುರಾಣ, ನಾರದ ಮತ್ತು ಶ್ಯಾಂಡಿಲ್ಯರ ಭಕ್ತಿ ಸೂತ್ರಗಳು ಈ ಭಾಗವತ ಸಂಪ್ರದಾಯದ ಮುಖ್ಯ ತತ್ವಗಳನ್ನು ತಿಳಿಸುವ ಪ್ರಮಾಣ ಗ್ರಂಥಗಳು. ಭಾಗವತ ಸಂಪ್ರದಾಯದಲ್ಲಿ ಭಗವಂತನಿಗೆ ಭಕ್ತರೆಲ್ಲರೂ ಬೇಕಾಗುವಂತೆ, ಉಚ್ಚನೀಚ ಭೇದ ವಿರುವುದಿಲ್ಲ; ಗಂಡು ಹೆಣ್ಣುಗಳೆಂಬ ಲಿಂಗಭೇದವೂ ಇರುವುದಿಲ್ಲ. ಎಲ್ಲ ಭಕ್ತರೂ ಸಮ. ತಾರತಮ್ಯವಿರುವುದು ಅವರು ಮಾಡುವ ಭಕ್ತಿಯಲ್ಲಿ ಅಷ್ಟೇ.

ಪರಮ ಭಾಗವತರಾದ ಆಳ್ವಾರರಿಗೆ ನಾಲ್ಕು ವರ್ಣದವರೂ ಸರಿಸಮಾನರು. ಆಳ್ವಾರರಲ್ಲಿ ಕುಲಗೋತ್ರ ಪ್ರವರಗಳ ಪ್ರಶಂಸೆ ಇಲ್ಲ. ಜಾತಿಯಿಂದ ಹೆಚ್ಚಿನವನಲ್ಲ, ಕಡಿಮೆಯವನಲ್ಲ. ಮೋಕ್ಷದ ಹೊರತು ಬೇರೊಂದು ಫಲಾಪೇಕ್ಷೆ ಇಲ್ಲ. ಭಕ್ತಿ ಪ್ರಪತ್ತಿಗಳ ಹೊರತು

---

೧. ಸೂರಸ್ಸುಹೃದ್ಭಾಗವತಸ್ಸಾತ್ವತಃ ಪಂಚಕಾಲವಿತ್ ।
ಏಕಾಂತಿಕಸ್ತನ್ಮಯಶ್ಚ ಪಾಂಚರಾತ್ರಿಕ ಇತ್ಯಪಿ ॥ - *ಪಂಚರಾತ್ರಾಗಮ.*

೨. ಯಮುನಾಚಾರ್ಯ : ಆಳ್ವಾರುಗಳು (ಪು ೨)

ಬೇರೆ ಸಾಧನೆಯೂ ಇಲ್ಲ. ಓಂ ನಮೋ ಭಗವತೇ ವಾಸುದೇವಾಯ, ಓಂ ನಮೋ ಭಗವತೇ ನಾರಾಯಣಾಯ ಎಂಬ ದ್ವಾದಶಾಕ್ಷರ ಶ್ರೀ ನಾರಾಯಣ ಮಹಾಮಂತ್ರದಲ್ಲಿ ಕಾಲ ಕಳೆಯುವರು. ಇಂಥ ಭಗವದ್ಭಕ್ತರಿಗೆ ಸೂತಕ, ಅಶೌಚಗಳಲ್ಲಿ ಸೋಂಕಿಲ್ಲ.[೧]

ಈ ರೀತಿಯ ಭಾವವನ್ನು ಆಳ್ವಾರರೊಬ್ಬರು ಹೀಗೆ ಪ್ರಕಟಿಸಿದ್ದಾರೆ: 'ಕುಲಂ ತರುವರ್ *ಶೆಲ್ವಂ ತಂದಿಡುಮ್*'- ಅಂದರೆ ಭಗವದ್ಭಕ್ತಿಯು ಕುಲವಿಲ್ಲದವನಿಗೆ ಕುಲವನ್ನು, ಸಿರಿಯಿಲ್ಲದವನಿಗೆ ಸಿರಿಯನ್ನು ತಂದುಕೊಡುತ್ತದೆ. ಹೀಗೆ ಭಾಗವತ ಮತದಲ್ಲಿ ಭಕ್ತಿ ಪ್ರಪತ್ತಿಗಳೇ ಮುಖ್ಯಸ್ಥಾನ, ಜಾತಿ ಕುಲಗಳಿಗಲ್ಲ.

ಆಳ್ವಾರರು ಪ್ರತಿಪಾದಿಸಿದ ಭಾಗವತ ಧರ್ಮ ಅತ್ಯಂತ ಪ್ರಾಚೀನವಾದುದು. ಭಾಗವತ ಮತದಲ್ಲಿ ಶ್ರೀ ಮನ್ಮಹಾವಿಷ್ಣುವೇ ತ್ರಿಮೂರ್ತಿಗಳಲ್ಲಿ ಸರ್ವೋತ್ತಮನೆಂದೂ ನಂಬುತ್ತಾರೆ. ವೇದಗಳ ಕಾಲದಲ್ಲಿ ಇಂದ್ರಾಗ್ನಿವರುಣ ರುದ್ರ, ಆದಿತ್ಯ, ಮುಂತಾದ ದೇವತೆಗಳ ಸ್ಥಾನ ಕಡಿಮೆಯಾಗುತ್ತ ಹೋಗಿ ಈ ಎಲ್ಲ ಹೆಸರುಗಳು ಒಬ್ಬನೇ ಆದ ಭಗವಂತನಾದ ಶ್ರೀವಿಷ್ಣುವಿನ ನಾಮರೂಪಗಳೆಂದೂ, ಅವನು ಅವರಲ್ಲಿ ನಿಂತು ಕೆಲಸ ಮಾಡುತ್ತಿರುವುದರಿಂದ ಸರ್ವೋತ್ತಮನೆಂದೂ ಭಾಗವತ ಧರ್ಮದವರು ನಂಬುತ್ತಾರೆ. '*ಏಕಂ ಸತ್ ವಿಪ್ರಾ ಬಹುದ್ರಾ ವದಂತಿ*' - ಎಂಬ ಶ್ರುತಿವಾಕ್ಯ ಅವರಿಗೆ ಸಮರ್ಥನೆ ನೀಡುತ್ತದೆ. ಇಂದ್ರ, ಯಮ, ಪೂಷನ್, ರುದ್ರ- ಇವರೆಲ್ಲರ ಅಂತರ್ಯಾಮಿಯಾಗಿ ನಿಂತ ದೇವರು ವಿಷ್ಣು ಒಬ್ಬನೇ ಎಂಬುದು ವಿಷ್ಣು ಶಬ್ದದಲ್ಲಿ ನಿರ್ವಚನ ಹೊಂದಿದೆ. ಅಂದರೆ ವಿಷ್ಣುವೆಂದರೆ ವ್ಯಾಪ್ತರೆಂದು ಅರ್ಥ. ವಿಷ್ಲ್ ಎಂಬ ಧಾತುವಿಗೆ ವ್ಯಾಪ್ತೌ ಎಂಬುದೇ ಅರ್ಥ. ಹೀಗೆ ಪುರುಷಸೂತ್ರದಿಂದ ಪ್ರತಿಪಾದ್ಯನಾಗಿರುವವನು ಪರಮಪುರುಷ ನಾಮಕನು ವಿಷ್ಣು ಪರಮಾತ್ಮನೊಬ್ಬನೆಂದು ನಾರಾಯಣೋಪನಿಷತ್ತು, ಪುರುಷ ಸೂಕ್ತಗಳು ವ್ಯಾಖ್ಯಾನ ಮಾಡುತ್ತವೆ.[೨] ಈ ಮಹಾ ಶಕ್ತಿಯನ್ನು ಬ್ರಹ್ಮನೆಂದೂ, ಶಿವನೆಂದೂ, ಹರಿಯೆಂದೂ ಇಂದ್ರನೆಂದೂ, ಅಕ್ಷರನೆಂದೂ, ಪರಮನೆಂದೂ ಹೇಳುವ ಶ್ರುತಿ ವಾಕ್ಯವು ಇದನ್ನು ಸಮರ್ಥಿಸುತ್ತದೆ.[೩]

ಐತಿಹಾಸಿಕವಾಗಿ ಭಾಗವತ ಮತವನ್ನು ಪ್ರತಿಪಾದಿಸಿದವನು ವೃಷ್ಣಿ, ಯಾದವ, ಸಾತ್ವತ ಎಂಬ ಬುಡಕಟ್ಟಿಗೆ ಸೇರಿದ ಕ್ಷತ್ರಿಯ ವೀರನಾದ ವಾಸುದೇವ. ಕೃಷ್ಣನೆಂಬುವನೆಂದು ಹೇಳುತ್ತಾರೆ. ಈ ವಾಸುದೇವ ಕೃಷ್ಣನೇ ಭಾಗವತ ಮತದ ಪ್ರಥಮಾಚಾರ್ಯನೆಂದು ಐತಿಹಾಸಿಕ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ಇದಕ್ಕೆ ಪುಷ್ಟಿ ನೀಡುವ ಒಂದು ಅಂಶ ಛಾಂದೋಗ್ಯ ಉಪನಿಷತ್ತಿನಲ್ಲಿ

---

೧. ಸರ್ವೇ ಸಮಾನಾಶ್ಚ ತ್ವಾರೋಗೋತ್ರಪ್ರವರವರ್ಜಿತಾಃ ।
ಉತ್ಕರ್ಷೋ ನಾಪಕರ್ಷಶ್ಚ ಜಾತಿತಸ್ತೇಷು ಸಮ್ಮತಃ ॥
ಫಲೇಷು ನಿಸ್ಪ ಹಾಸ್ಸರ್ವೇ ದ್ವಾದಶಾಕ್ಷರಚಿಂತಕಾ ಃ ।
ಮೋಕ್ಷೈಕನಿಷ್ಠ ಯಾಶ್ಶಾವಸೂತ ಶೌಚವರ್ಜಿತಾ ಃ ॥

೨. ಯಚ್ಚ ಕಿಂಚಿಜ್ಜತ್ಸಸ್ಮಿನ್ ದೃಶ್ಯತೇ ಶ್ರೂಯತೇ ಪಿ ವಾಃ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯಾ ನಾರಾಯಣ ಸ್ಥಿತಃ ॥ - ಶ್ರೀನಾರಾಯಣೋಪನಿಷತ್ತು.

೩. ಸ ಬ್ರಹ್ಮ ಸ ಶಿವಃ ಸಹಿಃಸೇಂದ್ರಃ ಸೋಕ್ಷರಃ ಪರಮಃ ಸ್ವರಾಟ್

ಬರುತ್ತದೆ. ದೇವಕೀ ಪುತ್ರ ಕೃಷ್ಣನು ಘೋರ ಅಂಗೀರಸನ ಶಿಷ್ಯ. ಇವನು ಭಗವತ್ ಎಂಬ ನಾಮಾಂಕಿತನಾದ ದೇವರಿಗೆ ನಮ್ಮ ಪೂಜೆಗಳೆಲ್ಲವೂ ಸಲ್ಲಬೇಕೆಂದು ಪ್ರತಿಪಾದಿಸಿದನೆಂದು ಹೇಳಿದೆ. ಹೀಗಾಗಿ ಶ್ರೀಕೃಷ್ಣ ವಾಸುದೇವನು ಭಾಗವತ ಮತದ ಪ್ರಥಮ ಆಚಾರ್ಯನೆನಿಸಿದನು. ಭಗವಂತನಾದ ಭಗವತ್ ದೇವರ ಉಪಾಸಕರು ಭಾಗವತ ಅನುಯಾಯಿಗಳೆನಿಸಿದರು.

ಈ ಮಾತಿಗೆ ಐತಿಹಾಸಿಕ ಆಧಾರಗಳೂ ದೊರೆಯುತ್ತವೆ. ಉತ್ತರ ಹಿಂದೂಸ್ಥಾನದ ಬೆಸ್ ನಗರದಲ್ಲಿ ಒಂದು ಗರುಡಗಂಬದ ಮೇಲೆ ಒಂದು ಶಾಸನವಿದೆ. ಇದರ ಕಾಲ ಕ್ರಿಸ್ತ ಪೂರ್ವ ೪೦ ಅಥವಾ ೧೩೦ ಎಂದು ತೀರ್ಮಾನಿಸಲಾಗಿದೆ. ಶಾಸನದ ಲಿಪಿ ಬ್ರಾಹ್ಮಿ. ಈ ಶಾಸನದಲ್ಲಿ ತಕ್ಷಶಿಲೆಯಲ್ಲಿ ವಾಸ ಮಾಡುತ್ತಿದ್ದ ಯವನ ರಾಯಭಾರಿ ಹೆಲಿಯೋಡೋರಸ್ ಎಂಬುವನು (ಗ್ರೀಕನು) ಇದನ್ನು ಕೆತ್ತಿಸಿದನೆಂದು ಹೇಳುತ್ತಾರೆ. ಈ ಶಾಸನದಲ್ಲಿ ಬಂದಿರುವ ಸಂಗತಿಗಳು ಸ್ವಾರಸ್ಯವಾಗಿದೆ. ತನ್ನ ಆಳ್ವಿಕೆಯ ಹದಿನಾಲ್ಕನೆಯ ವರ್ಷದಲ್ಲಿ ವರ್ಧಮಾನನಾಗಿರುವ ತ್ರಾತಾರನಾದ ಕಾಳಿಪುತ್ರ, ಭಾಗಭದ್ರ, ರಾಜನೆಡೆಗೆ ಆಂಟಾಲಿಕಿಡಾಸ್ ಮಹಾರಾಜನಿಂದ ಪ್ರೇರಿತನಾಗಿ ಯವನ ದೂತನಾಗಿ ಬಂದ ಡಿಯಾನ್ ಎಂಬುವನ ಪುತ್ರನಾದ ತಕ್ಷಶಿಲೆಯ ನಿವಾಸಿಯಾದ ಭಾಗವತನಾದ ಹೆಲಿಯೋಡರಸ್‌ನಿಂದ ದೇವ ದೇವನಾದ ವಾಸುದೇವನಿಗೆ ಈ ಗರುಡ ಗಂಬವು ಸ್ಥಾಪಿಸಲ್ಪಟ್ಟಿತು.[1]

ಇನ್ನೊಂದು ಸ್ವಾರಸ್ಯ. ಈ ಶಾಸನದಲ್ಲಿ ದಮ, ತ್ಯಾಗ, ಅಪ್ರಮಾದ -ಈ ಮೂರು ಅಮೃತ ಪದಗಳು ಅನುಷ್ಠಿತವಾದರೆ ಅವು ಅನುಷ್ಠಾನ ಮಾಡಿದವರನ್ನು ಸ್ವರ್ಗಕ್ಕೆ ಒಯ್ಯುವುದೆಂದು ಹೇಳಲಾಗಿದೆ. ಈ ಶಾಸನದಿಂದ ಹಿಂದೂಸ್ಥಾನದ ಧಾರ್ಮಿಕ ಇತಿಹಾಸ ಅಂದರೆ ಭಾಗವತ ಧರ್ಮದ ಪ್ರಾಚೀನತೆ ಮತ್ತು ಗ್ರೀಕರ ಮೇಲೆ ಭಾಗವತ ಧರ್ಮದ ಪ್ರಭಾವ ತಿಳಿಸುವುದರಿಂದ ಮಹತ್ವದ್ದಾಗಿದೆ ಎಂಬುದಾಗಿ ವಿನ್ಸೆಂಟ್ ಸ್ಮಿತರು ತಮ್ಮ ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಇಂಡಿಯಾ ಗ್ರಂಥದಲ್ಲಿ ಬರೆದಿದ್ದಾರೆ. (ಪುಟ : ೧೨೪).

ಸುಮಾರು ಕ್ರಿ.ಪೂ. ಏಳುನೂರರಿಂದ ಕ್ರಿ.ಪೂ. ಇನ್ನೂರೈವತ್ತರವರೆಗೆ, ಅಂದರೆ ಭಗವದ್ಗೀತೆಯು ಒಂದು ಸ್ಪಷ್ಟ ರೂಪವನ್ನು ತಾಳುವ ಹೊತ್ತಿಗೆ ವಾಸುದೇವನಿಂದ ಉಪದೇಶಿಸಲ್ಪಟ್ಟ ಭಕ್ತಿ ಪಂಥವು ವೇದೋಪನಿಷತ್ತುಗಳ ಸಾರವನ್ನು ಉಂಡು, ಶ್ರುತಿ ಸ್ಮೃತಿ ಪುರಾಣಗಳಿಂದ ಪುಷ್ಟಿಯನ್ನು ಪಡೆದು, ನಾರಾಯಣೀಯದ ಪಂಚರಾತ್ರಾಗಮಗಳ ಕೊನೆಯದಾದ ಈಶ್ವರ ಸಂಹಿತೆಯವರೆಗೆ ಬೆಳೆದು ಒಂಭತ್ತನೆಯ ಶತಮಾನದ ವೇಳೆಗೆ ದ್ರಾವಿಡ ವೇದಗಳೆನಿಸಿದ ವೈಷ್ಣವ ಪ್ರಬಂಧಗಳಿಗೆ ಬೇಕಾಗಿದ್ದ ಸೈದ್ಧಾಂತಿಕ ಹಿನ್ನೆಲೆ, ಪರಂಪರೆ ಮತ್ತು ಅಡಿಪಾಯಗಳನ್ನು ನಿರ್ಮಿಸಿಕೊಟ್ಟವೆಂದು ಪಂಡಿತರು ಅಭಿಪ್ರಾಯಪಡುತ್ತಾರೆ.

ಆಳ್ವಾರರು ಹನ್ನೆರಡು ಜನರೆಂದು ಸಾಂಪ್ರದಾಯಿಕವಾಗಿ ನಂಬುತ್ತಾ ಬಂದಿದ್ದಾರೆ. ಪೊಯ್ ಗೈಆಳ್ವಾರ್, ಪೂತತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತೊಂಡರಡಿಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್,

1 Epigraphia Indica Vol. X. Inscription No. 669.

ತಿರುಮಣ್ಣೈಯಾಳ್ವಾರ್, ನಮ್ಮಾಳ್ವಾರ್ ಮತ್ತು ಮಧುರ ಕವಿಯಾಳ್ವಾರ್. ಇವರನ್ನು ತಮಿಳು ನಾಡಿನಲ್ಲಿ ವೈಷ್ಣವ ಸಾಧುಸಂತರ, ಜ್ಞಾನಿಗಳ, ಭಗವದ್ಭಕ್ತರ ಪರಂಪರೆಯಲ್ಲಿ ಬಂದವರೆಂದು ಗೌರವದಿಂದ ಸ್ಮರಿಸುತ್ತಾರೆ. ಚರಿತ್ರೆಯ ದೃಷ್ಟಿಯಿಂದ ಇವರು ಪಲ್ಲವರ ಕಾಲಕ್ಕೆ ಸೇರುತ್ತಾರೆ. ಕ್ರಿ.ಶ.ಏಳನೆಯ ಶತಮಾನದಿಂದ ಒಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಇವರು ಇದ್ದಿರ ಬಹುದೆಂದು ನಂಬುತ್ತಾರೆ. ಇವರು ತಾಮ್ರಪರ್ಣಿ, ವೈಗೈ (ಕೃತಮಾಲ), ಪಯಸ್ವಿನಿ (ಪಾಲಾರ್), ಕಾವೇರಿನದಿ ತೀರಗಳಲ್ಲಿ ಅವತಾರವೆತ್ತಿದವರು. ತಮಿಳುನಾಡಿನಲ್ಲಿ ಆರಂಭವಾದ ಈ ಭಕ್ತಿ ಪ್ರವಾಹವು ಮುಂದೆ ಭಾರತವನ್ನೆಲ್ಲಾ ವ್ಯಾಪಿಸಿತೆಂದು ಹೇಳುತ್ತಾರೆ.[೧]

ಆಳ್ವಾರರಲ್ಲಿ ಎಲ್ಲ ಜಾತಿಯವರು- ಎಲ್ಲ ವರ್ಣದವರು, ಗಂಡಸರು ಮತ್ತು ಹೆಂಗಸರೂ ಇದ್ದಾರೆ. ಕುಲಶೇಖರರು ಕೇರಳದ ಅರಸರಾಗಿದ್ದರೆ, ಆಂಡಾಳ್ ಅಥವಾ ಗೋದಾದೇವಿಯು ಪೆರಿಯಾಳ್ವಾರರ ಮಗಳು. ತಿರುಪ್ಪಾಣಿ ಆಳ್ವಾರರು ಅಂತ್ಯಜರು. ನಮ್ಮಾಳ್ವರರು ವೆಳ್ಳಾಳರು, ತಿರುಮಂಗೈ ಕಳ್ಳರ ಜಾತಿಯವರು. ತಿರುಮಳಿಶೈ ಜಾತಿಯು ತಿಳಿಯದು, ಮತ್ತುಳಿದವರು ಬ್ರಾಹ್ಮಣರು. ಇವರೆಲ್ಲರೂ ವರ್ಣಭೇದ, ಸ್ತ್ರೀ-ಪುರುಷರೆಂಬ ಭೇದವನ್ನು ತೊರೆದು ಭಕ್ತಿಯೇ ಮುಕ್ತಿಗೆ ದಾರಿ ಎಂಬ ಭಾಗವತದ ತತ್ವವನ್ನು ತಮ್ಮ ನಡೆನುಡಿಗಳಲ್ಲಿ ತೋರಿಸಿದರು. ಇವರು ಶ್ರೀವಿಷ್ಣುವಿನ ಅರ್ಚಾವತಾರವನ್ನು ಕುರಿತು ತಮ್ಮ ಪ್ರಬಂಧಗಳಲ್ಲಿ ಸ್ತುತಿಸಿದ್ದಾರೆ. ಇವರ ನಂತರ ಬಂದ ನಾಥಮುನಿಗಳು ಆಳ್ವಾರರ ದಿವ್ಯ ಪ್ರಬಂಧಗಳನ್ನು ಒಟ್ಟುಗೂಡಿಸಿದುದಲ್ಲದೆ ವಿಷ್ಣು ದೇವಾಲಯಗಳಲ್ಲಿ ಅವುಗಳ ಅನುಸಂಧಾನ ಮೂಲಕ ಪಠಣೆ ಮಾಡುವ ಸಾಂಪ್ರದಾಯಕ್ಕೂ ಕಾರಣರಾದರು. ಇದರಿಂದಾಗಿ ಪ್ರಬಂಧಗಳ ಸ್ತೋತ್ರ, ವೇದ ಉಪನಿಷತ್ತುಗಳ ಸಂಸ್ಕೃತ ಮಂತ್ರ ಗಳಷ್ಟೇ ಸ್ಥಿರವಾನ್ವಿತವಾದವು.

ಆರಂಭದ ಮೂವರು ಆಳ್ವಾರರು ಒಂದೇ ರೀತಿಯಾಗಿ ಜನ್ಮ ತಳೆದವರೆಂದು ಐಹಿತ್ಯವಿದೆ. ಪೊಯ್‌ಗೈಯಾಳ್ವಾರರು ಕಾಂಚೀನಗರದ ಸರೋವರದ ಕಮಲ ಪರಾಗದಲ್ಲೂ, ಪೂತತ್ತಾಳ್ವಾರರು ಮಾಧವೀ ಕುಸುಮದಲ್ಲಿಯೂ, ಪೇಯಾಳ್ವಾರರು ಮೈಲಾಪುರದ ಒಂದು ಕೆಂದಾವರೆಯಲ್ಲೂ ಉದ್ಭವಿಸಿದರಂತೆ. ಪುಷ್ಪಜಾತರಾದ ಈ ಮೂವರೂ ಜ್ಞಾನ ಭಕ್ತಿ ವೈರಾಗ್ಯ ಸಂಪನ್ನರಾಗಿ ಸದಾ ಭಗವಂತನಲ್ಲಿ ಆಳುವವರು, ಅದ್ದಿದವರು, ಮುಳುಗಿದವರು ಆಗಿದ್ದುದರಿಂದ ಆಳ್ವಾರರೆಂದು ಪ್ರಸಿದ್ಧರಾದರು. ಪೊಯ್‌ಗೈ ಎಂದರೆ ಸರೋವರ, ಪೋದ ಅಥವಾ ಪೊತ ಎಂದರೆ ಸಂಸ್ಕೃತದ ಭೂತ, ಪೇಯ್ ಎಂದರೆ ಮರುಳು - ಹೀಗಾಗಿ ಆ ಹೆಸರುಗಳ ಕಲ್ಪನೆಯಲ್ಲಿ ಒಂದು ಕಥೆ ರೂಢಿಯಲ್ಲಿದೆ

ಈ ಮೂವರು ಆಳ್ವಾರರು ಒಂದೆಡೆ ಸೇರಿದ್ದಾಗ ಭಯಂಕರ ಮಳೆ, ಕಗ್ಗತ್ತಲು- ಅವರು ಒಂದು ಜಗಲಿಯಲ್ಲಿ ಆಶ್ರಯ ಪಡೆದರು. ಅವರು ಪರಸ್ಪರ ಪರಿಚಯ ಮಾಡಿಕೊಂಡಾಗ ಒಬ್ಬರು ನಾನು ಭಗವಂತನ ಭೂತ- ಅಂದರೆ ಅವನ ಪ್ರತಿಬಿಂಬನಾದ ಜೀವ, ನಾನು ವಾಸುದೇವನ ದಾಸ, ನಾನು ಕೋಸಲೇಂದ್ರನ ದಾಸ- ಹೀಗೆ ಪರಿಚಯ ಮಾಡಿಕೊಟ್ಟರಂತೆ. ಅವರಲ್ಲಿ ಅಹಂಭಾವವೇ

---

೧. ಉತ್ಪನ್ನಾ ದ್ರಾವಿಡೇ ನಾಹಂ ವೃದ್ಧಿಂ ಕರ್ಣಾಟಕೇ ಗತಾ
ಕ್ವಚಿತ್ ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂಗತಾ

- ಪದ್ಮ ಪುರಾಣ

ಇರಲಿಲ್ಲ. ಅವರು ತ್ರಿಕರಣಗಳಲ್ಲಿ ಭಗವಂತನ ಗುಣಗಳನ್ನು ನನೆಯುವುದರಲ್ಲಿ ಮುಳುಗಿದ್ದರು. ಅಲ್ಲಿಗೆ ನಾಲ್ಕನೆಯವನಾಗಿ ಇನ್ನೊಂದು ವ್ಯಕ್ತಿ ಆಗಮಿಸಿತಂತೆ. ಆ ಕತ್ತಲೆಯಲ್ಲೂ ಅವರಿಗೆ ಬಂದವನು ಪರಮಾತ್ಮನೆಂದು ತಿಳಿಯಿತಂತೆ. ಅವನನ್ನು ಸ್ತೋತ್ರ ಮಾಡಿದರಂತೆ. ಅವರು ಒಬ್ಬೊಬ್ಬರೂ ಹಾಡಿದ ನೂರು ಸ್ತೋತ್ರಗಳು, ಮುನ್ನೂರು ಪದ್ಯಗಳ ತಿರುವಂದಾದಿ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಪೊಯ್‌ಗೈ ಆಳ್ವಾರರು-

*ನೆಲವೆ ಹಣತೆಯಾಗಿ ಹರಿಹಿದ ಕಡಲುನೆಯ್ಯಾಗಿ*
*ಬಿಸುಗದಿರ ಸೂರ್ಯನೇ ಸೊಡರ ಕುಡಿಯಾಗಿರಲು*
*ಎಡರಕಡಲಾದ ಸಂಸಾರ ಅಳಿಯಲಿ ಎಂದು*
*ಸೊಡರಂತೆ ಚಕ್ರವನು ಹಿಡಿದವನ ಕೆನ್ನಡಿಗೆ*
*ನುಡಿಮಾಲೆಯನು ತೊಡಿಸಿದೆನು* - ಎಂದು ಹಾಡಿದ್ದಾರೆ.

ಇದೇ ಭಾವವನ್ನು ಪೂತತ್ತಾಳ್ವಾರರು-

*ಭಕ್ತಿಯೇ ಹಣತೆ ಮನದಾಸೆಯೇ ನೈಯ್ಯಾಗಿ*
*ಆನಂದ ಅರುಗಿ ಭಾವನೆ ವರ್ತಿಯಾಗಿರಲು*
*ಬೆಳಗಿ ಹಚ್ಚಿದೆ ನರಿವಸೊಡರ, ಅತುಮ ಕರಗಿ*
*ತಿಳಿವೀವ ತಮಿಳರತಿ ನಾನು ನಾರಾಯಣಗೆ*

- ಎಂದು ಭಗವಂತನ ಅಡಿಗಳಲ್ಲಿ ಭಕ್ತಿಯ ಸೊಡರನ್ನು ಇರಿಸಿದ್ದಾರೆ.

ಪೇಯಾಳ್ವಾರರು-

*ಸಿರಿಯನ್ನು ಕಂಡೆನು ಹೊನ್ನೊಡಲು ಕಂಡೆನು*
*ತೊಳೆವ ಸೂರ್ಯನ ತೆರದಿ ಚಲು ಹೊಗರ ಕಂಡೆನು*
*ರಣದೆ ಹೊಳೆಯುವ ಹೊನ್ನ ಚಕ್ರ ಮುರಿಶಂಖವನು*
*ಕಡಲ ಬಣ್ಣದ ನನ್ನ ಹರಿಯ ಬಳಿ ಕಂಡೆನು*

-ಎಂಬುದಾಗಿ ಭಗವಂತನ ದರ್ಶನದ ಭಾಗ್ಯವನ್ನು ವರ್ಣಿಸಿದ್ದಾರೆ.[೧]

ತಿರುಮಳಿಶೈ ಆಳ್ವಾರರು ತಿರುವಳಿಶೈ ಎಂಬ ಗ್ರಾಮದಲ್ಲಿ ಹುಟ್ಟಿದ್ದರಿಂದ ಈ ಹೆಸರು ಬಂದಿತಂತೆ. ಅವರ ತಂದೆ ಒಬ್ಬ ಋಷಿ, ತಾಯಿ ಒಬ್ಬ ಅಪ್ಸರಸ್ತ್ರೀ. ಅವರು ಈ ಶಿಶುವನ್ನು ಒಂದು ಲತಾಕುಂಜದಲ್ಲಿ ಬಿಟ್ಟು ಹೋದರು. ಬೇಡನೊಬ್ಬನು ಅದನ್ನು ಕಂಡು ಮನೆಯಲ್ಲಿ ಸಾಕಿದನಂತೆ. ಇವರು ತಮ್ಮ ಜನ್ಮವೃತ್ತಾಂತವನ್ನು ಒಂದೆಡೆ *"ನಾನು ದ್ವಿಜರಲ್ಲಿ ಹುಟ್ಟಲಿಲ್ಲ. ನನಗೆ ಚತುರ್ವೇದಗಳ ಅರಿವಿಲ್ಲ. ಇಂದ್ರಿಯ ನಿಗ್ರಹವೆಂಬುದೇನೋ ನಾನರಿಯೆ. ನನಗೆ ತಿಳಿದಿರವುದೊಂದೇ; ಶ್ರೀಹರಿಯ ಪಾದಪದ್ಮಗಳು. ದೇವ, ನಿನ್ನ ಪೊನ್ನಡಿಗಳಲ್ಲದೆ ನನಗಿನ್ನೇನು ದಿಕ್ಕು?"*-ಎಂದು ಹಾಡಿದ್ದಾರೆ. ಇನ್ನೊಮ್ಮೆ-

---

೧. ಅನುವಾದ ; ಮಾಸ್ತಿ ವೆಂಕಟೇಶ ಐಯ್ಯಂಗಾರ್.

"ಇಂದೋ ನಾಳೆಯೋ ಇಲ್ಲ, ಇನ್ನು ಮುಂದೆಯೋ ನಿನ್ನ ಕೃಪೆಗೆ ನಾನು ಪಾತ್ರನಾಗುವುದು ನಿಜ... ಓ ನಾರಾಯಣ ನಾನು ನೀನಿಲ್ಲದೆ ಇಲ್ಲ. ನೀನು ನಾನಿಲ್ಲದೆ ಇಲ್ಲ ಕಂಡೆಯಾ?" - ಎಂದಿದ್ದಾರೆ. ಪರಮಾತ್ಮನ ಕೃಪೆಗೆ ತಾನು ಎಂದೆಂದಿಗೂ ಪಾತ್ರನೆಂಬ ಭಾವ ಅವರದು.

ಚರಾಚರ ವಸ್ತುಗಳೆಲ್ಲವೂ ಭಗವಂತನಲ್ಲೇ ಉದಯಿಸಿ ಭಗವಂತನಲ್ಲೇ ಮುಳುಗುವುದೆಂಬ ಭಾವವನ್ನು ಹೀಗೆ ಸುಂದರವಾಗಿ ನಿರೂಪಿಸಿದ್ದಾರೆ.

"ತನ್ನೊಳೆ ಎದ್ದು ಹರಹಿ ತನ್ನೊಳೇ ಇಂಗುವ ಆಸೆಗಳನ್ನುಳ್ಳ ಬಿಳಿ ನೊರೆಯ ಕಡಲಂತೆ ನಿನ್ನೊಳೇ ಹುಟ್ಟಿ ಉಳಿದ ಚರಾಚರಗಳೆಲ್ಲವೂ ನಿನ್ನೊಳೇ ಅಳಿಯುವುವು" - ಎಂದು ವರ್ಣಿಸಿದ್ದಾರೆ.

ಇಂಥ ಅತ್ಯಂತಿಕ ಭಕ್ತರು ತಮ್ಮ ದೇಹದ ಪ್ರತಿಯೊಂದು ಅವಯವಗಳಿಂದ ಭಗವಂತನ ಸೇವೆ ಮಾಡಲು ಬಯಸುತ್ತಾರೆ. ಅದರ ಹೊರತು ಅವರಿಗೆ ಅನ್ಯತಾ ವಿಷಯಗಳು ಶೂಲವಾಗಿ ತೋರುತ್ತದೆ. ಅವರು ಭಗವಂತನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ:

"ದೇವೋತ್ತಮ! ನಮ್ಮ ವಾಣಿಗಳು ನಿನ್ನ ಮಹಿಮೆಗಳನ್ನು ಕೀರ್ತಿಸುವುದರಲ್ಲಿಯೂ, ಕಿವಿಗಳು ನಿನ್ನ ಚರಿತ್ರ ಶ್ರವಣದಲ್ಲಿಯೂ, ಕೈಗಳು ನಿನ್ನ ಮಂದಿರಗಳನ್ನು ಶುದ್ಧಿಗೊಳಿಸುವುದೇ ಮೊದಲಾದ ಕಾರ್ಯಗಳಲ್ಲೂ, ಶಿರಗಳು ನಿನ್ನ ನಮಸ್ಕರಿಸುವುದರಲ್ಲಿಯೂ, ನಮ್ಮ ಕಣ್ಣುಗಳು ನಿನ್ನ ಭಕ್ತರ ಹಾಗೂ ದಿವ್ಯ ರೂಪಗಳನ್ನು ನೋಡುವುದರಲ್ಲಿ ಆಸಕ್ತವಾಗುವಂತೆ ಅನುಗ್ರಹಿಸು."[೧]

ಭಗವತೋತ್ತಮನಾದ ಅಂಬರೀಷ ಮಹಾರಾಜನು ಈ ರೀತಿಯಲ್ಲೇ ಶ್ರೀಹರಿ ಸೇವೆಯನ್ನು ಮಾಡುತ್ತಿದ್ದನೆಂದು ಶುಕಾಚಾರ್ಯರು ವರ್ಣಿಸಿದ್ದಾರೆ. ಅದರಂತೆ ಶೌನಕರು ಸೂತರಿಗೆ ಉಪದೇಶಿಸುತ್ತಾ, ಪರಮಾತ್ಮನಿಂದ ಕೊಡಲ್ಪಟ್ಟ ಮನುಷ್ಯನ ಯಾವ ಯಾವ ಅವಯವಗಳು ಅವನ ಸೇವೆ ಮಾಡುವುದಿಲ್ಲವೋ ಅಂಥಹವು ವ್ಯರ್ಥ ಅಂಗಗಳೆಂದು ಹೇಳಿ ದೇವರನ್ನು ಕೊಂಡಾಡದ ನಾಲಿಗೆ ಕಪ್ಪೆಯನಾಲಿಗೆ, ಕೇಳದ ಕಿವಿ ವ್ಯರ್ಥ ರಂಧ್ರಗಳು, ಶಿರವು ಕಲ್ಲಿನ ಭಾರ, ಕೈಗಳು ಹೆಣದ ಕೈಗಳು, ಕಣ್ಣುಗಳು ನವಿಲಿನ ಕಣ್ಣುಗಳು, ಕಾಲುಗಳು ಕಟ್ಟಿಗೆ ತುಂಡುಗಳು- ಇಂಥ ನರನು ಜೀವಿಸಿದ್ದರೂ ಮೃತ ಪ್ರಾಯನೆಂದು ಹೇಳುತ್ತಾರೆ. ಇಂಥ ಏಕಾಂತಿಕ ಭಕ್ತರಿಗೆ ಶರೀರವಿರುವುದು ಭಗವಂತನ ಸೇವೆಗಾಗಿ. ಆಗ ಅದು ಸಾಧನ ಶರೀರವೆನಿಸುವುದು. ಅವರು ದೇಹಾಭಿಮಾನ ಶೂನ್ಯರು. ಮಲಗಲು ಭೂಮಿ ಇರಲು ಸುಪ್ಪತ್ತಿಗೆ ಏಕೆ? ತಲೆಯನ್ನು ಇಡಲು ಕೈಗಳಿರಲು ದಿಂಬುಗಳೇಕೆ? ಅಂಜಲಿ ಇರಲು ಬಹುಪರ್ಣ ಪಾತ್ರೆಗಳೇಕೆ? ದಿಕ್ಕುಗಳಿರಲು ಮೃದು ವಸ್ತುಗಳೇಕೆ - ಎಂದು ಪ್ರಶ್ನಿಸುತ್ತಾರೆ. ಅಂಥ ವೈರಾಗ್ಯಶಾಲಿಗಳಲ್ಲದವರು ಅಪಕ್ವ ಯೋಗಿಗಳು.

ಪರಮಾತ್ಮನನ್ನು ಒಲಿಸಿಕೊಳ್ಳಲು ಜೀವರ ಸ್ವರೂಪ ಹಲವು ರೀತಿಯದಿರುವಂತೆ ಮಾರ್ಗಗಳೂ ಹಲವು; ಎಲ್ಲ ಜೀವರು ಶಾಶ್ವತ ಸುಖವೆಂಬ ಮೋಕ್ಷವನ್ನು ಅಪೇಕ್ಷಿಸುವರಾದರೂ

---

೧. ವಾಣೀ ಗುಣಾನುಕಥನೇ ಶ್ರವಣೇ ಕಥಾಯಾಂ
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।
ಸ್ಮೃತ್ಯಾಂ ಶಿರಸ್ತವ ಸುರಪ್ರವರ ಪ್ರಣಾಮೇ ।
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಂ ॥ - *ಭಾಗವತ, ೧೦-೧೦-೩೮.*

ಅವರು ಅನುಸರಿಸುವ ಮಾರ್ಗಗಳಲ್ಲಿ ಭಿನ್ನತೆ ಇವೆ. ಜ್ಞಾನಯೋಗ, ಭಕ್ತಿಯೋಗ, ಕರ್ಮ ಯೋಗ, ರಾಜಯೋಗ- ಇತ್ಯಾದಿ. ಹಠಯೋಗ ಮಾರ್ಗವು ಅಪೇಕ್ಷಿತ ಫಲವನ್ನು ಶೀಘ್ರವಾಗಿ ನೀಡಬಹುದು. ಆದರೆ ಅದರಲ್ಲಿ ಅಧಃಪತನಕ್ಕೆ ಅವಕಾಶಗಳು ಹೆಚ್ಚು. ಅಲ್ಲದೆ ಅದು ಕಷ್ಟಸಾಧ್ಯ. ಭಕ್ತಿಯೋಗವಾದರೂ ಸಾಧನದಲ್ಲೂ ಆನಂದವನ್ನು ಕೊಟ್ಟು, ನಿಧಾನವಾದರೂ ಅಪಾಯ ವಿಲ್ಲದಂತೆ ಗುರಿಯನ್ನು ಮುಟ್ಟಿಸುವ ಸುಲಭವಾದ ಸರಳ ಮಾರ್ಗವಾಗಿದೆ.

ಆದರೆ ಭಕ್ತಿಯೋಗದಲ್ಲಿ ನಿತ್ಯಧರ್ಮಾನುಷ್ಠಾನವು ಮುಖ್ಯ ಉಪಾಯವಾಗಿದೆ. ಧರ್ಮವು ಬಹು ಗಹನವಾದ್ದು. ಅದರ ಜಟಿಲತೆಯನ್ನೂ, ಸೂಕ್ಷ್ಮವನ್ನೂ ಸುಲಭವಾಗಿ ಸಾಮಾನ್ಯರಿಗೂ ತಿಳಿಸಲು ಹೊರಟಿರುವ ಮೋಕ್ಷಶಾಸ್ತ್ರ ಶ್ರೀಮದ್ಭಾಗವತ ಪುರಾಣ. ಕರ್ಮವು ಸಾಮಾನ್ಯವಾಗಿ ಬಂಧಕವೆನಿಸಿದರೂ, ಭಗವಂತನಿಗೆ ಅರ್ಪಣೆಯಾದರೆ ಭವಬಂಧನವನ್ನು ಬಿಡಿಸಬಲ್ಲದು. ಸರ್ವಕರ್ಮಗಳನ್ನು ಭಗವಂತನಿಗೆ ಅರ್ಪಿಸಿ, ಅನುಸಂಧಾನ ಪೂರ್ವಕವಾಗಿ ಮಾಡುವ ಕರ್ಮಗಳಿಂದ ಅವನಿಗೆ ಭವಬಂಧನವಿರುವುದಿಲ್ಲ. ಅವನು ಮುಕ್ತನಾಗುತ್ತಾನೆ. ಭಕ್ತಿ ಯೋಗದ ಹಿರಿಮೆ ಇಲ್ಲಿದೆ. ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ವ್ಯಾಪಾರವನ್ನು ಭಗವ ದ್ವಿಷಯಗಳ ಕಡೆಗೆ ತಿರುಗಿಸಿದರೆ ಜೀವನವೆಲ್ಲ ಸಾಧನೆಯೇ. ಇಂಥ ಭಗವದ್ಭಕ್ತರಿಗಾಗಿ ಭಾಗವತ ಶಾಸ್ತ್ರವನ್ನು ಶ್ರೀವ್ಯಾಸರು ಅನುಗ್ರಹಿಸಿದ್ದಾರೆ.

ಆಳ್ವಾರರು ತಮ್ಮ ದಿವ್ಯ ಪ್ರಬಂಧಗಳಲ್ಲಿ ವಿಷ್ಣುವಿನ ಸರ್ವೋತ್ತಮತ್ವವನ್ನು ಮೈಮರೆತು ಹಾಡಿದ್ದಾರೆ. ಈ ಪ್ರಬಂಧಗಳು ಕಾಲಾನಂತರದಲ್ಲಿ ನಷ್ಟವಾದಾಗ, ನಾಥಮುನಿ ಎಂಬ ವಿಷ್ಣುಭಕ್ತರು ಭಗವಂತನ ಅನುಗ್ರಹದಿಂದ ಆಳ್ವಾರರ ಪ್ರಬಂಧ ಗೀತೆಗಳನ್ನು ಸಂಗ್ರಹಿಸಿದರು. ಅವನ್ನು ನಾಲ್ಕು ಸಹಸ್ರ ಗಾಹೆಗಳ ಗುಂಪಾಗಿ ವಿಂಗಡಿಸಿ, ಗ್ರಂಥಸ್ಥಗೊಳಿಸಿದರು. ಈ ವೇಳೆಗಾಗಲೇ ನಾಲ್ಕು ಐದು ಸಹಸ್ರ ಗಾಹೆಗಳು ನಷ್ಟವಾಗಿದ್ದವಂತೆ. ಅಂತೂ ವೈಷ್ಣವ ಪ್ರಬಂಧಗಳನ್ನು ಜಗತ್ತಿಗೆ ಉಳಿಸಿಕೊಟ್ಟ ಕೀರ್ತಿ ನಾಥಮುನಿಗಳದು. ಇವರ ಮೊಮ್ಮಕ್ಕಳು ಆಳವಂದಾರ್ ಅಥವಾ ಯಾಮುನಾಚಾರ್ಯರು. ಇವರು ರಾಮಾನುಜಾಚಾರ್ಯರ ಪರೋಕ್ಷ ಗುರುಗಳಾಗಿ ಶ್ರೀವೈಷ್ಣವ ಸಿದ್ಧಾಂತವನ್ನು ಜಗತ್ತಿಗೆ ನೀಡಿದರು.

ಸಾಂಪ್ರದಾಯಿಕವಾಗಿ ಶ್ರೀವೈಷ್ಣವ ಗುರು ಪರಂಪರೆ ಹೀಗಿದೆ;-

ಶ್ರೀಮನ್ನಾರಾಯಣ, ಶ್ರೀಮಹಾಲಕ್ಷ್ಮೀ, ವಿಷ್ವಕ್ಸೇನ, ನಮ್ಮಾಳ್ವಾರ್, ನಾಥಮುನಿ, ಪುಂಡರೀಕಾಕ್ಷ, ರಾಮಮಿತ್ರ, ಯಾಮುನಚಾರ್ಯ, ಪೆರಿಯನಂಬಿ, ಶ್ರೀರಾಮಾನುಜರು. ಮುಂದೆ ಶ್ರೀವೈಷ್ಣವ ಮತವು ತೆಂಗಲೆ ಮತ್ತು ವಡಗಲೆ ಎಂಬ ಸಂಪ್ರದಾಯ ಭೇದವನ್ನು ಪಡೆಯಿತು.

ಶ್ರೀರಾಮಾನುಜರು ಪ್ರತಿಪಾದಿಸಿದ ವಿಶಿಷ್ಟಾದ್ವೈತವನ್ನು ಹೀಗೆ ಸಂಗ್ರಹಿಸಬಹುದು.

*ಶ್ರೀಮಲ್ಲಕ್ಷ್ಮಣಯೋಗಿನಸ್ತು ಭುವನಂ ಸತ್ಯಂ ತದೀಶಃ ಶ್ರೀಯಃ ।*
*ಕಾಂತೋ ಬ್ರಹ್ಮಸವಿವಸೋಽಖಿಲತಮ ಭಿನ್ನಾಸ್ತತಶ್ಚೇತನಾಃ ॥*
*ಸತ್ತ್ವಾ ಸಂಸೃತಿರೀಶನಿಗ್ರಹ ಕೃತಾ ಮುಕ್ತಿಸ್ತು ಭಕ್ತ್ಯಾದಿನಾ ।*
*ತತ್ಪ್ರಾಪ್ತಿ ಪರಮೇ ಪದೇ ತದನುಭೂತ್ಯಾಖ್ಯೇತಿ ಸಂಚಕ್ಷತೆ ॥*

ಶ್ರೀರಾಮಾನುಜಾಚಾರ್ಯರು ಪ್ರತಿಪಾದಿಸಿದ ವಿಶಿಷ್ಟಾದ್ವೈತದ ಮುಖ್ಯ ಅಂಶಗಳು ಹೀಗಿದೆ. (ಇವುಗಳನ್ನು ನಾರಾಯಣನೇ ತಿರುಕಚ್ಚಿ ನಂಬಿಯವರ ಮೂಲಕ ರಾಮಾನುಜಾಚಾರ್ಯರಿಗೆ ಬೋಧಿಸಿದನೆಂದು ನಂಬುತ್ತಾರೆ)

೧) ಸಕಲಗುಣ ಪರಿಪೂರ್ಣನಾದ ಶ್ರೀಮನ್ನಹಾವಿಷ್ಣುವೇ ಪರತತ್ವ. ಜ್ಞಾನಿಗಳೂ, ಭಕ್ತರೂ ತಿಳಿಯಬೇಕಾದ ಪರಬ್ರಹ್ಮವಸ್ತು *(ಅಹಮೇವ ಪರಂತತ್ವಮ್)*.

೨) ಭೇದ ದರ್ಶನವೇ ಪ್ರಾಮಾಣಿಕವಾದುದು *(ದರ್ಶನಂ ಭೇದಮೇವ ಚ)*

೩) ಭಗವಂತನನ್ನು ಪಡೆಯಲು ಶರಣಾಗತಿಯೇ ಉಪಾಯ. *(ಉಪಾಯಸ್ತು ಪ್ರಪತ್ತಿಃ ಸ್ಯಾತ್)*

೪) ಅಂತ್ಯಕಾಲದಲ್ಲಿ ಅಂತಿಮ ಸ್ಮೃತಿಯ ಅವಶ್ಯಕತೆ ಇಲ್ಲ. *(ಅಂತಿಮ ಸ್ಮೃತಿ ವರ್ಜನಮ್)*

೫) ದೇಹವು ಬಿದ್ದುಹೋದ ಮೇಲೆ ಮೋಕ್ಷ *(ದೇಹಾವಸಾನೇ ಮೋಕ್ಷಂ ಚ)*

ಭಗವಂತನ ಆದೇಶದಂತೆ ರಾಮಾನುಜಾಚಾರ್ಯರು ಹಿಂದಿನವರ ಸಿದ್ಧಾಂತವನ್ನು ನಿರಾಕರಿಸಲು ಪೆರಿಯನಂಬಿ (ಮಹಾಪೂರ್ಣ) ಅವರನ್ನು ಗುರುಗಳಾಗಿ ಆಶ್ರಯಿಸಿ (ಪೂರ್ಣಂ ಸಮಾಶ್ರಯ) ಅವರಿಂದ ಸಂಪ್ರದಾಯದಿಂದ ಪ್ರಾಪ್ತವಾದ ಶ್ರೀವೈಷ್ಣವ ತತ್ವವನ್ನು ತಿಳಿದುಕೊಂಡು, ಅದನ್ನು ಜನಸಾಮಾನ್ಯರಲ್ಲಿ ಪ್ರಚಾರ ಮಾಡಿದರು.

ರಾಮಾನುಜಾಚಾರ್ಯರು ಅದ್ವೈತಕ್ಕಿಂತ ಭಿನ್ನವಾದ ವಿಶಿಷ್ಟಾದ್ವೈತವನ್ನು ಮಂಡಿಸಲು ಶಂಕರಾಚಾರ್ಯರಂತೆ ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು ಭಾಷ್ಯಾಚಾರ್ಯರೆನಿಸಿದರು. ಅವರು ಬರೆದ ಗ್ರಂಥಗಳು ಒಂಭತ್ತು ಎಂದು ಹೇಳುತ್ತಾರೆ. ಅವು ವೇದಾರ್ಥ ಸಂಗ್ರಹ, ಶ್ರೀಭಾಷ್ಯ, ಗೀತಾಭಾಷ್ಯ, ವೇದಾಂತದೀಪ, ವೇದಾಂತಸಾರ, ಶರಣಾಗತಿ ಗದ್ಯ, ಶ್ರೀರಂಗಗದ್ಯ, ಶ್ರೀವೈಕುಂಠಗದ್ಯ ಮತ್ತು ನಿತ್ಯಗ್ರಂಥ.

ರಾಮಾನುಜರು ಯಾಮುನಾಚಾರ್ಯರ ಅಪೇಕ್ಷೆಯಂತೆ ಅವರ ದರ್ಶನಕ್ಕೆ ಬರುವುದರೊಳಗಾಗಿ ಅವರ ಅವಸಾನವಾಗಿತ್ತು. ಅವರ ಅಂತಿಮ ಕೋರಿಕೆಗಳಾಗಿದ್ದ ವ್ಯಾಸ ಪರಾಶರರ ಪುಣ್ಯಸ್ಮರಣೆಯನ್ನು ಶಾಶ್ವತಗೊಳಿಸುವುದು, ಪ್ರಬಂಧ ಕರ್ತೃಗಳಾದ ನಮ್ಮಾಳ್ವಾರರಿಗೆ ಪ್ರೀತಿಯ ಕಾಣಿಕೆ ಸಲ್ಲಿಸುವುದು ಮತ್ತು ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾದ ಭಾಷ್ಯ ರಚಿಸುವುದು. ಈ ಮೂರು ಕೋರಿಕೆಗಳನ್ನು ಈಡೇರಿಸಿಕೊಡುವುದಾಗಿ ಭಾಷೆಯಿತ್ತ ಮೇಲೆ ಅವರ ಮಡಿಸಿದ್ದ ಮೂರು ಬೆರಳುಗಳು ನೆಟ್ಟಗಾದವಂತೆ! ಹೇಗೇ ಇರಲಿ, ರಾಮಾನುಜರು ಗುರುಗಳು ಇರಿಸಿದ್ದ ನಂಬಿಕೆಯನ್ನು ಸಾರ್ಥಕ ಪಡಿಸಿದರು.

"ರಾಮಾನುಜ ದರ್ಶನವು ಮುಖ್ಯವಾಗಿ ಭಕ್ತಿಪಂಥವಾಗಿದ್ದು ಇದರಲ್ಲಿ ಅಪಾರವಾದ ಉತ್ಕೃಷ್ಟವಾದ ಸ್ತೋತ್ರ ಸಾಹಿತ್ಯ ಬೆಳೆದು ಬಂದಿದೆ. ಕುಲಶೇಖರ, ಯಾಮುನ, ರಾಮಾನುಜ, ಕೂರನಾಥ, ಪರಾಶರಭಟ್ಟ, ವೇದಾಂತದೇಶಿಕ – ಮುಂತಾದವರು ಈ ದರ್ಶನ ಸಾರಸರ್ವಸ್ವವನ್ನು ಈ ಸ್ತೋತ್ರಗಳಲ್ಲಿ ಭಟ್ಟಿ ಇಳಿಸಿದ್ದಾರೆ."

"ದೈವಕೃಪೆ ಸಿಗಲು ಕಷ್ಟಕರವಾದ ಜ್ಞಾನ ತಪಸ್ಸು ಕರ್ಮಗಳ ಅವಶ್ಯಕತೆಯಿಲ್ಲ. ಸರ್ವತಂತ್ರ ಸ್ವತಂತ್ರ, ಸರ್ವೇಶ್ವರ, ಅಸಂಖ್ಯ, ಕಲ್ಯಾಣಗುಣ ಭೂಷಣ ಆದ ಭಗವಂತನ ದಿವ್ಯ ನಾಮಗಳನ್ನು ಕೇಳುವುದು, ಹಾಡುವುದು, ಸ್ಮರಿಸುವುದು, ಅವನನ್ನು ಪೂಜಿಸುವುದು, ಆಶ್ರಯಿಸುವುದು ಮುಖ್ಯ. ಶರಣಾಗತಿಯೆ ಮೋಕ್ಷ ಸಾಧನೆಗೆ ಶ್ರೇಷ್ಠವಾದ ಮಾರ್ಗ, ಸುಲಭವಾದ ಉಪಾಯ. ಇದಕ್ಕೆ ಜಾತಿ, ಕುಲ, ಲಿಂಗ, ಗುಣ, ದೇಶ, ಅವಸ್ಥೆ ಯಾವುದೂ ಅಡ್ಡವಿಲ್ಲ

೧) ಭಗವದಭಿಪ್ರಾಯಕ್ಕೆ ಅನುಕೂಲವಾಗುವುದು.

೨) ಭಗವದಿಚ್ಛೆಗೆ ವಿರುದ್ಧವಾಗಿ ಹೋಗದಿರುವುದು.

೩) ಶರಣಾಗತರನ್ನು ರಕ್ಷಿಸಿಯೇ ತೀರುತ್ತಾನೆ ಎಂಬ ಪೂರ್ಣವಿಶ್ವಾಸ.

೪) ಸರ್ವಲೋಕ ಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಮನೋನಿಶ್ಚಯ.

೫) ಭಗವಂತನಲ್ಲಿ ಪೂರ್ಣವಾಗಿ ಆತ್ಮವನ್ನು ಒಪ್ಪಿಸಿ ನಿಶ್ಚಿಂತನಾಗಿರುವುದು.

೬) ತಾನು ಮಾಡಿದ ಅಪರಾಧಗಳೆಲ್ಲವನ್ನೂ ಭಗವಂತನಲ್ಲಿ ನಿಷ್ಕಾಪಟ್ಯದಿಂದ ನಿವೇದಿಸಿಕೊಳ್ಳುವುದು.

ಇವು ಆರೂ ಪ್ರಪತ್ತಿಯ ಆರು ಅಂಗಗಳು." [೧]

ಈ ಗುಣಗಳು ರಾಮಾನುಜರ ಜೀವನದಲ್ಲಿ ಬಾಲ್ಯಾರಾಭ್ಯ ಮೈಗೂಡಿ ಬಂದಿದ್ದವು. ಇದಕ್ಕೆ ಒಂದೆರಡು ಉದಾಹರಣೆಗಳು.

ಒಮ್ಮೆ ಅವರ ಗುರುಗಳು ಯಾದವ ಪ್ರಕಾಶರಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಅದ್ವೈತ ಪಂಡಿತರಾಗಿದ್ದ ಅವರು *"ಸತ್ಯಂ ಜ್ಞಾನಂ ಅನಂತಂ ಬ್ರಹ್ಮ"* - ಎಂಬ ತೈತ್ತರೀಯ ಉಪನಿಷತ್ತನ್ನು ಅರ್ಥ ಹೇಳುತ್ತಿದ್ದಾಗ, ಗುರುಗಳ ಮಾತನ್ನು ವಿರೋಧಿಸಿದರು. ಇದರಿಂದ ಗುರುಗಳು ಕುಪಿತರಾದರು. ಮುಂದೊಂದು ದಿನ *"ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ"*- ಎಂಬ ಛಾಂದೋಗ್ಯ ಶ್ರುತಿಗೆ *"ಕಪಿಯ ಆಸನದಂತೆ ಕೆಂಪಾದ ಕಣ್ಣುಗಳು ಬ್ರಹ್ಮಕ್ಕಿದೆ"*-ಎಂದು ತಪ್ಪು, ಕ್ಷುಲ್ಲಕ, ಅರ್ಥ ಹೇಳಿದಾಗ, ರಾಮಾನುಜರಿಗೆ ಭಗವಂತನನ್ನು ನಿಂದಿಸಿದಂತೆ ತೋರಿ, ಕಣ್ಣೀರು ಸುರಿಯಿತು. ಅದಕ್ಕೆ ಬೇರೆ ಸುಂದರ ಅರ್ಥ ಇದೆ ಎಂದು ತಿಳಿಸಿ, ಕಪ್ಯಾಸಂ ಎಂದರೆ ಸೂರ್ಯ ಅರಳಿಸಿದ್ದು - ಎಂಬ ಅರ್ಥವಿದ್ದು ಕಮಲ ಇಲ್ಲಿ ಸಮಂಜಸವಾಗಿದೆ. ಭಗವಂತನ ನೇತ್ರ ಅರಳಿದ ಕೆಂದಾವರೆಯಂತೆ ಕೆಂಪು- ಎನ್ನುವುದೇ ಸರಿಯಾದ ಅರ್ಥವೆಂದು ವಿವರಿಸಿದರು. ಈ ಪ್ರಸಂಗದಿಂದ ಕೆರಳಿದ ಗುರುಗಳು ಅವರನ್ನು ಯಾತ್ರೆಯ ನೆಪದಲ್ಲಿ ಕೊಲ್ಲಲೆಳಸಿದರು. ಆದರೆ ಭಗವಂತನಿಗೆ ಪ್ರಿಯ ಭಕ್ತರಾಗಿದ್ದ ಅವರನ್ನು ಭಗವಂತನೇ ಬೇಡ ದಂಪತಿಗಳಾಗಿ ಬಂದು ಕಾಪಾಡಿದನು.

ಮತ್ತೊಂದು ಪ್ರಸಂಗ. ಇನ್ನೊಬ್ಬ ಗುರುಗಳಾದ ಗೋಷ್ಠಿಪೂರ್ಣರು ರಾಮಾನುಜರಿಗೆ ಮೋಕ್ಷಕ್ಕೆ ಕಾರಣವಾಗುವ ಅಷ್ಟಾಕ್ಷರ ಮಂತ್ರವನ್ನು ಉಪದೇಶಿಸಿ, ಇದನ್ನು ಅನ್ಯರಿಗೆ ಹೇಳಬಾರದೆಂದು ನಿರ್ಬಂಧಿಸಿದ್ದು. ಆದರೆ ರಾಮಾನುಜರು ಶ್ರೀರಂಗದ ದೇಗುಲದ ಗೋಪುರ ಹತ್ತಿ

---

೧. ಶ್ರೀರಾಮಯ್ಯಂಗಾರ್ ; ಶ್ರೀವೈಷ್ಣವ ಮತ ದೀಪಿಕೆ, ಪುಟ-೪.

ಎಲ್ಲರಿಗೂ ಇದನ್ನು ಸಾರಿಬಿಟ್ಟರು. ಗುರುವು ಆಕ್ಷೇಪಿಸಿ ನರಕದ ಭೀತಿ ಒಡ್ಡಿದಾಗ ರಾಮಾನುಜರು ಅನೇಕ ಜೀವರ ಉದ್ಧಾರ ಮಾಡಿದ ಮಂತ್ರದ ರಹಸ್ಯವನ್ನು ಹೊರಗೆಡಹಿದುದಕ್ಕಾಗಿ ತಾವೊಬ್ಬರು ನರಕಕ್ಕೆ ಹೋದರೂ ಚಿಂತೆಯಿಲ್ಲವೆಂದು ಉತ್ತರಕೊಟ್ಟರು.

ಇಂಥ ರಾಮಾನುಜರು ಮೇಲುಕೋಟೆಯಲ್ಲಿ ಅಸ್ಪೃಶ್ಯರಿಗೂ ಚೆಲುವ ನಾರಾಯಣನ ದರ್ಶನಕ್ಕೆ ಅವಕಾಶ ಕಲ್ಪಿಸಿ, ಅತ್ಯಂತ ಮಾನವೀಯ ಅನುಕಂಪವನ್ನು ಪ್ರಕಟಿಸಿದ್ದರು.

ಭಗವಂತನ ಮುಂದೆ ಮಾನವರೆಲ್ಲರೂ ಒಂದೇ ಎಂಬ ಭಾವವನ್ನು ಕೃತಿರೂಪಕ್ಕೆ ಇಳಿಸಿ ತೋರಿಸಿದ್ದರು.

ರಾಮಾನುಜರ ಸಂದೇಶವನ್ನು ಹೀಗೆ ಸಂಗ್ರಹಿಸಬಹುದು. ಸಾಕಾರ ಮತ್ತು ನಿರಾಕಾರ ಭಗವದ್ ತತ್ವದ ಸಿದ್ಧಾಂತಗಳಿಗೆ ಸಮನ್ವಯವೇ ವಿಶಿಷ್ಟಾದ್ವೈತ ಸಿದ್ಧಾಂತ. ಪರಿಪೂರ್ಣ ಗುಣ ವಿಶೇಷಗಳಿಂದ ಕೂಡಿದ ಭಗವಂತನು ಜಡ ಪದಾರ್ಥಗಳಾದ ಅಚೇತನ ವಸ್ತುಗಳು, ಅಪೂರ್ಣರಾದ ಚೇತನರು-ಈ ತತ್ವತ್ರಯಕ್ಕೆ ಈ ಸಿದ್ಧಾಂತದಲ್ಲಿ ಸಮನ್ವಯ ಸಾಧಿಸಲಾಗಿದೆ. ದೋಷ ದೂರನಾದ ಪರಮಾತ್ಮನು ತೇಜಸ್ಸು, ಮಾರ್ದವ, ಮಾಧುರ್ಯ, ಗಾಂಭೀರ್ಯ ಮತ್ತು ಜ್ಞಾನ ಆನಂದಾದಿ ಗುಣಗಳಿರುವಂತೆಯೇ ಅವನು ಮಹಾ ಕರುಣಾಶಾಲಿ, ಯೋಗ್ಯ ಮಾನವರ ಉದ್ಧಾರಕ್ಕಾಗಿ ಅವತಾರವೆತ್ತುತ್ತಾನೆ. ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆಯೇ ಈ ಅವತಾರಗಳ ಗುರಿ.

ಮಾನವ ದೇಹ ಜಡ ಚೈತನ್ಯರ ಸಂಗಮ ಕ್ಷೇತ್ರ. ಕ್ಷೇತ್ರಜ್ಞನಾದ ಭಗವಂತನು ಅವನ ಹೃದಯ ಮಂದಿರದಲ್ಲಿ ವಾಸಿಸುತ್ತಾನೆ. ಮಾತ್ರವಲ್ಲ ಭಗವಂತನು ಅವನ ಒಳಗೂ, ಹೊರಗೂ ನಿಂತು ವ್ಯಾಪಾರ ನಡೆಸುತ್ತಾನೆ. ಶರೀರ ಆತ್ಮರ ಸಂಬಧ ಅನಿವಾರ್ಯ. ಹೀಗಾಗಿ ಇದು ಸಾಧನ ಶರೀರ. ಭಗವಂತನ ಸಾಕ್ಷಾತ್ಕಾರವೇ ಈ ದೇಹದ ಚರಮಗುರಿ. ಆದುದರಿಂದಲೇ ಭಗವಂತನ ಸೇವೆಗೆ ಅದು ಮೀಸಲು.

ಮನುಷ್ಯನಿಗೆ, ದೇಹಕ್ಕೆ, ಬಾಲ್ಯ, ಯೌವನ, ನಡುವಯಸ್ಸು, ವೃದ್ಧಾಪ್ಯ ಸಾವುಗಳಿವೆ. ಈ ಸರ್ವಾವಸ್ಥೆಯಲ್ಲಿ ಅವನ ಇರವಿಗೆ ಕಾರಣನಾದ ಭಗವಂತನನ್ನು ಅವನು ಮರೆಯಬಾರದು. ಅವನ ರಕ್ಷಕ ದೇವರು. ಅವನು ತನ್ನ ಒಡೆಯನೆಂಬ ಭಾವನೆಯಿಂದ ಅವನನ್ನು ಸೇವಿಸಬೇಕು. ಪ್ರಭುವಿನಿಂದ ದೂರವಾದ ದಿನ ಸಾವು; ಹತ್ತಿರ ಬಂದ ದಿನ ಉದ್ಧಾರ. ದೇಹ ಅನಿತ್ಯ, ಜೀವ ನಿತ್ಯ, ಭಗವಂನತು ಹುಟ್ಟು ಸಾವುಗಳಿಗೆ ಸ್ವಾಮಿ.

ಜೀವರಲ್ಲಿ ಸಂಸಾರಿಗಳು, ಮುಕ್ತರು ಮತ್ತು ನಿತ್ಯರೆಂದು ಮೂರು ಬಗೆ. ಬದ್ಧಾವಸ್ಥೆಯಲ್ಲಿ ಇರುವವರು ಮೋಕ್ಷ ಸಾಧಿಸಿಕೊಳ್ಳುವ ಅರ್ಹತೆ ಪಡೆದಿದ್ದರೂ ಅಜ್ಞಾನದಿಂದ ಆ ದಾರಿ ಅವರಿಗೆ ತಿಳಿಯದು. ಅವರು ಶರೀರವನ್ನು ಆತ್ಮನೆಂದು ತಿಳಿಯುತ್ತಾರೆ. ಈ ಅಜ್ಞಾನದಿಂದ ಬಿಡುಗಡೆಯಾದಾಗಲೇ ಜ್ಞಾನ. ಜ್ಞಾನದಿಂದ ಭಕ್ತಿ, ಭಕ್ತಿ ಪ್ರಪತ್ತಿಗಳಿಂದ ಮುಕ್ತಿ ಸಾಧಿಸುತ್ತದೆ.

ಪ್ರಪತ್ತಿ ಭಗವಂತನನ್ನು ಭಕ್ತನನ್ನು ಹತ್ತಿರ ತರುವ ಸಂಬಂಧ. ಭಗವದ್ಭಕ್ತರ ಕೈಂಕರ್ಯವೇ, ಸೇವೆಯೇ ಪರಮಾತ್ಮನನ್ನು ಒಲಿಸುವ ದಾರಿ.

ಭಗವಂತನು ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚರೂಪಗಳಲ್ಲಿ

ಅಭಿವ್ಯಕ್ತನಾಗುತ್ತಾನೆ. ನಾರಾಯಣನು ಪರಮಾತ್ಮರೂಪಿ, ಅದು ದೇವರ ನಿತ್ಯ ವಿಭೂತಿ ರೂಪ. ವ್ಯೂಹರೂಪದಲ್ಲಿ ಅವನು ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳು. ಅವತಾರ ರೂಪಗಳು ದೇವರ ವಿಭವ ರೂಪಗಳು. ಅಂತರ್ಯಾಮಿ ರೂಪ ಸಂಸಾರಿ ಚೇತನರೆಲ್ಲರ ಒಳ ಹೊರಗಿರುವ ರೂಪ. ಸಾಮಾನ್ಯ ಜನರ ಪೂಜೆಗಾಗಿ ಪ್ರತಿಷ್ಠೆ ಮಾಡಲ್ಪಟ್ಟ ಪ್ರತಿಮೆಗಳು ಅರ್ಚಾರೂಪ. ಇಂತ ಸ್ವಾಮಿಯನ್ನು ಪ್ರೇಮ ಭಕ್ತಿಗಳಿಂದ ಆರಾಧಿಸಿದರೆ ಒಲಿಯುತ್ತಾನೆ. ಅವನಿಗೆ ಶರಣಾಗತಿಯಾದರೆ ಅವನು ಉದ್ಧರಿಸುತ್ತಾನೆ. ಇದೇ ಜೀವನ ಪರಮ ಗುರಿ. ಭಗವಂತನ ವಿರಹದಿಂದ ದಗ್ಧನಾಗಿ ಅವನಿಗಾಗಿ ತಾಯಿಗಾಗಿ ಹಂಬಲಿಸುವ ಮಗುವಿನಂತೆ ಹಂಬಲಿಸಿದರೆ ಅವನು ಖಂಡಿತ ಒಲಿಯುತ್ತಾನೆ. ಜನನ ಮರಣಗಳ ಸಂಸಾರದ ಸಮುದ್ರದಿಂದ ಬಿಡುಗಡೆ ಮಾಡಿ ಶಾಶ್ವತ ಆನಂದ ರೂಪದ ಮುಕ್ತಿಯನ್ನು ನೀಡುತ್ತಾನೆ. ಹೀಗೆ ಧರ್ಮಾನುಷ್ಠಾನ ಧರ್ಮಾನುಭವಗಳ ದರ್ಶನ ವಿಶಿಷ್ಟಾದ್ವೈತ.

ಈ ಮಾತಿಗೆ ನಿದರ್ಶನವಾಗಿ ಶ್ರೀರಾಮಾನುಜರು ಬರೆದಿರುವ ಸುಂದರ ಶರಣಾಗತಿ ಗದ್ಯ ನೋಡಬಹುದು. ಇದೊಂದು ಪ್ರಸಾದಿತ ಕಾವ್ಯಮಯವಾದ ಗದ್ಯ ಗೀತೆ ಅಥವ ವಚನ ಕಾವ್ಯ.

ಶರಣಾಗತಿ ಗದ್ಯವು ಸಂವಾದ ರೂಪದಲ್ಲಿದೆ. ಲಕ್ಷ್ಮೀಪತಿಗೂ ಯತಿಪತಿಗೂ ನಡೆದ ಸಂವಾದವೆಂದು ವೇದಾಂತದೇಶಿಕರು ಇದನ್ನು ವರ್ಣಿಸಿದ್ದಾರೆ. ಒಮ್ಮೆ ಶ್ರೀರಂಗದ ದೇವಸ್ಥಾನದಲ್ಲಿ *ಪಂಗುಣಿಚಿತ್ತರಂ* ಎಂಬ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತಿತ್ತಂತೆ. ಈ ಸಮಯದಲ್ಲಿ ಅಲ್ಲಿಗೆ ಬಂದ ರಾಮಾನುಜಾಚಾರ್ಯರು ಶ್ರೀರಂಗನಾಥ - ರಂಗನಾಯಕಿಯ ವಿಗ್ರಹವನ್ನು ನೋಡಿ ಭಾವ ಪ್ರಪಂಚದಲ್ಲಿ ಮೈಮರೆತು ತಮಗಾದ ಅನುಭವಗಳನ್ನು ಈ ಗದ್ಯರತ್ನದಲ್ಲಿ ನಿರೂಪಿಸಿದರಂತೆ.

ಶರಣಾಗತಿ ಗದ್ಯದಲ್ಲಿ ಮೂರು ಭಾಗಗಳಿವೆ. ಪ್ರಥಮ ಭಾಗದಲ್ಲಿ ಭಗವನ್ನಾರಾಯಣನಿಗೆ ಅಭಿಮತವೂ ಅನುರೂಪವೂ ಆದ ಸ್ವರೂಪ ರೂಪಗುಣಾದಿಗಳಿಂದ ಕೂಡಿದ ಅಶರಣ್ಯ ಶರಣ್ಯೆಯಾದ ಶ್ರೀದೇವಿಯಲ್ಲಿ ಪ್ರಪತ್ತಿ ಮಾಡಿ, ತಾನು ಭಗವಂತನ ಅಡಿದಾವರೆಗಳಲ್ಲಿ ನಿತ್ಯ ಕೈಂಕರ್ಯ ಪ್ರಾಪ್ತಿಗಾಗಿ ಸರಿಯಾಗಿ ಶರಣಾಗತಿ ಮಾಡಲು ಅನುಗ್ರಹಿಸಬೇಕೆಂದು ದೇವಿಯನ್ನು ಬೇಡಿಕೊಳ್ಳುತ್ತಾರೆ. ಹೀಗೆ ವಿಜ್ಞಾಪಿತಳಾದ ವಿಷ್ಣು ಪತ್ನಿಯು "ಅದು ನಿನಗೆ ದೊರಕಲಿ. ನಿನಗೆ ಇದರಿಂದ ಎಲ್ಲವೂ ಸಿದ್ಧಿಸುವುದು"- ಎಂಬುದಾಗಿ ಅನುಗ್ರಹಿಸುತ್ತಾಳೆ.

ಎರಡನೆಯ ಭಾಗದಲ್ಲಿ ಭಗವಂತನ ಸ್ವರೂಪ, ಗುಣಭೂಷಣ, ಆಯುಧ, ಮಹಿಷೀ, ವರ್ಗ, ನಿತ್ಯ ಸೂರಿಗಳು, ನಿತ್ಯವಿಭೂತಿ, ಲೀಲಾವಿಭೂತಿ -ಇವುಗಳನ್ನು ಹೇಳಿ ಅವನ ಪ್ರಾಪ್ತತ್ವ ಶರಣತ್ವಗಳನ್ನು ಸೂಚಿಸುವ ದಿವ್ಯನಾಮಗಳಿಂದ ಅವನನ್ನು ಸಂಬೋಧಿಸಿ "*ಅನನ್ಯ ಶರಣನಾದ ನಾನು ನಿನ್ನ ಅಡಿದಾವರೆಗಳನ್ನು ಶರಣು ಹೊಂದುತ್ತೇನೆ.*"- ಎಂದು ಪ್ರಪತ್ತಿ ಮಾಡುತ್ತಾರೆ. ಪುರುಷಾರ್ಥ ರೂಪದ ಕೈಂಕರ್ಯವನ್ನು ಪ್ರಾರ್ಥಿಸುತ್ತಾರೆ.

ಮೂರನೆಯ ಭಾಗದಲ್ಲಿ ಭಗವಂತನು ಅನುಗ್ರಹ ರೂಪವಾದ ತನ್ನ ಪ್ರತಿಶ್ರುತಿಯನ್ನು ಕೊಟ್ಟು ತನ್ನ ಜ್ಞಾನದರ್ಶನ, ಪ್ರಾಪ್ತಿ, ಇವುಗಳು ಉಂಟಾಗುವ ವಿಷಯದಲ್ಲಿ ನಿಸ್ಸಂಶಯವಾಗಿ ಸುಖವಾಗಿರಬೇಕೆಂದು ಅಭಯ ಪ್ರಧಾನ ಮಾಡುತ್ತಾನೆ.

ಇದರ ಆರಂಭದ ಗದ್ಯಭಾಗ ಹೀಗಿದೆ.

*ಅಖಿಲ ಹೇಯ ಪ್ರತ್ಯನೀಕ ಕಲ್ಯಾಣೈಕತಾನಸ್ವೇತರ ಸಮಸ್ತ*
*ವಸ್ತು ವಿಲಕ್ಷಣಾನಂತಜ್ಞಾನ ನಂದೈಕಸ್ವರೂಪ ॥*

ಅಂತ್ಯ ಭಾಗ ಹೀಗಿದೆ.

*ಅತಸ್ತ್ವಂ ತವ ತತ್ವತೋಮಜ್ಞಾನ ದರ್ಶನ*
*ಪ್ರಾಪ್ತಿಷು ನಿಸ್ಸಂಶಯಃ ಸುಖಮಾಸ್ಸ್ವ ॥*

ಭಗವಂತನಲ್ಲಿ ಮಾಡುವ ಅತಿಶಯ ಭಕ್ತಿ ಪ್ರಪತ್ತಿಗಳಿಂದ ಅಶೇಷ ಶೇಷತ್ವವೊದಗಿ ಅದರಿಂದ ಆನಂದಾನುಭೂತಿ ರೂಪವಾದ ನಿತ್ಯ ಕೈಂಕರ್ಯವು ಜೀವನಿಗೆ ಲಭಿಸುವುದೆಂದು ಈ ಗದ್ಯ ಸಾರುತ್ತದೆ.

ರಾಮಾನುಜರ ಗುರುಗಳಾದ ಯಾಮುನಾಚಾರ್ಯರೂ ಮಹಾಭಕ್ತರು. ಅವರು ಉದ್ದಾಮ ಪಂಡಿತರು. ಸಿದ್ಧಿತ್ರಯ, ಗೀತಾರ್ಥ ಸಂಗ್ರಹ, ಆಗಮ ಪ್ರಾಮಾಣ್ಯ -ಮುಂತಾದ ಕಠಿಣವಾದ ತರ್ಕಪೂರ್ಣ ಗ್ರಂಥಗಳನ್ನು ರಚಿಸಿದರೂ ಅವರು ಪಾಮರರ ಸಲುವಾಗಿ ಲಕ್ಷ್ಮಿಯನ್ನು ಸ್ತುತಿಸುವ ಚತುಶ್ಲೋಕೀ ಮತ್ತು ಸ್ತೋತ್ರರತ್ನಗಳನ್ನು ಬರೆದಿದ್ದಾರೆ.

ಈ ಚತುಶ್ಲೋಕಿಯಲ್ಲಿ ಅವರು ಮಹಾಲಕ್ಷ್ಮಿಯನ್ನು ಕುರಿತು ಬಹಳ ಸುಂದರವಾಗಿ ಹೀಗೆ ವರ್ಣಿಸಿದ್ದಾರೆ.

*"ತಾಯಿ, ನಿನಗೆ ವಲ್ಲಭನು ಪುರುಷೋತ್ತಮನು. ನಾಗರಾಜನಾದ ಆದಿಶೇಷನೇ ಹಾಸಿಗೆ. ವೇದಗಳಿಗೆ ಆತ್ಮನೆನಿಸಿ ಪಕ್ಷಿಗಳಿಗೆ ರಾಜನಾದ ಗರುಡನು ನಿನ್ನ ವಾಹನ, ನೀನು ಕುಳಿತುಕೊಳ್ಳುವ ಪೀಠನು ಆದಿಶೇಷ ಮತ್ತು ಗರುಡರು. ಪ್ರಪಂಚವನ್ನು ಮರುಳು ಮಾಡುವ ಮಾಯೆಯೇ ನಿನ್ನ ಹೊದಿಕೆ. ಬ್ರಹ್ಮ ಶಿವ ಮೊದಲಾದ ದೇವತೆಗಳ ಸಮೂಹವೇ ನಿನ್ನ ಊಳಿಗದವರು. ಅವರ ಪತ್ನಿಯರೇ ನಿನ್ನ ಪರಿಚಾರಕಿಯರು. ನಿನ್ನ ಹೆಸರಾದರೋ ಶ್ರೀ ಅಂದರೆ ಸಿರಿ, ಸಂಪತ್ತು. ಹೀಗಿರುವಾಗ ಅಮ್ಮ ಭಗವತಿ ನಿನ್ನನ್ನು ನಾವು ಎಂತು ಸ್ತುತಿಪೆವು."* [೧]

ಇದರಂತೆ ಯಾಮುನಾಚಾರ್ಯ ವಿರಚಿತ ಸ್ತೋತ್ರರತ್ನಂ ಸಹ ಶ್ರೀಮನ್ನಾರಾಯಣ ಹಾಗೂ ಲಕ್ಷ್ಮೀದೇವಿಯರ ವೈಭವವನ್ನೂ, ಮಹಿಮೆಯನ್ನೂ, ಗುಣಗಳನ್ನೂ, ಗಾನವನ್ನು ಭಕ್ತಿಯಿಂದ ಮಾಡುತ್ತದೆ.

ಭಗವಂತನ ಮಹಿಮೆ ಎಷ್ಟು ದೊಡ್ಡದೆಂದರೆ ಇದನ್ನು ಅರಿಯಲು ಬ್ರಹ್ಮಾದಿಗಳಿಗೇ ಸಾಧ್ಯವಾಗಲಿಲ್ಲ. ಬ್ರಹ್ಮನನ್ನು ಅಳತೆಗೋಲಾಗಿ ಇಟ್ಟುಕೊಂಡು ವೇದವು ನಿನ್ನ ಗುಣಗಳಲ್ಲಿ

---

೧. ಕಾಂತಸ್ತೇ ಪುರುಷೋತ್ತಮಃ ಫಣಿ ಪತಿಶಯ್ಯಾಸನಂ ವಾಹನಂ ।
ವೇದಾತ್ಮಾ ವಿಹಗೇಶ್ವರೋ ಯವನಿಕಾ ಮಾಯಾಜಗನ್ಮೋಹಿನೀ ॥
ಬ್ರಹ್ಮೇಶಾದಿ ಸುರವ್ರಜಸ್ಸದಯಿತಃ ತ್ವದ್ದಾಸದಾಸೀಗಣಃ ।
ಶ್ರೀರಿತ್ಯೇವಚನಾಮತೆ ಭಗವತಿ ಬ್ರೂಮಃ ಕಥಂತ್ವಾಂವಯಂ ॥ -ಚ । ಶ್ಲೋ೧

ಒಂದಾದ ಆನಂದವನ್ನು ಅಳತೆ ಮಾಡಲು ಹೋಗಿ ಇನ್ನೂ ಮುಗಿಸಿಲ್ಲವೆಂದ ಮೇಲೆ ಉಳಿದವರ ಮಾತೇನು? ಎಂದು ವರ್ಣಿಸಿದ್ದಾರೆ.[೧]

ಮತ್ತೊಂದೆಡೆ ಯಾಮುನಾಚಾರ್ಯರು-

*"ಹೇ ಸ್ವಾಮಿ ನನಗೆ ನೀನೇ ತಂದೆ, ನೀನೇ ತಾಯಿ, ನೀನೇ ದಯಿತ, ನೀನೆ ತನಯ, ಪ್ರಿಯಸುಹೃತ್ತು ಮಿತ್ರ ನೀನೇ, ನೀನೇ ಗುರು, ನೀನೇ ಜಗತ್ತಿಗೆಲ್ಲ ಗತಿ, ನಾನು ನಿನ್ನವನು. ನಿನ್ನ ಭೃತ್ಯ, ನೀನೇ ಗತಿಯಾಗಿ ಉಳ್ಳವನು, ಶರಣಾಗತ. ಹೀಗಿರಲು ನನ್ನ ರಕ್ಷಣೆ ನಡೆಯಬೇಕಾದ್ದು ನಿನಗೋಸ್ಕರ, ನಿನ್ನಿಂದಲೇ. ಅದೂ ನಿನ್ನ ಭಾರ!"*- ಎಂದು ಉದ್ಗಾರ ತೆಗೆದಿದ್ದಾರೆ.

ಶ್ರೀವೈಷ್ಣವರ ಧಾರ್ಮಿಕ ಸಾಹಿತ್ಯದಲ್ಲಿ ಸ್ತೋತ್ರಗಳಿಗೆ ಅತ್ಯಂತ ಮಹತ್ವದ ಭಾಗ ಗಳಾಗಿವೆ. ಆಳ್ವಾರರ ಭಕ್ತಿ ಪ್ರಬಂಧಗಳೆಲ್ಲವೂ ಭಕ್ತಿ ಗೀತೆಗಳೇ. ಅನಂತರ ಸಂಸ್ಕೃತದಲ್ಲಿ ಬರೆದ ಯಾಮುನಾಚಾರ್ಯರ ಗ್ರಂಥಗಳು ಉಳಿದವರಿಗೆ ಮಾದರಿ. ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಮುಂದೆ ಕೂರೇಶರು ಶ್ರೀಸ್ತವವನ್ನು, ಪರಾಶರಭಟ್ಟರು ಶ್ರೀಗುಣರತ್ನ ಕೋಶವನ್ನೂ, ವೇದಾಂತ ದೇಶಿಕರು ಶ್ರೀಸ್ತುತಿ, ಪಾದುಕಾ ಸಹಸ್ರಿಯನ್ನು ಬರೆದು ಸ್ತೋತ್ರ ಸಾಹಿತ್ಯಕ್ಕೆ ಅನರ್ಘ್ಯ ಕಾಣಿಕೆ ಸಲ್ಲಿಸಿದ್ದಾರೆ.

ಈಗ ಪರಾಶರಭಟ್ಟರ ಗುಣರತ್ನಕೋಶದಿಂದ ಒಂದು ಶ್ಲೋಕವನ್ನು ನೋಡೋಣ.[೨]

ಸಮಸ್ತಕ್ಕೂ ಕಾರಣಳಾದ ಮಹಾಲಕ್ಷ್ಮಿಯ ಕಟಾಕ್ಷವನ್ನು ಒಂದು ಲತೆಯಂತೆ ಭಾವಿಸಿ ಶ್ರೀ ಪರಾಶರಭಟ್ಟರು ಈ ಶ್ಲೋಕವನ್ನು ಬರೆದಿರುವರು.

*"ಲಕ್ಷ್ಮೀಕಟಾಕ್ಷವೆಂಬ ಲತೆಯು ಏಳು ಲೋಕಗಳ ಉತ್ಪತ್ತಿ ರೂಪದಿಂದ ಚಿಗರಿದ್ದಾಗಿಯೂ, ಈ ಲೋಕಗಳ ಆಳ್ವಿಕೆಯ ರೂಪದಿಂದ ಮೊಗ್ಗಾಗಿ, ಕಾಯಾಗಿಯೂ ಇದ್ದು ಕೊಂಡು ಭಕ್ತರಕ್ಷಾರ್ಥವಾಗಿ ಶ್ರೀರಂಗದಿವ್ಯನಗರದಲ್ಲಿ, ನಗರವನ್ನೆಲ್ಲಾ ಪ್ರಕಾಶಿಸುವ ನಗರ ಮಧ್ಯವರ್ತಿಯಾದ ದೀಪದಂತೆ ಇದ್ದು ಕೊಂಡು ರಂಗನಾಯಕಿಯಾಗಿ ಪ್ರಕಟಗೊಳ್ಳುತ್ತಿರುವಳೋ ಆ ಮಹಾಲಕ್ಷ್ಮಿಯನ್ನು ಆಶ್ರಯಿಸುತ್ತೇನೆ."*

ಇಲ್ಲಿ ಲಕ್ಷ್ಮೀದೇವಿಯು ಮೂಲಪ್ರಕೃತಿ. ಅವಳನ್ನು ಇಲ್ಲಿ ಬಳ್ಳಿಯಂತೆ ಕಲ್ಪಿಸಿ

---

೧. ಉಪರ್ಯುಪರ್ಯ ಬ್ಜಭುವೋಪಿ ಪೂರುಷಾ:
ಪ್ರಕಲ್ಪ್ಯತೇ ಯೇಶತಮಿತ್ಯನುಕ್ರಮಾತ್
ಸರಸ್ತ್ವದೇಕ್ಯೈಕ ಗುಣಾವಧೀಪ್ಸಯಾ
ಸದಾಸ್ಥಿತಾ ನೋದ್ಯ ಮತೋಽತಿ ಶೇರತೇ ॥

೨. ಉಲ್ಲಾಸ ಪಲ್ಲವಿತ ಪಾಲಿತಸಪ್ತಲೋಕೀ
ನಿರ್ವಾಹಕೋರಕಿತನೇಮ ಕಟಾಕ್ಷಲೀಲಾ ।
ಶ್ರೀರಂಗಹರ್ಮ್ಯತಲಮಂಗಳ ದೀಪರೇಖಾಂ
ಶ್ರೀರಂಗರಾಜ ಮಹಿಷೀಂ ಶ್ರೀಯಮಾಶ್ರಯಾಮಃ ॥

ಕೊಳ್ಳಲಾಗಿದೆ. ಅವಳ ಕಟಾಕ್ಷವೇ ಬಳ್ಳಿ ಚಿಗುರೊಡೆಯಲು ಬೇಕಾದ ಚೈತನ್ಯದ ಪ್ರಭಾವ. ಅದು ಇದ್ದಾಗ ಏಳು ಲೋಕಗಳು ಅರಳುತ್ತವೆ, ಅಂದರೆ ಸೃಷ್ಟಿಯಾಗುತ್ತದೆ. ತ್ರಿಗುಣಗಳಾದ ಸತ್ವ ರಜಸ್ತಮಗಳಿಂದ ಅದನ್ನು ಆಳುವಾಗ ಲೋಕಗಳು ಮೊಗ್ಗು ಬಿರಿದು, ಕಾಯಿ ರೂಪ ತಾಳಿ, ಹಣ್ಣು ಬಿರಿಯುತ್ತವೆ. ಎಂದರೆ ಈ ಸಂಸಾರ ಚಕ್ರ ಆರಂಭವಾಗುತ್ತದೆ. ಹಣ್ಣಿನಿಂದ ಬೀಜ, ಬೀಜದಿಂದ ಮತ್ತೆ ಲತೆಯ ಸೃಷ್ಟಿ. ಹೀಗೆ ಅನಂತ ಜೀವರಾಶಿಗಳಿಗೆ ಕಾರಣವಾಗುವ ಲೋಕಲೋಕಾಂತರಗಳು ಅವಳಿಂದ ಸೃಷ್ಟಿಯಾಗುತ್ತದೆ. ಮಹಾಪ್ರಳಯ ಕಾಲದಲ್ಲಿ ಸ್ವಾಮಿಯ ಇಚ್ಛೆಯಂತೆ ಈ ಚಿಗುರಿಸುವ ಮೊಗ್ಗಾಗಿಸುವ, ಕಾಯಾಗಿಸುವ, ಹಣ್ಣಾಗಿಸುವ ವ್ಯಾಪಾರಗಳನ್ನು ಅವಳು ಉಪಸಂಹಾರ ಮಾಡುತ್ತಾಳೆ- ಇಷ್ಟೆಲ್ಲ ಭಾವ ಇಲ್ಲಿ ಸುಂದರವಾಗಿ ವರ್ಣಿತವಾಗಿದೆ. ಈ ಗುಣ ರತ್ನಕೋಶವು ವೇದಾಂತದೇಶಿಕರಿಗೆ ಪಾದುಕಾ ಸಹಸ್ರ ರಚನೆಗೆ ಪ್ರೇರಕವಾಗಿದ್ದರೆ ಆಶ್ಚರ್ಯವಲ್ಲ.

ಪಾದುಕಾ ಸಹಸ್ರದಲ್ಲಿ ವೇದಾಂತದೇಶಿಕರು ಶ್ರೀರಾಮನ ಪಾದುಕೆಗಳ ಮಹಿಮೆಯನ್ನು ಒಂದು ಸಾವಿರದೆಂಟು ಶ್ಲೋಕಗಳಲ್ಲಿ ಅದ್ಭುತವಾಗಿ ವರ್ಣಿಸಿದ್ದಾರೆ. ಇವಕ್ಕೆ ಸರಿ ಹೋಲುವ ಭಕ್ತಿಕಾವ್ಯ ಸಂಸ್ಕೃತ ಸ್ತೋತ್ರ ಸಾಹಿತ್ಯದಲ್ಲಿ ಇನ್ನೊಂದು ಹುಟ್ಟಿಲ್ಲವೆನ್ನಬಹುದು. ಈ ಪಾದುಕಾ ಸಹಸ್ರದಲ್ಲಿ ವೇದಾಂತದೇಶಿಕರೆಂದು ಹೆಸರಾದ ವೆಂಕಟನಾಥರು ಶ್ರೀರಂಗನಾಥಸ್ವಾಮಿಯ ಸನ್ನಿಧಿಯಲ್ಲಿರುವ ಶ್ರೀಹರಿಯನ್ನು ನಿಮಿತ್ತ ಮಾಡಿಕೊಂಡು ಶ್ರೀರಾಮನ ಮಹಿಮೆಗಳನ್ನು ಮುಕ್ತಕಂಠದಿಂದ ಸ್ತೋತ್ರ ಮಾಡಿದ್ದಾರೆ. ಇಲ್ಲಿನ ಮೂವತ್ತೆರಡು ಸರ್ಗಗಳು ಗಾಯಿತ್ರಿ ಮಂತ್ರದ ಮೂವತ್ತೆರಡು ಅಕ್ಷರಗಳಂತೆ ಅತ್ಯಂತ ಮಹಿಮೆಯಿಂದ ಕೂಡಿದೆ. ಮಹಾಕಾವ್ಯ ಶೈಲಿಯಲ್ಲಿ ರಚಿತವಾದ ಪ್ರಪ್ರಥಮ ಬೃಹತ್ ಸ್ತೋತ್ರ ಇದು. ಇದನ್ನು ದೇಶಿಕರು ನೈಜವಾದ ಭಕ್ತಿಯಿಂದ ಮೈಮರೆತು ಸುಂದರವಾದ ಪದಲಾಲಿತ್ಯ ಭಾವಗಳನ್ನು ತುಂಬಿ ಹೃದಯಗ್ರಾಹಿ ಭಕ್ತಿ ಕಾವ್ಯವನ್ನಾಗಿ ತೋರಿದ್ದಾರೆ. ಈ ಭಕ್ತಿಯ ಮಣಿಗಳ ಹಿಂದೆ ಇರುವ ತಂತು ಶ್ರೀರಾಮನ ಅಗಣಿತ ಮಹಿಮೆಗಳು. ಈ ಪಾದುಕೆಗಳಲ್ಲಿ ಲಕ್ಷ್ಮೀ ಅಧಿಷ್ಠಾನವಿರುವುದರಿಂದ ಸಮಸ್ತ ಆಸ್ತಿಕರಿಗೂ ಇದು ಪರಮ ಪವಿತ್ರ.

ಈ ಪಾದುಕೆಗಳನ್ನು ಅವರು ಹೇಗೆ ವರ್ಣಿಸಿದ್ದಾರೆ.

*"ಓ ಪಾದುಕೆಯೇ, ನಿನ್ನನ್ನು ಸ್ತುತಿಸುವುದಕ್ಕೆ ಬೇಕಾದ ಸಾಮರ್ಥ್ಯ ನನ್ನಲ್ಲಿದೆ ಎಂಬ ನಂಬಿಕೆ ನನಗೇ ಇಲ್ಲದಿದ್ದರೂ, ಆ ಕೆಲಸಕ್ಕೆ ನೀನೇ ನನ್ನನ್ನು ತೊಡಗಿಸುತ್ತಿದ್ದೀಯೆ. ಇದರ ಸತ್ಯತೆಯ ಬಗ್ಗೆ ಶ್ರೀರಂಗನಾಥನೇ ಪ್ರಮಾಣ. ಅವನ ಪದಕಮಲ ಸ್ತುತಿ ಮಾಡುವುದಕ್ಕೂ ನನ್ನ ಸಾಮರ್ಥ್ಯದ ಬಗೆಗೆ ನನಗೇ ನಂಬಿಕೆ ಇಲ್ಲವೆಂಬುದಕ್ಕೆ ನೀನು ಹೇಗೆ ಪ್ರಮಾಣವೋ ಹಾಗೆ ಪಾದುಕೇ, ವಿಶ್ವಾಧಾರಕನಾದ ಆ ಪರಮ ಪುರುಷನನ್ನೇ ಹೊತ್ತಿರುವವಳು ನೀನು. ವಿಶ್ವಕ್ಕೆ ಪರಮ ಗತಿಯಾದ ಆ ಪರಮ ಪುರುಷನಿಗೆ ರುಚಿರವಾದ ಗತಿಯನ್ನು ನೀಡುವವಳೂ ನೀನೇ. ಬ್ರಹ್ಮರುದ್ರಾದಿಗಳಿಗೂ ದುರ್ಬೋಧವಾದ ಮಹಿಮೆಯುಳ್ಳ ಅಂಥ ನೀನು ಕ್ಷುದ್ರರಾದ ನನ್ನಂಥ ಕವಿಗಳಿಗೆ ಸ್ತುತ್ಯ ವಿಷಯವಾಗುವುದಾದರೂ ಹೇಗೆ?"*- ಎಂದು ದೇಶಿಕರು ಕೇಳಿದ್ದಾರೆ. ಭಕ್ತಿಭಾವದಿಂದ,

*"ರಂಗನಾಥನ ಪಾದುಕೆಯೇ ನಿನ್ನ ಶಿಂಜಿತ ನಾದದಲ್ಲಿ ಅಮೃತ ಪ್ರವಾಹವಿದೆ.*

ಆದರಂಥ ಸೂಕ್ತಿಗಳು ನನ್ನಲ್ಲಿ ತಾನಾಗಿಯೇ ಬೇಗ ಬೇಗ ಉಕ್ಕಿ ಹರಿಯಲಿ ಎಂದು ಬೇಡಿದ್ದಾರೆ."[೧] ಭಕ್ತರ ಪಾಲಿಗೆ ಸ್ವಾಮಿಯ ಪಾದುಕೆಗಳು ಇಂಥ ಭಕ್ತ್ಯೋದ್ರೇಕವನ್ನು ಹುಟ್ಟಿಸಿದ್ದರೆ, ಇನ್ನು ಅವನ ಭುವನಮೋಹಕ ರೂಪವನ್ನು ಕಂಡವರು ಮೈಮರೆತು ನರ್ತಿಸಿದ್ದರೆ ಆಶ್ಚರ್ಯವೇನು?

೧೫

ದ್ವೈತ ಮತ ಪ್ರಚಾರಕರಾದ ಮಧ್ವಾಚಾರ್ಯರು ಉಡುಪಿಗೆ ಸಮೀಪದಲ್ಲಿರುವ ಪಾಜಕವೆಂಬ ಊರಿನಲ್ಲಿ ಜನ್ಮತಾಳಿದರು. ಇವರ ಬಾಲ್ಯದ ಹೆಸರು ವಾಸುದೇವ. ಇವರು ಉಡುಪಿಯಲ್ಲಿದ್ದ ಅಚ್ಯುತಪ್ರೇಕ್ಷರೆಂಬ ಭಾಗವತ ಸಂಪ್ರದಾಯದ ಸನ್ಯಾಸಿಗಳಿಂದ ಸಂನ್ಯಾಸವನ್ನು ಸ್ವೀಕರಿಸಿ ಆನಂದತೀರ್ಥರೆಂಬ ಹೆಸರನ್ನು ಪಡೆದರು. ಇವರು ಆನಂದಕರವಾದ ಮೋಕ್ಷಕ್ಕೆ ಕಾರಣವಾದ ದ್ವೈತ ಶಾಸ್ತ್ರವನ್ನು ಬೋಧಿಸಿದುದರಿಂದ ಮಧ್ವಾಚಾರ್ಯರೆಂದು ಪ್ರಸಿದ್ಧರಾದರು. ಇವರು ತತ್ತ್ವವಾದವೆಂಬ ಸನಾತನ ಸಿದ್ಧಾಂತವನ್ನು ಪ್ರಚಾರಕ್ಕೆ ತಂದು ಸರ್ವಜ್ಞ ಪೀಠವನ್ನೇರಿ ಸರ್ವಜ್ಞಾಚಾರ್ಯರೆನಿಸಿದರು.

ಇವರು ಬೋಧಿಸಿದ ಸಿದ್ಧಾಂತಕ್ಕೆ ತತ್ತ್ವವಾದವೆಂದೂ, ದ್ವೈತಮತವೆಂದೂ, ಸಚ್ಛಾಸ್ತ್ರವೆಂದೂ ಹೆಸರು. ಶಂಕರಾಚಾರ್ಯರು ಜೀವೇಶ್ವರ ಅಭೇದವನ್ನು ಎತ್ತಿ ಹಿಡಿದುದರಿಂದ ಅವರ ಮತ ಅದ್ವೈತವೆಂದು ಹೆಸರು ಪಡೆಯಿತು. ಜಗತ್ತಿನ ಸತ್ಯತ್ವವನ್ನು ಒಪ್ಪಿಕೊಂಡರೂ, ಪಾರಮಾರ್ಥಿಕ ಅದ್ವೈತವನ್ನು ಒಪ್ಪಿಕೊಂಡಿದ್ದರಿಂದ ರಾಮಾನುಜಾಚಾರ್ಯರ ಮತವು ವಿಶಿಷ್ಟಾದ್ವೈತ ಮತವೆನಿಸಿತು. ಆದರೆ ಇವೆರಡು ಸಿದ್ಧಾಂತಗಳನ್ನು ಖಂಡಿಸಿ, ಆಚಾರ್ಯ ಮಧ್ವರು ವೇದ ಸಮ್ಮತವೂ, ಬಾದರಾಯಣರಿಗೆ ಪ್ರಿಯವೂ ಆಗಿದ್ದ ದ್ವೈತ ಸಿದ್ಧಾಂತವನ್ನು ಎತ್ತಿ ಹಿಡಿದರು. ಅವರು ಹಿಂದಿನ ಇಪ್ಪತ್ತೊಂದು ಮತಗಳನ್ನು ಖಂಡಿಸಿ, ವೇದಶಾಸ್ತ್ರ ಪುರಾಣಗಳಿಂದ ವಿಪುಲವಾದ ಪ್ರಮಾಣಗಳನ್ನು ಒದಗಿಸಿ, ದ್ವೈತ ಸಿದ್ಧಾಂತವನ್ನು ಮಂಡಿಸಿದರು. ಈ ಸಿದ್ಧಾಂತವನ್ನು ಸಮರ್ಥಿಸುವಂತೆ ಪ್ರಸ್ಥಾನ

---

೧. ಆಶ್ರದ್ಧಧಾನಪಿ ನನ್ವಧುನಾ ಸ್ವಕೀಯೇ
ಸ್ತೋತ್ರೇ ನಿಯೋಜಯಸಿ ಮಾಂ ಮಣಿಪಾದುಕೇ ತ್ವಂ ।
ದೇವಃ ಪ್ರಮಾಣಮಿಹರಂಗಪತಿಸ್ತಥಾತ್ವೇ
ತಸ್ಯೈವ ದೇವಿ ಪದಪಂಕಜಯೋಃ ಯಥಾತ್ವಂ ।
ಯದಾಧಾರಂವಿಶ್ವಂ ಗತಿರಪಿ ಚ ಯಸ್ತಸ್ಯ ಪರಮಾ
ತಮಪ್ಯೇಕಾ ಧತ್ಸೇ ದಿಶಸಿ ಚ ಗತಿಂ ಸತ್ಯ ರುಚಿರಾ ।
ಕಥಂ ಸಾಕಂಸಾರೇ ದ್ರುಹಿಣಹರದುರ್ಬೋಧಮಹಿಮಾ
ಕವಿನಾಂ ಕ್ಷುದ್ರಾಣಾಂತ್ವಮಸಿ ಮಣಿಪಾದುಸ್ತುತಿಪದಂ ॥
ರಂಗಕ್ಷ್ಮಾಪತಿ ರತ್ನಪಾದುಭವತೀಂ ತುಷ್ಟೂಷತೋಮೇ ಜವಾತ್
ಜೃಂಭಂತಾಂ ಭವದೀಯ ಶಿಂಜಿತ ಸಾಧು ಸಂದೋಹ ಸಂದೇಹದಾಃ ।
ಶ್ಲಾಘಪೂರ್ಣಿತ ಚಂದ್ರಶೇಖರ ಟಟಾಜಂಘಾಲ ಗಂಗಾಪಯಾನ್
ತ್ರಾಸಾದೇಶ ವಿಶೃಂಖಲ ಪ್ರಸರಣೋತ್ಸಿಕ್ತಾಃ ಸ್ವಯಂ ಸೂಕ್ತಯಃ ।

- ಶ್ರೀ ಪಾದುಕಾ ಸಹಸ್ರ ಶ್ಲೋಕಗಳು- ೮, ೯, ೧೪

ತ್ರಯಗಳಾದ ಬ್ರಹ್ಮಸೂತ್ರ, ಉಪನಿಷತ್ತುಗಳು ಮತ್ತು ಭಗವದ್ಗೀತೆಗಳನ್ನು ವ್ಯಾಖ್ಯಾನ ಮಾಡಿ, ಭಾಷ್ಯ ಬರೆದ ಭಾಷ್ಯಾಕಾರರೆನಿಸಿದರು. ತಮ್ಮ ಗೀತಾಭಾಷ್ಯವನ್ನು ಬದರಿಯಲ್ಲಿದ್ದ ವೇದವ್ಯಾಸರಿಗೆ ತೋರಿಸಿ, ಅವರಿಗೆ ಸಮ್ಮತವಾದ ರೀತಿಯಲ್ಲಿ ಉಪನಿಷತ್ತು, ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದು ವೇದಾಗಮಗಳಲ್ಲಿ ಪ್ರತಿಪಾದ್ಯವಾಗಿದ್ದ ಅಪೌರುಷೇಯವಾದ ಸತ್‌ಸಿದ್ಧಾಂತವನ್ನು, ತತ್ತ್ವವಾದವನ್ನು ತರ್ಕ, ಯುಕ್ತಿ, ಪ್ರಮಾಣಗಳಿಂದ ಸಾಧಿಸಿ, ಇದೊಂದೇ ವೇದ ಸಮ್ಮತವಾದ ಮತವೆಂದು ಘೋಷಿಸಿ, ಭಾರತದಲ್ಲೆಲ್ಲಾ ಪ್ರವಾಸಮಾಡಿ ವಾದಿಗಳನ್ನು ಗೆದ್ದು, ತಮ್ಮ ಮತ ಪ್ರಚಾರ ಮಾಡಿದರು. ಅವರ ಈ ಕಾರ್ಯವನ್ನು ನೋಡಿ ಶಂಕರಾಚಾರ್ಯರನ್ನು ಶಂಕರನ ಅವತಾರವೆಂದು ಹೇಳಿದಂತೆ, ರಾಮಾನುಜಾಚಾರ್ಯರನ್ನು ಆದಿಶೇಷನ ಅವತಾರವೆಂದೂ ಹೇಳುವಂತೆ, ಮಧ್ವಾಚಾರ್ಯರನ್ನು ವಾಯುದೇವರ ಅವತಾರವೆಂದೂ, ಜೀವೋತ್ತಮರೆಂದು ಹೇಳುತ್ತಾರೆ.

ಮಧ್ವಾಚಾರ್ಯರು ಪ್ರಚಾರ ಮಾಡಿದ ದ್ವೈತ ಸಿದ್ಧಾಂತದ ಪ್ರಮೇಯಗಳನ್ನು ಚಂದ್ರಿಕಾರಾಯರೆಂದು ಪ್ರಸಿದ್ಧರಾಗಿರುವ ವ್ಯಾಸರಾಯರು ತಾವು ರಚಿಸಿರುವ ವೇದಾಂತ ಸ್ತೋತ್ರ ವೆಂಬ ಈ ಶ್ಲೋಕದಲ್ಲಿ ಚೆನ್ನಾಗಿ ಪ್ರತಿಪಾದಿಸಿದ್ದಾರೆ.

*ಶ್ರೀಮನ್ಮಧ್ವಮತೇ ಹರಿಃ ಪರಿತರಃ ಸತ್ಯಂ ಜಗತ್ತತ್ವತೋ*
*ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚ ಭಾವಂಗತಾಃ ।*
*ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ*
*ಹ್ಯಕ್ಷಾದಿತ್ರಿತಯಂ ಪ್ರಮಾಣಖಿಲಾಮ್ನಾಯೈಕನೇದ್ಯೋ ಹರಿಃ ॥*

ಇದರಲ್ಲಿ ಪ್ರತಿಪಾದಿತವಾದ ವಿಷಯಗಳು ಇವು. ಶ್ರೀಮಧ್ವಾಚಾರ್ಯರ ಮತದಂತೆ-

೧. ಶ್ರೀಹರಿಯೇ ಸರ್ವೋತ್ತಮ.

೨. ಈ ಜಗತ್ತು ವಾಸ್ತವವಾಗಿ ಸತ್ಯ.

೩. ಜಡ-ಜೀವ, ಜಡ-ಜಡ, ಜೀವ-ಜೀವ, ಜಡ-ಪರಮಾತ್ಮ, ಜೀವ-ಪರಮಾತ್ಮ ಎಂಬ ಐದು ಬಗೆಯ ಭೇದವೂ ವಾಸ್ತವವಾಗಿ ಸತ್ಯ.

೪. ಜೀವರಾಶಿಗಳೆಲ್ಲ ಶ್ರೀಹರಿಗೆ ಅಧೀನವಾಗಿರುವುವು.

೫. ಜೀವರು ತಮ್ಮೊಳಗೆ ಉಚ್ಚ, ನೀಚರೆಂದು ತಾರತಮ್ಯವನ್ನು ಹೊಂದಿದ್ದಾರೆ.

೬. ತನ್ನ ಸ್ವರೂಪಕ್ಕೆ ಅನುಗುಣವಾದ ಸುಖವನ್ನು ಜೀವನು ಪಡೆಯುವುದೇ ಮೋಕ್ಷ.

೭. ನಿರ್ದೋಷವಾದ ಭಕ್ತಿಯೇ ಮುಕ್ತಿಗೆ ಸಾಧನ.

೮. ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಮೂರು ಪ್ರಮಾಣಗಳು.

೯. ಎಲ್ಲ ವೇದಗಳಿಂದ ಮಾತ್ರವೇ ಹರಿಯನ್ನು ತಿಳಿಯುವುದು ಸಾಧ್ಯ.

ಈ ಒಂಭತ್ತು ಅಂಶಗಳನ್ನು ಬಂಗಾಳದ ವಿದ್ಯಾಭೂಷಣ ಬಲದೇವನೆಂಬ ವಿದ್ವಾಂಸರು ಪ್ರಮೇಯ ರತ್ನಾವಳಿ ಗ್ರಂಥದಲ್ಲಿ -

*ಆನಂದತೀರ್ಥೈ ರಚಿತಾನಿ ಯಸ್ಯಾಂ ಪ್ರಮೇಯರತ್ನಾನಿ ನವೈವ ಸಂತಿ ॥*
*ಪ್ರಮೇಯ ರತ್ನಾವಳಿರಾದರೇಣ ಸುಧೀಭಿರೇಷಾ ಹೃದಯೇ ನಿಧೇಯಾ॥*

ಅಂದರೆ ಆನಂದತೀರ್ಥರು ವಿರಚಿಸಿರುವ ಒಂಭತ್ತು ಪ್ರಮೇಯಗಳೆಂಬ ರತ್ನಗಳು ಸೇರಿರುವ ಈ ಪ್ರಮೇಯ ರತ್ನಾವಳಿ ಎಂಬ ಗ್ರಂಥವನ್ನು ವಿದ್ವಾಂಸರು ತಮ್ಮ ಹೃದಯದಲ್ಲಿ ಸೇರಿಸಿಕೊಳ್ಳಲಿ ಎಂದು ಬರೆದಿದ್ದಾರೆ.

ಮಧ್ವಾಚಾರ್ಯರು ತಾವು ರಚಿಸಿರುವ ವಿಷ್ಣು ತತ್ವನಿರ್ಣಯ ಎಂಬ ಗ್ರಂಥದ ಮಂಗಳ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

*ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಂ।*
*ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ॥*

*"ನಾನು ನಾರಾಯಣನನ್ನು ಯಾವಾಗಲೂ ವಂದಿಸುವೆ. ಸದಾಗಮಗಳಾದ ವೇದಗಳು, ರಾಮಾಯಣ, ಮಹಾಭಾರತ, ಪಂಚರಾತ್ರ ಮತ್ತು ಅವುಗಳಲ್ಲಿನ ಅಭಿಪ್ರಾಯಗಳನ್ನು ಅನುಮೋದಿಸುವ ಪುರಾಣಗಳು -ಇವುಗಳಿಂದ ಮಾತ್ರವೇ ನಾರಾಯಣನನ್ನು ನಾವು ಅರಿತುಕೊಳ್ಳಬಹುದು. ಕ್ಷರವೆಂದು ಸಂಜ್ಞೆ ಪಡೆದಿರುವ ಬ್ರಹ್ಮಾದಿ ಸಮಸ್ತ ಜೀವರಾಶಿಗಳಿಗಿಂತಲೂ ಅಕ್ಷರವೆನಿಸಿಕೊಂಡಿರುವ ಮಹಾಲಕ್ಷ್ಮಿಗಿಂತಲೂ ಶ್ರೀಹರಿಯು ಉತ್ತಮನು. ಅವನು ಸರ್ವಥಾ ದೋಷರಹಿತನು ಮತ್ತು ಜ್ಞಾನಾನಂದಾದಿ ಸಮಸ್ತ ಸದ್ಗುಣಗಳಿಂದ ಪೂರ್ಣನೂ ಆಗಿರುವನು"* ಎಂಬುದಾಗಿ ಹೇಳಿದ್ದಾರೆ. ಈ ಒಂಭತ್ತು ಮುಖ್ಯ ಪ್ರಮೇಯಗಳನ್ನು ಪ್ರಮೇಯ ನವಮಾಲಿಕಾ ಎಂದು ಕರೆದಿದ್ದಾರೆ.

ಮಧ್ವಮತದಲ್ಲಿ ಶ್ರೀಹರಿಯನ್ನು ಅರಿತುಕೊಳ್ಳಲು ವೇದಾಗಮಗಳೊಂದೇ ಮಾರ್ಗ. ಈ ವೇದಾಗಮಗಳಲ್ಲಿ ಜ್ಞಾನ ಮಾರ್ಗವನ್ನು ಹೇಳಿದ್ದಾರೆ, ಕರ್ಮ ಮಾರ್ಗವನ್ನು ಹೇಳಿದ್ದಾರೆ, ಯೋಗ ಮಾರ್ಗವನ್ನು, ಭಕ್ತಿ ಮಾರ್ಗವನ್ನು ಹೇಳಿದ್ದಾರೆ. ಈ ಎಲ್ಲ ಮಾರ್ಗಗಳಿಂದಲೂ ಪರಮಾತ್ಮನ ಸಾಕ್ಷಾತ್ಕಾರ ಅಂದರೆ ಅಪರೋಕ್ಷ ಜ್ಞಾನ ದೊರಕಬಹುದಾದರೂ, ಸುಲಭವೂ, ಸರಳವೂ ಆದ ಮಾರ್ಗ ಭಕ್ತಿ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ, ಮಧ್ವಾಚಾರ್ಯರು. ಜ್ಞಾನ ಪೂರ್ವಕವಾಗಿ ಭಗವಂತನ ಮಹಿಮೆಯನ್ನು ಅರಿತು ಮಾಡುವ ದೃಢ ಭಕ್ತಿಯೇ ಭಗವಂತನನ್ನು ಒಲಿಸಿಕೊಳ್ಳಲು ಇರುವ ಸರಳ ಮಾರ್ಗ. ಅವನ ಅನುಗ್ರಹ ಸಂಪಾದನೆಯಾಯಿತೆಂದರೆ ಜೀವನಿಗೆ ಮೋಕ್ಷವಾಯಿತೆಂದೇ ಅರ್ಥ. ಹೀಗೆ ಆಚಾರ್ಯತ್ರಯರಲ್ಲಿ ಶಂಕರಾಚಾರ್ಯರು ಜ್ಞಾನ ಮಾರ್ಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟದ್ದಂತೆ, ರಾಮಾನುಜಾಚಾರ್ಯರು ಪ್ರಪತ್ತಿ ಮಾರ್ಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಮಧ್ವಾಚಾರ್ಯರು ಜ್ಞಾನ ಪೂರ್ವಕವಾಗಿ ಮಾಡುವ ಭಗವದ್ಭಕ್ತಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಆದುದರಿಂದ ಮಧ್ವಾಚಾರ್ಯರು ಪ್ರತಿಪಾದಿಸಿದ ಸದ್ಭಕ್ತಿ ಅಥವಾ ದೃಢಭಕ್ತಿಯ ಬಗೆಗೆ ಹೆಚ್ಚಿನ ವಿವರಗಳನ್ನು ತಿಳಿಯುವುದು ಅಗತ್ಯವಿದೆ.

ಪರಮಾತ್ಮನಲ್ಲಿ ಜೀವರು ಭಕ್ತಿಯನ್ನು ಏಕೆ ಮಾಡಬೇಕು? ಈ ಪ್ರಶ್ನೆಗೆ ಉತ್ತರ ಹೇಳುವುದು ಸುಲಭ. ಯಾರು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದವನೋ, ಯಾರು ಬಂಧ - ಮೋಕ್ಷಾದಿ ಅಷ್ಟಕರ್ತೃತ್ವ ಶಕ್ತಿಯುಳ್ಳವನೋ ಅಂಥವನನ್ನು ಉಪಾಸನೆ ಮಾಡಿದರೆ, ಅಂಥವನಲ್ಲಿ ಭಕ್ತಿ ಮಾಡಿದರೆ ಭಕ್ತನ ಇಷ್ಟಾರ್ಥಗಳು ಈಡೇರುವುದೇ ಹೊರತು, ಅಸ್ವತಂತ್ರ

ರಾದವರನ್ನು ಸ್ತೋತ್ರ ಮಾಡಿದರೆ, ಸೀಮಿತವಾದ ಫಲಗಳು ದೊರಕುತ್ತವೆ. ಭಗವಂತನು ಅನೇಕ ಗುಣಗಳಿಂದ ಲಕ್ಷ್ಮೀದೇವಿಗಿಂತಲೂ ಶ್ರೇಷ್ಠನು. ಬ್ರಹ್ಮ ರುದ್ರಾದಿಗಳು ಅವನನ್ನು ತಿಳಿಯಲು ಅಸಮರ್ಥರಾಗಿದ್ದಾರೆ - ಎಂದ ಮೇಲೆ ಉಳಿದ ದೇವತೆಗಳ ಪಾಡೇನು? ನಾವು ಭಕ್ತಿ ಮಾಡಿದರೆ ಇಂಥ ಸರ್ವತಂತ್ರ ಸ್ವತಂತ್ರನಾದ ಜ್ಞಾನಾನಂದಾದಿ ಸಕಲಗುಣ ಪರಿಪೂರ್ಣನಾದ, ದೋಷ ದೂರನಾದ ಸ್ವಾಮಿಯನ್ನು ಕುರಿತು ಮಾಡಬೇಕು. ಯಾರು ಜನನ ಮರಣಗಳಿಂದ ಬಿಡುಗಡೆ ಮಾಡಿ, ಜೀವನಿಗೆ ಮೋಕ್ಷ ಸುಖವನ್ನು ನೀಡಬಲ್ಲನೋ ಅಂಥ ಜಗತ್ಪ್ರಭುವನ್ನು ಕುರಿತು ಭಕ್ತಿ ಮಾಡಬೇಕು. ಈ ಮಾತಿಗೆ ಪುರುಷಸೂಕ್ತದಲ್ಲಿ ಪುರುಷನಾಮಕ ಪರಮಾತ್ಮನು ಹೀಗೆ ಸ್ಪಷ್ಟವಾಗಿ ತಿಳಿಸಿದ್ದಾನೆ.

*"ನಾನು ಇಚ್ಛಿಸಿದರೆ ಬ್ರಹ್ಮ ಪದಯೋಗ್ಯನಾದ ಜೀವನಿಗೆ ಬ್ರಹ್ಮ ಪದವಿಯನ್ನೂ, ರುದ್ರ ಪದವಿ ಯೋಗ್ಯನಿಗೆ ರುದ್ರಪದವಿಯನ್ನೂ ಕೊಡುತ್ತೇನೆ. ಮೇಧಾವಿಯನ್ನು ಮಾಡಬೇಕೆಂದು ಅಪೇಕ್ಷಿಸಿದರೆ ಅಂಥವರನ್ನು ಮೇಧಾವಿಯನ್ನಾಗಿಯೂ, ಇದರಂತೆ ಋಷಿಯನ್ನೂ, ಜ್ಞಾನಿಯನ್ನೂ ಮಾಡುವೆನು."* ೧

ಶ್ರೀಹರಿಯು ಲಕ್ಷ್ಮೀದೇವಿಗೆ ಪತಿಯೂ ರಮಣನೂ ಆಗಿದ್ದಾನೆ. ಈ ಲಕ್ಷ್ಮೀದೇವಿ ಯಾದರೋ ಬ್ರಹ್ಮಾದಿಪದ ಪ್ರಧಾನದಿಂದ ಇಷ್ಟಳೂ, ವಿಶೇಷಳೂ ಆಗಿದ್ದಾಳೆ. ನಾರಾಯಣನು ಇಷ್ಟನೂ, ವಿಶಿಷ್ಟನೂ, ಅಧಿಕೃತನೂ ಆಗುವುದರಿಂದ ಅವನಲ್ಲಿ ಸದ್ಗುಣ ಪೂರ್ಣತ್ವವೂ, ನಿರ್ದೋಷತ್ವವೂ ಸಿದ್ಧವಾಗುತ್ತದೆ. ಭಗವಂತನ ನಿರ್ದೋಷತ್ವವನ್ನು *"ನಿತ್ಯಾಗಣಿತಗುಣಾಕ್ಯ ವಿಶದ ಪ್ರಭಾಜಾಲೋಲ್ಲಾಸೋಪಹತ ಸಕಲಾವದ್ಯ ತಮಸೇ"* - ಎಂದು ಶ್ರೀಮನ್ನ್ಯಾಯಸುಧಾದ ಗ್ರಂಥದಲ್ಲಿ ಶ್ರೀಜಯತೀರ್ಥರೂ, *"ಅಸ್ಪೃಷ್ಟ ದೋಷಗಂಧಾಯ ಕಲ್ಯಾಣ ಸಿಂಧವೇ"* - ಎಂಬುದಾಗಿ ಶ್ರೀ ವ್ಯಾಸರಾಯರು ತಾತ್ಪರ್ಯ ಚಂದ್ರಿಕಾ ಗ್ರಂಥದಲ್ಲೂ ವರ್ಣಿಸಿದ್ದಾರೆ. ಹೀಗಾಗಿ ಪರಮಾತ್ಮನು ಲವಲೇಶ ಗಂಧಸ್ಪರ್ಶರಹಿತನೂ, ಕಲ್ಯಾಣಗುಣ ಸಿಂಧುವೂ ಎಂಬುದು ನಿರ್ಣಯವಾದಂತಾಯಿತು.

ಇಂಥ ಭಗವಂತನನ್ನು ಪಡೆಯುವ ದಾರಿ ಯಾವುವು? ಸದ್‌ಜ್ಞಾನ ವೈರಾಗ್ಯ ಪೂರ್ವಕವಾದ ಭಕ್ತಿಯೋಗವೊಂದೇ ದಾರಿ. ನಿರ್ಮಲ ಭಕ್ತಿಗೆ ಮಾತ್ರವೇ ಅವನು ಗಮ್ಯನು, ಪ್ರಾಪ್ತನು. ಸಜ್ಜನರಿಗೆ ಮಾತ್ರವೇ ಭಗವಂತನ ಪ್ರಸಾದ ರೂಪವಾದ ಅಪರೋಕ್ಷವೂ, ಶಾಶ್ವತವೂ ಆದ ಮೋಕ್ಷವೆಂಬ ಸ್ವರೂಪಾವಿರ್ಭಾವರೂಪವಾದ ಸುಖವು ಲಭಿಸುತ್ತದೆ. ಈ ಮೋಕ್ಷ ಕಾರಣ ವಾಗುವ ಪರಿಪಕ್ವ ಭಕ್ತಿಗೆ ಇರುವ ಮೆಟ್ಟಲುಗಳೆಂದರೆ ವಿವೇಕ, ವೈರಾಗ್ಯ, ಭಕ್ತಿ, ಭಗವದ್ಪ್ರಸಾದ ದ್ವಾರಾ ಮುಕ್ತಿ. ಈ ಭಾವವನ್ನು ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ,

*"ಮಹಾತ್ಮ್ಯ ಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।*
*ಸ್ನೇಹೋ ಭಕ್ತಿರಿತಿಪ್ರೋಕ್ತಸ್ತಯಾ ಮುಕ್ತಿರ್ನ ಚಾಥಾ"*

- ಎಂದು ಸಂಗ್ರಹವಾಗಿ ಹೇಳಿದ್ದಾರೆ.

---

೧. ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ ಮಮ ಯೋನಿರಪ್ಸ್ವಂತಃ ಸಮುದ್ರೇ - ಇತ್ಯಾದಿ - **ಪುರುಷಸೂಕ್ತ**

ಈ ಶ್ಲೋಕದ ತಾತ್ಪರ್ಯವೇನೆಂದರೆ ನಿರವಧಿಕವೂ, ಅನಂತವೂ, ದೋಷರಹಿತವೂ ಅನಂತ ಕಲ್ಯಾಣಗುಣಾತ್ವ ಜ್ಞಾನ ಪೂರ್ವಕವೂ, ತಾನು ಮತ್ತು ತನ್ನವರಾದ ದಾರಾಪತ್ಯ ಧನ (ಹೆಂಡತಿ, ಮಕ್ಕಳು, ಹಣ) ಮೊದಲಾದ ಸಮಸ್ತ ವಸ್ತುಗಳಿಂದ ಅನೇಕ ಗುಣ ಅಧಿಕವೂ, ಎಷ್ಟು ಅಡ್ಡಿ, ತಡೆ, ವಿಘ್ನಗಳು ಬಂದರೂ ನಿಲ್ಲದಿರುವ ನಿರಂತರ ಪ್ರೇಮ ಅಂದರೆ ಸ್ನೇಹ ಪ್ರವಾಹ ರೂಪವಾದುದು -ಎಂದು ಶ್ರೀ ಮಧ್ವಾಚಾರ್ಯರ ಶ್ಲೋಕದ ಅರ್ಥವನ್ನು ವಿವರಿಸುತ್ತಾ ಶ್ರೀಜಯತೀರ್ಥರು ಶ್ರೀಮನ್ನ್ಯಾಯಸುಧಾ ಗ್ರಂಥದಲ್ಲಿ ಹೇಳಿದ್ದಾರೆ.[೧]

ಈ ಮಾನದಂಡದಿಂದ ಅಳೆಯುವಾಗ ನಾಲ್ಕು ಬಗೆಯ ಭಕ್ತಿ ಪ್ರಬೇಧಗಳು ಕಾಣುತ್ತವೆ. ೧.ಅಪಕ್ವ ಭಕ್ತಿ, ೨)ಪಕ್ವಭಕ್ತಿ, ೩)ಪರಿಪಕ್ವ ಭಕ್ತಿ, ೪)ಅತಿಪರಿಪಕ್ವ ಭಕ್ತಿ- ಈ ಬಗೆಯ ಭಕ್ತಿ ವೈವಿಧ್ಯಕ್ಕೆ ಮಧ್ವಾಚಾರ್ಯರು ತಮ್ಮ ಗೀತಾ ತಾತ್ಪರ್ಯದಲ್ಲಿ ಶ್ರುತಿಸ್ಮೃತಿಗಳಿಂದ ಪ್ರಮಾಣಗಳನ್ನು ಒದಗಿಸಿದ್ದಾರೆ.[೨]

ಭಗವಂತನಲ್ಲಿ ಭಕ್ತಿಯು ಮೊದಲ ಹಂತದಲ್ಲಿ ಅಲ್ಪವಾಗಿರುತ್ತದೆ. ಈ ಅಲ್ಪ ಭಕ್ತಿಗೆ ಒಲಿದ ಭಗವಂತನು ಆಕುಲವಾಗಿರುವ ಜ್ಞಾನವನ್ನು ಅಕುಲರಹಿತವನ್ನಾಗಿ (ಅನಾಕೂಲ) ಮಾಡುತ್ತಾನೆ. ಅನಾಕುಲ ಭಕ್ತಿ ಜ್ಞಾನಗಳಿಂದ ಅಭಿವೃದ್ಧಿಗೊಂಡ ಭಕ್ತಿಯಿಂದ ಪ್ರಸನ್ನನಾದ ಭಗವಂತನು ತನ್ನ ದರ್ಶನವನ್ನು ಭಕ್ತನಿಗೆ ಅನುಗ್ರಹಿಸುತ್ತಾನೆ. ಇಂಥ ಪರಿಪಕ್ವ ಭಕ್ತಿಯಿಂದ ಭಕ್ತನು ಮುಕ್ತನಾಗುತ್ತಾನೆ.

ಮುಕ್ತಿ ಸ್ಥಿತಿಯಲ್ಲಿ ಭಕ್ತನಿಗೆ ಸ್ವಸ್ವರೂಪಾನಂದದ ಅವಿರ್ಭಾವವಾಗುತ್ತದೆ. ಆದುದರಿಂದಲೇ ಭಕ್ತಿಗೆ ಸರ್ವ ಸಾಧನೋತ್ತಮತ್ವವನ್ನು ಜ್ಞಾನಿಗಳು ನೀಡಿದ್ದಾರೆ.

ಇಲ್ಲಿ ತಿಳಿಸಿರುವ ಅನಾಕುಲ ಭಕ್ತಿ ಎಂದರೆ ಭಗವಂತನ ವಿಷಯದಲ್ಲಿ ಮಹಾತ್ಮ್ಯ ಜ್ಞಾನ ದಿಂದ ದೊರಕುವ ಗಾಢವಾದ ಸ್ಥಿರಭಕ್ತಿ, ಭೂಯೋಭಕ್ತಿಃ ಎಂದರೆ ಹೆಚ್ಚು ಹೆಚ್ಚಾದ ಭಕ್ತಿ, ತದ್ವಶಃನೆಂದರೆ ಮುಕ್ತ ಸ್ಥಿತಿಯಲ್ಲೂ ಭಕ್ತನು ಭಗವಂತನಿಗೆ ಅಧೀನನಾಗಿರುತ್ತಾನೆ. ಅಂದರೆ ಅವನು

---

೧. ನಿರನಧಿಕಾನಂತಾನವದ್ಯ ಕಲ್ಯಾಣ ಗುಣತ್ವಜ್ಞಾನಪೂರ್ವಸ್ವಾತ್ಮೀಯ ಸಮಸ್ತವಸ್ತು ಭ್ಯೋಽನೇಕ ಗುಣಾಧಿಕಾಂತರಾಯ ಸಹಸ್ರೇಣಾಪ್ಯ ಪ್ರತಿಬದ್ಧೋ ನಿರಂತರ ಪ್ರವಾಹಃ ।

- ಶ್ರೀಮನ್ನ್ಯಾಯಸುಧಾ

೨. ಭಕ್ತ್ಯಾ ಪ್ರಸನ್ನಃ ಪರಮೋ ಡದ್ಯಾದ್ ಜ್ಞಾನಮನಾಕುಲಂ ।
ಭಕ್ತಿಂ ಚ ಭೂಯಸೀಂ ತಾಭ್ಯಾಂ ಪ್ರಸನ್ನೇ ದರ್ಶನಂ ವ್ರಜೇತ್ ॥
ತತೋಽಪಿ ಭೂಯಸೀಂ ಭಕ್ತಿಂ ದದ್ಯಾತ್ತನ್ನಾನ್ಯಥಾ ಭವೇತ್ ।
ಮುಕ್ತೋಽಪಿ ಸದ್ವಶೋ ನಿತ್ಯಂ ಭೂಯೋ ಭಕ್ತಿ ಸಮನ್ವಿತಃ ॥
ಸಾಧ್ಯಾನಂದ ಸ್ವರೂಪೈವ ಭಕ್ತಿರ್ನೈವಾತ್ರ ಸಾಧನಂ ।
ಬ್ರಹ್ಮ ರುದ್ರರಮಾದಿ ಭ್ಯೋಽ ಪುತ್ತಮತ್ವಂ ಸ್ವತಂತ್ರತಾಂ ॥
ಸರ್ವಸ್ಯ ತದಧೀನತ್ವಂ ಸರ್ವಸದ್ಗುಣ ಪೂರ್ಣತಾಂ ।
ನಿರ್ದೋಷತ್ವಂ ಚ ವಿಜ್ಞಾಯ ವಿಷ್ಣೋಸ್ತತ್ರಾಖಿಲಾಧಿಕಃ ॥
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಸರ್ವೋಪಾಯೋತ್ತಮೋತ್ತಮಃ ।
ತೇನೈವ ಮೋಕ್ಷೋ ನಾನ್ಯೇನ ದೃಷ್ಟ್ಯಾದಿಸ್ತಸ್ಯ ಸಾಧನಂ ॥ - ಗೀತಾ ತಾತ್ಪರ್ಯ

ಈಶದಾಸ ಭಾವದಲ್ಲಿರುತ್ತಾನೆ ಎಂದು ಅರ್ಥ. ಇಲ್ಲಿ ಜೀವ ಬ್ರಹ್ಮೈಕ್ಯವಾದದಲ್ಲಿ ಕಂಡು ಬರುವ ಮುಕ್ತಿಯೊಡನೆ ಹೋಲಿಸಬಹುದು. ಶಂಕರಾಚಾರ್ಯರಿಗೂ ಮಧ್ವಾಚಾರ್ಯರಿಗೂ ಈ ವಿಷಯದಲ್ಲಿ ಧ್ರುವಧ್ರುವಗಳಷ್ಟು ಅಂತರವಿದೆ ಈ ಮುಕ್ತಿಸ್ಥಿತಿಯಲ್ಲಿ ಸಾಧನವೇನೂ ಇರುವುದಿಲ್ಲ. ಸಾಧನದ ಫಲರೂಪವಾದ ಆನಂದ ಮಾತ್ರವಿರುತ್ತದೆ. ಪಕ್ವ ಭಕ್ತಿಯಲ್ಲಿ ಜ್ಞಾನ ಸಾಧನವೇ ಹೊರತು ಶ್ರವಣ ಮನನಾದಿಗಳಿರುವುದಿಲ್ಲ ಎಂದು ನ್ಯಾಯ ದೀಪಿಕಾದಲ್ಲಿ ಉಕ್ತವಾಗಿದೆ

ಇಲ್ಲಿ ಗೀತಾಚಾರ್ಯ ಹೇಳುವ ಉಪಾಸನಾ ಮಾರ್ಗವನ್ನು ಜ್ಞಾಪಿಸಿಕೊಳ್ಳಬೇಕು. "ಭಕ್ತಿಮಾನ್ ಪರಮೋ ವಿಷ್ಣೌ ಯಸ್ತ್ವಧ್ಯಯನವಾನ್ ನರಃ" - ಅಂದರೆ ಹರಿಭಕ್ತಿ ಪೂರ್ವಕವಾದ ವೇದ ಶಾಸ್ತ್ರಾಧ್ಯಯನವೂ ಜ್ಞಾನ ಸಾಧನವು. ಸಾಧಾರಣವಾದ ಭಕ್ತಿಯಿಂದಲೂ, ಸಾಧಾರಣವಾದ ವೈರಾಗ್ಯದಿಂದಲೂ, ಸತ್ಕರ್ಮ ಅಧ್ಯಯನ, ಶ್ರವಣ ಮೊದಲಾದವುಗಳಿಂದ ಪಕ್ವ ಭಕ್ತಿ ಬರುತ್ತದೆ. ಇಂಥ ಪಕ್ವ ಭಕ್ತಿಯಿಂದ ತತ್ತ್ವಜ್ಞಾನವುಂಟಾಗುತ್ತದೆ. ತತ್ತ್ವಜ್ಞಾನದಿಂದ ಧ್ಯಾನವೂ, ಧ್ಯಾನದಿಂದ ಪರಿಪಕ್ವ ಭಕ್ತಿ ಹುಟ್ಟುತ್ತದೆ. ಇಂಥ ಪರಿಪಕ್ವ ಭಕ್ತಿಯಿಂದ ಅಪರೋಕ್ಷ ಜ್ಞಾನ; ಅಂಥ ಅಪರೋಕ್ಷ ಜ್ಞಾನದಿಂದ ಭಕ್ತಿಯಲ್ಲಿ ಮುಮುಕ್ಷು ಸಂಬಂಧಿಯಾದ ಚರಮಸಾಧನ ಪ್ರಸಾದ ರೂಪವಾದ ಭಗವಂತನ ಅನುಗ್ರಹವುಂಟಾಗುತ್ತದೆ. ("ತೇ ನೈವ ಮೋಕ್ಷೀ ನಾನ್ಯೇನ") ಮೋಕ್ಷವಾಗಬೇಕಾದರೆ ವೈರಾಗ್ಯಕ್ಕೆ ಕಾರಣವಾಗುವ ನಿವೃತ್ತ ಕರ್ಮ, ಅಧ್ಯಯನ, ಶ್ರವಣಾದಿಗಳಿಂದ ಲಭಿಸುವ ತತ್ತ್ವಜ್ಞಾನ ಅಗತ್ಯ. ಹೀಗೆ "ಭಕ್ತಿರ್ಮೋಕ್ಷಾಯ ಕೇವಲಂ" ಮೋಕ್ಷಕ್ಕೆ ಭಕ್ತಿಯೇ ಪರಮ ಮುಖ್ಯ ಸಾಧನವು ಎಂದು ತಿಳಿದಂತಾಯಿತು.

ಮಧ್ವಾಚಾರ್ಯರು ಕರ್ಮನಿರ್ಣಯವೆಂಬ ಗ್ರಂಥದಲ್ಲಿ ಮೋಕ್ಷ ಸಾಧನೆಗೆ ಭಗವದ್ಭಕ್ತಿ ಜ್ಞಾನ ವೈರಾಗ್ಯ ಪೂರ್ವಕವಾಗಿ ಮಾಡುವ ಕರ್ಮಗಳನ್ನು ಒತ್ತಿ ಹೇಳಿದ್ದಾರೆ. ಅವರ ಪ್ರಕಾರ ಯಜ್ಞಯಾಗಾದಿಗಳು, ಕೂಪ, ತಟಾಕಾದಿಗಳ ನಿರ್ಮಾಣ (ಧರ್ಮಕಾರ್ಯ) ಅನ್ನದಾನಾದಿಗಳು ಶ್ರೇಯಸ್ಸಾಧನಗಳೆಂಬುದು ದಿಟ. ಇವುಗಳಿಂದ ಪುಣ್ಯ ಲಭಿಸುತ್ತದೆ. ಸ್ವರ್ಗಭೋಗ ದೊರಕುತ್ತದೆ. ಆದರೆ ಭಗವಂತನ ಸಾಕ್ಷಾತ್ಕಾರವಾಗುವುದಿಲ್ಲ. ಮೋಕ್ಷ ದೊರಕುವುದಿಲ್ಲ. ವಿಷ್ಣುವನ್ನು ಬ್ರಹಾದಿಗಳಿಗೆ ಸಮನೆಂದು ತಿಳಿದವರಾಗಲಿ, ತಾನೇ ಬ್ರಹ್ಮ ವಸ್ತುವಾದ ವಿಷ್ಣುವೆಂದವರಾಗಲಿ, ಅಂಧ ತಮಸ್ಸಿಗೆ ಬೀಳುತ್ತಾರೆ.

ಒಂದುವೇಳೆ ಫಲಾಪೇಕ್ಷೆಯಿಲ್ಲದೆ ಕರ್ಮಾನುಷ್ಠಾನ ಮಾಡಿದರೂ ಭಗವಂತನಲ್ಲಿ ಭಕ್ತಿ ಇಲ್ಲದಿದ್ದರೆ ನಿಷ್ಕಾಮ ಕರ್ಮವೂ ವ್ಯರ್ಥವಾಗುತ್ತದೆ. ಇದರಂತೆ ಭಗವದ್ಭಕ್ತಿ ಇಲ್ಲದ ಜ್ಞಾನವೂ ಉತ್ತಮ ಜ್ಞಾನವಾಗಲಾರದು, ಶುಭಫಲವನ್ನು ಕೊಡಲಾರದು. ಭಗವಂತನ ಪ್ರಸಾದವನ್ನು ದೊರಕಿಸಿಕೊಡಲಾರದು.

ಭಗವದ್ಗೀತೆಯಲ್ಲಿ ಇದೇ ಮಾತನ್ನು ಶ್ರೀಕೃಷ್ಣನು ಹೇಳುತ್ತಾನೆ. ವಿಷ್ಣುಸರ್ವೋತ್ತಮತ್ವವನ್ನು ತಿಳಿಯದೆ ವೇದೋಕ್ತ ರೀತಿಯಿಂದ ಜ್ಞಾನಪೂರ್ವಕ ಯಾಗ ಮಾಡುವವರು ಪುಣ್ಯಗಳಿಸಿ ಸ್ವರ್ಗಲೋಕ ಗಳಿಸುತ್ತಾರೆ ಪುಣ್ಯ ಕ್ಷಣಿಸಿದ ಮೇಲೆ ಮತ್ತೆ ಭೂಲೋಕಕ್ಕೆ ಬರುತ್ತಾರೆ- ಇವರು ಮೋಕ್ಷವನ್ನು ಪಡೆಯುವುದಿಲ್ಲ. ಇದರಂತೆ ತಪಸ್ಸು ಮಾಡುವವರು, ದಾನ ಧರ್ಮ ಮಾಡುವವರೂ,

ಸತ್ಕರ್ಮಗಳನ್ನು ಮಾಡುವವರೂ ಸ್ವರ್ಗವನ್ನು ಪಡೆಯುವವರೇ ಹೊರತು ಮುಕ್ತಿ ಪಡೆಯುವುದಿಲ್ಲ.[೧]

ಹಾಗಾದರೆ ಮುಕ್ತಿಯನ್ನು ದೊರಕಿಸಿ ಕೊಡಬಲ್ಲ ಭಕ್ತಿ ಮಾಡುವುದು ಹೇಗೆ? ಮೊದಲ ಮೆಟ್ಟಲು ಪ್ರಾಪಂಚಿಕ ವಿಷಯಗಳಲ್ಲಿ ವೈರಾಗ್ಯ ತಾಳುವುದು, ಈ ಹೇಯವಾದ ಸಂಸಾರವು ಸ್ವಪ್ನದಂತೆ ಅನಿತ್ಯವಾದುದು ಎಂದು ತತ್ವನಿಶ್ಚಯ ಮಾಡಿಕೊಂಡು ಭಗವಂತನನ್ನು ಉಪಾಸಿಸುವವರಿಗೆ ವೈರಾಗ್ಯ ಪ್ರಾಪ್ತಿಯಾಗುತ್ತದೆ. ಆದರೆ ಕೇವಲ ವೈರಾಗ್ಯದಿಂದಲೇ ಮುಕ್ತಿ ದೊರಕುವುದಿಲ್ಲವೆಂದು ಮಧ್ವಾಚಾರ್ಯರು ತಮ್ಮ ಋಗ್ಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.

ಅವರ ಪ್ರಕಾರ ಅಧ್ಯಯನವು ಮೊದಲ ಮೆಟ್ಟಲು. ಅನಂತರ ತತ್ವಜ್ಞಾನ. ಆದರಿಂದ ವಿಷ್ಣುಭಕ್ತಿ, ಮುಂದೆ ವೈರಾಗ್ಯ. ಇಲ್ಲಿಗೆ ಮುಗಿಸದೆ ಭಕ್ತನಾದವನು ಮುಂದಿನ ಮೆಟ್ಟಲುಗಳನ್ನು ಹತ್ತಬೇಕೆಂದು ಹೇಳುತ್ತಾರೆ. ಅವು ಯಾವುವೆಂದರೆ ನಿಷಿದ್ಧ ಕರ್ಮಗಳನ್ನು ಬಿಡುವುದು, ಶಾಸ್ತ್ರೋಕ್ತ ರೀತಿಯಿಂದ ತನಗೆ ವಿಹಿತವಾದ ಸತ್ಕರ್ಮಗಳನ್ನು ಆಚರಿಸುವುದು. ಸದಾ ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ನಾಮವನ್ನು ಸ್ಮರಿಸುವುದು. ಇವು ಮೋಕ್ಷ ಮಾರ್ಗದ ಇನ್ನಿತರ ಸೋಪಾನಗಳೆಂದು ಅವರು ತಿಳಿಸುತ್ತಾರೆ. ಇವುಗಳು ಬಿಟ್ಟು ಮುಕ್ತಿ ಇಲ್ಲ. ತಮ್ಮ ಮಾತಿಗೆ ಆಧಾರವಾಗಿ ಆಚಾರ್ಯರು ಗರುಡ ಪುರಾಣದ ಉಕ್ತಿಯನ್ನು ಹೇಳಿದ್ದಾರೆ.

ಗರುಡ ಪುರಾಣದ ವಾಕ್ಯವು : *ಬಹುಕಷ್ಟ ಸಾಧ್ಯವಾದ ಯಜ್ಞಾದಿ ಕರ್ಮಗಳನ್ನು ಮಾಡುವುದಕ್ಕಿಂತಲೂ ಧ್ಯಾನಯೋಗವೆಂಬ ಜ್ಞಾನಯಜ್ಞವು ಶ್ರೇಷ್ಠವಾದುದು. ಆದರಲ್ಲಿ ಶೇಷ, ಶ್ರೀ ಬ್ರಹ್ಮ ಶಿವಾದಿಗಳನ್ನು ಕುರಿತು ಧ್ಯಾನ ಮಾಡುವುದಕ್ಕಿಂತಲೂ, ಮೋಕ್ಷಾಪೇಕ್ಷಿಗಳು ಭಕ್ತಿಯಿಂದ ಸರ್ವೋತ್ತಮನಾದ ಮುಕುಂದವಾಚ್ಯವಾದ ಶ್ರೀಹರಿಯನ್ನು ಧ್ಯಾನ ಮಾಡುವುದು ಕೋಟಿಪಾಲು ಅಧಿಕ ಫಲ ನೀಡುವುದು.*

ನಾರದ ಪುರಾಣದ ವಾಕ್ಯವೂ ಇದನ್ನು ಸಮರ್ಥಿಸುತ್ತದೆ. ಜ್ಞಾನರಹಿತವಾದ ಧ್ಯಾನ ಮಾಡುವುದಕ್ಕಿಂತಲೂ ಜ್ಞಾನವು ಉತ್ತಮವಾದುದು. ಅಂಥ ಜ್ಞಾನ ಪೂರ್ವಕವಾಗಿ ಮಾಡುವ ಧ್ಯಾನ ಶ್ರೇಷ್ಠವಾದುದ್ದು. ಅದಕ್ಕಿಂತ ಪರಿಪಕ್ವವಾದ ಭಕ್ತಿ ಶ್ರೇಷ್ಠ. ಅದಕ್ಕಿಂತ ಶ್ರೇಷ್ಠ ಸಾಧನವು ಯಾವುದೂ ಇರುವುದಿಲ್ಲ.

ಜ್ಞಾನವೆಂದರೆ ಯಥಾರ್ಥ ಜ್ಞಾನ; ವಿಷ್ಣುವಿನ ಸರ್ವೋತ್ತಮತ್ವದ ಜ್ಞಾನವೇ ನಿಜವಾದ ಜ್ಞಾನ. ಇದರಿಂದ ಭಕ್ತಿಯು ದೃಢವಾಗುತ್ತದೆ. ಭಕ್ತಿ ಎಂಬ ಶಬ್ದಕ್ಕೆ ಸೇವೆ ಎಂಬ ಅರ್ಥವಿರುವುದಾದರೂ ಈ ಶಬ್ದಕ್ಕೆ ಆದರ ಭಜನೆ, ಬಹುಮಾನ, ಪೂಜೆಗಳೆಂಬ ಪರ್ಯಾಯ ಅರ್ಥಗಳೂ ಇವೆ.[೨]

---

೧. ಸ್ವಾಧ್ಯಾಯಸ್ತತ್ವ ವಿಜ್ಞಾನಂ ವಿಷ್ಣುಭಕ್ತಿರ್ವಿರಾಗತಾ ।
ನಿಷಿದ್ಧ ಕರ್ಮಣಾಂತ್ಯಾಗೋ ವಿಹಿತಸ್ಯ ಸದಾಕ್ರಿಯಾ ॥
ಸದಾ ವಿಷ್ಣುಸ್ಮೃತಿಶ್ಚೈವ ಕೇವಲಂ ಮೋಕ್ಷಸಾಧನಂ ।
ಏಕೈರ್ವಿನಾ ನ ಮೋಕ್ಷಃ ಸ್ಯಾದ್ಬವೇದೇತ್ಯೈರಪಿ ಧ್ರುವಂ ॥ - ಋಗ್ಭಾಷ್ಯ.

೨. ಆದರೋ ಭಜನಂ ಭಕ್ತಿರ್ಬಹುಮಾನಂ ಚ ಸೇವನಂ ।
ಪರ್ಯಾಯ ವಾಚಕಾ ಸರ್ವೇ ಸ್ಮೃತಿ ಸ್ತಜ್ಜನ್ಯಾ ಕರ್ಮಚ ॥ - *ಶಬ್ದನಿರ್ಣಯ*

ಇದರಲ್ಲಿ ಸಾಧಾರಣ, ಪಕ್ವ, ಪರಿಪಕ್ವ ಮತ್ತು ಅತಿಪರಿಪಕ್ವ ಭಕ್ತಿಗಳೆಂದು ನಾಲ್ಕು ಬಗೆ ಇರುವುದೆಂದು ವೈರಾಗ್ಯವು ಭಗವದ್ಭಕ್ತಿಗೆ ಅಗತ್ಯವಾದ ಮೊದಲ ಮೆಟ್ಟಲೆಂದು ಹಿಂದೆ ನೋಡಿದ್ದೇವೆ

ವೈರಾಗ್ಯವೆಂದರೇನು? ನಶ್ವರವಾದ ಪ್ರಾಪಂಚಿಕ ವಸ್ತುಗಳಲ್ಲಿ ಆಸಕ್ತಿ ಅಂದರೆ ರಾಗ ಇಲ್ಲದೆ ಇರುವುದು, ವಿರಾಗ. ವಿರಾಗ ಮನಸ್ಥಿತಿಯು ವೈರಾಗ್ಯವೆನಿಸುತ್ತದೆ. ಅಂದರೆ ಪರಮಾತ್ಮನನ್ನು ಹೊರತು ಇತರ ಸರ್ವ ವಸ್ತುಗಳಲ್ಲೂ ಅನಾದರಭಾವವೇ ನಿಜವಾದ ವೈರಾಗ್ಯ. ವೈರಾಗ್ಯದಲ್ಲಿ ಭಗವದ್ಭಕ್ತಿಯ ದಾರ್ಢ್ಯ ವಿವಕ್ಷಿತವಾಗಿದೆ. ದಾರ್ಢ್ಯ, ಸ್ಥೈರ್ಯ, ಅಚಂಚಲತೆ - ಇವು ಮೂರೂ ಮುಕ್ತಿ ಯೋಗ್ಯ ಜೀವರ ಸ್ವರೂಪವಾಗಿದೆ. ಇಂಥ ಮುಕ್ತಿಯೋಗ್ಯ ಜೀವರು, ಸರ್ವೋತ್ತಮನಾದ ಶ್ರೀಹರಿಯಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಮಾಡುತ್ತಾರೆ. ಲಕ್ಷ್ಮೀಬ್ರಹ್ಮರುದ್ರಾದಿಗಳಲ್ಲಿ ತಾರತಮ್ಯಾನುಸಾರ ಭಕ್ತಿ ಮಾಡುತ್ತಾರೆ.

ವೈರಾಗ್ಯಕ್ಕೆ ಭಕ್ತಿಯ ಉಪಾಸನಾಂಗತ್ವ ಹೇಳಿದೆ. ವಾಸ್ತವ ಸಂಗತಿ ಎಂದರೆ ಅಜ್ಞಾನಿಗಳಿಗೆ ಜ್ಞಾನವನ್ನು ಕೊಡುವವನು ಭಗವಂತನು. ಅವನೇ ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವವನು. ಅಂಥ ಜನಾರ್ಧನನೇ ಮುಕ್ತರಿಗೆ ಆನಂದ ಕೊಡುವವನು.[೧] ಸುಜೀವರಿಂದ ಸಾಧನ ಮಾಡಿಸಿ ಅತಿ ಪಕ್ವದೆಸೆಯಲ್ಲಿರುವ ತನ್ನ ಭಕ್ತರಿಗೆ ಪ್ರಸಾದ ರೂಪವಾಗಿ ಮುಕ್ತಿಯನ್ನು ನೀಡುವವನೂ ಅವನೇ. ಆದರೆ ಏಕಾಂತ ಭಕ್ತರಿಗೆ ನಾರಾಯಣ ಪ್ರೀತ್ಯರ್ಥವಾಗಿ ಭಕ್ತಿಯೇ ಹೊರತು ಮೋಕ್ಷ ಸುಖಕ್ಕಾಗಿ ಅಲ್ಲ. ಅವರು ಮೋಕ್ಷವನ್ನು ಇಚ್ಛಿಸುವುದು ನಾರಾಯಣನ ಪ್ರಸಾದಕ್ಕೆ ಹೊರತು, ನಾರಾಯಣನು ಇಲ್ಲದ ಮೋಕ್ಷದ ಆನಂದ ಅವರಿಗೆ ಬೇಡ. ಅವನ ಅನುಗ್ರಹ ಪ್ರೀತಿ ಅವರಿಗೆ ಮುಖ್ಯವೇ ಹೊರತು ಮೋಕ್ಷ ಸುಖವೂ ಅವರಿಗೆ ಬೇಡ. ಅಂಥ ಏಕಾಂತಿಕ ಭಕ್ತರು ಇವರು.[೨] ಇದಕ್ಕೆ ಪ್ರಹ್ಲಾದರಾಜರೇ ಸಾಕ್ಷಿ. ಅವರು ಭಗವಂತನ ರತಿಯನ್ನು ಬೇಡಿದನೇ ಹೊರತು ಅನ್ಯವಿಷಯಗಳಲ್ಲಿ ಮನಸ್ಸು ಹೋಗದಂತೆ ವರಬೇಡಿದನೇ ಹೊರತು, ಮೋಕ್ಷವನ್ನು ನಿರಾಕರಿಸಿದನು.

ಶ್ರೀಮನ್ನ್ಯಾಯಸುಧಾ ಗ್ರಂಥದಲ್ಲಿ ಸಾಧನವನ್ನು ಸಿದ್ಧವಾದದ್ದು, ಅಸಿದ್ಧವಾದುದ್ದು ಎಂದು ಎರಡು ವಿಧವಾಗಿ ವಿಂಗಡಿಸಲಾಗಿದೆ. ಜೀವರನ್ನು ಸಂಸಾರ ಪಾಶದಿಂದ ಕಟ್ಟಿರುವವನೂ ಅವನೇ. ಅದರಿಂದ ಬಿಡಿಸುವವನೂ ಅವನೇ ( *ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ*) ಈ ಶ್ರುತಿ ವಾಕ್ಯದಂತೆ ಜೀವನಿಗಿಲ್ಲ ಸ್ವಾತಂತ್ರ್ಯ. ಮೋಕ್ಷವಾಗಬೇಕಾದರೆ ಸ್ವತಂತ್ರ್ಯ ಸಾಧನವೆಂದರೆ ಸರ್ವತಂತ್ರ ಸ್ವತಂತ್ರನಾದ ಭಗವಂತನ ಅನುಗ್ರಹವು ಮುಖ್ಯ ಸಾಧನ. ಅವನು ಮುಕ್ತಿಯೋಗ್ಯ ಸುಜೀವರ ಪ್ರಾರಬ್ಧ ಕರ್ಮಗಳಿಗೆ ಅನುಗುಣವಾಗಿ ಅವರಿಂದ ಸಾಧನ ಮಾಡಿಸಿ, ಮುಕ್ತಿಯನ್ನು ನೀಡುತ್ತಾನೆ.

ಅಣು ಭಾಷ್ಯದಲ್ಲಿ "ಮಿಥ್ಯಾ ಜ್ಞಾನೇನ ಚ ತಮೋ ಜ್ಞಾನೇ ನೈವ ಪರಂಪದಂ" - ಎಂದು

---

೧. ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚಸಃ ।
ಆನಂದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ಧನಃ ॥

೨. ನಾರಾಯಣಸ್ತು ಮೋಕ್ಷಾರ್ಥೋ ಮೋಕ್ಷೋ ನ್ಯಾರ್ಥ ಇಷ್ಯತೇ ಏಕಾಂತಾನಾಂ ನ ಕಸ್ಯಚಿತ್ ।
ಅರ್ಥೋ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಂ ॥

ಹೇಳಿದ್ದಾರೆ ಆಚಾರ್ಯ ಮಧ್ವರು. ಅಂದರೆ ಭಗವಂತನ ವಿಷಯಕವಾಗಿ ಸದ್‌ಜ್ಞಾನದಿಂದಲೇ ಪರಮಲಾಭವೆಂದೂ, ಮಿಥ್ಯಜ್ಞಾನದಿಂದ ಅಂಧತಮಸ್ಸು ಆಗುವುದೆಂದೂ ಹೇಳಿರುವಾಗ ಮೋಕ್ಷಕ್ಕೆ ಯಥಾರ್ಥಜ್ಞಾನವೇ ಸಾಧನವಾಯಿತು. ಭಕ್ತಿಗೆ ಪ್ರಾಧ್ಯನ್ಯತೆ ಇಲ್ಲಿ ಹೇಳಲಿಲ್ಲ ಎಂಬ ಸಂದೇಹ ಬರಬಹುದು. ಆದರೆ ಭಕ್ತಿ ಎಂಬುದನ್ನು ಜ್ಞಾನದ ಜತೆಯಲ್ಲೇ ಅವಧಾರಣೋಕ್ತಿಯಿಂದ ಹೇಳಿದೆ ಎಂದು ತಿಳಿಯಬೇಕು. ಜ್ಞಾನೇನೈವಮೋಕ್ಷೋ ಭಕ್ತಿರ್ಮೋಕ್ಷಾಯ ಕೇವಲಾ-ಮುಂತಾದ ಶ್ರುತಿ ವಾಕ್ಯಗಳಿಗೆ ವಿರೋಧವನ್ನು ಕಾಣಬಾರದು. ತಾತ್ಪರ್ಯನಿರ್ಣಯದಲ್ಲಿ ಮಧ್ವಾಚಾರ್ಯರು *ಭಕ್ತ್ಯಂಶಕಂ ಯತೋ ಜ್ಞಾನಂ ಜ್ಞಾನಸ್ನೇಹಾತ್ಮಿಕಾ ಹಿ ಸಾ*-ಎಂಬುದಾಗಿ ಸ್ಪಷ್ಟವಾಗಿ ಹೇಳಿದ್ದಾರೆ. ಭಕ್ತಿಯ ಅಂಶವೇ ಜ್ಞಾನವು. ಆ ಭಕ್ತಿಯು ಜ್ಞಾನಸ್ನೇಹಾತ್ಮಿಕವಾದುದು ಎಂಬುದನ್ನು ನಾವು ಮರೆಯಬಾರದು. ಅಲ್ಲದೆ ಅವರು ತಂತ್ರಸಾರದಲ್ಲಿ ಭಕ್ತಿಯು ಸಹ ಪರಮ ಸ್ನೇಹ ಸಂಯುಕ್ತ ಯಥಾರ್ಥ ಜ್ಞಾನದಿಂದ ಕೂಡಿರುವುದೆಂದು ಪ್ರತಿಪಾದಿಸಿದ್ದಾರೆ.[೧] ಪರಮ ಸ್ನೇಹದಿಂದ ಕೂಡಿದ ಯಥಾರ್ಥ ಜ್ಞಾನವು ಭಕ್ತಿಯೆಂತಲೂ, ವಿಶೇಷ ವಿಜ್ಞಾನದಿಂದ ಕೂಡಿದ ಜ್ಞಾನ ಭಕ್ತಿಯೇ ಮೋಕ್ಷ ಸಾಧಕವೂ, ಮುಕ್ತಿಯಲ್ಲಿ ಭೋಗಕ್ಕೆ ಕಾರಣವೂ ಆಗಿದೆ ಎಂದು ತಂತ್ರಸಾರದಲ್ಲಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಭಕ್ತಿಯೊಂದೇ ಮುಖ್ಯವಾದುದು, ಅದರ ಹೊರತು ಮಾಡಿದ ಕರ್ಮಾದಿಗಳೂ, ಧ್ಯಾನವೂ ಸಹ ವ್ಯರ್ಥವೂ, ನಿಷ್ಫಲವೂ ಆಗುತ್ತದೆ. ಅವರು ಈ ವಿಷಯವಾಗಿ ಋಗ್ಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.

ಧ್ಯಾನ, ಗುರುಶುಶ್ರೂಷೆ, ನಿತ್ಯನೈಮಿತ್ತಿಕ, ಕರ್ಮಾಚರಣೆಗಳು, ತೀರ್ಥಯಾತ್ರೆ, ಸ್ನಾನ, ದಾನ, ತಪಸ್ಸು-ಮೊದಲಾದವು, ವೇದಾಧ್ಯಯನ, ಶಾಸ್ತ್ರಾಭ್ಯಾಸ, ಹರಿನಾಮ ಸಂಕೀರ್ತನೆ, ದ್ವಾದಶೀ, ವಿಷ್ಣುಪಂಚಕ-ಮೊದಲಾದ ವ್ರತಗಳನ್ನು ಮಾಡುವುದು, ತುಲಸೀ, ಗೋವು, ಅಶ್ವತ್ಥ, ಶಮೀ ಮೊದಲಾದವುಗಳ ಅರ್ಚನೆ, ಸರ್ವಸತ್ಕರ್ಮನುಷ್ಠಾನವೂ ಭಕ್ತ್ಯರ್ಥವಾಗಿ ವಿಷ್ಣುವಿನಲ್ಲಿ ಸರ್ವೋತ್ತಮತ್ತ್ವ ಸದ್ಗುಣಪೂರ್ಣ ಇತ್ಯಾದಿ ಜ್ಞಾನ ಉಂಟಾಗಲು ಉತ್ತಮವಾಗಿದೆ. ಅಂಥ ಭಕ್ತಿಯಿಲ್ಲದಿದ್ದರೆ ಈ ವಿಧವಾದ ಆಚಾರಣೆಗಳೆಲ್ಲವೂ ವ್ಯರ್ಥವಾಗುವುವು. ವಿಷ್ಣು ಭಕ್ತಿಯುಕ್ತನಾದವನು ಮುಕ್ತಿಯನ್ನು ಹೊಂದುತ್ತಾನೆ. ಅನ್ಯಥಾ ಬೇರೆ ಯಾವ ರೀತಿಯಲ್ಲಿಯೂ ಮೋಕ್ಷ ದೊರೆಯಲಾರದು.[೨]

ಮತ್ತೆ ಆಚಾರ್ಯರು ತಂತ್ರಸಾರದಲ್ಲಿ ಈ ಬಗ್ಗೆ ಸ್ಪಷ್ಟಪಡಿಸುವುದೇನೆಂದರೆ ಭಕ್ತಿ

---

೧. ಪರಮ ಸ್ನೇಹ ಸಂಯುಕ್ತ ಯಥಾರ್ಥ ಜ್ಞಾನತೋ ಭವೇತ್ ।
ಸಾ ಭಕ್ತಿ ರಿತಿ ವಿಜ್ಞೇಯಂ ಸಾಧನಂ ಭೋಗ ಮೋಕ್ಷಯೋಃ ॥

೨. ಧ್ಯಾನಂ ಚ ಗುರು ಶುಶ್ರೂಷಾ ನಿತ್ಯನೈಮಿಮಿತ್ತಕಾಃ ಕ್ರಿಯಾಃ ।
ತೀರ್ಥಸ್ನತಪಾದ್ಯಶ್ಚ ಸ್ವಾದ್ರ್ಯಾಯೋ ಹರಿಕೀರ್ತನಂ ॥
ದ್ವಾದಶಾದಿ ವ್ರತಂ ಚೈವ ತುಲಸ್ಯಾದೇ ರಥಾರ್ಚನಂ ।
ಸರ್ವಂ ಭಕ್ತ್ಯರ್ಥ ಮುದ್ದಿಷ್ಟಂ ನಿಷ್ಫಲಂ ತತ್ತ ಯಾ ವಿನಾ ॥
ವಿಷ್ಣು ಭಕ್ತಿಯುತೋ ಮುಕ್ತಿಂ ಯಾತಿ ನಾನ್ಯಃ ಕಥಂಚನ ॥ - ಋಗ್ಭಾಷ್ಯ

ಒಂದೇ ಇದ್ದರೂ ಅದು ಅಭೀಷ್ಟ ಫಲವನ್ನು ಕೊಡುತ್ತದೆ. ದರ್ಶನ (ಭಗವಂತನ) ದಿಂದ ಕೂಡಿದ ಭಕ್ತಿಯು ಮೋಕ್ಷ ಫಲವನ್ನು ಕೊಡುವುದು. ಭಕ್ತಿಯಿಂದ ಕೂಡಿದ ಅಪರೋಕ್ಷ ದರ್ಶನದಿಂದಲೇ ಮೋಕ್ಷವಾಗುವುದೇ ಹೊರತು ಬೇರೆ ಯಾವುದರಿಂದಲೂ ಅದು ಲಭಿಸುವುದಿಲ್ಲ.[೧] ಅಲ್ಲದೆ ಛಾಂದೋಗ್ಯ ಭಾಷ್ಯದಲ್ಲಿ ಅವರು ಹೀಗೆ ವಿವರಿಸಿದ್ದಾರೆ.

ವಿಷ್ಣುವಿನ ಅಪರೋಕ್ಷ ದರ್ಶನವುಳ್ಳವರಿಗೆ ಮೋಕ್ಷವೇ ಹೊರತು ಅನ್ಯಥಾ ಅಮೃತತ್ವವು ದೊರೆಯದು. ಅಪರೋಕ್ಷ ದರ್ಶನದ ವಿನಃ ಬೇರೆ ಮಾರ್ಗದಿಂದ ಮೋಕ್ಷವನ್ನು ಹೊಂದುವಿಕೆಯು ಎಂದಿಗೂ ಇಲ್ಲ. ಅನಪರೋಕ್ಷಿಗಳಿಗೆ ಮೋಕ್ಷವೂ ಇಲ್ಲವೆಂದು ಪ್ರಮಾಣ ವಾಕ್ಯಗಳಿಂದ ಸ್ಪಷ್ಟಪಡಿಸಿದ್ದಾರೆ.[೨]

ಶ್ರೀಹರಿಯು ದರ್ಶನ ಕೊಟ್ಟ ಮೇಲೆ ದೇವತೆಗಳಿಗೆ ಮುಕ್ತಿಯಾಗುತ್ತದೆ. ಅವರಿಗೆ ಸ್ವಯೋಗ್ಯ ಹರಿದರ್ಶನವಾದ ಮೇಲೆ ಮೋಕ್ಷವು ತಪ್ಪದೆ ನಿಯತವಾಗಿ ಆಗಿಯೇ ತೀರುತ್ತದೆ-ಎಂದು ಅಭಿಪ್ರಾಯಪಟ್ಟಿದ್ದಾರೆ.[೩]

ಇದೇ ಮಾತನ್ನು ಅನುವ್ಯಾಖ್ಯಾನದಲ್ಲೂ ಅವರು ಹೇಳಿದ್ದಾರೆ. ಭಕ್ತಿಯಿಂದ ಜ್ಞಾನವು. ಅವುಗಳಿಂದ ಪರಿಪಕ್ವ ಭಕ್ತಿಯು. ಅವುಗಳ ದೆಸೆಯಿಂದ ಭಗದವದ್ದರ್ಶನವು. ಅಂಥ ಅಪರೋಕ್ಷ ಜ್ಞಾನ ಅತಿಪರಿಪಕ್ವ ಭಕ್ತಿಯಿಂದ ಮುಕ್ತಿಯು. ಮುಕ್ತಿಯ ನಂತರ ಮಾಡುವ ಭಕ್ತಿಯು ಮೌಕ್ತಿಕ ಸ್ವರೂಪಾನಂದವು.

ಭಿನ್ನ ಜೀವರ ಯೋಗ್ಯತೆಗೆ ಅನುಗುಣವಾಗಿ ಮುಕ್ತಿಯ ಸ್ವರೂಪಾನಂದವು ದೊರಕುವು ದೆಂಬುದನ್ನು ಗಿಂಡಿ ಮುಂತಾದ ಪಾತ್ರೆಗಳಲ್ಲೂ, ನದೀ ಸರೋವರ ಸಮುದ್ರಗಳಲ್ಲಿ ತುಂಬಿರುವ ನೀರಿನ ದೃಷ್ಟಾಂತದಿಂದ ತಿಳಿಯಬಹುದು. ಶ್ರವಣ, ಮನನ, ಧ್ಯಾನಭಕ್ತಿ, ಅಪರೋಕ್ಷ ಜ್ಞಾನ, ಭಗವದ್ದರ್ಶನ, ಮೋಕ್ಷಾನಂದಗಳು ಆಯಾ ಜೀವರ ಯೋಗ್ಯತೆ, ಸಾಧನ, ಸ್ವರೂಪಗಳಿಗೆ ಅನುಗುಣವಾಗಿರುತ್ತವೆಂದು ತಿಳಿಸುತ್ತಾರೆ.

ಭಗವಂತನಲ್ಲಿ ತಾರತಮ್ಯಾನುಸಾರ ಮಾಡುವ ಭಕ್ತಿಯಿಂದ ಮೋಕ್ಷ ಸುಖವು ದೊರಕುವಂತೆಯೇ, ಉತ್ತಮರಲ್ಲಿ ಮಾಡುವ ವಿದ್ವೇಷದಿಂದ, ಸ್ವೋತ್ತಮ ದ್ವೇಷಗಳಿಂದ ತಮಸ್ಸನ್ನು ಹೊಂದುತ್ತಾರೆ. ಆದುದರಿಂದ ಶ್ರವಣವೇ ಮೊದಲಾದ ನವವಿಧ ಭಕ್ತಿಗಳಿರುವಂತೆ ನವವಿಧ ದ್ವೇಷವನ್ನೂ ನಾವು ಇಲ್ಲಿ ತಿಳಿಯಬೇಕಾಗಿದೆ. ನವವಿಧ ಭಕ್ತಿಯನ್ನು ಮಾಡುವಾಗ ನವವಿಧ

---

೧. ನೈಕಾನ್ಯಭೀಷ್ಟಫಲದಾ ಮೋಕ್ಷೋ ದರ್ಶನಯುಕ್ತಯಾ ।
ಅಪರೋಕ್ಷ ದೃಶೇರೇವ ಯಸ್ಮಾನ್ಮೋಕ್ಷೋ ನ ಚಾನ್ಯಥಾ ॥ - ತಂತ್ರಸಾರ

೨. ಅಪರೋಕ್ಷದೃಶಾಂ ವಿಷ್ಣೋರಮೃತತ್ವಂ ಚ ನಾನ್ಯಥಾ ।
ಅಪರೋಕ್ಷ ದೃಶೇರನ್ಯನ್ಮೋಕ್ಷಂ ನೈವೋದಗಚ್ಛತಿ ॥
ಮೋಕ್ಷೋ ನಾನಪರೋಕ್ಷಿಣಃ । - ಋಗ್ಭಾಷ್ಯ

೩. ಮೋಕ್ಷಸ್ತು ನಿಯತಸ್ತೇಷಾಂ ಸಹಯೋಗ್ಯ ಹರಿದರ್ಶನೇ ।
ಕದಾ ಮುಕ್ತಿಸ್ತು ದೇವಾನಾಂ ಯದಾ ಪ್ರತ್ಯಕ್ಷಸೋ ಹರಿಃ ॥ - ಮ.ತಾ.ನಿರ್ಣಯ

ದ್ವೇಷ ಮಾಡದಂತೆ ಎಚ್ಚರ ವಹಿಸಬೇಕಾದುದೂ ಭಕ್ತಿ ಸಾಧನೆಯಲ್ಲಿ ಒಂದು ಮಹತ್ವದ ಅಂಶ.[೧] ಇಲ್ಲದಿದ್ದರೆ ಅಂಥ ಭಕ್ತಿಯಿಂದ ನಿರೀಕ್ಷಿಸಿದ ಫಲ ದೊರಕುವುದಿಲ್ಲ.

ಭಕ್ತಿಯಿಂದಲೇ ಅಪರೋಕ್ಷಜ್ಞಾನವಾಗುವುದೆಂದೂ, ಅದರಿಂದ ಮುಕ್ತಿ ದೊರಕುವುದೆಂದಾದ ಮೇಲೆ ನವವಿಧ ದ್ವೇಷಗಳ ಬಗ್ಗೆ ಎಚ್ಚರದಿಂದಿರಬೇಕು.

ಸರ್ವ ಸಾಧನಗಳಲ್ಲಿ ಭಕ್ತಿಗೇ ಏಕೆ ಪ್ರಾಧಾನ್ಯತೆ ಎಂಬ ಪ್ರಶ್ನೆಗೆ ಪುರಾಣ ವಚನಗಳಲ್ಲಿ ಹೀಗೆ ತಿಳಿಸುತ್ತದೆ. ಇದರಿಂದ ಭಕ್ತಿಯ ಮಹಾತ್ಮ್ಯ ತಿಳಿಯುತ್ತದೆ.

*"ಎಲೈ ಹರಿಯೇ, ನಿನ್ನಲ್ಲಿ ಭಕ್ತಿ ಇಲ್ಲದವನು ಸಕಲ ಕರ್ಮಗಳನ್ನು ಅನುಷ್ಠಾನ ಮಾಡಿದಾಗ್ಯೂ ಅಂಥವನು ಸದಾ ನರಕದಲ್ಲಿದ್ದು ದುಃಖ ಪಡುತ್ತಾನೆ. ನಿನ್ನ ಭಕ್ತನಾಗಿದ್ದ ಪಕ್ಷದಲ್ಲಿ ಬ್ರಹ್ಮಹತ್ಯೆ ಮಾಡಿದವನಾದರೂ ಅಂಥ ಭಕ್ತನು ವಿಮುಕ್ತನಾಗುತ್ತಾನೆ."* [೨]

*"ಎಲೈ ಅಚ್ಯುತನೇ, ನಿನ್ನ ಭಕ್ತರಿಂದ ಅಧರ್ಮವು ಮಾಡಲ್ಪಟ್ಟರೂ ಅದು ಧರ್ಮವೇ ಆಗುತ್ತದೆ. ಭಕ್ತರಲ್ಲದವರಿಂದ ಧರ್ಮವೇ ಮಾಡಲ್ಪಟ್ಟರೂ ಅದು ಪಾಪವಾಗಿಯೇ ಪರಿಣಮಿಸುತ್ತದೆ."* [೩]

ಈ ಉದ್ಗಾರಗಳಿಂದ ಭಗವಂತನಿಗೆ ಭಕ್ತರ ಮೇಲೆ ಇರುವ ವಿಶೇಷವಾದ ವಾತ್ಸಲ್ಯವು ಸ್ಪಷ್ಟವಾಗುತ್ತದೆ.

ಭಗವಂತನಲ್ಲಿ ಸದಾ ಭಕ್ತಿಯನ್ನು ಮಾಡುವ ದೇವತೆಗಳು ಹೇಗೆ ಮುಕ್ತಿಯೋಗ್ಯರಾಗಿ ಸ್ವರೂಪಾನಂದ ಸುಖವನ್ನು ಅನುಭವಿಸುವಂತೆ, ಪರಮಾತ್ಮನನ್ನು ಸದಾ ದ್ವೇಷಿಸುವ ದೈತ್ಯರು ಅನಾದಿ ದ್ವೇಷಿಗಳಾಗಿ ಅವನ ನಿಂದನೆಯ ಫಲವಾಗಿ ಅಂಧ ತಮಸ್ಸನ್ನು ಹೊಂದಿ ದುಃಖಿಸುತ್ತಾರೆ ಎಂಬುದಕ್ಕೆ ಅನೇಕ ಶ್ರುತಿ ಸ್ಮೃತಿ ವಾಕ್ಯಗಳು ಆಧಾರವಾಗಿದೆ.[೪]

---

೧. ವರದರಾಜೀಯ ವ್ಯಾಖ್ಯಾನದ ಪ್ರಕಾರ ನವವಿಧ ದ್ವೇಷಗಳು ಹೀಗಿವೆ :

೧. ಬ್ರಹ್ಮ ಮತ್ತು ಜೀವರಿಗೆ ಅಭೇದ ಮೊದಲಾದ ಜ್ಞಾನ. ೨. ಬ್ರಹ್ಮನಲ್ಲಿ ಯಾವುದೊಂದು ಗುಣವಿಲ್ಲದುದರಿಂದ ಆತನು ನಿರ್ಗುಣ. ೩. ಅವನಲ್ಲಿ ಸ್ವಲ್ಪವೇ ಗುಣಗಳಿವೆ. (ಪೂರ್ಣಗುಣವಿಲ್ಲವೆಂದು ಹೇಳುವುದು). ೪. ಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನ ದೆಸೆಯಿಂದ ಬ್ರಹ್ಮಾದಿಗಳಿಗೆ ಭಗವಂತನೊಡನೆ ಸಾಮ್ಯ ಅಥವಾ, ೫. ಅಧಿಕ್ಯ, ೬) ಸ್ವಗತ ಭೇದರಹಿತನಾದ ಶ್ರೀಹರಿಯ ರೂಪಗುಣ ಕರ್ಮಾದಿಗಳಿಗೆ ಭೇದವನ್ನು ತಿಳಿಯುವುದು. ೭. ಹಾಗೆಯೇ ಅವತಾರವನ್ನು ಅನವತಾರವೆಂದೂ, ಅನವತಾರವನ್ನು ಅವತಾರವೆಂದೂ, ಪ್ರಾದುರ್ಭಾವವನ್ನು ವಿರುದ್ಧವಾಗಿಯೂ ತಿಳಿಯುವುದು. ೮. ವಿಷ್ಣುವಿನ ಭಕ್ತರಾದ ರಮಾದಿ ದೇವತೆಗಳಲ್ಲಿ ದ್ವೇಷ ಮತ್ತು ೯. ವಿಷ್ಣುವಿನ ಸರ್ವೋತ್ತಮತ್ವ ಗುಣ ಪರಿಪೂರ್ಣತ್ವವನ್ನು ಪ್ರತಿಪಾದಿಸುವ ಪ್ರಮಾಣಗಳನ್ನು ಕಲ್ಪಿತವೆಂದು ನಿಂದಿಸುವುದು.

೨. ನಿಃಶೇಷ ಧರ್ಮಕರ್ತಾಪ್ಯ ಭಕ್ತಸ್ತೇ ನರಕೇ ಹರೇ ।
ಸದಾ ತಿಷ್ಠತಿ ಭಕ್ತಶ್ಚೇದ್ಬ್ರಹ್ಮಹಾಪಿ ವಿಮುಚ್ಯತೇ ॥

೩. ಧರ್ಮೋಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ ।
ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇ ॥

೪. ಅನಾದಿ ದ್ವೇಷಿಣೋ ದೈತ್ಯಾಃ ವಿಷ್ಣೌದ್ವೇಷೋವಿವರ್ಧಿತಃ ।
ತಮಸ್ಯಂಧೇ ಪಾತಯತಿ ದೈತ್ಯಾನಂತೇ ವಿನಿಶ್ಚಯಾತ್ ॥

ಶ್ರೀಹರಿಯಲ್ಲಿ ನಾವು ಏಕೆ ಭಕ್ತಿ ಮಾಡಬೇಕು? ಈ ಪ್ರಶ್ನೆಗೆ ಶ್ರುತಿ ಸ್ಮೃತಿಗಳು ಕೊಡುವ ಉತ್ತರ ಹೀಗಿದೆ.

*"ಸಂಸಾರ ಬಂಧನದಲ್ಲಿಟ್ಟವನೂ, ಅಂಥ ಭವಬಂಧನದಿಂದ ಬಿಡುಗಡ ಮಾಡುವವನೂ, ಅಜ್ಞರಿಗೆ ಜ್ಞಾನವನ್ನು ಕೊಡುವವನೂ, ಜ್ಞಾನಿಗೆ ಮೋಕ್ಷವನ್ನು ಕೊಡುವವನೂ ಆ ಜನಾರ್ಧನನೊಬ್ಬನೇ.*

*ಅಲ್ಲದೆ ಸೃಷ್ಟಿ ಸ್ಥಿತಿ ನಿಯಮನ, ಸಂಹಾರಗಳನ್ನೂ ಮಾಡುವವನೂ ಜ್ಞಾನ ತಿರೋಧಾನ, ಸುಜ್ಞಾನದಾನ ಸಂಸಾರಪಾಶದಿಂದ (ಬಂಧನದಿಂದ) ಮೋಚನ ಮಾಡಿ ಪುರುಷಾರ್ಥಪ್ರದನೂ, ಪುರುಷರ ಪುರುಷೋತ್ತಮನೂ ಆದುದರಿಂದಲೇ ಆ ವಿಷ್ಣುವು (ಹರಿಯು) ಸರ್ವತಂತ್ರ ಸ್ವತಂತ್ರನಾದ ಪರಮ ಮುಖ್ಯ ವಿರಾಟ್‌ನಾಮಕ ಸರ್ವಸ್ವಾಮಿ."*[೧]

ಮಧ್ವಾಚಾರ್ಯರು ಸೂತ್ರ ಭಾಷ್ಯದ ತೃತೀಯ ಅಧ್ಯಾಯದ, ತೃತೀಯ ಪಾದದಲ್ಲಿ ಭಕ್ತಿಗೆ ಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ.

ಭಕ್ತಿ ಸ್ಥಿತನಾಗಿರುವನು ವಿಷ್ಣು. ಭಕ್ತನು ಅಂಥ ವಿಷ್ಣು ಅಂತರ್ಗತವಾಗಿರುವ ಭಕ್ತಿಯಿಂದಲೇ, ಅವನು ವಶಮಾಡಿಕೊಟ್ಟ ಭಕ್ತಿಯಿಂದ ಭಗವದ್ದರ್ಶನ ಪಡೆದು ಆ ಅಪರೋಕ್ಷ ಜ್ಞಾನದರ್ಶನದಿಂದ ಕೂಡಿದ ಭಕ್ತಿಯಿಂದ ಮುಕ್ತಿಯನ್ನೂ ಹೊಂದುವನು. ಪರಮಾತ್ಮನಲ್ಲಿ ಮಾಹಾತ್ಮ್ಯಜ್ಞಾನಪೂರ್ವಕವಾದ, ಬಹುಮಾನ ಪುರಸ್ಸರವಾದ ಸ್ನೇಹಾನುಬಂಧವು ಯಾವುದುಂಟೋ ಅದೇ ಭಕ್ತಿ ಎನಿಸುತ್ತದೆ. ಅದೇ ಪರಮಾತ್ಮನ ಪ್ರಾಪ್ತಿಗೆ ಮುಖ್ಯ ಕಾರಣವು. ಪರಮಾತ್ಮನ ಅನುಗ್ರಹದಿಂದಲೇ ಮೋಕ್ಷ ಪ್ರಾಪ್ತಿಯಾಗುತ್ತದೆ.[೨]

ಕಠೋಪನಿಷತ್ತಿನಲ್ಲಿ ಭಕ್ತಿಗೆ ಪರಮಾತ್ಮನು ಒಲಿಯುವನೆಂಬ ಬಗ್ಗೆ ಹೀಗೆ ಹೇಳಿದೆ :

*"ಯಾವ ವಿದ್ವಾಂಸನು ಪ್ರವಚನವೇ ಮೊದಲಾದ ಸಾಧನ ಮತ್ತು ಉಪಾಯಗಳಿಂದ ಪರಮಾತ್ಮನ ದರ್ಶನಾರ್ಥವಾಗಿ ಪ್ರಯತ್ನ ಮಾಡುತ್ತಾನೋ, ಅಂಥವನಿಗೆ ಶ್ರೀಹರಿಯು ಪರಬ್ರಹ್ಮಾಶ್ರಯವಾದ ಬ್ರಹ್ಮಧಾಮವೆನಿಸಿದ ಹೃದಯಗತನಾದ ಮುಖ್ಯ ಪ್ರಾಣವನ್ನು ಪ್ರವೇಶಿಸಿ ಅಲ್ಲಿ ಇದ್ದು ದರ್ಶನವನ್ನು ಕೊಡುತ್ತಾನೆ."*

ಭಾಗವತದಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಹಲವು ಮಾರ್ಗಗಳನ್ನು ಕುರಿತು

---

೧. ಬಂಧಕೋ ಭವಪಾಶೇನ ಭವಪಾಶಶ್ಚ ಮೋಚಕಃ ।
ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚಸಃ ॥
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ಧನ ।
ಸೃಷ್ಟಿ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ॥
ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್ ॥

೨. ಭಕ್ತಿಸ್ಥಂ ಪರಮೋ ವಿಷ್ಣುಃ ತಯ್ಯೈವೇನಂ ದಶಂ ನಯೋತ್ ।
ತಯ್ಯೈವ ದರ್ಶನಂ ಯತಃ ಪ್ರದದ್ಯಾನ್ಮುಕ್ತಿಮೇತಯಾ ॥
ಸ್ನೇಹಾನುಬಂಧೋ ಯಸ್ತಸ್ಮಿನ್ ಬಹುಮಾನ ಪುರುಸ್ಸರಃ ।
ಭಕ್ತಾರಿತ್ರ್ಯುಚ್ಯತೇ ಸೈವ ಕಾರಣಂ ಪರಿಮೇಶಿಶುಃ ॥ - ಬ್ರಹ್ಮಸೂತ್ರ ಭಾಷ್ಯ

ಹೇಳಿದೆ. ಇವುಗಳಲ್ಲಿ ಜ್ಞಾನ, ಭಕ್ತಿ ಮತ್ತು ಕರ್ಮ ಮಾರ್ಗಗಳು ಮುಖ್ಯ. ಸನಕಾದಿಗಳು ಜ್ಞಾನ ಯೋಗಿಗಳೆಂತಲೂ ಹೇಳಿದೆ. ಭಕ್ತಿಯಿಂದಲೇ ದೊರಕುವ ಭಗವತ್ಪ್ರಸಾದ ರೂಪವಾದ ಮುಕ್ತಿ ಎಂದು ಭಗವಂತನ ವಚನವಿರುವುದರಿಂದ ಜ್ಞಾನಯೋಗ, ಕರ್ಮಯೋಗಗಳಿಗೆ ಭಗವದ್ಪ್ರಸಾದ ರೂಪವಾದ ಮುಕ್ತಿಯು ಲಭಿಸುವುದಿಲ್ಲವೆ? ಈ ಪ್ರಶ್ನೆ ಏಳುವುದು ಸಹಜ.

ಈ ಪ್ರಶ್ನೆಗೆ ಮಧ್ವಾಚಾರ್ಯರು ಸಮಂಜಸವಾದ ಉತ್ತರ ಹೇಳಿದ್ದಾರೆ.

ಪ್ರಕಾಶ ಸಂಹಿತೆಯಲ್ಲಿ, ಶಾಸ್ತ್ರೋಕ್ತವಾದ ಸತ್ಕರ್ಮಾಚರಣೆಯನ್ನು ಅಂದರೆ ಸರಿಯಾಗಿ ತಿಳಿದು ಹೆಚ್ಚಾದ ಪ್ರಾಚುರ್ಯದಿಂದ ಆಚರಿಸುವ ಕರ್ಮದಿಂದ ಲಬ್ಧವಾದ ವಿಷ್ಣುಗುಣಗಣ ಜ್ಞಾನದಿಂದ ಹುಟ್ಟುವ ಭಕ್ತಿಯಿಂದಲೇ ಕರ್ಮಯೋಗಿಗಳಿಗೂ ಮುಕ್ತಿ ಇದೆ ಎಂದು ಹೇಳುತ್ತದೆ.[೧] ಅಂದರೆ ನಿರಂಶರಾದ ಜೀವರು ಸತ್ಸಾಧನೆಗೆ ಉಚಿತವಾದ ಕರ್ಮಗಳನ್ನು ಸಹಸ್ರ ಜನ್ಮದಲ್ಲಿ ಮಾಡಿ, ಹತ್ತು ಜನ್ಮಗಳಲ್ಲಿ ಜ್ಞಾನವನ್ನು ಪಡೆದು, ಮೂರು ಜನ್ಮಗಳಿಂದ ಸದ್ಭಕ್ತಿಯನ್ನು ಪಡೆದು, ತನ್ನ ಹೃದಯಸ್ಥಿತನಾದ ಶ್ರೀಹರಿಯನ್ನು ಅಪರೋಕ್ಷೀಕರಿಸಿ ನೋಡಿ, ಕೊನೆಗೆ ೧೦೧೩ ಜನ್ಮಗಳಾದ ಮೇಲೆ ಮುಕ್ತರಾಗುತ್ತಾರೆ.[೨] ಅಲ್ಲದೆ ವೇದಾಂಗಗಳನ್ನು ಅನುಸರಿಸಿ ಅದರಂತೆ ವೇದಾರ್ಥವನ್ನು ತೆಗೆದು ಭಗವದ್ಗುಣಗಳನ್ನು ಯಾರು ನಯನ ಮಾಡಿ, ಅಂಥ ಶ್ರುತಿಗಳಿಗೆ ಯಥಾಸ್ಥಿತವಾದ ಪ್ರಮೇಯಾರ್ಥಗಳನ್ನು ತಿಳಿದು ಭಕ್ತಿ ಮಾಡುತ್ತಾರೋ ಅಂಥ ಜ್ಞಾನ ಯೋಗಿಗಳಿಗೂ ಮುಕ್ತಿಯಾಗುತ್ತದೆ.[೩]

ಒಟ್ಟಿನಲ್ಲಿ ಅರ್ಥ ಕಾಮನೆ ರಹಿತನಾಗಿ ಫಲಾಪೇಕ್ಷೆಯಿಲ್ಲದೆ ಸತ್ಕರ್ಮವನ್ನು ಮಾಡಿ ಗುರುಗಳ ಸಹವಾಸ ಪಡೆದು ದೇವದಾಸರಾದ ದೇವತೆಗಳು ನೂರು ಜನ್ಮದಿಂದ ಸತ್ಕರ್ಮಾನುಷ್ಠಾನ ಮಾಡಿ, ಹತ್ತು ಸಹಸ್ರ ಜನ್ಮಗಳಲ್ಲಿ ಅತಿಶಯವಾದ ಜ್ಞಾನವನ್ನು ಪಡೆದು ನೂರು ಜನ್ಮಗಳಲ್ಲಿ ಭಕ್ತಿಯನ್ನು ಹೊಂದಿದ ಅಂಥ ಜ್ಞಾನಯೋಗಿಗಳು ಮುಕ್ತರಾಗುತ್ತಾರೆ. ಅಂದರೆ ಭಕ್ತಿರೂಪದ ಧ್ಯಾನ ಸಾಧನ ಸಂಪತ್ತಿನಿಂದಲೇ ಮುಕ್ತಿಯನ್ನು ಪಡೆಯುವರು.[೪]

ಈ ಮಾತಿನಿಂದ ಜ್ಞಾನಪ್ರಾಚುರ್ಯವಂತರೂ, ಸತ್ಕರ್ಮ ಪ್ರಾಚುರ್ಯವಂತರೂ

---

೧. ಕರ್ಮಾಣಿ ಶಾಸ್ತ್ರತೋ ಜ್ಞಾತ್ವಾ ತತ್ಪಧಾನ್ಯನುಸಾರತಃ ।
ವಿಜ್ಞಾತಾ ಯೈರ್ಗುಣಾ ವಿಷ್ಣೋಃ ಜ್ಞೆಯಾಸ್ತೇ ಕರ್ಮಯೋಗಿನಃ ॥

೨. ನಿರಂಶಾಃ ಸತ್ಸಾಧನಾಯೋತ ಜನ್ಮಸಹಸ್ರತಃ ।
ಜ್ಞಾನಂತು ದಶಭಿಃ ಪ್ರಾಪ್ಯ ಸದ್ಭಕ್ತಿಂ ತ್ರಿಭಿರಾಪ್ಯಚ ॥
ದೃಷ್ಟ್ವಾಹೃದಿಸ್ಥಂ ಮುಚ್ಯಂತೇ ಹ್ಯತಸ್ತೇ ಕರ್ಮಯೋಗಿನಃ ॥

೩. ಅಂಗಾನುಸಾರಿ ವೇದಾರ್ಥಂ ಜ್ಞಾತ್ವಾ ತದನುಸಾರತಃ ।
ಭಗವದ್ಗುಣಾ ಯೈರ್ನಿಯಂತೇ ತೇ ಪ್ರೋಕ್ತಾಃ ಜ್ಞಾನಯೋಗಿನಃ ॥

೪. ಸತ್ಕರ್ಮ ಕೃತ್ವಾ ನಿಷ್ಕಾಮಂ ಲಭಂತಿ ಗುರು ಸಂಗತಿಂ ।
ಆತಾತ್ವಿಕಾ ದೇವದಾಸಾಃ ಸತ್ಕರ್ಮ ಶತಜನ್ಮಭಿಃ ॥
ಕೃತ್ವಾ ದಶಸಹಸ್ರೋರು ಜನ್ಮಾಭಿಜ್ಞಾನನ ಮಾಪ್ಯ ಚ ।
ಭಕ್ತಿಂ ಚ ತ್ರಿಶತ್ಯೈರಾಪ್ಯ ಮುಚ್ಯಂತೆ ಜ್ಞಾನಯೋಗಿನಃ ॥

ಭಕ್ತರಂತೆಯೇ ಮುಕ್ತಿ ಹೊಂದುತ್ತಾರೆ. ಈ ಮಾತಿಗೆ ವಿಜಯಧ್ವಜೀಯ ಟೀಕೆಯು ಸಮರ್ಥನೆ ನೀಡುತ್ತದೆ. ಸರ್ವರಿಗೂ ಭಕ್ತಿ ಮೂಡಲಿ, ಜ್ಞಾನ ಮೂಡಲಿ, ಕರ್ಮ ಮೂಡಲಿ. ಅದು ಉತ್ಕಟ ಭಗವಂತನ ಹಂಬಲದಲ್ಲಿ ಪರ್ಯವಸಾನವಾದ ಪರಿಪಕ್ವ ಸ್ಥಿತಿಗೆ ಮುಟ್ಟಿದಾಗ ಅವರಿಗೆ ಮುಕ್ತಿ ಯಾಗುತ್ತದೆ.[೧] ದೇವತೆಗಳು ಸಾಮಾನ್ಯವಾಗಿ ಭಕ್ತಿಯೋಗಿಗಳು ( ದೇವಾವೈ ಭಕ್ತ ಯೋಗಿನಃ) ಭಕ್ತಿ ಜ್ಞಾನ ವೈರಾಗ್ಯಗಳಲ್ಲಿ ಮಾನವರಿಗಿಂತ ಉತ್ತಮರು. ಇವರಿಗಿಂತ ಚತುರ್ಮುಖ ಬ್ರಹ್ಮನು ಇವುಗಳಲ್ಲಿ ಶ್ರೇಷ್ಠ. ಅವನಿಗಿಂತ ಜ್ಞಾನ, ವೈರಾಗ್ಯ ಹರಿಭಕ್ತಿಭಾವ, ಧೃತಿ ಸ್ಥಿತಿ, ಪ್ರಾಣಬಲ ಯೋಗ ಬುದ್ಧಿಗಳಲ್ಲಿ ಇವರಿಗೆ ಸಮರು ವಾಯುದೇವರು. ಇವರಿಗಿಂತ ಶ್ರೇಷ್ಠರು ರಮಾದೇವಿ. ಅವರು ಭಗವಂತನನ್ನು ಆತ್ಯಂತಿಕವಾಗಿ, ನೇರವಾಗಿ ಉಪಾಸಿಸುತ್ತಾರೆ. ಆದರೆ ಅವರಿಗಿಂತ ಕೆಳಗಿನವರು ಮಾನವರು, ಚಕ್ರವರ್ತಿಗಳು, ಕರ್ಮಜ ದೇವತೆಗಳು, ದೇವತೆಗಳು, ಗರುಡಶೇಷ ರುದ್ರರು, ವಾಯು ಮತ್ತು ಬ್ರಹ್ಮರು ಸ್ವೋತ್ತಮರ ಮೂಲಕವೇ, ಅಧಿಷ್ಠಾನ ದ್ವಾರವೇ ಪರಮಾತ್ಮನನ್ನೂ ಉಪಾಸಿಸ ಬೇಕೇ ಹೊರತು, ನೇರ ಅಧಿಷ್ಠಾನವಿಲ್ಲದೆ ಅನುಸಂಧಾನ ಮಾಡಲು ಭಗವಂತನು ಒಲಿಯುವುದಿಲ್ಲವೆಂಬುದು ಶಾಸ್ತ್ರಗಳಲ್ಲಿ ಹೇಳಿದೆ.

ಭಕ್ತಿ ಯೋಗವು ಬಹು ವಿಧ;( ಭಕ್ತಿ ಯೋಗೋ ಬಹು ವಿಧೋ ಮಾರ್ಗೈರ್ಭಾಮಿನಿ ಭಾವ್ಯತೇ) -ಎಂದು ಕಪಿಲ ದೇವರು ತಾಯಿಯಾದ ದೇವಹೂತಿ ದೇವಿಗೆ ತಿಳಿಸುತ್ತಾರೆ. ತಾಮಸ ಭಕ್ತಿ, ರಾಜಸಭಕ್ತಿ, ಸಾತ್ವಿಕಭಕ್ತಿಗಳು ಇರುವಂತೆಯೇ ನಿರ್ಗುಣ ಭಕ್ತಿಯೂ, ಅತ್ಯಂತಿಕ ಭಕ್ತಿಯೂ ಇವೆ. ಅತ್ಯಂತಿಕ ಭಕ್ತಿಗೆ ಮಾತ್ರ ಭಗವಂತನು ಒಲಿದು ಮುಕ್ತಿ ನೀಡುತ್ತಾನೆ, ಅನ್ಯಥಾ ಇಲ್ಲ. ಸಾತ್ವಿಕ ಭಕ್ತನು ಯಾರು? ಯಾರು ಪಾಪ ಪರಿಹಾರವಾಗಬೇಕೆಂದು ಹರಿಯನ್ನು ಪೂಜಿಸುತ್ತಾನೋ, ಸರ್ವೋತ್ತಮನಾದ ಭಗವಂತನಲ್ಲಿ ತನ್ನ ಕರ್ಮವನ್ನು ಯಾರು ಸಮರ್ಪಿಸುತ್ತಾರೋ, ವಿಹಿತ ಯಜ್ಞಾದಿಗಳನ್ನು ಕರ್ತವ್ಯವೆಂದು ತಿಳಿದು ಭಗವದ್ರೂಪಗಳಿಗೆ ಅಭೇದ ತಿಳಿದು ಪೂಜಿಸಿ ಅರ್ಪಿಸುತ್ತಾನೋ ಅಂಥವನು ಸಾತ್ವಿಕ ಭಕ್ತನು.[೨]

ಭಗವಂತನ ಅರ್ಚಾ ವಿಗ್ರಹಗಳನ್ನು ಪೂಜಿಸುವುದು ಅಗತ್ಯವೆ? ಅಜ್ಞನಾದವನು ಅರ್ಚಾಮೂರ್ತಿಗಳಲ್ಲಿ ಭಗವತ್ಪೂಜೆಯನ್ನು ಮಾಡಿಯೇ ತೀರಬೇಕು. ಹಾಗೆ ಮಾಡದೆ ಇದ್ದರೆ ಅವನು ದೋಷವುಳ್ಳವನಾಗುತ್ತಾನೆ. ಜ್ಞಾನಿಯೂ ಪೂಜಿಸಬೇಕು. ಹೀಗೆ ಪೂಜಿಸುವುದರಿಂದ ಹೆಚ್ಚು ಸದ್ಗುಣವುಳ್ಳವನಾಗುತ್ತಾನೆ. ಅವನು ಪೂಜಿಸದಿದ್ದರೆ ದೋಷವೇನೂ ಆಗುವುದಿಲ್ಲ.

ಇನ್ನು ನಿರ್ಗುಣ ಭಕ್ತಿಯ ಸ್ವರೂಪ. ಯಾರು ಪರಮಾತ್ಮನ ಗುಣ ಶ್ರವಣ ಮಾತ್ರ

---

೧. ಸರ್ವೇಷಾಂ ಸರ್ವಯೋಗೈಶ್ಚ ಪ್ರಾಪ್ಯಾ ಮುಕ್ತಿರ್ನ ಸಂಶಯಃ ।
ತಥಾ ಪಿತು ಪಿಶೇಷೇಣಾಸ ಸ ತೇಷಾಂ ವಿಧೀಯತೇ ॥
ಭಗವದ್ಗುಣಾನುಸಾರೇಣ ವೇದಾರ್ಥೋ ನಿಯತೇ ಹಿ ಯೈಃ ।
ಭಕ್ತಿಯೋಗಸ್ತು ತೇ ಪ್ರೋಕ್ತಾ ನಾದೃಶಾ ಹಿ ಸುರಾಃ ಸದಾ ॥

೨. ಕರ್ಮನಿರ್ಹಾರ ಮುದ್ದಿಶ್ಯ ಪರಸ್ಮಿನ್ ವಾತದರ್ಪಣಂ ।
ಯಜೇದ್ಯಷ್ಟವ್ಯಮಿತಿ ವಾ ಪೃಥಗ್ ಭಾವಃ ಸ ಸಾತ್ವಿಕಃ ॥

ದಿಂದಲೇ ಸರ್ವಗುಣಾಶ್ರಯನಾದ ಭಗವಂತನನ್ನು ಗಂಗಾನದಿಯು ಸಮುದ್ರವನ್ನು ಸೇರುವ ಪರ್ಯಂತ ಅವಿಚ್ಛಿನ್ನವಾಗಿ ಹರಿಯುವಂತೆ, ಮನೋವೇಗ ಗಮನವು ಪರಮಾತ್ಮನ ಗುಣಗಳಲ್ಲಿ ನಿರಂತರವಾಗಿ ಹರಿಯುತ್ತಿರುವುದೋ ಅಂಥ ಭಕ್ತಿಯು ನಿರ್ಗುಣ ಭಕ್ತಿ ಎನಿಸುತ್ತದೆ. ಪುರುಷೋತ್ತಮನಲ್ಲಿ ಅಹೈತುಕವಾಗಿ ನಿರಂತರವಾಗಿ ಎಡಬಿಡದೆ ಆಚರಿಸಲ್ಪಡುವ ಭಕ್ತಿ ಯೋಗ ಇದು.[೧]

ಕೊಡಬೇಕಾದರೆ ಸಾಲೋಕ್ಯ, ಸಾರ್ಷ್ಟಿ (ಸಮಾನೈಶ್ವರ್ಯ) ಸಮೀಪ್ಯ ಸಾರೂಪ್ಯ (ಐಕ್ಯತ್ವ) ಸಾಯುಜ್ಯಗಳೆಂಬ ಮೋಕ್ಷದಲ್ಲಿ ಭೋಗಗಳನ್ನು ಕೊಟ್ಟರೂ ಮುಕುಂದನ ಸೇವೆಯ ಹೊರತು ಯಾವ ಭಕ್ತರು ಸ್ವೀಕರಿಸುವುದಿಲ್ಲವೋ ಅಂಥ ಭಕ್ತಿ ಅತ್ಯಂತಿಕ ಭಕ್ತಿ ಎನಿಸುತ್ತದೆ.[೨]

ಯಾವ ಈ ಅತ್ಯಂತಿಕ ಭಕ್ತಿಯೋಗದಿಂದ ಲಿಂಗಶರೀರೇಂದ್ರಿಯಗಳೆಂಬ ತ್ರಿಗುಣಗಳನ್ನು ಅತಿಕ್ರಮಿಸಿ (ಸತ್ಯಜಿ) ಮದ್ಭವಾಯ ಅಂದರೆ ಚಿದಾನಂದ, ದೇಹದಿಂದ ಭಗವಂತನಲ್ಲಿ ಇರಲು ಔನತ್ಯ ಸ್ಥಿತಿಗೋಸ್ಕರ ಯೋಗ್ಯವಾಗಿರುತ್ತದೋ ಅಂಥ ಭಕ್ತಿಗೆ ಫಲಾಫಲ ಪರಮಾತ್ಮನ ಸಾಕ್ಷಾತ್ಕಾರ. ಇಂಥ ಭಕ್ತನು ಭಗವಂತನಿಗೆ ಪ್ರಿಯನಾಗುತ್ತಾನೆ.

ವೇದ ವಿಹಿತವಾದ ಸತ್ಕರ್ಮ, ಸ್ವಧರ್ಮವಾದ ಭಗವತ್ಪೂಜಾ, ಪ್ರಾಣಿಗಳಿಗೆ ಅಹಿಂಸೆ, ಕೇಶವಾದಿಮೂರ್ತಿಗಳ ದರ್ಶನ, ಸ್ಪರ್ಶ, ಪೂಜೆ, ಸ್ತುತಿ ಅಭಿವಂದನೆ ಮುಂತಾದ ಉಪಾಸನೆಯಿಂದಲೂ, ಸತ್ಯವಾಕ್ಯಪಾಲನ, ದುರ್ಜನ ಸಂಗತ್ಯಾಗ, ಸ್ವೋತ್ತಮರ ಅರ್ಚನೆ, ಬಹುಮಾನ ಅಂದರೆ ಮರ್ಯಾದೆ, ಭಕ್ತಿ ಪೂಜೆ, ಕಡಿಮೆಯಾದವರಲ್ಲಿ ಅನುಕಂಪ, ಸಮಾನರಲ್ಲಿ ಮಿತ್ರಭಾವ, ರಕ್ಷಣೆ, ಯಮನಿಯಮಗಳಿಂದ ಮಾಡುವ ಭಕ್ತಿ ಸದ್ಭಕ್ತಿ ಎನಿಸುತ್ತದೆ.[೩]

ಆಧ್ಯಾತ್ಮಿಕವೆನಿಸಿದ ವೇದಾಂತ ಶಾಸ್ತ್ರಶ್ರವಣದ ದೆಸೆಯಿಂದಲೂ ಭಗವಂತನ ನಾಮ ಸಂಕೀರ್ತನೆಯಿಂದಲೂ, ವಕ್ರಬುದ್ಧಿಯಿಲ್ಲದೆ ಋಜುವಾದ ರೀತಿಯಲ್ಲಿ ಪೂಜ್ಯ ಪಂಡಿತರಾದವರ ಸಹವಾಸದಿಂದ ದೇಹಾದಿಗಳಲ್ಲಿ ಅಹಂಕಾರವೂ, ಮಮಕಾರವೂ ತೊಲಗಿ ನಿರಹಂಕಾರ, ನಿರ್ಮಮಕಾರಗಳು ಉಂಟಾಗುತ್ತದೆ.[೪]

ಊರ್ಧ್ವಪುಂಡ್ರಧಾರಣೆ ವೈಷ್ಣವ ದೀಕ್ಷೆಗಳಿಂದ ಪರಿಶುದ್ಧನಾದ ಭಕ್ತನ ಅಂತಃಕರಣವು

---

೧. ಮದ್ಗುಣಶ್ರುತಮಾತ್ರೇಣ ಮಯಿ ಸರ್ವಗುಣಾಶ್ರಯೇ ।
ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಂಬುಧೌ ॥
ಲಕ್ಷಣಂ ಭಕ್ತಿಯೋಗಸ್ಯ ನಿಗುಣಸ್ಯ ದ್ಯುದಾಹೃತಂ ।
ಅಹೇತುಕ್ಯವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ ॥

೨. ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕ್ಯತ್ವಮಿತ್ಯುತ ।
ದಿಯಾಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ ॥

೩. ಸ ಏವ ಭಕ್ತಿ ಯೋಗಾಖ್ಯಃ ಅತ್ಯಂತಿಕ ಉದಾಹೃತಃ ।
ಯೇನಾತಿವ್ರಜ್ಯತ್ರಿಗುಣಾನ್ ಮದ್ಭಕ್ತಾಯೋಪಪದ್ಯತೇ ॥

೪. ಆಧ್ಯಾತ್ಮಿಕಾನು ಶ್ರವಣಾನ್ನಾಮ ಸಂಕೀರ್ತನಾಚ್ಚಮೇ ।
ಆರ್ಜವೇನಾರ್ಯ ಸಂಗೇನ ನಿರಹಂಕ್ರಿಯಯಾ ಕಥಾ ॥

ಕಾಲ ವಿಳಂಬವಿಲ್ಲದೆ ಶ್ರೀಹರಿಯ ಗುಣಗಳನ್ನೂ, ದೋಷಕ್ಕೆ ಅವಕಾಶವಿಲ್ಲದಂತೆ ಕೇಳಿದ ಮಾತ್ರದಿಂದಲೇ ಅಂದರೆ *(ಗುಣಾಃ ಶ್ರುತಾಃ ಸವಿರುದ್ಧಾಶ್ಚ ದೇವೇ)* ಭಗವಂತನನ್ನು ಹೊಂದುತ್ತಾನೆ. ಅಂತಃಕರಣ ಶುದ್ಧಿಯುಳ್ಳ ಭಕ್ತನಿಗೆ ಶೀಘ್ರವಾಗಿ ಭಗವತ್ಪ್ರಸಾದ ಲಭಿಸುತ್ತದೆ.[೧]

ಪುಷ್ಪದ ದೆಸೆಯಿಂದ ವಾಯುಮಾರ್ಗವಾಗಿ ಬರುವ ಸುಗಂಧವು ಘ್ರಾಣೇಂದ್ರಿಯವನ್ನು ಆವರಿಸಿ, ವಶೀಕರಿಸಿಕೊಳ್ಳುವಂತೆ ಯಾರಿಗೆ ಶ್ರೀಹರಿಯಲ್ಲಿ ವಿಕಾರರಹಿತವಾದ ಮನಸ್ಸಿದೆಯೋ ಅಂಥವರಿಗೆ ಭಗವಂತನ ರತಿಯುಂಟಾಗುತ್ತದೆ. ಆತ್ಮ ಶಬ್ದ ವಾಚ್ಯನಾದ ಶ್ರೀಹರಿಯನ್ನು ಪ್ರಸಾದಾಭಿಮುಖವಾಗಿ ಮಾಡುತ್ತದೆ.[೨]

ಇಂಥ ನಿರ್ಗುಣ ಭಕ್ತನು ಪರಮಾತ್ಮನ ಅಪರೋಕ್ಷ ಜ್ಞಾನ ಪಡೆಯುತ್ತಾನೆ. ಸದ್ಭಕ್ತಿಯೋಗದಲ್ಲಿ ಮನಸ್ಸುಳ್ಳ ಸಾಧಕನಿಗೆ ಆನಂದಾನುಭವಾತ್ಮನಾದ, ಅನಂತಗುಣ ಪರಿಪೂರ್ಣನಾದ ಬ್ರಹ್ಮವಾಚ್ಯನಾದ ಭಗವಂತನೇ ದೊರಕುವಾಗ ಅವನಿಗೆ ಸಾಧಿಸಬೇಕಾದ್ದು ಬೇರೇನೂ ಉಳಿದಿರುವುದಿಲ್ಲ.[೩]

ಬ್ರಹ್ಮಸೂತ್ರ ಭಾಷ್ಯದಲ್ಲಿ ಶ್ರೀಮಧ್ವಾಚಾರ್ಯರು ಕರ್ಮದಿಂದ ಅಧಮ ಪ್ರಸಾದವೂ, ಶ್ರವಣಾದಿಗಳಿಂದ ಮಧ್ಯಮ ಪ್ರಸಾದವೂ, ಜ್ಞಾನಸಂಪತ್ತಿನಿಂದ ಉತ್ತಮ ಪ್ರಸಾದವೂ ದೊರಕುವುದೆಂದು ಹೇಳಿದ್ದಾರೆ. ಶ್ರೀಹರಿಯಲ್ಲಿ ಮಾಡುವ ಅಧಮ ಪ್ರಸಾದದಿಂದ ಸ್ವರ್ಗ ಪ್ರಾಪ್ತಿಯೂ, ಮಧ್ಯಮ ಪ್ರಸಾದದಿಂದ ಜನೋಲೋಕವೂ, ಉತ್ತಮ ಪ್ರಸಾದದಿಂದ ಮುಕ್ತಿಯೂ ದೊರಕುತ್ತದೆ. ಭಗವಂತನು ಮಾಡುವ ಅನುಗ್ರಹ, ಪ್ರಸಾದಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಪ್ರಸಾದಗಳು ಇರುವುದೆಂದು ಅರ್ಥ ಮಾಡಿಕೊಳ್ಳಬಾರದು. ಸಾಧಕರ ಅಧಿಕಾರಿ ಭೇದದಿಂದಲೂ, ಯೋಗ್ಯತಾ ಭೇದದಿಂದಲೂ, ಅನುಷ್ಠಾನ, ಉಪಾಸನ, ತಾರತಮ್ಯ ಭೇದಗಳಿಂದಲೂ ಅವನು ಮಾಡುವ ಭಕ್ತಿಗೆ ಅನುಗುಣವಾಗಿ ಪ್ರಸಾದ ರೂಪದಲ್ಲಿ ಭಗವಂತನು ಫಲ ನೀಡುವನೆಂದು ಇದರ ಅರ್ಥ. ಶ್ರವಣ ಮನನ ಧ್ಯಾನ ಭಕ್ತಿಗಳು ಜ್ಞಾನ ಸಂಪತ್ತಿಗಿಂತಲೂ ಪ್ರಧಾನವಾದುದು. ಇವುಗಳನ್ನು ಬಿಟ್ಟು ಯಾರೊಬ್ಬರೂ ಜ್ಞಾನ ಪಡೆದಿಲ್ಲವು.

ತತ್ವಪ್ರಕಾಶಿಕಾ ಗ್ರಂಥದಲ್ಲಿ ಆಚಾರ್ಯರು ಭಕ್ತಿಯನ್ನು ಕುರಿತು ಜ್ಞಾನವು ಭಕ್ತಿಯ ಅಂಶವು *(ಭಕ್ತ್ಯಂಶಕಂಯತೋಜ್ಞಾನಂ)* ಜ್ಞಾನಕ್ಕೆ ಭಕ್ತಿ ಭಾವವಿದೆ *(ಜ್ಞಾನಸ್ಯ ಭಕ್ತಿ ಭಾವತ್ವಾತ್)* ಅಪರೋಕ್ಷ ದರ್ಶನದಿಂದ ಕೂಡಿದ ಭಕ್ತಿಯು ಪೂರ್ಣವೆನಿಸಿದೆ. *(ಅಪರೋಕ್ಷ ದೃಶಾಯುಕ್ತಾ ಸಾ ಪೂರ್ಣೇತ್ಯಬಿಧೀಯತೇ)* ಅಂದರೆ ಭಕ್ತಿಯುಕ್ತವಾದ ಪೂರ್ಣಾಪರೋಕ್ಷ ದರ್ಶನ ಭಕ್ತಿಯೇ

---

೧. ಮದ್ಧರ್ಮಣಾಪಿ ಯರ್ಹ್ಯತ್ರೈಃ ಪರಿಸಂಶುದ್ಧ ಆಶಯಃ ।
ಪುರುಷಸ್ಯಾಂಜಸಾಭ್ಯೇತಿ ಶ್ರುತಮಾತ್ರಗುಣಂ ಹಿ ಮಾಂ ॥

೨. ಯಥಾವಾತರಥೋ ಘ್ರಾಣಮಾವೃಂಕ್ತೆ ಗಂಧ ಆಶಯಾತ್ ।
ಏವಂ ಯೋಗರತಃ ಚೇತ ಆತ್ಮಂ ನಮವಿಕಾರಯನ್ ॥

೩. ಭಕ್ತಿ ಲಬ್ಧವತಃ ಸಾಧೋಃ ಕಮನ್ಯದವಶಿಷ್ಯತೇ ।
ಮಯ್ಯನಂತಗುಣೇ ಬ್ರಹ್ಮಣ್ಯಾನಂದಾನುಭವಾತ್ಮನಿ ॥ - ಭಾಗವತ.

ಮೋಕ್ಷಪ್ರದವೆಂದು ಹೇಳಿರುತ್ತಾರೆ. ಇಲ್ಲಿ ಆಚಾರ್ಯರು ಜ್ಞಾನವೆಂಬ ಪದಕ್ಕೆ ಪೂರ್ಣ ಭಕ್ತಿ ಎಂದು ಅರ್ಥ ಹೇಳಿದ್ದಾರೆ.

ಇದಲ್ಲದೆ ಸತ್ಪಾತ್ರದಲ್ಲಿ ಮಾಡುವ ದಾನ, ಭಾಗೀರಥಿ ಮೊದಲಾದ ತೀರ್ಥಸ್ನಾನ, ಧ್ಯಾನ, ಪಾನಾದಿ ಸೇವ, ಚಂದ್ರಾಯಣಾದಿ ವ್ರತಗಳು, ತಪಸ್ಸು, ಜ್ಯೋತಿಷ್ಟೋಮ ಮೊದಲಾದ ಯಜ್ಞ -ಇವೆಲ್ಲವೂ ಹರಿಸೇವೆಗೆ ಸಾಧನೋಪಾಯಗಳೆನಿಸುತ್ತವೆ. ಭಗವತ್ಸೇವೆಯ ಭಕ್ತಿಯೂ ಕೂಡ ಪ್ರಧಾನ ಸಾಧನಕ್ಕೆ ಅಂಗವಾಗುತ್ತದೆ.[೧]

ವರದರಾಜೀಯ ವ್ಯಾಖ್ಯಾನದಲ್ಲಿ ಮುಕ್ತಿಗೆ ಭಕ್ತಿಯೊಂದೇ ಮುಖ್ಯ ಸಾಧನ. ಅಂದರೆ ಸಾಕ್ಷಾತ್ ಸಾಧನವೆಂದು ಸ್ಪಷ್ಟವಾಗಿ ಹೇಳಿದೆ. ಈ ಮುಖ್ಯ ಅಥವಾ ಅಸಾಧಾರಣ ಸಾಧನವಾದ ಭಕ್ತಿಯ ಸ್ವರೂಪವನ್ನು ಕುರಿತು ಹೀಗೆ ಹೇಳಿದೆ.

ಶ್ರೀ ವಿಷ್ಣುವಿನ ಸರ್ವೋತ್ತಮತ್ವ, ಜೀವರುಗಳ ತಾರತಮ್ಯ ಜ್ಞಾನದಿಂದಲೇ ಮೋಕ್ಷವೇ ಹೊರತು ಬೇರೆ ಸಾಧನಗಳಿಂದ ಮೋಕ್ಷವಾಗದು. ಇದರಂತೆ ಪಂಚಭೇದ, ಪರಮಾತ್ಮನ ಸ್ವಗತ ಭೇದರಾಹಿತ್ಯ, ಅವನ ಗುಣ ಪರಿಪೂರ್ಣತ್ವ, ನಿರ್ದೋಷತ್ವ ಮುಂತಾದ ನವವಿಧ ದ್ವೇಷಗಳಿಂದ ಮೋಕ್ಷವು ದೊರಕದು. ಶ್ರೀಹರಿಯೇ ಅಷ್ಟಕರ್ತೃವೆಂದು ತಿಳಿದು ಮಾಡುವ ಭಕ್ತಿ, ಸಮಸ್ತ ವೇದಗಳು, ಪಂಚರಾತ್ರ, ಸ್ಮೃತಿಗಳು, ಇತಿಹಾಸ, ಪುರಾಣಗಳು-ಇವು ವಿಷ್ಣೋತ್ಕರ್ಷವಾಗಿಯೇ ಇರುವುದೆಂಬ ಜ್ಞಾನ ಬಹಳ ಮುಖ್ಯ. ಅಂಥ ಜ್ಞಾನಪೂರ್ಣವಾಗಿ ಮಾಡುವ ಭಕ್ತಿಗೆ ಮುಕ್ತಿ ದೊರಕುತ್ತದೆ, ಅನ್ಯಥಾ ಇಲ್ಲ- ಎಂಬುದಾಗಿ ವರದರಾಜೀಯ ವ್ಯಾಖ್ಯಾನವು ತಿಳಿಸುತ್ತದೆ.[೨]

ಮುಕ್ತಿಗೆ ಕಾರಣವಾಗುವ ವೈರಾಗ್ಯದ ಸ್ವರೂಪವೇನು?

೧) ಶ್ರೀಹರಿಯು ಸರ್ವಸ್ವಾಮಿ, ಆದಾನಾದನ ಕರ್ತ, ಆತ್ಮಶಬ್ದ ವಾಚಕ, ವಿಷ್ಣು ಶಬ್ದ ವಾಚ್ಯನಾದ ಪರಬ್ರಹ್ಮನನ್ನು ವಿಚಾರ ಮಾಡಿ ತಿಳಿಯುವುದು, ಲೌಕಿಕ ವಿಷಯಗಳನ್ನು ನಿರರ್ಥಕ-ಶುಷ್ಕವೆಂದು ತಿಳಿಯುವುದು. ಇಂಥ ಬರಡು ವಾಕ್ಯಗಳನ್ನು ತ್ಯಜಿಸುವುದು.

೨) ಚತುರ್ಮುಖ ಬ್ರಹ್ಮನಿಂದ ಆರಂಭಿಸಿ ತೃಣದವರೆಗೆ ಜೀವಜಡ ವಸ್ತುಗಳನ್ನು ಅನಿತ್ಯವೆಂದೂ, ಅಸಾರವೆಂದೂ ವಿಮರ್ಶಿಸಿ ತಿಳಿಯುವುದು. ಅವುಗಳಲ್ಲಿ ವಿಮುಖನಾಗಿ ವೈರಾಗ್ಯ ಹೊಂದುವುದು; ಪರಮ ಚೇತನನಾದ ಸರ್ವೋತ್ತಮನೂ, ಪರಮ ನಿತ್ಯನೂ, ವೇದೈಕವೇದ್ಯನೂ ಆದ ಸರ್ವತ್ರ ವ್ಯಾಪ್ತನಾದ ಶ್ರೀಹರಿಯನ್ನು ಆಶ್ರಯಿಸುವುದು.

೩) ಕ್ಷೀಣ ಪುಣ್ಯ ಕೊಡುವ ಸ್ವರ್ಗ ಸುಖಾದಿಗಳನ್ನು ತ್ಯಜಿಸಿ ವೈರಾಗ್ಯ ಹೊಂದುವುದು. ಭಗವಂತನನ್ನು ಬೇಡುವುದು.

೪) ಲೋಕವಾರ್ತೆ, ವ್ಯವಹಾರ, ಸಂಸಾರಿಕ ಚಿಂತೆಗಳನ್ನು ಬಿಟ್ಟು ಮನಸ್ಸನ್ನು

---

೧. ದಾನತೀರ್ಥ ತಪೋಯಜ್ಞ ಪೂರ್ವಾಃ ಸರ್ವೇಪಿ ಸರ್ವದಾ ।
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ - ತಾತ್ಪರ್ಯ ನಿರ್ಣಯ

೨. ತಾರತಮ್ಯಂ ತತೋಜ್ಞಾನಂ ..........
......... ವಿಷ್ಣು ಪರಾವೇವ ಮುಚ್ಯತೇ ನಾನ್ಯಥಾ ಕ್ವಚಿತ್ - ವರದರಾಜೀಯ ವ್ಯಾಖ್ಯಾನ

ಸರ್ವನಿಯಾಮಕನಾದ ಶ್ರೀಹರಿಯಲ್ಲಿ ಮನಸ್ಸನ್ನು ಇರಿಸಿ, ಭಗವದ್ ಧ್ಯಾನಾದಿಗಳಲ್ಲಿ ಮನಸ್ಸು ಹರಿಸುವುದು.

೫) ಇಂಥ ಪರಿಪಕ್ವ ಜ್ಞಾನ ವೈರಾಗ್ಯಗಳಿಂದ ಪರಿಪಕ್ವವಾದ ಭಕ್ತಿಯುಂಟಾಗುತ್ತದೆ.

ಏಕೆಂದರೆ ಇಚ್ಛಾರೂಪವಾದ ಪರಮಾತ್ಮನು ಯಾವನನ್ನು ಭಕ್ತತ್ವೇನ ಅನುಗ್ರಹಿಸಿದರೆ ಮಾತ್ರ ಮುಕ್ತಿ ಲಭಿಸುತ್ತದೆಯೇ ಹೊರತು ಅನ್ಯಥಾ ಮಾರ್ಗವಿಲ್ಲ.

ಪರಮಾತ್ಮನ ಅನುಗ್ರಹವಾಯಿತೆಂದರೆ ಜೀವನು ಸಂಸಾರ ದೆಸೆಯ ದುಃಖದಿಂದ ಮುಕ್ತನಾಗುತ್ತಾನೆ. ಇದೇ ಅಭಿಪ್ರಾಯವನ್ನು ಪೌತ್ರಾಯಣ ಶ್ರುತಿಯೂ ಪುಷ್ಟೀಕರಿಸುತ್ತದೆ.

ಮುಕ್ತಿಯನ್ನು ಕೊಡುವ ಭಕ್ತಿ ಮೀಮಾಂಸೆಯಲ್ಲಿ ಆಯಾ ಅಧಿಕಾರ ಜೀವರ ಯೋಗ್ಯತೆಯ ತಾರತಮ್ಯಾನುಸಾರ ಆನಂದಾದಿಗಳನ್ನು ಹೇಳಿದೆ. ಇದರಂತೆಯೇ ಭಕ್ತಿ ತಾರತಮ್ಯವೂ ಶ್ರುತಿಗಳಲ್ಲಿ ಹೇಳಿದೆ. ಭಕ್ತನು ಸದ್ಗುಣಗಳಿಂದ ಸಾಧುಯುಕ್ತನಾದರೆ ಯುವನೆನಿಸುತ್ತಾನೆ. ಸಾಧುವೆಂದರೆ ಶ್ರೀವಿಷ್ಣು. ಸಮ್ಯಕ್ ಅಧ್ಯಯನದ ಫಲವಾಗಿ ಅತಿಶಯಾಶಿಷ್ಟನೆನಿಸುತ್ತಾನೆ. ನಿತ್ಯಪೂರ್ಣ ಸುಖವುಳ್ಳವನಾಗಿ ದೃಢತೆಯುಳ್ಳವನಾಗಿ ದೃಢಿಷ್ಟನೂ, ಬಲಿಷ್ಠನೂ ಆಗುತ್ತಾನೆ. ಇಂಥ ಮುಕ್ತ ಭಕ್ತನಿಗೆ ತ್ರೇತಾಯುಗದ ದೊರೆಗಳಿಗೆ ಲಭ್ಯವಾಗುವ ಸಂತೋಷ ಆನಂದಗಳು ಪ್ರಾಪ್ತಿಯಾಗುತ್ತದೆ.

ಈ ಮಾನುಷ ಮುಕ್ತ ಭಕ್ತನ ಆನಂದ ಭಕ್ತಿಯ ನೂರರಷ್ಟು ಭಕ್ತಿ ಮಾನುಷ ಗಂಧರ್ವನಿಗೂ, ಆತನ ನೂರರಷ್ಟು ಪಾಲು ಹೆಚ್ಚು ಭಕ್ತಿ ಪಿತೃಗಳಿಗೂ, ಅವರ ಶತಗುಣಾಧಿಕ ಉತ್ಕರ್ಷ ಆನಂದಾದಿಗಳು ಅತಾತ್ವಿಕ ದೇವತೆಗಳಿಗೂ ಆಗುತ್ತದೆ. ದೇವತೆಗಳಲ್ಲಿ ಅಸಂಖ್ಯಾತರು, ಅಕಥಿತರು, ದೇವಕುಲದಲ್ಲಿ ಜನಿಸಿದವರು, ಅಜಾನ ದೇವಾದಿಗಳು, ಕರ್ಮ ದೇವತೆಗಳೆನಿಸಿದ ಬಲಿಚಕ್ರವರ್ತಿ ಮುಂತಾದವರಿಗಿಂತ ಹೆಚ್ಚು ಭಕ್ತಿ ಆನಂದಗಳು ತತ್ವಾಭಿಮಾನಿ ದೇವತೆಗಳದು. ಅವರ ನೂರರಷ್ಟು ಭಕ್ತಿ ಸುಖ ಇಂದ್ರ, ದಕ್ಷಪ್ರಜೇಶ್ವರ, ಪುರುಹೂತ ಪುರಂದರರದು. ಅವರಿಗಿಂತಲೂ ರುದ್ರನಿಗೆ ಶತಗುಣಾಧಿಕ, ಇಂದ್ರ ಮತ್ತು ರುದ್ರನ ಗುಣಾಧಿಕ ಭಕ್ತಿಯು ಗರುಡಶೇಷರಿಗೆ. ಅವರಿಗಿಂತ ಶ'ತಾಧಿಕ ಭಕ್ತಿ ಆನಂದಗಳು ಬ್ರಹ್ಮ ಮತ್ತು ವಾಯುದೇವರಿಗೆ ಉಂಟು. ಅವರಿಗಿಂತ ಎಷ್ಟೋ ಪಟ್ಟು ಗುಣಾಧಿಕ ಭಕ್ತಿ ಆನಂದಗಳು ರಮಾದೇವಿಯದು. ಹೀಗೆ ಭಕ್ತಿಯ ಉಪಲಕ್ಷಣದಿಂದ ನೀಚೋಚ್ಚತಾ ಇದೆ. ತಾರತಮ್ಯೋಕ್ತಿಯಿಂದ ಜ್ಞಾನ, ಭಕ್ತಿ, ಬಲ ಆನಂದಾದಿಗಳನ್ನು ಶ್ರುತಿಗಳಲ್ಲಿ ಹೇಳಿದೆ.

ಶ್ರೀ ಹರಿಯ ಆನಂದವು ಎಂಥದೆಂದು ಕಲ್ಪನೆಯಿಂದಲೂ ಯಾರು ಊಹಿಸಲಾರರು. ಅವನನ್ನು ಪರಮಾನಂದಮೂರ್ತಿ, ನಿತ್ಯಾನಂದ, ಚಿದಾನಂದಮೂರ್ತಿ, ಆನಂದಸಾಗರ ಎಂದು ವಿಶೇಷಗಳಿಂದ ತಿಳಿಯಬಹುದು, ಅಷ್ಟೇ.

ಮಧ್ವಾಚಾರ್ಯರು ವಿಷ್ಣುತತ್ತ್ವ ನಿರ್ಣಯದಲ್ಲಿ ನಿರ್ಣಾಯಕವಾಗಿ ಹೀಗೆ ತಿಳಿಸುತಾರೆ.

ವಿಷ್ಣುವು ಭಕ್ತಿಯಿಂದಲೇ ಸಂತುಷ್ಟನಾಗುತ್ತಾನೆ. ಬೇರೆ ಯಾವುದರಿಂದಲೂ ಅವನು ಪ್ರೀತನಾಗಲಾರನು. ಅವನು ಮುಕ್ತಿಯನ್ನು ಕೊಡುವುದು ಭಕ್ತಿಯನ್ನು ನೋಡಿಯೇ, ಅನ್ಯತಾ ಅಲ್ಲ.

ತಾರತಮ್ಯಾನುಸಾರ ನಿತ್ಯವಾದ ಅನಾದಿ ನಿತ್ಯವಾದ ಭಕ್ತಿಯೇ ಮುಕ್ತ ಬ್ರಹ್ಮಾದಿಗಳ ತಾರತಮ್ಯಕ್ಕೆ ಕಾರಣವಾಗಿದೆ. ಈ ಭಗವದ್ಭಕ್ತಿಯನ್ನು ತಿಳಿಸುವುದೇ ಸಚ್ಛಾಸ್ತ್ರಗಳ ಮುಖ್ಯ ತಾತ್ಪರ್ಯವೆಂದು ಆಚಾರ್ಯರು ತಿಳಿಸುತ್ತಾರೆ.

ದೇವದೇವನೂ, ದೇವೋತ್ತಮನೂ ಆದ ಶ್ರೀಮನ್ಮಹಾವಿಷ್ಣುವಿನ ಸರ್ವೋತ್ಕರ್ಷವನ್ನು ನಿರೂಪಿಸುವುದರಲ್ಲೇ ಸರ್ವಾಗಮಗಳೂ ಪ್ರವತ್ತವಾಗಿದೆ. ಇಂಥ ಭಗವಂತನಿಂದಲೇ ಮೋಕ್ಷಾದಿ ಸಕಲ ಪುರುಷಾದಿಗಳು ಲಭ್ಯವಾಗುವುದು. ಅಂತಲೇ ಭಗವಂತ ನನ್ನು ಭಕ್ತ್ಯಾಪ್ರಸನ್ನಃ ಪರಮೋ, ಭಕ್ತ್ಯೈವ ತುಷ್ಟಿಮಭ್ಯೇತಿ - ಇತ್ಯಾದಿಗಳಿಂದ ತಿಳಿಸುತ್ತಾರೆ.

ಲೋಕದಲ್ಲಿ ನಾವು ಒಂದು ದೃಷ್ಟಾಂತವನ್ನು ನೋಡುತ್ತೇವೆ. ಸರ್ವಶಕ್ತರಾದ ದೊರೆಗಳು, ತಾವು ರಾಜನೆಂದು ಹೇಳುವವರನ್ನು ಶಿಕ್ಷಿಸುತ್ತಾರೆ. ಅವರ ಗುಣೋತ್ಕರ್ಷವನ್ನು ಕೊಂಡಾಡುವವನಿಗೆ ಮನೋಭೀಷ್ಟ ಈಡೇರಿಸುತ್ತಾರೆ.[೧] ಪರಮಾತ್ಮನ ವಿಷಯದಲ್ಲಿ ಈ ಮಾತು ಸತ್ಯವೆಂದು ನಾವೇಕೆ ತಿಳಿಯಬಾರದು.

ಭಾಗವತಕ್ಕೆ ವ್ಯಾಖ್ಯಾನ ಬರೆದಿರುವ ವಿಜಯಧ್ವಜರು ಭಗವದ್ಗುಣೋತ್ಕರ್ಷ ಜ್ಞಾನ ಪೂರ್ವಕವಾದ ಭಕ್ತಿಗೆ ಭಗವಂತನು - ಪರಮ ಪುರುಷನು ಪುರುಷಾರ್ಥವನ್ನು ನೀಡುವನೆಂದು ತಿಳಿಸುತ್ತಾರೆ.

ಶ್ರೀಹರಿಯಲ್ಲಿ ಗುಣಪರಿಪೂರ್ಣತ್ವ ನಿಶ್ಚಯ ಮತಿಯಿಂದ ಮಾಡುವ ಪರಿಪಕ್ವ ಭಕ್ತಿಗೆ ಮೋಕ್ಷ ಪ್ರಾಪ್ತವಾದಂತೆ, ಭಗವಂತನ ದ್ವೇಷಿಯು ಅನ್ಯಾಥಾ ಅಜ್ಞಾನದಿಂದ ಅಂಧ ತಮಸ್ಸಿಗೆ ಹೋಗುತ್ತಾನೆ.

ಇದರಂತೆ ಶ್ರೀಹರಿಯ ಸಂಗರಹಿತನಾದವನು ಅಖಿಲಜ್ಞನಾಗಿದ್ದರೂ ಹರಿದರ್ಶನ ಪಡೆದವನಾಗಿದ್ದರೂ, ಮುಕ್ತನಾಗುವುದಿಲ್ಲ. ಹರಿಭಕ್ತಿಯಿಲ್ಲದ ದ್ವೇಷಿಗಳು ತಮಾಂಧ ನರಕಕ್ಕೆ ಹೋಗುತ್ತಾರೆ.

ಆದುದರಿಂದಲೇ ಭಗವದ್ಭಕ್ತಿಗೆ ಸಜ್ಜನರ ಸಂಗವು ಅತ್ಯಗತ್ಯವೆಂದು ಶ್ರುತಿ ಸ್ಮೃತಿಗಳು ಹೇಳಿವೆ. ಸತ್ಸಂಗದಿಂದಲೇ ಶ್ರೇಯಸ್ಸು, ಅದರಿಂದಲೇ ಮುಕ್ತಿ. ವೇದಧ್ಯಾಯನ ಮಾಡದಿದ್ದರೂ, ಮಹಾತ್ಮರೂ, ದೊಡ್ಡವರೂ ಆಗದಿದ್ದರೂ, ಭಗವಂತನನ್ನು ಪರಿಪಕ್ವವಾದ ಅತ್ಯಂತಿಕ ಭಕ್ತಿ ಉಪಾಸನೆಯಿಂದ ಬೇರೆಯವರಿಗೆ ಸಾಧ್ಯವಾಗದ ಮೋಕ್ಷ ಸಂಪಾದನೆಯಾಗಿದೆ ಎಂದು ಭಗವಂತ ತಿಳಿಸಿದ್ದಾನೆ. ತ್ವಷ್ಟ ಪುತ್ರನಾದ ವೃತ್ತನೆಂಬ ಅಸುರ, ಅವಂತಿಕ ನಾಮದ ಭಿಕ್ಷು, ವೃಷಪರ್ವರಾಜ, ಬಲಿಚಕ್ರವರ್ತಿ, ಬಾಣಾಸುರ, ಮಯನೆಂಬ ಶೂದ್ರ, ವಿಭೀಷಣ, ಸುಗ್ರೀವ, ಹನುಮಂತ, ಜಾಂಬುವಂತ, ಗಜರಾಜ, ಗೃಧ್ರ, ಜಟಾಯು, ವಣಿಕ, ತುಲಾಧಾಕ, ಧರ್ಮವ್ಯಾಧ, ಕುಬ್ಜೆ,

---

೧ ಘಾಯಂತಿ ಹಿ ರಾಜನೋರಾಜಾ ಹಮಿತಿ ವದಂತಂ ।
ದದತಿ ಚ ಸರ್ವಮಭೀಷ್ಟಂ ಗುಣೋತ್ಕರ್ಷಂ ವದತು ॥

ಗೋಪಿಕಾಸ್ತ್ರೀಯರು, ವಿಪ್ರಪತ್ನಿಯರು -ಹೀಗೆ ಅನೇಕರು ಭಗವಂತನನ್ನು ಆತ್ಯಂತಿಕ ಶುದ್ಧ ಭಕ್ತಿಯಿಂದ ಮೆಚ್ಚಿಸಿ, ಮುಕ್ತರಾಗಿದ್ದಾರೆಂದು ಭಾಗವತದಲ್ಲಿ ತಿಳಿಸುತ್ತದೆ.

ಸತ್ಕರ್ಮಗಳಿಂದ, ತಪಸ್ಸಿನಿಂದ, ಜ್ಞಾನ ವೈರಾಗ್ಯಾದಿಗಳಿಂದ, ಯೋಗದಿಂದ ದಾನ ಧರ್ಮಗಳಿಂದ, ಸದ್ವ್ಯಾಪಾರಗಳಿಂದ ಪಡೆಯಲಿಚ್ಛಿಸುವುದನ್ನೆಲ್ಲಾ ಭಕ್ತನು ಕೇವಲ ಭಕ್ತಿಯಿಂದಲೇ ಪಡೆಯುತ್ತಾನೆ. ಇಚ್ಛಿಸಿದರೆ ವೈಕುಂಠಾದಿ ಲೋಕಗಳನ್ನು ಪಡೆಯುತ್ತಾನೆ.

ಇಂಥ ಏಕಾಂತ ಭಕ್ತರ ವಿಷಯದಲ್ಲಿ ಭಗವಂತನಿಗೆ ವಿಶೇಷವಾದ ಅಭಿಮಾನ. ಅವರ ಬಗ್ಗೆ ಮೋಕ್ಷ ಗ್ರಂಥವಾದ ಭಾಗವತದಲ್ಲಿ ಹೀಗೆ ಅಪ್ಪಣೆ ಕೊಡಿಸಿದ್ದಾನೆ.

"ಧೀರನೆನಿಸಿದ, ಧಿಯಾರಮಣ ಮಾಡತಕ್ಕ ನನ್ನ ಏಕಾಂತ ಭಕ್ತರು ನಾನೇ ಅವರಿಗೆ ಜನನ ಮರಣವುಳ್ಳ ಸಂಸಾರವನ್ನು ತಪ್ಪಿಸುವ ಪುನರಾವೃತ್ತಿ ರಹಿತವಾದ ಅನಾವೃತ್ತಿಯೆನಿಸಿದ ಕೈವಲ್ಯ ಪದವನ್ನು ಕೊಟ್ಟರೂ ಅದನ್ನು ಪಡೆಯಲು ಇಚ್ಛಿಸುವುದಿಲ್ಲ. ಅವರು ಮೋಕ್ಷಾರ್ಥವಾಗಿ ಸಾಧನ ಮಾಡದೆ ನಾರಾಯಣ ಪ್ರೀತ್ಯರ್ಥವಾಗಿ ಭಗವಂತನಿಗಾಗಿಯೇ ಭಕ್ತಿ ಮಾಡುತ್ತಾರೆ. ಇಂಥ ಭಕ್ತರು ತನಗೆ ಪರಮ ಪ್ರಿಯರೆಂದು ತಿಳಿಸಿದ್ದಾನೆ."[೧]

ಗೀತಾಚಾರ್ಯನು ವಚನವಿತ್ತಿದ್ದಾನೆ; "ಸಜ್ಜನಸ್ವಾಮಿಯೂ, ಪ್ರಿಯನೂ ಆದ ನಾನು ಮುಖ್ಯವೂ, ಪ್ರಧಾನವೂ ಆದ ಶುದ್ಧ ಭಕ್ತಿಯಿಂದ ಮಾತ್ರವೇ ಗ್ರಾಹ್ಯನು. ಸಕಾಮನ ಯುಳ್ಳವನನ್ನೂ ಸಹ ನನ್ನಲ್ಲಿ ಇಡಲ್ಪಟ್ಟ ನಿಶ್ಚಲ ಭಕ್ತಿಯು ಜನನ ಮರಣಾದಿ ರೂಪ ಸಂಸಾರದ ದೆಸೆಯಿಂದ ಬಿಡುಗಡೆ ಮಾಡುತ್ತದೆ. ಅಂಥ ಭಕ್ತಿಯಿಂದ ಅವನು ಪುನೀತನಾಗುತ್ತಾನೆ."[೨]

ಅಲ್ಲದೆ ಭಗವಂತನು ಶಮದಮಾದಿ ಇಂದ್ರಿಯ ನಿಗ್ರಹಗಳಿಂದ ಶುದ್ಧ ಭಕ್ತಿಗಿಂತಲೂ ಭಗವಂತನ ನಾಮಸ್ಮರಣೆಯಿಂದ ರೋಮಾಂಚನಗೊಂಡು, ಆನಂದಭಾಷ್ಪ ಸುರಿಸುವ ಭಕ್ತನಿಗೆ ಒಲಿಯುವನೆಂದು ತಿಳಿಸಿದ್ದಾನೆ.[೩]

ಚಿತ್ತವು ದ್ರವಿಸುವುದು, ಧೈರ್ಯ ಮತ್ತು ಪ್ರಸಾದಗಳು ಭಗವಂತನ ಪ್ರಸನ್ನತೆಯ ಲಕ್ಷಣವು. ಪರಮ ಭಕ್ತನು ವಿಷ್ಣುವಿಗೆ ಅತ್ಯಂತ ಪ್ರಿಯನು, ಹೃದಯವಲ್ಲಭನು - ಎಂದು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ತಿಳಿಸಿದ್ದಾರೆ.

ಊದು ಕೊಳವೆಯ ಗಾಳಿಯ ಸಂಸರ್ಗದಿಂದ ಪ್ರಜ್ವಲಗೊಂಡ ಅಗ್ನಿಯು ಲೋಹದ ಅಪ್ಪಾದಿತ ದೋಷಗಳನ್ನು ಪರಿಹರಿಸಿ ಶುದ್ಧ ಲೋಹವನ್ನಾಗಿ ಮಾಡುವಂತೆ, ಭಕ್ತನ ಸಮಸ್ತ

---

೧. ನ ಕಿಂಚಿತ್ಸಾಧವೋ ಧೀರಾ ಭಕ್ತಾ ಹ್ಯೇಕಾಂತಿನೋ ಮಮ ।
ವಾಂಛಂತ್ಯಪಿ ಮಯಾ ದತ್ತಂ ಕೈವಲ್ಯಮಪುನರ್ಭವಂ ॥
ನೈರಪೇಕ್ಷ್ಯಂ ಪರಂ ಪ್ರಾಹುರ್ನಿಃಶ್ರೇಯಸಮನಲ್ಪಕಂ ।
ತಸ್ಮಾನ್ನಿರಾಶಿಷೋ ಭಕ್ತಿರ್ನಿರಪೇಕ್ಷಸ್ಯ ಮೇ ಭವೇತ್ ॥

೨. ಭಕ್ತ್ಯಾಹಮೇಕಯಾ ಗ್ರಾಹ್ಯಃ ಶುದ್ಧಯಾತ್ಮಾ ಸತಾಂ ಪ್ರಿಯಃ ।
ಭಕ್ತಿಃ ಪುನಾತಿ ಮನ್ನಿಷ್ಠಾ ಸಕಾಮಮಪಿ ಸಂಭವಾತ್ ॥

೩. ಕಥಂ ವಿನಾರೋಮಹರ್ಷಂ ದ್ರವತಾ ಚೇತಸಾ ವಿನಾ ।
ವಿನಾಽನಂದಾಶ್ರುಕಲಯಾ ಶುದ್ಧ್ಯೇದ್ಭಕ್ತ್ಯಾ ವಿನಾಶಯಃ ॥

ದೋಷಗಳು ಭಕ್ತಿಯ ಅಂತಃಕರಣದ ವಿರಹಾಗ್ನಿಯಲ್ಲಿ ಬೆಂದು ದೋಷ ಮುಕ್ತವಾಗುತ್ತದೆ. ಇಂಥ ಅತಿ ಪರಿಪಕ್ವ ಭಕ್ತಿಗೆ ಭಗವಂತನು ಒಲಿಯುತ್ತಾನೆ- ಎಂಬುದು ಶ್ರುತಿ ವಾಕ್ಯವು.

ಸ್ಥಾವರ ಮುಕ್ತರುಗಳಿಗಿಂತಲೂ ಜಂಗಮ ಮುಕ್ತರು ಉತ್ತಮರು. ಅವರಿಗಿಂತ ಮನುಷ್ಯ ಮುಕ್ತರು ಶ್ರೇಷ್ಠರು, ಅವರಿಗಿಂತ ವಿಪ್ರ ಮುಕ್ತರು ಶ್ರೇಷ್ಠ, ಅವರಿಗಿಂತ ಋಷಿಗಳು, ಅವರಿಗಿಂತ ಸಂಶಯ ಪರಿಹಾರ ಮಾಡತಕ್ಕ ಗುರುಗಳು ಶ್ರೇಷ್ಠರು. ಅವರಿಗಿಂತ ಅಧಿಕ ದೇವತೆಗಳು, ಮುಕ್ತ ಇಂದ್ರನು ಸರ್ವಶ್ರೇಷ್ಠ, ಅವನಿಗಿಂತ ಅಧಿಕ ಶ್ರೇಷ್ಠರಾದವರು ಗರುಡಶೇಷ ರುದ್ರರು, ಅವರಿಗಿಂತ ಶ್ರೇಷ್ಠರು ಬ್ರಹ್ಮ ವಾಯುಗಳು, ಅವರೆಲ್ಲರಿಗಿಂತ ಉತ್ತಮಳು ರಮಾದೇವಿ, ಇವರೆಲ್ಲರಿಗಿಂತ ಅಸಂಖ್ಯಪಾಲು ಉತ್ತಮೋತ್ತಮನು ಶ್ರೀಹರಿ. ಮುಖ್ಯ ಶ್ರೇಷ್ಠ, ಮುಕ್ತರಲ್ಲೇ ಸರ್ವಶ್ರೇಷ್ಠ.

ಇಂಥ ಪರಮಾತ್ಮನನ್ನು *"ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ"*, *"ಭಕ್ತ್ಯೈವ ತುಷ್ಯತಿ ಹರಿಪ್ರಣತ್ವಮೇವ ಸರ್ವಸ್ಯ ಧರ್ಮಃ"*- ಎಂದು ವರ್ಣಿಸಿದ್ದಾರೆ.

ಭಗವಂತನು ಗೋಪಿಕಾ ಸ್ತ್ರೀಯರಿಗೆ ಕಾಮೋಪ ಸರ್ಜನದಿಂದಲೇ ಮೋಕ್ಷವನ್ನಿತ್ತನು. ಶಿಶುಪಾಲನಿಗೆ ದ್ವೇಷದ ದೆಸೆಯಿಂದ ತಮೋರೂಪದ ನರಕ ದೊರಕಿತು. ಅಸುರರಾದರೇನು? ಶಂಖಚಕ್ರಧಾರಿಯಾದ ಶ್ರೀವಿಷ್ಣುವನ್ನು ಆರಾಧಿಸಿ ಮುಕ್ತಿ ಪಡೆದರು (ಬಲಿ, ಪ್ರಹ್ಲಾದ, ವಿಭೀಷಣ-ಇತ್ಯಾದಿ) ಋಷಿಕುಮಾರಾದರೇನು ವಿದ್ವೇಷ ಮಾಡಿ ನರಕಕ್ಕೆ ಹೋದರು.

ಕಾಮದಿಂದ, ಸ್ನೇಹದಿಂದ, ಭಯದಿಂದ, ದ್ವೇಷದಿಂದ ಯಥಾ ರೀತಿಯಿಂದ ಭಕ್ತೇಶ್ವರನಾದ ಶ್ರೀಕೃಷ್ಣನಲ್ಲಿ ಮನಸ್ಸಿಟ್ಟು ಪಾಪಪರಿಹಾರ ಮಾಡಿಕೊಂಡು ವಿಷ್ಣು ಪದವಿಯನ್ನು ಪಡೆದವರು ಹಲವರು.[೧]

ಗೋಪಿಕಾ ಸ್ತ್ರೀಯರು ಕಾಮಸಮುಚಿತ ಭಕ್ತಿಯಿಂದಲೂ, ಕಂಸನು ಭಯದಿಂದ ಕೂಡಿದ ಭಕ್ತಿಯಿಂದಲೂ, ಶಿಶುಪಾಲನು ದ್ವೇಷಪೂರಿತ ಭಕ್ತಿಯಿಂದಲೂ, ವೃಷ್ಣಿಗಳೂ, ಯಾದವರು ಅನುಬಂಧ ರೂಪ ಭಕ್ತಿಯಿಂದಲೂ, ಪಾಂಡವರು ಮತ್ತು ಪರೀಕ್ಷಿತ ರಾಜನು ಸ್ನೇಹಯುಕ್ತವಾದ ಭಕ್ತಿಯಿಂದಲೂ, ಶುಕಾಚಾರ್ಯರು, ನಾರದರು ಮುಂತಾದವರು ಕೇವಲ ಭಕ್ತಿಯಿಂದ ಭಗವಂತನ ಅನುಗ್ರಹ ಸಂಪಾದಿಸಿ ಮುಕ್ತಿ ಪಡೆದರು. ಆದುದರಿಂದ ಮಧ್ವಾಚಾರ್ಯರು ದ್ವೈತ ಸಿದ್ಧಾಂತದಲ್ಲಿ ಯಥಾರ್ಥಜ್ಞಾನದಿಂದ ಮಹಿಮಾದಿ ಗುಣಗಳನ್ನು ತಿಳಿದು ಸದೃಢವಾಗಿ ಮಾಡುವ ಸ್ನೇಹ ಅಥವಾ ಭಕ್ತಿಗೆ ಭಗವಂತನು ಒಲಿಯುವನೆಂದು ತಮ್ಮ ಸರ್ವಮೂಲ ಗ್ರಂಥಗಳಿಂದ ಪ್ರತಿಪಾದಿಸಿದುದಲ್ಲದೆ, ಸ್ವತಃ ದ್ವಾದಶ ಸ್ತೋತ್ರವೆಂಬ ಭಕ್ತಿ ಗೀತೆಯನ್ನು ರಚಿಸಿ, ಪ್ರಥಮ ಹರಿದಾಸರಾಗಿ ಪ್ರಸಿದ್ಧಿ ಪಡೆದರು. ಅವರಿಂದ ಸ್ಫೂರ್ತಿ ಪಡೆದು ಮುಂದಿನ ಹರಿದಾಸರು ಪ್ರಾಕೃತದಲ್ಲಿ ಕೃತಿ ರಚನೆ ಮಾಡಿ, ಸುಜೀವರಾದ ಪಾಮರರ ಉದ್ಧಾರಕ್ಕೆ ಕಾರಣರಾದರು.

---

೧. ಕಾಮಾತ್ ಸ್ನೇಹಾದ್ಭಯಾದ್ದ್ವೇಷ್ಯಾದ್ಯಥಾಭಕ್ತ್ಯೇಶ್ವರೇ ಮನಃ ।
ಅವೇಕ್ಷ್ಯ ತದಘಂ ಹಿತ್ವಾ ಬಹುವಸ್ತದ್ಗತಿಂ ಗತಾಃ ॥

## ೧೬

ಮಧ್ವಾಚಾರ್ಯರು ಮಾಡಿದ ಮಹೋಪಕಾರವೆಂದರೆ ನೈರಾಶ್ಯದ ಕಡಲಿನಲ್ಲಿ ದಿಕ್ಕು ಕಾಣದೆ ಬಿದ್ದಿದ್ದ ಸುಜೀವರನ್ನು ಉದ್ಧರಿಸುವ ಸಲುವಾಗಿ ಮಾಯಾವಾದ ಅದ್ವೈತವನ್ನೂ, ಶೂನ್ಯವಾದವನ್ನು ಎತ್ತಿ ಹಿಡಿದಿದ್ದ ಜೈನ ಹಾಗೂ ಬೌದ್ಧ ಧರ್ಮಗಳನ್ನೂ, ನಾಸ್ತಿಕತೆಗೆ ಇಂಬುಕೊಟ್ಟು ಸಮಾಜದಲ್ಲಿ ಸನಾತನ ಮೌಲ್ಯಗಳ ಏರುಪೇರಿಗೆ ಕಾರಣವಾಗಿದ್ದ ಚಾರ್ವಾಕ ಮತಗಳನ್ನೂ ಖಂಡಿಸಿ, ಜಗತ್ತು ಸತ್ಯವೆಂದೂ, ಜಗತ್ತಿಗೆ ಒಡೆಯನು ಸಕಲ ಗುಣಪೂರ್ಣನಾದ ದಯಾಳುವಾದ ಶ್ರೀಮನ್ನಾರಾಯಣನೆಂದೂ, ಅವನನ್ನು ಒಲಿಸಿಕೊಳ್ಳಲು ಅವನಿಂದ ಸೃಷ್ಟಿಗೊಂಡ ಜಗತ್ತಿನ ಜೀವ ರಾಶಿಗಳ ಸೇವೆಯು ಪರಮಸೋಪಾನವೆಂದೂ, ಭಕ್ತಿಯೇ ಮುಕ್ತಿಗೆ ದಾರಿ ಎಂದೂ ಪ್ರಾಚೀನವಾದ ವೇದವ್ಯಾಸರಿಗೆ ಸಮ್ಮತವಾದ ತತ್ತ್ವವಾದವನ್ನು, ದ್ವೈತ ಸಿದ್ಧಾಂತವನ್ನು ಶ್ರುತಿ ಸ್ಮೃತಿ ಯುಕ್ತಿಗಳಿಂದ ಸಾಧಿಸಿ, ನಷ್ಟವಾಗಿದ್ದ ಕರ್ತೃತ್ವ ಶಕ್ತಿಯನ್ನು ಜನತೆಗೆ ನೀಡಿದ್ದು; ಭಗವಂತನ ಉಪಾಸನ ಕ್ರಮದಲ್ಲಿ ಈಶ-ದಾಸರೆಂಬ ತಾರತಮ್ಯಾನುಗತ ಹರಿದಾಸ ದೀಕ್ಷೆಯನ್ನು ಜೀವರಿಗೆ ನೀಡಿದ್ದು. ಈ ಕಾರ್ಯದ ಸಫಲತೆಗಾಗಿ ಉಡುಪಿಯನ್ನು ವೈಷ್ಣವ ಭಕ್ತಿಯ ಕೇಂದ್ರ ಬಿಂದುವಾಗಿ ಮಾಡಿ, ಸಮಸ್ತ ಸಜ್ಜನರ ಉದ್ಧಾರದ ಸಲುವಾಗಿ ಶ್ರೀಕೃಷ್ಣನ ದಿವ್ಯಮಂಗಳ ವಿಗ್ರಹವನ್ನು ಪ್ರತಿಷ್ಠಾಪಿಸಿ, ಅದರ ಪೂಜೆ ಹಾಗೂ ದ್ವೈತ ಸಿದ್ಧಾಂತ ರಕ್ಷಣೆಗಾಗಿ, ಅಷ್ಟಮಠಗಳು ಹಾಗೂ ಸರ್ವಜ್ಞ ಸಿಂಹಾಸನವನ್ನು ಸ್ಥಾಪಿಸಿದ್ದು. ಅವರು ಮಾಡಿದ್ದ ಮಹೋಪಕಾರವನ್ನು ಆಸ್ತಿಕರೆಲ್ಲರೂ ಇಂದಿಗೂ ಕೃತಜ್ಞತೆ, ಭಕ್ತಿ ಭಾವಗಳಿಂದ ಸ್ಮರಿಸಿಕೊಳ್ಳುತ್ತಿದ್ದಾರೆ.

ಮಧ್ವಾಚಾರ್ಯರು ನಿರ್ಗುಣೋಪಾಸನೆಯನ್ನು ಬದಿಗೊತ್ತಿ ಸಗುಣೋಪಾಸನೆಯನ್ನು ಎತ್ತಿ ಹಿಡಿದು, ನಾರಾಯಣನು ಅನಂತ ಕಲ್ಯಾಣ ಗುಣಪೂರ್ಣನೆಂದೂ, ಆತನೇ ವೇದ ಪ್ರತಿಪಾದ್ಯನಾದ ಬ್ರಹ್ಮನೆಂದೂ ಸಾರಿ ಹೇಳಿದರು. ಜಗತ್ತಿನ ಎಲ್ಲ ವ್ಯಾಪಾರಗಳು ಸೃಷ್ಟಿ ಸ್ಥಿತಿ ವೃದ್ಧಿ ಕ್ಷಯ -ಮುಂತಾದ ಕಾರ್ಯಗಳು ನಡೆಯಲು ಅವನೇ ಮುಖ್ಯ ಕಾರಣವೆಂದೂ ತಮ್ಮ ಸರ್ವಮೂಲ ಗ್ರಂಥಗಳಿಂದ ಯುಕ್ತಿಯುಕ್ತವಾಗಿ ಸಾಧಿಸಿ ಏಕ ದೇವೋಪಾಸನೆಯನ್ನು ಪ್ರತಿಪಾದಿಸಿದರು. ಅವರು ಬ್ರಹ್ಮಚಾರಿಗಳಾದ ನಿಷ್ಠಾವಂತ ತರುಣರನ್ನು ಆರಿಸಿ, ಅವರಿಗೆ ಕೃಷ್ಣನನ್ನು ಪರ್ಯಾಯ ಕ್ರಮದಲ್ಲಿ ಪೂಜಿಸಿಕೊಂಡು ಬರಲು ಒಂದು ವ್ಯವಸ್ಥೆಯನ್ನು ರೂಢಿಗೆ ತಂದರು. ಪದ್ಮನಾಭತೀರ್ಥರು, ನರಹರಿ ತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರೇ ಮೊದಲಾದ ಪ್ರಕಾಂಡ ಪಂಡಿತರಿಗೆ ದ್ವೈತ ಮತದ ದೀಕ್ಷೆ, ಸನ್ಯಾಸಗಳನ್ನು ಇತ್ತು ಧರ್ಮಪ್ರಚಾರ ಕಾರ್ಯಕ್ಕೆ ನಿಯೋಜಿಸಿದರು. ತಾವು ಬರೆದ ವಿಚಾರಗಳನ್ನು ಗ್ರಂಥಗಳಲ್ಲಿ ಅಪೌರುಷೇಯವಾದ ವೇದ ಸಂಸ್ಕೃತಿ ಹಾಗೂ ತತ್ವವಿಚಾರಗಳನ್ನು ಸಮಪ್ರಮಾಣವಾಗಿ, ಯುಕ್ತಿ ಪ್ರಮಾಣಗಳಿಂದ ಸಿದ್ಧಪಡಿಸಿ, ದ್ವೈತ ಮತದ ಬೃಹನ್ ಮಂದಿರಕ್ಕೆ ಬೇಕಾದ ಸುಭದ್ರ ಅಡಿಪಾಯವನ್ನು ನಿರ್ಮಿಸಿದರು. ಇನ್ನೊಂದೆಡೆ ದ್ವಾದಶ ಸ್ತೋತ್ರವನ್ನು ಬರೆದು ಭಗವಂತನ ಮಹಿಮೆಯನ್ನು ಹಾಡಿ, ಭಕ್ತಿ ಸಾಹಿತ್ಯಕ್ಕೆ ಆದ್ಯ ಆಚಾರ್ಯ ಪುರುಷರಾದರು. ಅವರು ರಚಿಸಿದ ದ್ವಾದಶ ಸ್ತೋತ್ರವು ಪ್ರಥಮ ಹರಿಗೀತೆಯಾಗಿ, ಸಕಲ ದೈವಭಕ್ತರ ಹೃನ್ಮನಗಳಲ್ಲಿ ಶ್ರೀಹರಿಯ ಚಿತ್ರವನ್ನು ಮೂಡಿಸಿ, ಅವನ ಕೃಪೆಗೆ ಪಾತ್ರರಾಗುವಂತೆ ಮಾಡಿದರು.

ಈ ದ್ವಾದಶ ಸ್ತೋತ್ರವನ್ನು ಅವರು ರಚಿಸಿದರೆಂದು ಹೇಳಲಾದ ಸಂದರ್ಭ ಅತ್ಯಂತ ಸ್ವಾರಸ್ಯವಾಗಿದೆ.

ದ್ವಾರಕೆಯಲ್ಲಿದ್ದ ವ್ಯಾಪಾರಿಯೊಬ್ಬನು ತನ್ನ ಹಡಗಿನೊಂದಿಗೆ ಪಶ್ಚಿಮ ಕರಾವಳಿ ಬಂದರುಗಳಲ್ಲಿ ವ್ಯಾಪಾರಾರ್ಥ ಸರಕು ತುಂಬಿಕೊಂಡು ಸಮುದ್ರದ ಮೇಲೆ ಬರುತ್ತಿದ್ದಾಗ ಮಲ್ಪೆಯ ಬಳಿ ಪ್ರಚಂಡ ಬಿರುಗಾಳಿಗೆ ಅವನ ಹಡಗು ಸಿಕ್ಕಿ ತತ್ತರಿಸಿತಂತೆ. ಈ ಸಮಯದಲ್ಲಿ ಹಡಗಿನಲ್ಲಿದ್ದ ಬೆಲೆಬಾಳುವ ಸರಕುಗಳು ಹಾಗೂ ಜತೆಗಾರರ ಪ್ರಾಣಭೀತಿಯಿಂದ ಕಂಗೆಟ್ಟ ವ್ಯಾಪಾರಿಯು ತನ್ನನ್ನು ಈ ಗಂಡಾಂತರದಿಂದ ಪಾರುಮಾಡಲು ದೇವರನ್ನು ಪ್ರಾರ್ಥಿಸಿದನಂತೆ.

ಇದೇ ಸಮಯಕ್ಕೆ ಮಧ್ವಾಚಾರ್ಯರು ಸಮುದ್ರ ಸ್ನಾನಕ್ಕೆಂದು ಮಲ್ಪೆ ತೀರಕ್ಕೆ ಶಿಷ್ಯರೊಡನೆ ಬಂದಿದ್ದರು. ಅವರು ಹಡಗಿನ ಒಡೆಯನ ಮೊರೆಯನ್ನು ಕೇಳಿ ಅನುಕಂಪಗೊಂಡು ಭಗವಂತನನ್ನು ಪ್ರಾರ್ಥಿಸಿ ಕಾವಿಶಾಟಿಯಿಂದ ಗಾಳಿ ಬೀಸಿದಾಗ, ಪ್ರಚಂಡವಾಗಿ ಕ್ಷೋಭೆಯಲ್ಲಿ ತತ್ತರಿಸುತ್ತಿದ್ದ ಹಡಗನ್ನು ಮುಳುಗಿಸಲಿದ್ದ ಬಿರುಗಾಳಿಯು ಸ್ಥಬ್ಧವಾಯಿತು. ಆ ಹಡಗಿನ ಒಡೆಯನು ಆಚಾರ್ಯರ ಕರುಣಾ ಪ್ರವಾಹ ಸದೃಶ ಸಹಾಯಕ್ಕೆ ಕೃತಜ್ಞತೆಯನ್ನು ಅರ್ಪಿಸುತ್ತಾ, ಅವರಿಗೆ ಬೆಲೆಬಾಳುವ ವಸ್ತುಗಳನ್ನು ಕಾಣಿಕೆ ನೀಡಲು ಬಯಸಿದನು. ಆದರೆ ಮಧ್ವಾಚಾರ್ಯರು ಅವನಿಂದ ಹಡಗಿನಲ್ಲಿ ಭಾರವಾಹಕವಾಗಿ ಇರಿಸಿದ್ದ ಗೋಪೀಚಂದನದ ಬೃಹದ್ ಗಡ್ಡೆಯನ್ನು ಮಾತ್ರ ಸ್ವೀಕರಿಸಿ, ಅವನನ್ನು ಆಶೀರ್ವಾದ ಮಾಡಿ, ಕಳುಹಿಸಿಕೊಟ್ಟರು.

ಈ ಗಡ್ಡೆಯಲ್ಲಿ ದ್ವಾರಕೆಯಲ್ಲಿ ದೇವಕೀದೇವಿಯ ಸಲುವಾಗಿ ಶ್ರೀಕೃಷ್ಣನು ವಿಶ್ವಕರ್ಮನಿಂದ ಮಾಡಿಸಿ, ಪೂಜೆಗೆಂದು ಕೊಟ್ಟಿದ್ದ ಅತ್ಯಂತ ಸುಂದರವಾದ ಮುದ್ದು ಮೋಹನ ಶ್ರೀಕೃಷ್ಣನ ಬೆಣ್ಣೆ ಕಡೆಗೋಲು ಹಿಡಿದ ಶುಭಮಂಗಳ ಮೂರ್ತಿ ದೊರಕಿತು. ಎರಡು ಗೋಪಿ ಚಂದನದ ಗಡ್ಡೆಗಳನ್ನು ಭುಜದ ಮೇಲೆ ಎತ್ತಿಕೊಂಡು ಬರುತ್ತಿದ್ದಾಗ ವಡಬಾಂಡೇಶ್ವರದ ಬಳಿ ಒಂದು ಒಡೆಯಲು ಅದರಲ್ಲಿ ದೊರೆತ ಬಲರಾಮನ ವಿಗ್ರಹವನ್ನು ಅಲ್ಲೇ ಪ್ರತಿಷ್ಠಿಸಿದರು. ಇನ್ನೊಂದರಲ್ಲಿ ಇದ್ದ ಶ್ರೀಕೃಷ್ಣನ ವಿಗ್ರಹವನ್ನು ಉಡುಪಿಯ ಇಂದಿನ ಮಧ್ವಸರೋವರದ ಬಳಿ ಪ್ರತಿಷ್ಠಿಸಿದರು.

ಈ ಗೋಪೀಚಂದನದ ಗಡ್ಡೆಗಳನ್ನು ಹೆಗಲಿನ ಮೇಲೆ ಹೊತ್ತು ತರುತ್ತಿದ್ದಾಗ ಶ್ರೀ ಪರಮಾತ್ಮನ ದಿವ್ಯ ಸನ್ನಿಧಿಯಿಂದ ಪುಳಕಿತರಾದ ಸರ್ವಜ್ಞರಾದ ಮಧ್ವಾಚಾರ್ಯರು ಭಗವಂತನ ಮಹಿಮೆಯನ್ನು ಕೊಂಡಾಡುವ ದ್ವಾದಶ ಸ್ತೋತ್ರವನ್ನು ಪಠಿಸುತ್ತಾ ಬಂದರು.

ಇಂದಿಗೂ ವೈಷ್ಣವರ ಮನೆಗಳಲ್ಲಿ ಪೂಜಾ ಕಾಲದಲ್ಲಿ, ಸಾಮಾನ್ಯವಾಗಿ ನೈವೇದ್ಯ ಮತ್ತು ಮಹಾಮಂಗಳಾರತಿಯ ಸಮಯದಲ್ಲಿ ಈ ದ್ವಾದಶ ಸ್ತೋತ್ರವನ್ನು ಹೇಳಿಕೊಳ್ಳುವುದು ಸಂಪ್ರದಾಯವಾಗಿ ಬಂದಿದೆ.

ಈ ದ್ವಾದಶ ಸ್ತೋತ್ರವು ಭಗವಂತನನ್ನು ಕುರಿತು ಮಾಡಿರುವ ಎಲ್ಲ ಭಕ್ತಿಸ್ತೋತ್ರ ಸಾಹಿತ್ಯಕ್ಕೆ ಮಕುಟಮಣಿಯಂತೆ ಇದೆ. ಮೊದಲ ಎರಡು ಅಧ್ಯಾಯಗಳಲ್ಲಿ ಶ್ರೀ ಮಧ್ವಾಚಾರ್ಯರು ಶ್ರೀಹರಿಯನ್ನು ಆಪಾದಮಸ್ತಕವಾಗಿ ಸ್ತುತಿಸಿದ್ದಾರೆ. ಮೂರನೆಯ ಅಧ್ಯಾಯದಲ್ಲಿ ಶ್ರೀಹರಿಯನ್ನು ನೆನೆಯುತ್ತಾ ಸ್ವಹಿತ ಕರ್ಮಗಳನ್ನು ಮಾಡಲು ಶಿಷ್ಯರಿಗೆ ತತ್ತ್ವೋಪದೇಶ ಮಾಡಿದ್ದಾರೆ. ಅನೇಕ

ಶಾಸ್ತ್ರಸಮ್ಮತವಾದ ವಿಚಾರಗಳನ್ನು ಮೂರು ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಹೇಳಿದ್ದಾರೆ. ಐದನೆಯ ಅಧ್ಯಾಯದಲ್ಲಿ ಶ್ರೀಹರಿಯನ್ನು ಕೇಶವಾದಿ ದ್ವಾದಶ ನಾಮಗಳಿಂದ ಕೊಂಡಾಡಿದ್ದಾರೆ. ಮುಂದಿನ ಏಳು ಅಧ್ಯಾಯಗಳನ್ನು ಶ್ರೀಕೃಷ್ಣನ ದರ್ಶನವಾದ ಮೇಲೆ ಹೇಳಿರಬೇಕು. ಇಲ್ಲಿ ಅತ್ಯಂತ ಆತ್ಮೀಯ ಭಾವನೆಯಿಂದ ಆಚಾರ್ಯರು ಸ್ತೋತ್ರ ಮಾಡಿರುವುದರಿಂದ ಭಕ್ತನಿಗೂ ಭಗವಂತನಿಗೂ ಇರುವ ಸಾಮೀಪ್ಯ ಕಾಣುತ್ತದೆ. ಕೊನೆಯ ಅಧ್ಯಾಯದಲ್ಲಿ ನಿತ್ಯ ಸುಖವನ್ನು ಕೊಡುವುದೇ ಈ ಸ್ತೋತ್ರದ ಪ್ರಯೋಜನವೆಂದು ಅದಕ್ಕೆ ಫಲವನ್ನು ಹೇಳಿದ್ದಾರೆ.

ದ್ವಾದಶ ಸ್ತೋತ್ರವನ್ನು ಆಚಾರ್ಯರು ಹೀಗೆ ಆರಂಭಿಸಿದ್ದಾರೆ :

*ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಮ್*
*ಇಂದಿರಾ ಪತಿಮಾದ್ಯಾದಿವರದೇಶವರಪ್ರದಮ್ ॥*
*ನಮಾಮಿ ನಿಖಿಲಾಧೀಶ ಕಿರೀಟಾಘೃಷ್ಟ ಪೀಠವತ್ ।*
*ಹೃತ್ತಮಃ ಶಮನೇಽರ್ಕಾಭಂ ಶ್ರೀಪತೇ ಪಾದಪಂಕಜಮ್ ॥*
*ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ ।*
*ಸ್ವರ್ಣಮಂಜೀರಸಂವೀತಮಾರೂಢಂ ಜಗದಂಬಯಾ ॥*
*ಉದರಂ ಚಿಂತಮೀಶಸ್ಯ ತಮತ್ವೇಽಪ್ಯಖಿಲಂ ಭರಮ್ ।*
*ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥*
*ಸ್ಮರಣೀಯಮುರೋ ವಿಷ್ಣೋರಿಂದಿರಾವಾಸಮೀಶಿತುಃ ।*
*ಅನಂತಮಂತವದಿವ ಭುಜಯೋರಂತರಂಗತಮ್ ॥*
*ಶಂಖಚಕ್ರಗದಾಪದ್ಮ ಧರಾಶ್ಚಿಂತ್ಯಾ ಹರೇರ್ಭುಜಾಃ ।*
*ಪೀನವೃತ್ತಾ ಜಗದ್ರಕ್ಷಾ ಕೇವಲೋದ್ಯೋಗಿನೋ ನಿಶಮ್॥*
*ಸಂತತಂ ಚಿಂತಯೋತ್ಕಂಠಂ ಭೌಸ್ವತ್ಕೌಸ್ತುಭ ಭಾಸಕಮ್ ।*
*ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇ ನಿಶಮ್ ಯತಃ ॥*
*ಸ್ಮರೇತ ಯಾಮಿನೀನಾಥಸಹಸ್ರಾವೀತ ಕಾಂತಿಮತ್ ।*
*ಭವತಾ ಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥*
*ಪೂರ್ಣಾನನ್ಯಸುಖೋದ್ಭಾಸಿ ಮಂದಸ್ಮಿತ ಮಧೀಶಿತುಃ ।*
*ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದಪ್ರದಮ್ ॥*
*ಸ್ಮರಾಮಿ ಭವಸಂತಾಪಬಹಾನಿದಾಮೃತಸಾಗರಮ್ ।*
*ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್ ॥*
*ಧ್ಯಾಯೋದಜಸ್ರಮೀಶಸ್ಯ ಪದ್ಮಜಾದಿ ಪ್ರತೀಕ್ಷಿತಮ್ ।*
*ಭ್ರೂ ಭ್ರಂಗಂ ಪಾರಮೇಷ್ಠ್ಯಾದಿಪದದಾಯಿ ವಿಮುಕ್ತಿಗಮ್ ॥*
*ಸಂತತಂ ಚಿಂತಯೇನಂತಮಂತಕಾಲೇ ವಿಶೇಷತಃ ।*
*ನೈವೋದಾಪುರ್ಗೃಣಂತೋಂಥಿತಂ ಯದ್ಗುಣಾನಾಮ ಜಾದಯಃ ॥*

ಇತಿ ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತೇ
ಶ್ರೀ ದ್ವಾದಶ ಸ್ತೋತ್ರೇ ಪ್ರಥಮೋ ಧ್ಯಾಯಃ

ಈ ರೀತಿಯಲ್ಲಿ ಆರಂಭಿಸಿ ಈ ಸ್ತೋತ್ರವನ್ನು ಹೀಗೆ ಮುಗಿಸಿದ್ದಾರೆ ;

*ಆನಂದ ಮುಕುಂದಾರವಿಂದನಯನ ।*
*ಆನಂದತೀರ್ಥ ಪರಾನಂದವರದ ॥*
*ಸುಂದರೀಮಂದಿರ ಗೋವಿಂದ ವಂದೇ।*
*ಆನಂದತೀರ್ಥ ಪರಾನಂದವರದ ॥*
*ಚಂದ್ರ ಸುರೇಂದ್ರ ಸುವಂದಿತ ವಂದೇ ।*
*ಆನಂದತೀರ್ಥ ಪರಾನಂದ ವರದ ॥*
*ಚಂದ್ರಕ ಮಂದಿರ ನಂದಕ ವಂದೇ ।*
*ಆನಂದತೀರ್ಥ ಪರಾನಂದ ವರದ ॥*
*ವೃಂದಾರಕ ವೃಂದ ಸುವಂದಿತ ವಂದೇ ।*
*ಆನಂದತೀರ್ಥ ಪರಾನಂದವರದ ॥*
*ಮಂದರಾ ಸುನಸುಚರ್ಚಿತ ವಂದೇ ।*
*ಆನಂದತೀರ್ಥ ಪರಾನಂದವರದ ॥*
*ಇಂದಿರಾನಂದಕ ಸುಂದರ ವಂದೇ ।*
*ಆನಂದತೀರ್ಥ ಪರಾನಂದ ವರದ ॥*
*ಮಂದಿರ ಸ್ಯಂದನ ಸ್ಯಂದಕ ವಂದೇ ।*
*ಆನಂದತೀರ್ಥ ಪರಾನಂದ ವರದ ॥*
*ಆನಂದ ಚಂದ್ರಿಕಾ ಸ್ಯಂದಕ ವಂದೇ ।*
*ಆನಂದತೀರ್ಥ ಪರಾನಂದ ವರದ ॥*

ಇತಿ ಶ್ರೀ ದ್ವಾದಶ ಸ್ತೋತ್ರೇ ದ್ವಾದಶೋಧ್ಯಾಯ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು.

ಈ ಸ್ತೋತ್ರ ಗ್ರಂಥದಲ್ಲಿ ಮಧ್ವಾಚಾರ್ಯರು ಶ್ರೀಹರಿಯ ಪರಮ ಮಂದಳ ರೂಪವನ್ನು ಅತ್ಯಂತ ರಮಣೀಯವಾಗಿ ವರ್ಣಿಸಿದ್ದಾರೆ.

*"ಶ್ರೀಹರಿಯು ಪೂಜ್ಯನು, ದೋಷಲೇಖ ರಹಿತ ಆನಂದವುಳ್ಳವನು. ಅಜ್ಞಾನಾದಿ ದೋಷರಹಿತನು. ಬ್ರಹ್ಮಾದಿ ದೇವತೆಗಳಿಗೆ ವರಕೊಡುವ ಸ್ವಾಮಿ. ಲಕ್ಷ್ಮೀದೇವಿಗೆ ಒಡೆಯ. ಸಮಸ್ತ ದೇವತೆಗಳ ಕಿರೀಟದಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳವನು. ಅವನ ಪಾದಗಳು ಮನಸ್ಸಿನ ಅಜ್ಞಾನವೆಂಬ ಕತ್ತಲೆಯನ್ನು ನಿವಾರಿಸುವ ಸೂರ್ಯನಂತೆ ಇವೆ. ಬಂಗಾರದಿಂದ ಹೊಳೆಯುವ ಪೀತಾಂಬರ ಅದಕ್ಕೆ ಆಶ್ರಯ ನೀಡಿದಸ್ವರ್ಣಮಯವಾದ ಉಡಿದಾರ ಜಗನ್ಮಾತೆಯಾದ ಲಕ್ಷ್ಮೀ ದೇವಿಯನ್ನು ಹೊತ್ತ ಉರ, ಸೊಂಟಗಳು, ಅವನ ಪುಟ್ಟ ಹೊಟ್ಟೆಯೂ ಸಮಸ್ತ ಜಗತ್ತನ್ನೂ ಧರಿಸಿರುವುದು. ಅದರ ಮೇಲೆ ತ್ರಿವಳಿಗಳು. ಅದನ್ನು ಆಲಂಗಿಸಬಲ್ಲವಳು ಶ್ರೀವನಿತೆ ಮಾತ್ರ."*

*"ಪರಮೇಶ್ವರನಾದ ವಿಷ್ಣುವಿನ ವಕ್ಷಸ್ಥಲವು ಲಕ್ಷ್ಮೀದೇವಿಯ ವಾಸಸ್ಥಾನ. ದೇಶಕಾಲಾ ದಿಗಳಿಂದ ಅಪರಿಮಿತವಾದ ದೀರ್ಘ ಬಾಹುಗಳು. ಶಂಖ ಚಕ್ರಗದಾ ಪದ್ಮಗಳನ್ನು ಸ್ವಾಮಿ ಧರಿಸಿದ್ದಾನೆ. ಗುಂಡಗೆ ದಪ್ಪನಾಗಿದ್ದು ಜಗತ್ತಿನ ರಕ್ಷಣೆಯಲ್ಲಿ ಸದಾ ತೊಡಗಿರುವ ನಾಲ್ಕು ತೋಳುಗಳು*

ಎದೆಯಲ್ಲಿ ಉಜ್ವಲವಾದ ಕೌಸ್ತುಭಮಣಿ ವೈಕುಂಠನಾಮಕ ಕಂಠ ನಿರಂತರ ಅಲ್ಲಿಂದ ವೇದಮಂತ್ರಗಳು ಹೊರಹೊಮ್ಮುತ್ತಿರುತ್ತದೆ. ಸಹಸ್ರಾರು ಚಂದ್ರಮಂಡಲದ ಕಾಂತಿಯಿಂದ ಒಪ್ಪುವ ಸಂಸಾರತಾಪ ಪರಿಹರಿಸುವ ಮುಖಕಮಲ. ಅದರಲ್ಲಿ ಅನನ್ಯ ಸದೃಶನಾದ ಮುಗುಳ್ನಗೆ ಶಾಶ್ವತ ಆನಂದ ಮೋಕ್ಷಸ್ಥಾನ ಕೊಡುವುದು. ಈ ಸಂಸಾರದ ಎಲ್ಲ ತಾಪಗಳಿಗೂ ಹಾನಿ ಮಾಡುವ ಅಮೃತಮಯ ಸಮುದ್ರದಂತಿರುವ ಶ್ರೀ ರಾಮಚಂದ್ರನ ಪ್ರೀತಿಯುಕ್ತ ನೋಟ ಬ್ರಹ್ಮಾದಿ ಸ್ಥಾನಗಳನ್ನು, ಮುಕ್ತಿಯನ್ನು ಸಾಧಿಸಿಕೊಡಬಲ್ಲ ಭ್ರೂವಿಲಾಸ ಬ್ರಹ್ಮನೇ ಮುಂತಾದವರು ಸ್ತೋತ್ರ ಮಾಡುತ್ತಿದ್ದಾರೂ ಸದ್ಗುಣಗಳನ್ನು ಕಾಣಲು ಅವರಿಂದ ಸಿದ್ಧವಾಗಿಲ್ಲ. ಅಂಥ ಮಹಾಸ್ವಾಮಿಯನ್ನು ಅಂತ್ಯ ಕಾಲದಲ್ಲಿ ವಿಶೇಷವಾಗಿ ಧ್ಯಾನ ಮಾಡುವೆ"- ಎಂಬುದಾಗಿ ವರ್ಣಿಸಿದ್ದಾರೆ ಆಚಾರ್ಯರು.

ಮಧ್ವಾಚಾರ್ಯರು ಏಳನೆಯ ಅಧ್ಯಾಯದಲ್ಲಿ ಶ್ರೀಲಕ್ಷ್ಮೀದೇವಿಯಿಂದ ವಂದಿತನಾದ ಶ್ರೀಹರಿಯ ಗುಣಗಳನ್ನು ವರ್ಣಿಸಿ ಅವನಿಗೆ ನಮಸ್ಕರಿಸುವುದಾಗಿ ಹೇಳಿದ್ದಾರೆ.

ಲಕ್ಷ್ಮೀದೇವಿಯು ಮೂಲಪ್ರಕೃತಿ ಎನಿಸಿ ವ್ಯಾಪಾರ ಮಾಡುವಳು. ಶ್ರೀ, ಭೂ, ದುರ್ಗಾ ರೂಪದಲ್ಲಿ ಇದ್ದುಕೊಂಡು ಸಜ್ಜನರಿಗೆ ಜ್ಞಾನ ಭಕ್ತಿಗಳನ್ನು ರಾಜಸರಿಗೆ ಪೌರುಷವನ್ನೂ, ತಾಮಸರಿಗೆ ಜಡತೆಯನ್ನೂ ಆಯಾ ಜೀವರ ಸ್ವಭಾವಕ್ಕೆ ಅನುಸಾರವಾಗಿತ್ತು ಭಗವಂತನಿಂದ ಸೃಷ್ಟಿಯ ಆರಂಭದಲ್ಲಿ ನಿಯುಕ್ತಳಾಗಿ ಕೆಲಸ ಮಾಡುವಳು. ಶ್ರೀಹರಿಯು ಮಾತ್ರ ಮೂಲ ಕಾರಣದಿಂದ ಅವಳಲ್ಲಿ ನಿಂತು ಲೋಕ ಸೃಷ್ಟಿ ಸ್ಥಿತಿ ಸಂಹಾರ ಕಾರ್ಯವನ್ನು ನಡೆಸುತ್ತಿರುವನು. ಇಂಥ ಜಗತ್ತಿನ ಸಮಸ್ತ ವ್ಯಾಪಾರಗಳನ್ನು ನಿರ್ವಹಿಸುವ ಶ್ರೀಲಕ್ಷ್ಮೀದೇವಿಯ ಕೃಪಾಕಟಾಕ್ಷಕ್ಕಾಗಿ ಜೀವರು ಹಂಬಲಿಸಿ ಸ್ತೋತ್ರ ಮಾಡುತ್ತಿರುತ್ತಾರೆ. ಇಂಥ ಲಕ್ಷ್ಮಿಯೂ ಶ್ರೀಹರಿಯ ಕೃಪಾಕಟಾಕ್ಷದಿಂದ ಈ ಅತ್ಯಲ್ಪ ಶಕ್ತಿಯನ್ನು ಪಡೆದು ಕೆಲಸ ಮಾಡುತ್ತಾಳೆಂದರೆ ಶ್ರೀಹರಿಯ ಮಹಿಮೆ ಎಷ್ಟು? ಇವಳ ಕೃಪಾಕಟಾಕ್ಷಕ್ಕಾಗಿ ಬ್ರಹ್ಮ ರುದ್ರ ಸೂರ್ಯ ಚಂದ್ರ ಮುಂತಾದ ದೇವತೆಗಳು ಹಂಬಲಿಸಿ, ಆಶ್ರಯ ಪಡೆದು ಜಗತ್ತಿನ ಅಭ್ಯುದಯವನ್ನು ಸಾಧಿಸುತ್ತಾರೆ. -ಅಂಥ ಅಚಿಂತ್ಯ ಮಹಿಮೆಯುಳ್ಳ ಲಕ್ಷ್ಮೀದೇವಿಗೆ ನಮಸ್ಕರಿಸುವುದಾಗಿ ತಿಳಿಸುತ್ತಾರೆ ಆಚಾರ್ಯರು.

ಆನಂದತೀರ್ಥ ಮುನಿ ಸನ್ಮುಖ ಪಂಕಜೋತ್ಥಂ
ಸಾಕ್ಷಾದ್ರಮಾ ಹರಿಮನಃ ಪ್ರಿಯಮುತ್ತಮಾರ್ಥಂ ।
ಭಕ್ತ್ಯಾ ಪಠತ್ಯಜಿತಮಾತ್ಮನಿ ಸಂನಿಧಾಯ
ಯಃ ಸ್ತೋತ್ರಮೇತದಭಿಯಾತಿ ತಯೋರಭೀಷ್ಟಮ್ ॥

- ಎಂದು ಪ್ರಾರ್ಥಿಸಿದ್ದಾರೆ.

ಆನಂದತೀರ್ಥರ ದಿವ್ಯ ಮುಖ ಕಮಲದಿಂದ ಹುಟ್ಟಿದ, ಲಕ್ಷ್ಮೀನಾರಾಯಣರ ಮನಸ್ಸಿಗೆ ಪ್ರಿಯವಾಗಿರುವ ಉತ್ತಮವಾದ ಹರಿಸರ್ವೋತ್ತಮತ್ವ, ಜೀವರ ತಾರತಮ್ಯ, ಮಹಾಲಕ್ಷ್ಮಿಯ ಮಹಾತ್ಮ್ಯ -ಮುಂತಾದ ವಿಶೇಷಾರ್ಥವುಳ್ಳ ಈ ಸ್ತೋತ್ರವನ್ನು, ಶ್ರೀಹರಿಯನ್ನು ಮನಸ್ಸಿನಲ್ಲಿ ನೆನೆಯುತ್ತ ಯಾವನು ಪುನಃ ಪುನಃ ಪಠಿಸುವನೋ ಅವನು ಆ ಲಕ್ಷ್ಮೀ ನಾರಾಯಣರಿಂದ ತನಗೆ ಇಷ್ಟವಾದ ಸತ್ಫಲಗಳನ್ನು ಹೊಂದುವನು ಎಂಬುದಾಗಿ ಫಲಶ್ರುತಿಯಲ್ಲಿ ಹೇಳಿದ್ದಾರೆ.

# ಹರಿದಾಸ ಸಾಹಿತ್ಯ

## ೧

ಕನ್ನಡ ಸಾಹಿತ್ಯಕ್ಕೆ ಒಂದು ಸಹಸ್ರ ವರ್ಷಗಳಿಗೂ ಹೆಚ್ಚಿನ ಇತಿಹಾಸವಿದೆ. ಮಹಾಕವಿ ಪಂಪನಿಗೂ ಕೆಲವು ಶತಮಾನಗಳಿಗೆ ಮೊದಲು ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಕಾಲದಲ್ಲಿ ರಚಿತವಾದ *ಶ್ರೀವಿಜಯಕೃತ ಕವಿರಾಜ ಮಾರ್ಗ*ವೆಂಬ ಲಕ್ಷಣ ಗ್ರಂಥದಲ್ಲಿ ಸೂಚಿತವಾದ ಕನ್ನಡನಾಡಿನ ಭೌಗೋಲಿಕ ವ್ಯಾಪ್ತಿಯನ್ನೂ, ಅಂದಿನವರೆಗೆ ಕನ್ನಡದಲ್ಲಿ ರಚಿತವಾಗಿದ್ದ ಗದ್ಯ ಪದ್ಯ ಕೃತಿಗಳನ್ನೂ, ಕವಿಗಳನ್ನೂ, ಕಾವ್ಯಗಳಿಂದ ಆಯ್ದ ಭಾಗಗಳನ್ನೂ ಪರಿಶೀಲಿಸಿದಾಗ ಕನ್ನಡನಾಡು ನುಡಿಗಳಿಗೆ ಇರುವ ಪ್ರಾಚೀನತೆ ವ್ಯಕ್ತವಾಗುತ್ತದೆ. ಆದರೆ ನಮಗೆ ದೊರಕಿರುವ ಕಾವ್ಯಗಳಲ್ಲಿ ಪಂಪನ ಕೃತಿಗಳೇ ಮೊದಲ ಕಾವ್ಯಗಳಾಗಿವೆ. ಹೀಗಾಗಿ ಪಂಪನು ಕನ್ನಡದ ಆದಿ ಕವಿಯೆಂದೂ, ಅವನು ರಚಿಸಿದ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯವೆಂಬ ಹೆಸರಿನ ಮಹಾಭಾರತವು ಕನ್ನಡದ ಮೊದಲಿನ ಮಹಾ ಕಾವ್ಯಗಳೆನಿಸಿವೆ. ಅಲ್ಲಿಂದೀಚೆಗೆ ಚಂಪೂ ಯುಗವೂ, ಅನಂತ ಷಟ್ಪದಿ ಯುಗವೂ ವಿಜೃಂಭಿಸಿ ಕನ್ನಡ ಸಾಹಿತ್ಯಕ್ಕೆ ರುದ್ರಭಟ್ಟನ ಜಗನ್ನಾಥ ವಿಜಯವು ಚಂಪೂವಿನಲ್ಲೂ, ಕುಮಾರವ್ಯಾಸ ಭಾರತದಂಥ ಮೇರು ಕೃತಿ, ಹರಿಕಥಾಮೃತ ಸಾರದಂಥ ಆಧ್ಯಾತ್ಮಿಕ ಕಾವ್ಯರತ್ನ ಷಟ್ಪದಿಯಲ್ಲೂ, ಮೋಹನ ತರಂಗಿಣಿಯಂಥ ಹಾಡುಗಬ್ಬ ಸಾಂಗತ್ಯದಲ್ಲೂ ರಚನೆಯಾದವು. ಈ ಎಲ್ಲ ಕೃತಿಗಳು ಕನ್ನಡ ಸಾಹಿತ್ಯದ ವಿಶಿಷ್ಟ ಬಗೆಯ ಕೃತಿಗಳಾಗಿವೆ. ಇವುಗಳನ್ನು ರಚಿಸಿದವರು ದಾಸಸಾಹಿತ್ಯದ ವೈಷ್ಣವರಾದ ಹರಿದಾಸರೆಂದು ಹೇಳಿದರೆ ಕನ್ನಡ ಸಾಹಿತ್ಯಕ್ಕೆ ಹರಿದಾಸರು ನೀಡಿದ ಕಾಣಿಕೆ ಎಂಥದೆಂಬುದು ಅರಿವಾಗುತ್ತದೆ.

ಹೀಗಿದ್ದರೂ ಜಗತ್ತಿನ ವಿಶ್ವ ಸಾಹಿತ್ಯದ ಭಂಡಾರಕ್ಕೆ ಕನ್ನಡ ಸಾಹಿತ್ಯ ನೀಡಿದ ಕಾಣಿಕೆ ಏನು? ಎಂಬ ಪ್ರಶ್ನೆಯನ್ನು ಎತ್ತಿಕೊಂಡಾಗ ವಿಮರ್ಶಕರ ಪಾಲಿಗೆ ಇದುವರೆಗೆ ರಚಿತವಾದ ಯಾವುದೊಂದು ಮಹಾಕೃತಿಯು ಕಣ್ಣು ಮುಂದೆ ಸುಳಿಯುವುದಿಲ್ಲ, ರೈಸ್ ಎಂಬ ಪಾಶ್ಚಾತ್ಯ ಕನ್ನಡ ಸಾಹಿತ್ಯ ಇತಿಹಾಸಕಾರನು ಸಹಸ್ರ ವರ್ಷಗಳ ಕನ್ನಡ ಸಾಹಿತ್ಯವನ್ನು ವಿಮರ್ಶಿಸುತ್ತ, ಕನ್ನಡ ಸಾಹಿತ್ಯದಲ್ಲಿ ವಿಶ್ವ ಸಾಹಿತ್ಯ ಭಂಡಾರಕ್ಕೆ ಕಾಣಿಕೆಯಾಗಿ ನೀಡಬಹುದಾದ ಕೃತಿಗಳು ಯಾವುವೂ ಇಲ್ಲ. ಮಾನವ ಜೀವನದ ಚಿರಂತನ ಮೌಲ್ಯ ದೃಷ್ಟಿಯಿಂದ ಸ್ವೀಕೃತಾರ್ಹವಾದ ಹಾಗೂ ಸತ್ವ ಪೂರ್ಣಕೃತಿಗಳು ಯಾವುವೂ ಬಂದಿಲ್ಲವೆಂದು ಉದ್ಗಾರ ತೆಗೆದಿದ್ದಾನೆ. ಆದರೆ ಸಾಹಿತ್ಯ ಸೌಂದರ್ಯದಿಂದಲೂ, ಚಿಂತನಪರವಾದ ಆಧ್ಯಾತ್ಮಿಕ ಮೌಲ್ಯದಿಂದಲೂ, ಮಾನವನ ವ್ಯಕ್ತಿತ್ವದ ವಿಕಾಸಕ್ಕೆ ಬೇಕಾಗುವ ದ್ರವ್ಯದಿಂದಲೂ ಕೂಡಿ ಬಾಳಿನ ಸಾರ್ಥಕತೆಗೆ ಬೇಕಾಗುವ ಆದರ್ಶದ ಸೋಪಾನವನ್ನೂ

ಒದಗಿಸಿ, ಜೀವನಕ್ಕೆ ಒಂದು ಶುಚಿಯನ್ನೂ, ರುಚಿಯನ್ನೂ ತಂದುಕೊಡುವ ವಿಶ್ವ ಸಾಹಿತ್ಯದ ಗುಣವನ್ನೂ, ನಿತ್ಯ ನವೀನತೆಯನ್ನೂ, ಸುಲಭತೆಯನ್ನೂ, ಅರ್ಥ ವ್ಯಾಪ್ತಿಯನ್ನೂ ಪಡೆದು ಕೊಂಡು ಸಾಹಿತ್ಯವು ಕನ್ನಡದಲ್ಲಿ ಹರಿದಾಸರಿಂದಲೂ ಶಿವಶರಣರಿಂದಲೂ ನಿರ್ಮಿತವಾಗಿದೆ -ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಜಗತ್ತಿನ ದಾರ್ಶನಿಕರ ಸಾಲಿನಲ್ಲಿ ಅಗ್ರಪಂಕ್ತಿಯನ್ನು ಅಲಂಕರಿಸಿರುವ, ಶ್ರೇಷ್ಠ ವಿದ್ವಾಂಸರೂ, ಶಿಕ್ಷಣ ತಜ್ಞರೂ, ಚಿಂತನಶೀಲರೂ ಆಗಿದ್ದ ಡಾ || ಆರ್. ಡಿ. ರಾನಡೆಯವರು ತಮ್ಮ ಒಂದು ಗ್ರಂಥದಲ್ಲಿ ಹರಿದಾಸ ಹಾಗೂ ಶಿವಶರಣರ ಕೃತಿಗಳನ್ನು ಕುರಿತು ಹೀಗೆ ನುಡಿದಿದ್ದಾರೆ.

"In my opinion Basaveswara occupies the same place in Kannada mysticism which Tukarama occupies in Maharastra mysticism: because they both have the same fervent attitude towards god which enables them to approach him directly. If Basaveswara may be regarded as Tukaram of Karnataka Mysticism, Channabasava may be likened to Ramadasa. He is the disseminator of faith, the active worker and the organiser as Ramadasa. Further, the great Maharastra saint, Ekanatha, who is both a philosopher and a mystic has his parallel in Jagannathadasa among the Vaisnava saints and Nijaguna Sivayogi among the Veerasaiva saints. They are the great philosophers as they are mystics. Still further Kanakadasa closely resembles Cokkamela as both of them were great God-realisers and both have given a vivid expression to their direct spiritual experiences. As a poet however Kanakadasa is superior to Cokkamela and finally very peculiarly the two saints of the same name, Mahipati occupy the same place in Maharastra and Karnataka mysticism. Though the two personalities, the Mahipati of Kakandidki and the Mahipati of Gwalior are different, they propound the same mystical philosophy. The two are great intellectual personalities, great mystics, great poets, but unfortunately not much is known about them, nor have their writings been studied. So it is neccessary that a very careful and thorugh study of writings of these two great mystics should be undertaken at an early date.

Between Karnataka and Hindi mystics also, I may point out to you some parralles. To my mind, Purandaradasa occupies the same position in Kannada literature which Tulasidasa occupies in Hindi. They can hardly be surpased so for as their literary and poetic genius are concerned. Tulsidasa stands on a saguna level on the whole; but Purandaradasa has advanced further.. Now another poet, the great Vijayadasa of Kannada literature, has his parallel in Suradas, both of them are saguna worshippers,

and both of them are good musicians. Then Kanakadasa of Kannada mysticism has his paralled in Raidasa of Hindi mysticism, who is known as Rohidasa in this part of the country. Raidas is a very fine personality, a wonerful poet with mystical experience, so also in Kanakasada.

- *(Pathway to God in Kannada Literature, P.6-8)*

***- by : Dr.R.D.Ranade,***

ಡಾ. ರಾನಡೆಯವರು ಮಹಾರಾಷ್ಟ್ರದ ಮತ್ತು ಹಿಂದಿ ಸಾಹಿತ್ಯದ ಸಂತ ಕವಿಗಳೊಂದಿಗೆ ಹರಿದಾಸರು ಹಾಗೂ ಶಿವಶರಣರನ್ನು ಹೋಲಿಸಿದ ಮೇಲೆ, ಶಿವಶರಣರನ್ನು ಪಾಶ್ಚಿಮಾತ್ಯ ಅಂದರೆ ಪ್ರಾಚೀನ ಗ್ರೀಕ್ ದೇಶದ ದಾರ್ಶನಿಕ ಹಾಗೂ ತತ್ತ್ವಜ್ಞಾನಿಗಳೊಂದಿಗೆ ಹೋಲಿಸಿದ್ದಾರೆ. ಇವರಲ್ಲಿ ಪ್ರಭುದೇವರನ್ನು ಸೋಕ್ರೆಟೀಸನಿಗೂ, ಬಸವೇಶ್ವರರನ್ನು ಪ್ಲೇಟೋನಿಗೂ, ಚೆನ್ನಬಸವನನ್ನು ಫೀಡೋನಿಗೂ ಹೋಲಿಸಿ ಇಬ್ಬರ ವ್ಯಕ್ತಿತ್ವ ಹಾಗೂ ಬರವಣಿಗೆಗಳಲ್ಲಿನ ಸಾಮ್ಯವನ್ನು ಎತ್ತಿ ತೋರಿಸಿದ್ದಾರೆ. ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಶೂನ್ಯ ಸಂಪಾದನೆ ಸಂಭಾಷಣೆಗಳನ್ನು ಪ್ಲೇಟೋನ ಸಂವಾದಗಳೊಂದಿಗೆ ಹೋಲಿಸಿದ್ದಾರೆ. ಅವರ ದೃಷ್ಟಿಯಲ್ಲಿ ದಾರ್ಶನಿಕ ಕವಿಯಾದ ಸರ್ವಜ್ಞನು ಗ್ರೀಕ್ ತತ್ತ್ವಜ್ಞಾನಿ ಹಿರಾಕ್ಲಿಟೋಸ್‌ನಷ್ಟು ಎತ್ತರದಲ್ಲಿದ್ದಾನೆ. ಈ ವಿಚಾರದ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಶಿವಶರಣರ ವಚನ ಸಾಹಿತ್ಯವೂ, ಹರಿದಾಸರ- ಕೀರ್ತನ ಸಾಹಿತ್ಯ- ದಾಸ ಸಾಹಿತ್ಯವೂ ಜಗತ್ತಿನ ವಾಙ್ಮಯ ರಾಶಿಯಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆಯತಕ್ಕದ್ದಾಗಿದೆ ಎಂದು ಹೇಳಬಹುದಾಗಿದೆ.

೨

ಹರಿದಾಸ ಸಾಹಿತ್ಯವೆಂದರೇನು? ಅದರ ವ್ಯಾಪ್ತಿಯೇನು? ಈಗ ವಿಚಾರಿಸುವ.

"ದ್ವೈತಮತದ ಅನುಯಾಯಿಗಳಾದ ಹರಿದಾಸರು ವೈರಾಗಿಗಳಾದರೂ ಸಮಾಜದಿಂದ ದೂರ ಉಳಿಯದೆ, ಅದರ ಸಂಪರ್ಕವನ್ನು ಕಳೆದುಕೊಳ್ಳದೆ, ಅದರಲ್ಲಿ ನಿರ್ಲಿಪ್ತರಾಗಿ ಇದ್ದುಕೊಂಡು ಜನಸಾಮಾನ್ಯರ ಸಮಸ್ಯೆಗಳನ್ನು ವಸ್ತುನಿಷ್ಠೆಯಿಂದ ನೋಡಿ, ಅವರ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ಪರಿಹಾರೋಪಾಯಗಳನ್ನು ಕಂಡು ಹಿಡಿಯಲು ಹವಣಿಸಿದರು. ಅವರಲ್ಲಿ ಕಂಡು ಬರುವ ಭೌತಿಕತೆ, ಧರ್ಮಹೀನತೆ, ಲೋಪ ದೋಷ - ಮುಂತಾದವುಗಳ ನಿವಾರಣೆಗಾಗಿ ಯತ್ನಿಸಿದರು. ದಾರಿ ತಪ್ಪಿದವರಿಗೆ ಸರಿಯಾದ ಮಾರ್ಗವನ್ನು ತೋರಿಸಿಕೊಟ್ಟರು. ತಮ್ಮಂತೆ ಇಡೀ ಸಮಾಜವು ಭಕ್ತಿ ಮಾರ್ಗ ದಲ್ಲಿ ಸಾಗಿ ಮುಕ್ತಿ ಪಡೆಯಲು ಅರ್ಹವಾಗಲಿ ಎಂದು ಶ್ರಮಿಸಿದರು. ಭಕ್ತಿ ಪರವಶವಾಗಿ ತಮ್ಮ ತಮ್ಮ ಇಷ್ಟ ದೈವವನ್ನು ಕುರಿತು ಹಾಡಿ ನಲಿದರು. ದೇವರ ದರ್ಶನ ಕಷ್ಟ ಸಾಧ್ಯವೆನಿಸಿದಾಗ್ಗೆ ಚಡಪಡಿಸಿದರು.

ದರ್ಶನವಾದಾಗ ಮೈಮರೆತು ಕುಣಿದಾಡಿದರು. ಅವರ ಈ ಹವಣಿಕೆ, ಈ ಯತ್ನ, ಈ ಮಾರ್ಗದರ್ಶನ್ನ ಈ ನಲಿನಲಿದಾಟ ಹಾಗೂ ಈ ಕುಣಿದಾಟ ಹಾಡಿನ ರೂಪದಲ್ಲಿ ಹೊರಹೊಮ್ಮಿದವು. ಈ ಹಾಡುಗಳ ರಾಶಿಯೇ ದಾಸ ಸಾಹಿತ್ಯ."

- *(ದಾಸ ಸಾಹಿತ್ಯ ಹಾಗೂ ಸಾರ್ವತ್ರಿಕ ಮೌಲ್ಯಗಳು ; ಪುಟ.೧೨.)*

- ಪ್ರೊ. ಇಲ್ಲೂರು ಜಯರಾಮಪ್ಪ

ದಾಸ ಸಾಹಿತ್ಯ ಮತ್ತು ವಚನ ಸಾಹಿತ್ಯಗಳ ಒಟ್ಟಾರೆ ಸ್ವರೂಪ ರಚನೆಯಲ್ಲಿ ಕೆಲವು ಹೋಲಿಕೆ, ಸಾಮ್ಯಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಅವುಗಳು ಯಾವುವೆಂದರೆ-

ಈ ಎರಡೂ ಸಾಹಿತ್ಯಗಳಲ್ಲಿ ಭಕ್ತಿಯು ಪ್ರಧಾನವಾದ ಸ್ಥಾನವನ್ನು ಅಲಂಕರಿಸಿದೆ. ಈ ಎರಡು ಸಾಹಿತ್ಯದ ಕರ್ತೃಗಳು ವೈರಾಗ್ಯ ಮೂರ್ತಿಗಳು. ಸಮಾಜದೊಡನೆ ನಿಕಟ ಸಂಪರ್ಕ ಹೊಂದಿದ್ದು, ಅವರ ಒಳಿತಿಗಾಗಿ ಪ್ರಯತ್ನಿಸುತ್ತಿದ್ದರು. ಇವರಾರೂ ಸಂಸಾರವನ್ನು ಮತ್ತು ಸಮಾಜವನ್ನು ತ್ಯಾಜ್ಯವೆಂದು ಭಾವಿಸಲಿಲ್ಲ. ಇಬ್ಬರೂ ಬಳಸಿದ ಭಾಷೆ ಜನರಾಡುವ ಭಾಷೆಗೆ ತೀರ ಹತ್ತಿರದ್ದಾಗಿತ್ತು. ಈ ಎರಡು ಸಾಹಿತ್ಯದ ಉದ್ದೇಶ ಭಕ್ತಿಯ ಮೂಲಕ ಮುಕ್ತಿ ಸಾಧನೆ. ಎರಡು ಸಾಹಿತ್ಯದಲ್ಲೂ ಕರ್ತೃಗಳು ಅಂಕಿತಕ್ಕೆ ಮಹತ್ವ ನೀಡಿದ್ದಾರೆ. ವಚನ ಸಾಹಿತ್ಯ ಹರಪಾರಮ್ಯವನ್ನು ಬೋಧಿಸಿತು, ದಾಸಸಾಹಿತ್ಯ ಹರಿಪಾರಮ್ಯವನ್ನು ಬೋಧಿಸಿತು. ವಸ್ತು, ವಿಷಯ, ಭಾಷೆ, ಅಂಕಿತ, ಇಷ್ಟದೈವ, ಪಾರಮ್ಯ ಇವುಗಳನ್ನು ನೋಡಿದವರಿಗೆ ಪರಸ್ಪರ ಪ್ರಭಾವ ಬಿದ್ದಿರುವುದು ಕಾಣುತ್ತದೆ - ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಆದರೂ ಹರಿದಾಸ ಸಾಹಿತ್ಯಕ್ಕೆ ತನ್ನದೇ ಆದ ಕೆಲವು ವಿಶಿಷ್ಟ ಲಕ್ಷಣಗಳು ಇವೆ.

ಹರಿದಾಸ ಸಾಹಿತ್ಯದಲ್ಲಿನ ಕೆಲವು ಛಂದೋಪ್ರಯೋಗ ಹಾಗೂ ಕೃತಿಯ ರೂಪಗಳಲ್ಲಿನ ಕೆಲವು ಹೋಲಿಕೆಗಳಿಂದ (ಉದಾ ; ಹರಿದಾಸರ ಉಗಾಭೋಗ ಮತ್ತು ಶಿವಶರಣರ ವಚನಗಳು ಇವುಗಳ ಮೇಲಿಂದ) ನೋಡಿದಾಗ ಹೋಲಿಕೆ ಇರಬಹುದಾದರೂ, ವಚನಗಳಲ್ಲಿ ಗೇಯಗುಣ ಕಡಿಮೆಯಾಗಿದ್ದು, ಗದ್ಯದಂತೆ ಅದನ್ನು ಓದಬಹುದಾದರೆ, ದಾಸರ ಕೃತಿಗಳು ಸಂಗೀತ ಪ್ರದಾನ ವಾಗಿದ್ದು ಅವನ್ನು ಸುಶ್ರಾವ್ಯವಾಗಿ ರಾಗಬದ್ಧವಾಗಿ ಹಾಡಬಹುದಾಗಿದೆ. ಗೇಯತೆ ಪ್ರಧಾನ ಗುಣವಾಗಿರುವ ಶಿವಶರಣರ ಗೀತೆಗಳು - ಶಿವಗೀತೆಗಳು - ಈ ದೃಷ್ಟಿಯಿಂದ ಹರಿದಾಸರ ಕೀರ್ತನೆಗಳು ಹೆಚ್ಚು ಹತ್ತಿರ ಬರುತ್ತದೆ.

ಇನ್ನೊಂದು ದೃಷ್ಟಿಯಿಂದ ದಾಸ ಸಾಹಿತ್ಯಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. ಶ್ರೀವಾದಿರಾಜರ ವೈಕುಂಠ ವರ್ಣನೆ, ಸ್ವಪ್ನ ಗದ್ಯ, ಲಕ್ಷ್ಮೀಶೋಭಾನೆ, ಕನಕದಾಸರ ಮೋಹನ ತರಂಗಿಣಿ, ರಾಮಧ್ಯಾನ ಚರಿತೆ, ಹರಿಭಕ್ತಿಸಾರ, ಜಗನ್ನಾಥದಾಸರ ಹರಿಕಥಾಮೃತಸಾರ, ಹೆಳವನಕಟ್ಟೆ ಗಿರಿಜಮ್ಮನ ಚಂದ್ರಹಾಸ ಕಥೆ, ಸೀತಾಕಲ್ಯಾಣ, ಬ್ರಹ್ಮಕೊರವಂಜಿ-ಮುಂತಾದ ಕೃತಿಗಳನ್ನು ಹರಿದಾಸರು ರಚಿಸಿದ ಹಾಡುಗಳು - ಅಥವಾ ಕೀರ್ತನ ಸಾಹಿತ್ಯದೊಂದಿಗೆ ಹೋಲಿಸಲಾಗುವುದಿಲ್ಲ. ಇವು ಅವರ ಶಿಷ್ಟ ಕೃತಿಗಳೆನಿಸಿಕೊಂಡು, ಶಿಷ್ಟ ಅಥವಾ ತಾತ್ವಿಕ

ಸಾಹಿತ್ಯವೆನಿಸಿದೆ -ಎಂದು ವಿದ್ವಾಂಸರ ಅಭಿಪ್ರಾಯ. ದಾಸ ಸಾಹಿತ್ಯವನ್ನು ಸ್ಥೂಲವಾಗಿ ಪರಿಶೀಲಿಸಿದಾಗ ಸಾಮಾನ್ಯ ಲಕ್ಷಣಗಳನ್ನು ನೋಡಬಹುದಾಗಿದೆ.

*"ಈ ಸಾಹಿತ್ಯದಲ್ಲಿ ಬರುವ ಹಾಡುಗಳು ಭಾವಗೀತೆಗಳಂತೆ ಸ್ವತಂತ್ರವಾದವುಗಳು. ಅವು ನಿರ್ದಿಷ್ಟ ಕಾವ್ಯದ ಅಂಗಗಳಲ್ಲ. ಇವು ತಮ್ಮಲ್ಲೇ ಪೂರ್ಣತೆಯುಳ್ಳವುಗಳು. ಒಂದು ಹಾಡಿಗೂ ಇನ್ನೊಂದು ಹಾಡಿಗೂ ಏಕತೆಯ ದೃಷ್ಟಿಯಿಂದ ಪೂರ್ವಾಪರ ಸಂಬಂಧವಿಲ್ಲ. ಪ್ರತಿಯೊಂದೂ ಪೂರ್ಣಕೃತಿಯಾಗಿದ್ದು ಅದು ಯಾವುದರ ಬಿಡಿ ಭಾಗವಾಗಿಲ್ಲ. ಪ್ರತಿಯೊಂದು ಹಾಡಿಗೂ ತನ್ನದೇ ಆದ ಉದ್ದೇಶವಿದೆ. ಅದು ತನ್ನ ಉದ್ದೇಶ ಪೂರ್ತಿಗಾಗಿ ಬೇರೊಂದು ನಿರ್ದಿಷ್ಟ ಹಾಡನ್ನು ಅವಲಂಬಿಸಿಲ್ಲ. ಆದರ ರಚನೆಗಾಗಿ ಬಳಕೆಯಾದ ಭಾಷೆ ಜನರ ಆಡು ಭಾಷೆಯಾಗಿದೆ. ಈ ಹಾಡುಗಳು ಸಂಗೀತಕ್ಕೆ ಅಳವಟ್ಟಿದೆ. ಇವುಗಳನ್ನು ಕೀರ್ತನೆ, ಸುಳಾದಿ ಹಾಗೂ ಉಗಾಭೋಗಗಳೆಂಬ ಪದ್ಯ ಜಾತಿಗಳಲ್ಲಿ ರಚಿಸಲಾಗಿದೆ"*- ಎಂದಿದ್ದಾರೆ ಪ್ರೊ. ಇಲ್ಲೂರು ಜಯರಾಮಪ್ಪ (ಪು.೪).

ಇಲ್ಲಿ ವಿಚಾರ ಮಾಡಬೇಕಾದ ಅಂಶವೆಂದರೆ ಹರಿದಾಸ ವಾಙ್ಮಯವೂ ಇನ್ನೂ ವಿಸ್ತಾರ ವ್ಯಾಪ್ತಿಗಳನ್ನು ಪಡೆದಿರುವುದು. ಪದ, ವೃತ್ತನಾಮ,ಠಾಯಿ, ಗೀತಾಯಿ -ಹೀಗೆ ಇನ್ನಷ್ಟು ರೀತಿಯ ಸಾಹಿತ್ಯ ರಚನೆ ಛಂದೋ ರೂಪಗಳಲ್ಲಿದ್ದು, ದ್ವೈತಮತದ ಸಿದ್ಧಾಂತ ಪ್ರಮೇಯಗಳಾದ ಶ್ರೀಹರಿ ಸರ್ವೋತ್ತಮತ್ವ, ಪಂಚಭೇದ ತಾರತಮ್ಯ, ಜಗತ್ ಸತ್ಯತ್ವ, ಭಕ್ತಿಯಿಂದಲೇ ಮುಕ್ತಿ. ಪರಮಾತ್ಮನನ್ನು ವೇದಾಗಮಗಳಿಂದ ಮಾತ್ರವೇ ತಿಳಿಯಬಹುದು; ಮುಕ್ತಿ ಎಂದರೆ ನೈಜ ಸ್ವರೂಪಾನಂದ. ಭಗವಂತನು ಸಕಲ ಗುಣ ಪರಿಪೂರ್ಣ, ಸ್ವತಂತ್ರ, ಜೀವರು ಅಪರಿಪೂರ್ಣರು, ಅಸ್ವತಂತ್ರರು, ಅವನ ಪ್ರಸಾದವಿಲ್ಲದೆ ಜೀವರು ಸಂಸಾರದಿಂದ ಬಿಡುಗಡೆ ಹೊಂದುವುದು ಸಾಧ್ಯವಿಲ್ಲ, ಭಗವಂತನು ಈಶ, ಜೀವರು ದಾಸರು - ಹೀಗೆ ತಾತ್ವಿಕ ತಳಹದಿಯ ಮೇಲೆ ಹಬ್ಬಿದ ಸಾಹಿತ್ಯವಾಗಿದೆ. ಈ ತಾತ್ವಿಕ ತಳಹದಿಯನ್ನು ಬಿಟ್ಟರೆ ಅದು ಸಾಹಿತ್ಯವಾಗಿ ಉಳಿಯಬಹುದು. ಆದರೆ ಅದು ಹರಿದಾಸ ಸಾಹಿತ್ಯವೆಂದು ಅನಿಸಿಕೊಳ್ಳುವುದಿಲ್ಲ. ಹೀಗೆ ಹರಿದಾಸರು ಜೀವ -ಈಶ -ಜಡ ಇವುಗಳ ಸಂಬಂಧವನ್ನೂ, ಸಮಾಜದಲ್ಲಿರುವ ತ್ರಿವಿಧ ಜೀವರನ್ನೂ ಕುರಿತು ಮಾಡಿದ ಆತ್ಮಶೋಧನೆ, ಆರ್ತಭಾವ, ಭಗವಂತನಿಗಾಗಿ ಭಕ್ತಿಯ ನಾನಾ ಮಜಲುಗಳಲ್ಲಿ ಮಾಡುವ ಪ್ರಯತ್ನ, ಅವುಗಳ ಫಲವಾಗಿ ಅನುಭವದಾಳದಿಂದ ಹೊರಹೊಮ್ಮಿದ ಲೋಕಾನುಭವ -ಇವುಗಳ ಮೇಳವೇ ಆಧ್ಯಾತ್ಮ ಸಾಹಿತ್ಯ - ಸ್ಥೂಲವಾಗಿ ಹರಿದಾಸ ಸಾಹಿತ್ಯವೆನಿಸಿಕೊಳ್ಳುತ್ತದೆ.

ಹರಿದಾಸ ಸಾಹಿತ್ಯದ ಮುಖ್ಯ ಲಕ್ಷಣವೆಂದರೆ ಭಗವಂತನನ್ನು ಕುರಿತು ಭಕ್ತರಾದ ಹರಿದಾಸರು ಮಾಡುವ ಮೊರೆಯು. ಶ್ರೀಹರಿಯು ಬಿಂಬಮೂರ್ತಿ ಎಂದೂ, ಜೀವರು ಪ್ರತಿಬಿಂಬರೆಂದೂ, ಶ್ರೀಹರಿಯು ಸರ್ವೋತ್ತಮನೆಂದೂ, ವಾಯುದೇವರು ಜೀವೋತ್ತಮರೆಂದೂ ನಂಬಿ, ಪ್ರಾಣದೇವರ ಮೂಲಕವಾಗಿ ಜೀವಕೋಟಿ ಪ್ರವಿಷ್ಟನಾದ ಭಗವಂತನನ್ನು ಹೊಂದಲು ಮಾಡುವ ಸಾಧನೆಯ ಫಲರೂಪ ಹರಿದಾಸ ವಾಙ್ಮಯವಾಗಿದೆ. ಈ ದೃಷ್ಟಿಯಿಂದ ಹರಿದಾಸ ಸಾಹಿತ್ಯಕ್ಕೂ - ಶಿಷ್ಟ ಸಾಹಿತ್ಯಕ್ಕೂ ಇರುವ ವ್ಯತ್ಯಾಸ ತಾತ್ವಿಕವಾಗಿ ಮಹತ್ವದ್ದಾಗಿದೆ.

## ೩

ಹರಿದಾಸ ಸಾಹಿತ್ಯವು ಭಾಗವತದಷ್ಟು ಪ್ರಾಚೀನವಾದುದು. ಹರಿದಾಸದೀಕ್ಷೆ ಪುರಾಣಗಳಲ್ಲಿ ವಿವರವಾಗಿ ವರ್ಣಿತವಾಗಿದೆ. ವಿದ್ವಾಂಸರು ಹೇಳುವಂತೆ ಹರಿದಾಸ ದೀಕ್ಷೆಗೆ ಮಹಿದಾಸ ನಾಮಕ ಭಗವಂತನೇ ಆದ್ಯ ಪುರುಷ. ಸ್ವಾಮಿಯು ಎಲ್ಲ ಜೀವರ ದೇಹದ ಒಳಗೂ ಹೊರಗೂ ಇದ್ದು ಕೊಂಡು ವ್ಯಾಪಾರ ನಡೆಸುವವನಾದರೂ, ಲೋಕಕ್ಕೆ ಅವನು ದಾಸ ಮಾರ್ಗವನ್ನು ತೋರಿಸಿಕೊಟ್ಟ. ಆ ಮೂಲಕ ಸಾತ್ವಿಕ ಜೀವರ ಉದ್ಧಾರಕ್ಕಾಗಿ ಮಹಿದಾಸ ನಾಮಕನಾಗಿ ಅವತಾರ ಮಾಡಿದನೆಂದು ಹೇಳುತ್ತಾರೆ. ಹೀಗಾಗಿ ಈ ದಾಸ ಪರಂಪರೆ ಅನಾದಿ ನಿತ್ಯವೆಂದು ಹೇಳಲಾಗಿದೆ. ಅಪೌರುಷೇಯವಾದ ಶ್ರುತಿಗಳಲ್ಲಿ ನಿತ್ಯೋ ನಿತ್ಯಾನಾಂಶ್ಚೇತನ ಶ್ಚೇತನಾನಾಂ - ಎಂದು ಹೇಳಿದೆ. ಇದರ ಅರ್ಥ ಜೀವೇಶರು ಬೇರೆ ಎಂದು. ದ್ವಾಸುಪರ್ಣಾಸಯುಜಾಸಖಾಯಾ ಸಮಾನಂ- ಎಂದು ಮೊದಲಾಗುವ ಉಪನಿದ್ವಚನದಲ್ಲಿ ಜೀವೇಶರ ಭೇದವನ್ನೇ ಕುರಿತು ಸ್ಪಷ್ಟವಾಗಿ ಹೇಳಿದೆ ಎಂದು- ಶ್ರೀಮಧ್ವಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ. ಈ ಶ್ರುತಿಯ ಮಥಿತಾರ್ಥವನ್ನು ದಾಸ ವರ್ಯರಾದ ಶ್ರೀ ಪುರಂದರದಾಸರು *ಎರಡು ಒಂದಾಗದು ರಂಗ, ಎರಡೂ ಒಂದಾಗದು ಎಂದಿಗೂ* ಎಂಬ ದೇವರ ನಾಮದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ತಮ್ಮ ಬುಡಬುಡಕ ಪದದಲ್ಲೂ ಇದನ್ನೇ ವಿಸ್ತಾರವಾಗಿ ಹೇಳಿದ್ದಾರೆ.

ಜೀವರು ಶ್ರೀಹರಿಯ ಅಧೀನವಾಗಿರುವುದರಿಂದ ಪ್ರತಿಬಿಂಬರೆನಿಸುವರು. ಪ್ರಕೃತ್ಯಾದಿ ತತ್ವಗಳೂ, ಕರ್ಮಗಳೂ, ಕಾಲವೂ, ಪ್ರಕೃತ್ಯಾದಿ ಪರಿಣಾಮಗಳೂ ಶ್ರೀಹರಿಯ ಅನುಗ್ರಹ ದಿಂದಲೇ ಇರುವುವು - ಎಂಬ ಶ್ರುತಿ ವಾಕ್ಯವನ್ನೇ ವಿಜಯದಾಸರು *"ಶ್ರೀಪತಿ ಕಾಲವೇದ ಜೀವ ಪ್ರಳಯದಲ್ಲಿ ನಾಶವಾಗದೇ ನಿತ್ಯವಾಗಿರುವವೆಂದು ಅರಿತು ಪರಸ್ಪರ ಅವುಗಳಿಗೆ ಭೇದ ತಿಳಿಯ ಬೇಕು ॥"*- ಎಂಬುದಾಗಿ ಹೇಳಿದ್ದಾರೆ. ಶ್ರೀಜಗನ್ನಾಥದಾಸರು ಉಪನಿಷತ್ತು, ಗೀತಾ, ಬ್ರಹ್ಮ ಸೂತ್ರ ಗಳ ಈ ರಹಸ್ಯವನ್ನು *ದಾಸೋಹಂ ತವದಾಸೋಹಂ ವಾಸುದೇವ ವಿಗತಾಘಸಂಘತವದಾಸೋಹಂ।* - ಎಂದು ಬಿಚ್ಚಿ ತೋರಿಸಿದ್ದಾರೆ.

ಐತರೇಯ ಉಪನಿಷತ್ತಿನಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀ ನಾರಾಯಣನು ಬ್ರಹ್ಮದೇವರ ಮಗ ವಿಶಾಲನಾಮಕನಾಗಿ ಇತರಾದೇವಿಯಲ್ಲಿ ಮಹಿದಾಸ ನಾಮಕನಾಗಿ ಅವಿರ್ಭೂತನಾಗಿ ಬ್ರಹ್ಮಾದಿ ದೇವತೆಗಳಿಗೆ ದಾಸತ್ವವನ್ನು ದಯಪಾಲಿಸಿದನೆಂದು ವರ್ಣಿಸ ಲಾಗಿದೆ. ಅಲ್ಲದೆ ವೇದಗಳನ್ನು ವ್ಯವಸ್ಥೆಗೊಳಿಸಿದ ವೇದವ್ಯಾಸರು ಈ ದಾಸ್ಯ ಭಾವವನ್ನು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿ ಲೋಕಕ್ಕೆ ಅರುಹಿ ಉಪಕಾರ ಮಾಡಿದರು.

ಪುರಂದರದಾಸರು ಪರಮ ಭಾಗವತರಿಂದ ಈ ದಾಸತ್ವದ ದೀಕ್ಷೆಯು ಹೇಗೆ ಪರಂಪರಾಗತವಾಗಿ ಧರೆಗೆ ಇಳಿದು ಬಂದಿತೆಂದು ಒಂದು ಪದದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ. ಭಕ್ತಿ ಎಂದರೆ ದಾಸತ್ವದ ಪ್ರಕಟ ಭಾವ. ಇದು ಶ್ರವಣ, ಕೀರ್ತನ, ಮನನ, ಪಾದಸೇವನೆ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮ ನಿವೇದನ ಅಥವಾ ಅರ್ಪಣ - ಹೀಗೆ ನವ ವಿಧವಾಗಿ ಇದ್ದು

ಶಾಂತ, ದಾಸ್ಯ ,ಸಖ್ಯ, ವಾತ್ಸಲ್ಯ ಹಾಗೂ ಮಧುರವೆಂಬ ಐದು ಭಾಗಗಳಿಂದ ಕೂಡಿರುತ್ತದೆ.

ನಾರಾಯಣನೆಂಬ ನಾಮದ ಬೀಜವನ್ನು ಬ್ರಹ್ಮಮಾನಸ ಪುತ್ರರಾದ ನಾರದರು ಧರೆಯಲ್ಲಿ ಬಿತ್ತಿದರಂತೆ. ಧ್ರುವರಾಜರಿಂದ ಅದು ಅಂಕುರಿಸಿತು, ಪ್ರಹ್ಲಾದನಿಂದ ಮೊಳಕೆಯೊಡೆಯಿತು. ರುಕ್ಮಾಂಗದನಿಂದ ಅದು ಚಿಗುರಿತು. ಭೀಷ್ಮಾಚಾರ್ಯರಿಂದ ಹೂ ಬಿಟ್ಟಿತು. ದ್ರೌಪದಿಯಿಂದ ಅದು ಕಾಯಿಬಿಟ್ಟಿತು. ಗಜೇಂದ್ರನಿಂದ ದೊರೆ ಹಣ್ಣಾಯಿತು. ಶುಕಮುನಿಯಿಂದ ಅದು ಪಕ್ವವಾಯಿತು. ಅಜಮಿಳನು ಆ ಹಣ್ಣನ್ನು ಉಂಡು ಸುಖಿಸಿದನು – ಹೀಗೆ ಭಕ್ತಿ ಪಂಥ ಬೆಳೆದು ಬಂದ ಪರಿಯನ್ನು ಅವರು ತಿಳಿಸಿದ್ದಾರೆ. ಈ ಭಕ್ತಿ ಸುಧೆಯನ್ನು ಉಂಡು ಸುಖಿಸಿ, ಪರಮಾತ್ಮನ ವಿಶೇಷವಾದ ಅನುಗ್ರಹಕ್ಕೆ ಪಾತ್ರರಾದವರು ಇನ್ನೂ ಅನೇಕ ಮಹನೀಯರಿಗಿದ್ದಾರೆ. ಅವರಲ್ಲಿ ಹನುಮಂತ, ವಾಲ್ಮೀಕಿ, ಲವಕುಶರು, ವಿಭೀಷಣ, ವಿಶ್ವಾಮಿತ್ರ, ಪಾಂಡವರು –ಹೀಗೆ ಅನೇಕರಿದ್ದಾರೆ.

ಆದರೆ ವ್ಯಾಸರೂ, ನಾರದರೂ, ಶಾಂಡಿಲ್ಯರೂ ಭಕ್ತಿ ಸಂಹಿತೆಯನ್ನು ನೀಡಿ ಲೋಕಕ್ಕೆ ಉಪಕಾರ ಮಾಡಿದ ಮಹಾನುಭಾವರು. ನಾರದರೂ, ಶಾಂಡಿಲ್ಯರೂ ತಮ್ಮ ಭಕ್ತಿ ಸೂತ್ರಗಳಲ್ಲಿ ಭಕ್ತಿಯ ವಿವಿಧ ರೂಪಗಳನ್ನು ವರ್ಣಿಸಿದ್ದಾರೆ. ಭಕ್ತಿಯನ್ನು ಪರಮ ಪ್ರೇಮರೂಪ, ಅಮೃತರೂಪ ಎಂದು ನಾರದರು ವರ್ಣಿಸಿದ್ದಾರೆ. ಶಾಂಡಿಲ್ಯರು– ಆತ್ಮರತ್ಯವಿರೋಧೇನ ಅಂದರೆ ಪರಮಾತ್ಮನಲ್ಲಿ ರತನಾಗಿ ಆ ರತಿಗೆ ವಿರೋಧ ಬಾರದಂತೆ ಪೂಜಾದಿಗಳನ್ನು ಮಾಡುವುದೇ ಭಕ್ತಿ ಎಂದಿದ್ದಾರೆ. ಗರ್ಗರು ಕಥಾದಿಷ್ವಿತಿ ಎಂದಿದ್ದರೆ ವ್ಯಾಸರು ಪೂಜಾದಿಷ್ವನರಾಗ – ಎಂದು ಹೇಳಿದ್ದಾರೆ.

ಭಕ್ತಿಯು ಜ್ಞಾನ ರೂಪವಲ್ಲ ; ಕ್ರಿಯಾರೂಪವೂ ಅಲ್ಲ. ಅದೊಂದು ಭಾವರೂಪವೆಂದು ಶಾಂಡಿಲ್ಯರು ವ್ಯಾಖ್ಯಾನ ಮಾಡಿದ್ದಾರೆ. ಭಕ್ತಿಯು ಸತ್ಸಂಗ, ಹರಿಕಥಾ ಶ್ರವಣ, ವಿರಕ್ತ್ಯಾದಿಗಳಿಂದ ದೃಢವಾಗುತ್ತದೆ. ಭಾಗವತದಲ್ಲಿ ಶ್ರೀವೇದವ್ಯಾಸರು ಭಗವಂತನಲ್ಲಿ ಬೇರೆ ಬೇರೆ ರೂಪವಾದ ಭಕ್ತಿ ಮಾಡಿ ಮುಕ್ತಿ ಪಡೆದವರ ವಿಷಯ ತಿಳಿಸುತ್ತಾರೆ. ಇವರಲ್ಲಿ ಕಾಮೋಪಸರ್ಜನ ಭಕ್ತಿಯಿಂದ ಗೋಪಿಕಾ ಸ್ತ್ರೀಯರೂ, ದ್ವೇಷೋಪಸರ್ಜನ ಭಕ್ತಿಯಿಂದ ಶಿಶುಪಾಲಾದಿಗಳೂ, ಬಂಧುತ್ವೇನ ಭಕ್ತಿ ಮಾಡಿ ಯಾದವರೂ, ಸಮತಲಿತ ಬಹುಮಾನ ಸ್ನೇಹದಿಂದ ಪಾಂಡವರೂ, ಮಹಾತ್ಮ್ಯಜ್ಞಾನದಿಂದ ನಾರದರೂ ಶ್ರೀಹರಿಯನ್ನು ಸೇವಿಸಿ, ಮುಕ್ತಿಯನ್ನು ಹೊಂದಿದರು. ಅಧಿಕಾರಿಗಳಿಗೆ ಅವರವರ ಯೋಗ್ಯತೆಗನುಸಾರವಾಗಿ ಶ್ರೀಹರಿಯು ಫಲಗಳನ್ನು ನೀಡುವನು. ಶ್ರೀ ಮಧ್ವಾಚಾರ್ಯರು ಭಕ್ತಿಯನ್ನು ಮಹಾತ್ಮ್ಯಜ್ಞಾನ ಪೂರ್ವಸ್ತು *ಸುದೃಢಃ ಸರ್ವತೋಧಿಕಃ ಸ್ನೇಹೋ ಭಕ್ತಿರಿಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ* // –ಎಂಬುದಾಗಿ ಕರೆದಿದ್ದಾರೆ.ಅವರು ರಚಿಸಿದ ಸರ್ವಮೂಲ ಗ್ರಂಥಗಳು ಹೇಳಲು ಹೊರಟಿರುವುದು ಇಂಥ ಜ್ಞಾನ ಪೂರ್ವಕವಾದ ಭಕ್ತಿಯನ್ನು. ಈ ಭಕ್ತಿಯು ಶ್ರೀಹರಿಯನ್ನು ಒಲಿಸಲು ಇಷ್ಟು ಸರಳವೂ, ಸುಲಭವೂ ಆದ ರಾಜ ಮಾರ್ಗವೆಂದು ಕಲಿಯುಗದಲ್ಲಿ ಹೇಳಲಾಗಿದೆ.

*ಧ್ಯಾಯನ್ ಕೃತೇಯ ಜನ್‌ಯಜ್ಞಃ ।*
*ತ್ರೇತಾಯಾಂ ದ್ವಾಪರೇऽರ್ಚ ಯನ್ ।*

*ಯದಾಪ್ನೋತಿ ತದಾಪ್ನೋತಿ ।*
*ಕಲೌಸಂಕೀರ್ತ್ಯ ಕೇಶವಮ್ ॥*

– ಎಂಬುದಾಗಿ ಹೇಳಿದ ಶ್ರುತಿ ವಚನವನ್ನೇ ದಾಸವರ್ಯರಾದ ಶ್ರೀಪಾದರಾಜರೂ, ಪುರಂದರದಾಸರೂ ತಮ್ಮ ಉಗಾಭೋಗಗಳಲ್ಲಿ ಅನುವಾದಿಸಿದ್ದಾರೆ

ಶ್ರೀಪಾದರಾಜರು –

*ಧ್ಯಾನವು ಕೃತಯುಗದಲ್ಲಿ, ಯಜನಯಜ್ಞವು ತ್ರೇತಾಯುಗದಲ್ಲಿ,*
*ದಾನವಾಂತಕನ ದೇವತಾರ್ಚನೆಯು ದ್ವಾಪರ ಯುಗದಲ್ಲಿ*
*ಕಲಿಯುಗದಿ ಗಾನದಿ ಕೇಶವನೆಂದರೆ ಕೈಗೊಡುವನು ರಂಗವಿಠಲ ॥*

– ಎಂದು ಹೇಳಿದರೆ, ಪುರಂದರದಾಸರು

*ಧ್ಯಾನವು ಕೃತಯುಗದಲ್ಲಿ*
*ಯಜ್ಞ ಯಾಗವು ತ್ರೇತಾಯುಗದಲ್ಲಿ*
*ಅರ್ಚನೆ ದ್ವಾಪರದಲ್ಲಿ*
*ಕೀರ್ತನೆ ಮಾತ್ರದಿ ಕಲಿಯುಗದಲ್ಲಿ*
*ಮುಕುತಿಯನ್ನೀವ ಪುರಂದರವಿಠಲ* – ಎಂದಿದ್ದಾರೆ.

ಈ ಮಾತಿಗೆ ಸಾಕ್ಷಿಯಾಗಿ ಸ್ವಾಮಿಯು ಭಾಗವತದಲ್ಲಿ

*ನಾಹಂವಾಸಾಮಿ ವೈಕುಂಠೇ ಯೋಗಿನಾಂ ಹೃದಯೇನಚ ।*
*ಮದ್ಭಕ್ತಾ ಯತ್ರಗಾಯಂತಿ ತತ್ರತಿಷ್ಠಾಮಿ ನಾರದ ॥*

– ಎಂಬುದಾಗಿ ಅಪ್ಪಣೆ ಕೊಡಿಸಿದ್ದಾನೆ.

ಕಲಿಯುಗದಲ್ಲಿ ಭಕ್ತಿಯು ಸುಲಭವಾಗಿರುವುದರಿಂದಲೇ ಭಗವಂತನನ್ನು ಭಾರತೀಯ ಸಂತರೆಲ್ಲರೂ ಭಕ್ತಿ ಮಾರ್ಗದಿಂದ ಉಪಾಸಿಸಿದ್ದಾರೆ. ಇವರಲ್ಲಿ ಜಾತಿ ಭೇದವಾಗಲೀ, ಲಿಂಗ ಭೇದವಾಗಲೀ, ಮೇಲುಕೀಳೆಂಬ ಭಾವವಾಗಲೀ ಇಲ್ಲದೆ ಸುಜೀವರಾದವರೆಲ್ಲರೂ ಭಗವಂತನನ್ನು ಉಪಾಸಿಸಿ, ಅವನ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ.

ಕನ್ನಡ ನಾಡಿನ ಹರಿದಾಸರು ಮಾತ್ರವಲ್ಲ, ಬೇರೆ ಬೇರೆ ಪ್ರಾಂತ್ಯಗಳಲ್ಲೂ ಚೈತನ್ಯ, ಮೀರಾಬಾಯಿ, ಕಬೀರ, ನಾಮದೇವ, ತುಕಾರಾಮ, ನಮ್ಮಾಳ್ವಾರ್, ಕುಲಶೇಖರಾಳ್ವಾರ್, ತ್ಯಾಗರಾಜ, ರಾಮದಾಸ, ತುಲಸೀದಾಸ, ಕಬೀರದಾಸ, ನರಸೀಮಹತ, ಸೂರದಾಸ- ಹೀಗೆ ಅವರ ಹೆಸರುಗಳು ಜಾಜ್ವಲ್ಯಮಾನವಾಗಿ ಹೊಳೆಯುತ್ತಿವೆ. ಪದ್ಮಪುರಾಣಗಳಲ್ಲಿ –

*ಉತ್ಪನ್ನಾ ದ್ರಾವಿಡೇಸಾಹಂವೃದ್ಧಿ ಕರ್ಣಾಟಕೇಗತಾ ।*
*ಕ್ವಚಿತ್‌ಕ್ವಚಿನ್ಮಹಾರಾಷ್ಟ್ರೇ ಗುರ್ಜರೇಜೀರ್ಣಂಗತಾ ॥*

– ಎಂದು ಈ ಭಕ್ತಿ ಪಂಥದ ಉಗಮ ಬೆಳವಣಿಗೆ ಅವನತಿ ನಿರ್ಗಮನಗಳನ್ನು ಕುರಿತು ವರ್ಣಿಸಲಾಗಿದೆ.



ಕನ್ನಡ ನಾಡಿನ ಹರಿಭಕ್ತಿ ಸಾಹಿತ್ಯದಲ್ಲಿ ನಾವು ಎರಡು ಪಂಥವನ್ನು ಕಾಣುತ್ತೇವೆ. ಅದು ವ್ಯಾಸಸಾಹಿತ್ಯ ಮತ್ತು ದಾಸಸಾಹಿತ್ಯ. ವ್ಯಾಸ ಸಾಹಿತ್ಯವೆಂದರೆ ಶ್ರೀ ಬಾದರಾಯಣ ದೇವರು ಕಲಿಯುಗದಲ್ಲಿ ಜ್ಞಾನವು ತಿರೋಧಾನಗೊಂಡಾಗ, ಸುಜೀವರ ಮೇಲೆ ಅನುಗ್ರಹಾರ್ಥವಾಗಿ ಅವತಾರ ಮಾಡಿ, ತತ್ವಮಾರ್ಗವನ್ನು ತಿಳಿಯಲು ಸಾಧಕವಾದ ವೇದಗಳನ್ನು ಸಂಗ್ರಹಿಸಿ, ಪುರಾಣ ಗಳನ್ನು, ಬ್ರಹ್ಮಸೂತ್ರಗಳನ್ನು ರಚಿಸಿ, ಪರಮೋಪಕಾರ ಮಾಡಿದರು. ಈ ಸಾಹಿತ್ಯವು ಸಂಸ್ಕೃತ ವಾಙ್ಮಯದಲ್ಲಿದ್ದು ವ್ಯಾಸ ಸಾಹಿತ್ಯವೆನಿಸಿಕೊಂಡಿತು. ಶ್ರೀಮಧ್ವಾಚಾರ್ಯರು ಪಾಜಕಕ್ಷೇತ್ರದಲ್ಲಿ ಅವತರಿಸಿ, ಹಿಂದಣ ಇಪ್ಪತ್ತೊಂದು ಕುಭಾಷ್ಯಗಳನ್ನು ಖಂಡಿಸಲು ತಮ್ಮ ಮೂವತ್ತೇಳು ಗ್ರಂಥಗಳನ್ನು ರಚಿಸಿ, ವ್ಯಾಸಸಾಹಿತ್ಯವನ್ನು ಅರಿಯಲು ಸಾತ್ವಿಕ ಜೀವರಾಶಿಗಳಿಗೆ ಉಪಕಾರ ಮಾಡಿದರು. ಅವರ ನಂತರ ಶ್ರೀ ಜಯತೀರ್ಥರೂ, ಶ್ರೀ ವ್ಯಾಸರಾಯರೂ, ಅನಂತರ ಬಂದ ವಾದಿರಾಜರೂ, ವಿಜಯೀಂದ್ರರೂ, ಶ್ರೀರಾಘವೇಂದ್ರಸ್ವಾಮಿಗಳೂ ತಮ್ಮ ಟೀಕೆ, ವ್ಯಾಖ್ಯಾನ, ಟಿಪ್ಪಣಿಗಳಿಂದ ಆಚಾರ್ಯರು ಪ್ರತಿಪಾದಿಸಿದ ತತ್ವವಾದವನ್ನು ಸ್ಪಷ್ಟಗೊಳಿಸಿದರು. ಇವೆಲ್ಲವು ಸಂಸ್ಕೃತದಲ್ಲಿದ್ದು ವ್ಯಾಸ ಸಾಹಿತ್ಯಕ್ಕೆ ಭಾಷ್ಯ ರೂಪದಲ್ಲಿ ಅಂದರೆ ವಿವರಣೆ ರೂಪದಲ್ಲಿ ಇವೆ. ಇವು ವ್ಯಾಸ ಸಾಹಿತ್ಯವೆನಿಸಿಕೊಂಡವು.

ಆದರೆ ಸಂಸ್ಕೃತದಲ್ಲಿರುವ ಈ ದಾಸ ಸಾಹಿತ್ಯವು ಅಂದರೆ ಭಕ್ತಿ ಸಾಹಿತ್ಯವು ಸಾಮಾನ್ಯರ ಕೈಗೆ ಎಟುಕದಾಗಲು ಪ್ರಾಕೃತ ಭಾಷೆಯಲ್ಲಿ ಈ ಪ್ರಮೇಯಗಳನ್ನು ತಿಳಿಸಿ, ಹರಿಭಕ್ತಿಯನ್ನು ಜ್ಞಾನಪೂರ್ವಕ ದೃಢ ಭಕ್ತಿಯನ್ನಾಗಿ ಮಾಡಲು ಮಹಾನುಭಾವರಾದ ಹರಿದಾಸರು ಅವತಾರ ಮಾಡಿದರು. ಪ್ರಾಕೃತ ಅಂದರೆ ದೇಶೀಯ ಭಾಷೆಯಾದ ಕನ್ನಡ ನುಡಿಯಲ್ಲಿ ಈ ವ್ಯಾಸ ಸಾಹಿತ್ಯದ ಗಂಗೆಯನ್ನು ಹರಿಸಿ ನಾಡು ನುಡಿಗಳನ್ನು ಪಾವನಗೊಳಿಸಿದರು. ಅವರ ಕೃತಿಗಳು ಹರಿದಾಸ ಸಾಹಿತ್ಯವೆಂದು ಹೆಸರು ಪಡೆಯಿತು. ಒಂದು ವ್ಯಾಸಕೂಟವೆನಿಸಿದರೆ ಇನ್ನೊಂದು ದಾಸಕೂಟ ವೆನಿಸಿತು. ಇವರೆಡರ ರೂಪ ಬೇರೆಯಾದರೂ ಗುರಿ ಒಂದೇ ಆಗಿತ್ತು. ಅಂದರೆ ಶ್ರೀಹರಿ ಸರ್ವೋತ್ತಮತ್ವ ತತ್ವದ ಆಧಾರದ ಮೇಲೆ ರೂಪುಗೊಂಡ ಈಶ-ದಾಸ ಭಾವವನ್ನೂ, ದ್ವೈತ ಸಿದ್ಧಾಂತವನ್ನು ತಿಳಿಸಲು ಹೊರಟ ಒಂದೇ ಗಿಡದ ಎರಡು ಕಂಟೆಗಳಾದವು. ಒಂದು ಪ್ರಕಾಶ ಮಾನವಾಗಿ ಕಣ್ಣು ಕುಕ್ಕುವ ಸೂರ್ಯನಾದರೆ, ಇನ್ನೊಂದು ಅದು ಪ್ರತಿಫಲಿಸಿದ ಚಂದ್ರ ಕಿರಣಗಳಂತೆ ಆಹ್ಲಾದವಾಯಿತು. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು. ಒಂದೇ ಬಳ್ಳಿಯ ಎರಡು ಹೂಗಳು - ಪರಮಾತ್ಮನಿಗೆ ಎರಡೂ ಪ್ರಿಯವೇ. ಒಂದು ಹೆಚ್ಚಲ್ಲ, ಇನ್ನೊಂದು ಕೀಳಲ್ಲ - ಎಂಬ ಸತ್ಯವನ್ನು ತಿಳಿಸಿಕೊಟ್ಟು, ಎರಡರಲ್ಲೂ ಕೃತಿರಚನೆ ಮಾಡಿದ ಮಹಾನುಭಾವರು, ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀವಾದಿರಾಜರು ಮುಂತಾದವರು.

ವಾಯುದೇವರ ಮೂರನೆಯ ಅವತಾರವಾದ ಶ್ರೀಮಧ್ವಾಚಾರ್ಯರನ್ನು ಜ್ಞಾನ ಪ್ರಚಾರಕ್ಕಾಗಿ ಧರೆಗೆ ಕಳುಹಿಸಿಕೊಟ್ಟ ಪರಮಾತ್ಮನೇ ಇದೇ ಜ್ಞಾನ ಪ್ರಸಾರಕ್ಕಾಗಿ ಇತರ

ದೇವತೆಗಳನ್ನು ಇಲ್ಲಿ ಅವತರಿಸಲು ಕಳುಹಿಸಿಕೊಟ್ಟನು. ಸ್ವಾರಸ್ಯವೆಂದರೆ ಈ ಎಲ್ಲ ಭಾಗವತ್ಕಾರ್ಯ ಸಾಧಕರು, ಈ ಎಲ್ಲ ಹರಿದಾಸರು ರಾಯಚೂರು ಪ್ರಾಂತ್ಯದಲ್ಲೂ, ಪಶ್ಚಿಮ ಘಟ್ಟದ ಪ್ರದೇಶದಲ್ಲೂ ಜನ್ಮತಾಳಿರುವುದು. ಶ್ರೀಮಧ್ವಾಚಾರ್ಯರು ಪರಶುರಾಮ ಕ್ಷೇತ್ರವೆನಿಸಿದ ಉಡುಪಿ ಬಳಿಯ ಪಾಜಕ, ಶ್ರೀವಾದಿರಾಜರು ಹೂವಿನಕೆರೆ ಕ್ಷೇತ್ರದಲ್ಲಿ ಜನ್ಮತಾಳಿದರೆ, ಶ್ರೀ ಜಯತೀರ್ಥರು ಪಂಢರಪುರದ ಬಳಿಯ ಮಂಗಳವೇಡೆಯಲ್ಲೂ, ಶ್ರೀಪಾದರಾಜರು ಮತ್ತು ವ್ಯಾಸರಾಜರು ಅಬ್ಬೂರಿನಲ್ಲೂ (ಮೈಸೂರು ಪ್ರಾಂತ್ಯ) ಶ್ರೀವಿಜಯದಾಸರು ತುಂಗಾತೀರವಾದ ಚೀಕಲಪರವಿ (ಚಿಕ್ಕಬದರಿ) ಗೋಪಾಲದಾಸರ ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಉತ್ತನೂರು, ವಾಸುದೇವ ವಿಠಲರು, ಶ್ರೀಪತಿದಾಸರು, ತಂದೆ ಶ್ರೀಪತಿವಿಠಲರು, ಶ್ರೀ ಗುರುವಿಜಯ ವಿಠಲ- ಮೊದಲಕಲ್ಲು ಶೇಷದಾಸರು- ಗದ್ವಾಲಿನ ಪ್ರಾಂತ್ಯದಲ್ಲೂ, ಶ್ರೀ ಜಗನ್ನಾಥದಾಸರು ಮಾನ್ವಿಯಲ್ಲೂ, ಪ್ರಾಣೇಶದಾಸರು ಲಿಂಗಸೂಗೂರಿನಲ್ಲೂ, ಕರ್ಜಗಿ ದಾಸರೆಂದು ಖ್ಯಾತರಾದ ಶ್ರೀದವಿಠಲರು ಕೃಷ್ಣಾ ತೀರದಲ್ಲೂ ಜನಿಸಿ, ಹರಿದಾಸ ಪಂಥವನ್ನು ವ್ಯಾಪಕವಾಗಿ ಹರಡಿ, ದಾಸ ಸಾಹಿತ್ಯದ ಪುಣ್ಯ ವಾಹಿನಿಯಿಂದ ನಾಡಿನ ಜನಮನವನ್ನು ಪಾವನಗೊಳಿಸಿದರು. ಇವರಲ್ಲಿ ದಾಸಶ್ರೇಷ್ಠರಾದ ಪುರಂದರದಾಸರು ಪುರಂದರಗಡ (?) ಕೆಲವರ ಅಭಿಪ್ರಾಯದಂತೆ ಚಿಕ್ಕಮಂಗಳೂರು ಪ್ರಾಂತ್ಯದಲ್ಲಿ ಜನಿಸಿ, ತಮ್ಮ ಉಪನಿಷತ್ ಸದೃಶ ವಾಙ್ಮಯದಿಂದ ಹರಿದಾಸ ಸಾಹಿತ್ಯಕ್ಕೆ ಶ್ರೇಷ್ಠ ಕಾಣಿಕೆಯನ್ನು ನೀಡಿದರೆ, ಕನಕದಾಸರು ಬಂಕಾಪುರದ ಬಳಿ ಬ್ಯಾಡದಲ್ಲಿ ಜನಿಸಿ ಕಾಗಿನೆಲೆಯನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡರು. ಹೀಗೆ ಕನ್ನಡನಾಡಿನ ಹರಿದಾಸರು ವ್ಯಾಸ ಸಾಹಿತ್ಯದ ಕಾರ್ಯವನ್ನೇ ಕನ್ನಡ ನುಡಿಯಲ್ಲಿ ಗೀತತಾಯಿ ಸುಳಾದ್ಯುಗಾಭೋಗ ಪದ್ಯಪದವ್ರಾತ ಪ್ರಬಂಧ ರಚಿಸಿ ವಿಠಲ ಪ್ರೀತಿಗೆ ಪಾತ್ರರಾದರು. ಪ್ರಾಕೃತ ಭಾಷೆಯಲ್ಲಿ ಕೃತಿಪೇಳಿ ಅಪ್ರಾಕೃತ ಹರಿಯಿಂದ ಸ್ವೀಕೃತರಾದರು.

೫

ಮಧ್ವಾಚಾರ್ಯರನ್ನು ಎಲ್ಲ ಹರಿದಾಸರು ಆದ್ಯ ಹರಿದಾಸರೆಂದು ವರ್ಣಿಸಿದ್ದಾರೆ. ಶ್ರೀ ಮಧ್ವಾಚಾರ್ಯರು ತಮ್ಮ ಸರ್ವಮೂಲ ಗ್ರಂಥಗಳಲ್ಲಿ ಹರಿದಾಸ ಸಾಹಿತ್ಯದ ತಿರುಳಾದ ಈಶ - ದಾಸ ಭಾವವನ್ನೂ, ಬಿಂಬ ಪ್ರತಿಬಿಂಬ ಕ್ರಿಯೆಯನ್ನು ವರ್ಣಿಸಿ ತತ್ವವಾದಕ್ಕೆ ಬೇಕಾದ ನೆಲೆಗಟ್ಟನ್ನು ನಿರ್ಮಿಸಿದರು. ಮುಂದಿನ ಹರಿದಾಸರೂ, ಜ್ಞಾನವರೇಣ್ಯರೂ ಈ ನೆಲೆಗಟ್ಟಿನ ಮೇಲೆ ಭವ್ಯ ಸೌಧವನ್ನು ನಿರ್ಮಿಸಿದರು. ಆದರೂ ಶ್ರೀಮಧ್ವಾಚಾರ್ಯರು ರಚಿಸಿದ ದ್ವಾದಶ ಸ್ತೋತ್ರವು ದಾಸ ಸಾಹಿತ್ಯದ ಪ್ರಥಮ ಕೃತಿಯೆಂದು ಹೇಳಲಾಗಿದೆ. ಇದರಲ್ಲಿ ಶ್ರೀ ಮಧ್ವಾಚಾರ್ಯರು ಭಗವಂತನಾದ ಶ್ರೀಹರಿಯ ಮಂಗಳಮಯ ರೂಪವನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸಿದ್ದಾರೆ. ಇವರು ಪ್ರತಿ ಗೀತೆಯ ಕೊನೆಯಲ್ಲೂ ಆನಂದತೀರ್ಥಪರಾನಂದವರದ ಎಂಬುದಾಗಿ ತಮ್ಮ ಅಂಕಿತವನ್ನು ಹಾಕಿದ್ದಾರೆ. ಮಧ್ವಾಚಾರ್ಯರಿಗೂ, ಕನ್ನಡದಲ್ಲಿ ಕೃತಿ ರಚನೆ ಮಾಡಿದ ಇತರ ಹರಿದಾಸರಿಗೂ ಅತ್ಯಂತ ನಿಕಟ ಬಾಂಧವ್ಯವಿದೆ.

ವಿಜಯದಾಸರು ತಮ್ಮ ಉಗಾಭೋಗದಲ್ಲಿ ಹೀಗೆ ಹೇಳಿದ್ದಾರೆ.

*"ವ್ಯಾಸಮುನಿಯ ಭಾವಗರ್ಭ ಶ್ರೀಮದಾಚಾರ್ಯರು ಬಲ್ಲರಯ್ಯಾ, ವ್ಯಾಸ ಶಿಷ್ಯರ ಭಾವಗರ್ಭ ಜಯ ಮುನಿರಾಯ ಬಲ್ಲರೈಯ್ಯಾ । ಲೇಸು ಜಯಾರ್ಯರ ಭಾವಗರ್ಭ ಮರ್ಮ ವ್ಯಾಸರಾಯಬಲ್ಲನೈಯ್ಯ । ವ್ಯಾಸರಾಯರ ಭಾವಗರ್ಭ ವಿಜಯೀಂದ್ರ ವಾದಿರಾಜರು ಬಲ್ಲರಯ್ಯಾ । ಈಸು ಜನಬಲ್ಲದು ಕಾಣೋ ಎಣಿಸು ಪುರಂದರದಾಸರು ಇವರೊಳಬಲ್ಲರು । ಅವರನುಸಾರಿಗಳು ಶ್ರೀಶವಿಜಯವಿಠಲರೇಯ ಕಾಶಿಯೊಳಗಿನ ಮಹಿಮಬಲ್ಲ ॥"*

ಶ್ರೀ ವೇದವ್ಯಾಸರು ರಚಿಸಿದ ಗ್ರಂಥಗಳು ೪ ಅಬ್ಜ ೩೦ ಕೋಟಿ ಗ್ರಂಥಗಳೆಂದು ಹೇಳುತ್ತಾರೆ . (ಒಂದು ಗ್ರಂಥಕ್ಕೆ ಮೂವತ್ತೆರಡು ಅಕ್ಷರಗಳು) ಇವರಂತೆ ನಾದದಾಂಶ ಸಂಭೂತರಾದ ಶ್ರೀಪುರದಂರ ದಾಸರು ಒಬ್ಬರೇ ೪,೭೫,೦೦೦ ಕೃತಿಗಳನ್ನು (ಗ್ರಂಥ?) ರಚಿಸಿರುವರೆಂದೂ, ಅವರ ಶಿಷ್ಯರಾದ ಭೃಗು ಅವತಾರಿಗಳಾದ, ವಿಜಯದಾಸರು ಉಳಿದಿದ್ದ ೨೫,೦೦೦ ಕೃತಿಗಳನ್ನು ರಚಿಸಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ಮೂಲನಾರಾಯಣರಿಗೆ ಅರ್ಪಿಸಿದರೆಂದೂ ಒಂದು ನಂಬಿಕೆ ಇದೆ. ಆದರೆ ನಮ್ಮ ದುರ್ದೈವ ಈ ಕೃತಿಗಳಲ್ಲಿ ಒಂದು ಅಂಶವೂ ನಮಗೆ ದೊರೆಯದೆ ನಷ್ಟವಾಗಿದೆ. ಇದು ಸಕಲ ಸಜ್ಜನರಿಗಾದ ಅಪಾರ ನಷ್ಟವೇ ಸರಿ. ಅವರ ನಂತರ ಬಂದ ಹರಿದಾಸರು ಇಷ್ಟು ವಿಪುಲವಾಗಿ ಕೃತಿರಚನೆ ಮಾಡದಿದ್ದರೂ, ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಕಾಣಿಕೆ ಗಣ್ಯವೇ ಆಗಿದೆ.

ಈ ಎಲ್ಲ ಕೃತಿಗಳಿಂದ ಕನ್ನಡನಾಡು ನುಡಿಗಳಿಗೆ ಆದ ಉಪಕಾರ ಕಡಿಮೆ ಏನು ಅಲ್ಲ. ಈ ದಾಸ ಸಾಹಿತ್ಯದಿಂದ ಆದ ಪ್ರಯೋಜನವೇನು?

1) ಹರಿದಾಸ ಸಾಹಿತ್ಯದಲ್ಲಿ ವೇದ ಉಪನಿಷತ್ತುಗಳ ಛಂದಸ್ಸಿನ ಸಂಪೂರ್ಣ ಭಾವ ತುಂಬಿ ತುಳುಕುತ್ತದೆ. ಕೆಲವೆಡೆ ಮೂಲ ಋಕ್ಕುಗಳು, ಮಂತ್ರ ಪೂರ್ಣ ಪ್ರಕ್ರಿಯೆ. ಬ್ರಹ್ಮಣ ವಿಭಾಗ, ಅರಣ್ಯಕ ವಿಭಾಗ ವಿವರ, ಅಥರ್ವಣ ವೇದದ ಮಾಂತ್ರಿಕ ತಾಂತ್ರಿಕ ವಿವೇಚನೆ, ಸಾಮವೇದ ವಿಭಾಗದ ಗಾನಶಾಸ್ತ್ರವೂ ವಿವರವಾಗಿ ಬಂದಿದೆ.

2) ಭಾರತ ಇತಿಹಾಸ, ಪುರಾಣ, ಉಪಪುರಾಣ, ಸಂಹಿತಾ ಆಗಮಗಳ ಸಮಸ್ಯೆ ಬಹು ಸರಳವಾಗಿ ವಿವರಿಸಲ್ಪಟ್ಟಿದೆ. ಸೃಷ್ಟಿಕ್ರಮಾದಿ ವೈಜ್ಞಾನಿಕ ವಿಷಯಗಳು ಬಹು ವಿಧವಾಗಿ ಹೇಳಿದ್ದಾರೆ.

3) ಸಕಲಭಾಷಾ ಉತ್ಪತ್ತಿಗೆ ಮೂಲ ಕಾರಣ ವೇದ ವರ್ಣಗಳಿಗೆ ಆದಿ ಸೃಷ್ಟಿಯಲ್ಲಿಯೇ ಭಾಷಾ ಅಭಿವ್ಯಂಜಕ ಶಕ್ತಿ ಇತ್ತು. ಅದು ಮುಂದೆ ದೇಶಾನುಸಾರ ಭಾಷಾ ವಿಭಜನ, ಭಾಷಾ ಏರುಪೇರು, ಸುಧಾರಣೆ ಈ ಕಾರಣ ಆದ ಬದಲಾವಣೆಗಳನ್ನು ಹರಿದಾಸರು ಸುಂದರವಾಗಿ ವರ್ಣಿಸಿರುವರು. ಪ್ರಾಸ, ಪ್ರಮೇಯ, ಶಬ್ದಾಲಂಕಾರ, ಅರ್ಥಾಲಂಕಾರ, ಪದಲಾಲಿತ್ಯ, ಶಬ್ದಗಳ ಸಂಬಂಧವಾದ ಭಾಷಾ ಲಾಲಿತ್ಯಗಳಿಂದ ಹರಿದಾಸ ಸಾಹಿತ್ಯ ಶೋಭಿಸುತ್ತಿದೆ.

4) ಹರಿದಾಸ ಸಾಹಿತ್ಯದಲ್ಲಿ ದಾಸರು ವ್ಯಾಕರಣ ನಿಯಮವನ್ನು ಹಿರಿದಾಗಿ ಪಾಲಿಸಿದಂತೆ ಮತ್ತಾರೂ ಪಾಲಿಸಿಲ್ಲ. ಈಗಿನ ಹಾಗೂ ಹಿಂದಣ ಛಂದೋಮಯ ವ್ಯಾಕರಣಗಳ ವಿವರಣೆಗಳು

ದಾಸರ ಕೃತಿಗಳಲ್ಲಿ ಕಾಣುತ್ತವೆ. ಶಬ್ದ, ಸಮಾಸ, ಪ್ರಕೃತಿ, ಪ್ರತ್ಯಯ, ಸರ್ವನಾಮ, ಲಿಂಗತ್ರಯ ವಿವೇಚನೆ, ಕರ್ತರಿ ಕರ್ಮಣಿ ಪ್ರಯೋಗಗಳಿಗೆ ಈ ಸಾಹಿತ್ಯ ಅಪಾರ ದೃಷ್ಟಾಂತಗಳನ್ನು ಒದಗಿಸುತ್ತವೆ.

5) ನವರಸಾಲಂಕಾರಗಳ ಭಾವ, ಯಾವೆಡೆಯಲ್ಲಿ ಯಾವ ಅಲಂಕಾರವನ್ನು ಹೇಗೆ ಉಪಯೋಗಿಸಬೇಕೆಂಬುದು ದಾಸ ಸಾಹಿತ್ಯದಲ್ಲಿ ಸುವಿಸ್ತಾರವಾಗಿ ವಿವೇಚಿಸಲಾಗಿದೆ. ಅನೇಕ ಪದ, ಸುಳಾದಿ, ಉಗಾಭೋಗ, ವೃತ್ತನಾಮಗಳು ತ್ರಿಪದಿ, ಠಾಯಿಗಳ ಛಂದಸ್ಸು, ಅಲಂಕಾರಗಳು ದಾಸ ಸಾಹಿತ್ಯದಲ್ಲಿ ಹೇರಳವಾಗಿ ದೊರಕುತ್ತವೆ. ಇವು ಉಳಿದೆಡೆಯಲ್ಲಿ ದೊರಕುವುದಿಲ್ಲ.

6) ದಾಸ ಸಾಹಿತ್ಯದ ಸಾಮಗಾನದ ಸೊಬಗು-ಸೊಗಡು ಬಡಿದೆಬ್ಬಿಸಿದಂತೆ ಇದೆ. ದಾಸ ಸಾಹಿತ್ಯವು ಸಂಗೀತ ಶಾಸ್ತ್ರದ ತವರು. ಸಂಗೀತ ಶಾಸ್ತ್ರದಲ್ಲಿಯ ರಾಗ, ಲಯ, ತಾಳಗಳ ವಿವೇಚನೆ ಅತಿ ಸೂಕ್ಷ್ಮವಾಗಿ ಇಲ್ಲಿ ವಿವೇಚಿಸಲಾಗಿದೆ. ಯಾವ ಭಾಗದಲ್ಲಿ, ಯಾವ ಕಾಲಾನುಗುಣವಾಗಿ ರಾಗವಿರಬೇಕೆಂಬುದನ್ನೂ, ರಾಗಕ್ಕೆ ತಕ್ಕ ತಾಳ, ರಾಗಾಭಿಮಾನಿ ದೇವತೆಗಳು, ರಾಗ ಲಕ್ಷಣಗಳು, ಅವುಗಳಿಂದಾಗುವ ಪರಿಣಾಮ -ಮುಂತಾದವುಗಳನ್ನೂ ಹರಿದಾಸರು ಚೆನ್ನಾಗಿ ಪರಿಷ್ಕಾರವಾಗಿ ತಿಳಿಸಿದ್ದಾರೆ. ಪುರಂದರದಾಸರು ಕರ್ಣಾಟಕ ಸಂಗೀತಕ್ಕೆ ಪಿತಾಮಹರೆನಿಸಿ, ಸಂಗೀತ ಶಾಸ್ತ್ರಕ್ಕೆ ಆಧಾರವಾದ ಲಕ್ಷ್ಯ, ಲಕ್ಷಣ ಕೃತಿಗಳನ್ನು ವಿಪುಲವಾಗಿ ರಚಿಸಿ, ಮಹೋಪಕಾರ ಮಾಡಿದ್ದಾರೆ.

7) ಭರತನ ನಾಟ್ಯ ಶಾಸ್ತ್ರದಲ್ಲಿನ ನಾಟ್ಯ, ಅಭಿನಯ, ಅವುಗಳ ರಾಗ ತಾಳಗಳನ್ನು ಸ್ಪಷ್ಟವಾಗಿ ಗುರುತಿಸಿ ಹೇಳಿದ್ದಾರೆ. ಸಂಗೀತದಿಂದ ಮೈಮರೆತು ಕುಣಿದು ಭಗವಂತನನ್ನು- ನಾದ ಬ್ರಹ್ಮನನ್ನು ಉಪಾಸಿಸಿದ್ದಾರೆ.

8) ಜ್ಯೋತಿಷಶಾಸ್ತ್ರ, ಆರೋಗ್ಯ ಶಾಸ್ತ್ರ, ಅರ್ಥಶಾಸ್ತ್ರ, ಉದ್ಯೋಗಶಾಸ್ತ್ರ, ಭೂಗರ್ಭಶಾಸ್ತ್ರ, ಖಗೋಲಶಾಸ್ತ್ರ, ಮನಶಾಸ್ತ್ರ, ಜೀವಶಾಸ್ತ್ರ, ಖನಿಜಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ -ಮುಂತಾದ ಭೌತಶಾಸ್ತ್ರಗಳು ವಿವೇಚನೆಯನ್ನು ದಾಸರು ತಮ್ಮ ಕೃತಿಗಳಲ್ಲಿ ಮಾಡಿದ್ದಾರೆ. ಇವಕ್ಕೆ ವಾದಿರಾಜರ ಭೂಗೋಳ ವಿವರಣೆ, ವಿಜಯದಾಸರ ಸೃಷ್ಟಿ ಸುಳಾದಿಗಳು, ಜಗನ್ನಾಥದಾಸರ ಹರಿಕಥಾಮೃತಸಾರಗಳು ಕೆಲವು ದೃಷ್ಟಾಂತಗಳು. ಇವು ಇಂದಿಗೂ ಆಯಾ ಶಾಸ್ತ್ರಗಳ ತಜ್ಞರಿಗೆ ಸವಾಲಾಗಿ ನಿಂತಿವೆ.

9) ಜನಪದ ಸಾಹಿತ್ಯ, ಜನಪದ ಮಟ್ಟು, ಸಂಗೀತಗಳಿಗೆ ದಾಸಸಾಹಿತ್ಯವು ಆಗರವಾಗಿ ಜನಪದ ಸತ್ವವನ್ನು ಉಳಿಸಿಕೊಂಡಿದೆ.

10) ತತ್ವಶಾಸ್ತ್ರದಲ್ಲಿ ಗುಹ್ಯ, ದರ್ಶನ ಭಾಷೆಗಳ ಉಲ್ಲೇಖನವಿದೆ. ಇವುಗಳಿಗೆ ದಾಸರ ಹಲವು ಕೃತಿಗಳು ವಿವರಣೆ ನೀಡುತ್ತವೆ. ಹರಿದಾಸರ ಮುಂಡಿಗೆಗಳು ಬುದ್ಧಿವಂತರಿಗೆ ಸವಾಲಾಗಿ ಇಂದಿಗೂ ನಿಂತಿವೆ.

11) ಹರಿದಾಸರ ಚಿತ್ರಕಲೆ ಅಮೋಘವಾದುದು. ಗೋಪಾಲದಾಸರು ಅದ್ಭುತ ಚಿತ್ರಕಾರರಾಗಿದ್ದರು. ಇವರು ರಚಿಸಿದ ಅನೇಕ ಚಿತ್ರಗಳು, ಚಕ್ರಾಬ್ಜ ಮಂಡಲ-ಇತ್ಯಾದಿ ನಕ್ಷೆಗಳು ಇಂದಿಗೂ ಬೆರಗುಗೊಳಿಸುವ ಸಂಗತಿಗಳಾಗಿವೆ.

12) ಭಾಷೆಯಲ್ಲಿ ಪ್ರತಿಶಬ್ದ, ಸಮಾಸ, ಅಲಂಕಾರ, ಛಂದಸ್ಸು, ಲಾಲಿತ್ಯ, ಪ್ರೌಢಿಮೆ, ಗಾಂಭೀರ್ಯಗಳನ್ನು ತಂದು ಕನ್ನಡ ಭಾಷೆಯನ್ನು ಸತ್ವಯುತಗೊಳಿಸಿದೆ. ಯಾವುದೇ ಶಾಸ್ತ್ರವನ್ನು, ಮಾನವನ ಜೀವಕ್ಕೆ ಸಂಬಂಧಿಸಿದ ವಿಷಯವನ್ನು ಸಮರ್ಥವಾಗಿ ನಿರೂಪಿಸಬಲ್ಲ ಕಸುವನ್ನು ಕನ್ನಡ ಭಾಷೆಗೆ ಹರಿದಾಸರು ತಂದು ಕೊಟ್ಟಿದ್ದಾರೆ.

ಹೀಗೆ ಹರಿದಾಸರು ತಮ್ಮ ಕೃತಿಗಳಿಂದ ಮಾಡಿದ ಉಪಕಾರವನ್ನು ಗೋರೆಬಾಳ ಹನುಮಂತರಾಯರು ವಿವರಿಸಿದ್ದಾರೆ.

- *(ಆಧ್ಯಾತ್ಮಿಕ ನಿಬಂಧಗಳು, ಪು. ೨೮-೩೦).*

೬

ಇನ್ನು ಹರಿದಾಸ ಸಾಹಿತ್ಯವು ಐತಿಹಾಸಿಕವಾಗಿ ಬೆಳೆದು ಬಂದ ಪರಂಪರೆಯನ್ನು ಸಮೀಕ್ಷಿಸಬಹುದಾಗಿದೆ.

ಶ್ರೀಮಧ್ವಾಚಾರ್ಯರನ್ನು ಐತಿಹಾಸಿಕವಾಗಿ ಪ್ರಥಮ ಹರಿದಾಸರೆಂದು ಹೇಳಬಹುದಾದರೂ ಅವರು ಕನ್ನಡದಲ್ಲಿ ಕೃತಿರಚನೆ ಮಾಡಿಲ್ಲ; ಒಂದು ವೇಳೆ ಮಾಡಿದ್ದಿರಬಹುದಾದರೂ ಅವು ನಮಗೆ ದೊರತಿಲ್ಲ. ಅವರು ತುಳುವಿನಲ್ಲಿ ಮಾಡಿದ್ದಾರೆನ್ನಲಾದ ಕೃತಿಗಳೂ ಉಪಲಬ್ಧವಿಲ್ಲ. ಹೀಗಾಗಿ ಅವರ ಶಿಷ್ಯರಾದ ನರಹರಿತೀರ್ಥರೇ ಕನ್ನಡ ಹರಿದಾಸರಲ್ಲಿ ಮೊದಲನೆಯವರೆಂದು ಹೇಳಬಹುದು. ಇವರು ಕಳಿಂಗದಿಂದ ಬಂದು ಕರ್ನಾಟಕದಲ್ಲಿ ನಿಂತ ಮೇಲೆ ಕನ್ನಡ ಕಲಿತು, ಹರಿದಾಸ ಸಾಹಿತ್ಯವನ್ನು ನಿರ್ಮಿಸಿದರೆಂದು ಹೇಳುತ್ತಾರೆ. ಇವರು ರಚಿಸಿದ *ಎಂತು ಮರುಳಾದೆ, ನಾನೆಂತು ಮರುಳಾದೆ ಹರಿಯೇ ಇದು ಸರಿಯೇ; ತಿಳಿಕೋ ನಿನ್ನೊಳಗೆ ನೀನೆ* - ಎಂಬ ಕೆಲವು ದೇವರನಾಮಗಳು ರಘುಪತಿ ಅಂಕಿತದಲ್ಲಿ ದೊರಕುವುದಾದರೂ, ದಾಸಚತುಷ್ಟಯದಲ್ಲಿ ಇವರಿಗೆ ಸ್ಥಾನವಿಲ್ಲದಿರುವುದನ್ನು ನೋಡಿದರೆ, ನಿಜವಾದ ಹರಿದಾಸ ಸಂಪ್ರದಾಯ ಶ್ರೀಪಾದರಾಜರಿಂದಲೇ ಆರಂಭವಾಯಿತೆಂದು ಊಹಿಸಬಹುದಾಗಿದೆ. ಆದರೂ ನರಹರಿತೀರ್ಥರ ಕೃತಿಗಳಲ್ಲಿ ಬರುವ ಕೆಲವು ವಿಚಾರಗಳು ಹರಿದಾಸ ದೀಕ್ಷೆಯ ಅಡಿಗಲ್ಲು ಎನ್ನಬಹುದು.

ಮೊದಲನೆಯದು ಅಂಕಿತ. ಹರಿದಾಸ ದೀಕ್ಷೆಯಲ್ಲಿ ಅಂಕಿತಕ್ಕೆ ಮಹತ್ವದ ಸ್ಥಾನವಿದೆ. ಇದನ್ನು ಗುರುವು ಶಾಸ್ತ್ರೋಕ್ತವಾಗಿ ಶಿಷ್ಯನಿಗೆ ನೀಡಬೇಕು. ಎರಡನೆಯದು ಗುರೂಪದೇಶ. ಗುರುವಿನ ಅನುಗ್ರಹವಿಲ್ಲದೆ ಹರಿದಾಸದೀಕ್ಷೆ ಫಲಿಸುವುದಿಲ್ಲ. ಮೂರನೆಯದು ಮಧ್ವಶಾಸ್ತ್ರದಲ್ಲಿ ಅಚಲವಾದ ನಂಬಿಕೆ ಮತ್ತು ನಿಷ್ಠೆ. ಈ ಮೂರು ಅಂಶಗಳನ್ನು ಸ್ಥೂಲವಾಗಿ ನೋಡಬೇಕಾಗುತ್ತದೆ.

ಗುರುವೆಂದರೆ ಅಜ್ಞಾನದ ತಿಮಿರವನ್ನು ಕಳೆದು ಜ್ಞಾನ ಜ್ಯೋತಿಯನ್ನು ಹೊತ್ತಿಸುವವನು ಎಂದು ಅರ್ಥ. ವಾಯುದೇವರ ಅವತಾರವಾದ ಶ್ರೀಮಧ್ವಾಚಾರ್ಯರೊಬ್ಬರೇ ಈ ಹೆಗ್ಗಳಿಕೆಗೆ ಪಾತ್ರರು. ಶ್ರೀ ಹರಿಯು ಸರ್ವೋತ್ತಮ ದೇವತೆಯಾದರೆ, ವಾಯುದೇವರು ಜೀವೋತ್ತಮರು.

ಇವರ ಮೇಲೆ ಶ್ರೀಹರಿಗೆ ವಿಶೇಷವಾದ ಅನುಗ್ರಹವಿರುವುದರಿಂದ ವಾಯುದೇವರು ಶ್ರೀಹರಿಯ ಕಾರ್ಯ ಸಾಧಕರೆನಿಸಿ ಜೀವೋತ್ತಮರೆನಿಸಿದ್ದಾರೆ. ಕೃತಯುಗಲ್ಲಿ ಜ್ಞಾನತಿರೋಧಾನವಿರಲಿಲ್ಲ. ಗುರುವಿನ ಅಗತ್ಯವಿರಲಿಲ್ಲ. ಆದರೆ ತ್ರೇತಾಯುಗದಲ್ಲಿ ರಾಕ್ಷಸರಿಂದ ಧರ್ಮಕ್ಕೆ ಕೊಡಲಿ ಪೆಟ್ಟು ಬಿದ್ದಿತು. ಧರ್ಮ ರಕ್ಷಣೆಗಾಗಿ ಶ್ರೀಹರಿಯು ಶ್ರೀರಾಮನಾಗಿ ಅವತರಿಸಿದಾಗ ವಾಯುದೇವರು ಹನುಮಂತನಾಗಿ ಜನ್ಮವೆತ್ತಿ ಶ್ರೀರಾಮನ ಸೇವೆ ಅಂದರೆ ದುಷ್ಟಶಿಕ್ಷಣ, ಶಿಷ್ಟ ಪರಿಪಾಲನ ಕಾರ್ಯದಲ್ಲಿ ನೆರವಾದರು. ದ್ವಾಪರ ಯುಗದಲ್ಲಿ ಶ್ರೀಹರಿಯು ಶ್ರೀಕೃಷ್ಣನಾಗಿ ಅವತರಿಸಿದಾಗ ಅವನ ಕಾರ್ಯದಲ್ಲಿ ಪ್ರಧಾನ ಪಾತ್ರವಹಿಸಿದವರು ಭೀಮಸೇನರು. ಮುಂದೆ ಕಲಿಯುಗದಲ್ಲಿ ವೇದವ್ಯಾಸ ದೇವರಾಗಿ ಭಗಂತನು ಅವತಾರ ಮಾಡಿದಾಗ, ಮಧ್ವಾಚಾರ್ಯರಾಗಿ ಅವತರಿಸಿ, ಅವರು ಎತ್ತಿ ಹಿಡಿದ ತತ್ವಜ್ಞಾನವನ್ನು ತಮ್ಮ ಸರ್ವಮೂಲವೆಂಬ ಕೃತಿರತ್ನಗಳಿಂದ ಸಜ್ಜನರ ಹೃದಯದಲ್ಲಿ ಬೆಳಗಿ ಯಥಾರ್ಥಜ್ಞಾನವನ್ನು ಉಂಟುಮಾಡಿದರು. ಹಿಂದಣ ಅವತಾರಗಳಲ್ಲಿ ಮಾಡಿದ್ದಂತೆ ಈ ಅವತಾರದಲ್ಲೂ ಜ್ಞಾನಕಾರ್ಯಕ್ಕೆ ಅಡ್ಡಿಯಾಗಿದ್ದ ಹಿಂದಣ ಎಲ್ಲ ಕುಮತಗಳನ್ನು ಖಂಡಿಸಿ, ತತ್ವವಾದದ ವೈಜಯಂತಿಯನ್ನು ಎಲ್ಲೆಡೆಗೆ ಮೆರೆಸಿದರು. ಅಂತಲೇ ಅವರನ್ನು ಋಜುಗಣಸ್ಥರೆಂದು ಪ್ರತೀತಿ ಇರುವ ಶ್ರೀವಾದಿರಾಜರು ಹೀಗೆ ಕೊಂಡಾಡಿದ್ದಾರೆ.

*ನಿನ್ನ ಮತವೇ ವೇದ ಶಾಸ್ತ್ರಗಳ ಸಮ್ಮತವು*
*ನಿನ್ನ ಮತವೇ ಇಹಪರಂಗಳಿಗೆ ಸಾಧನವು*
*ಪನ್ನಂಗಶಯನ ಶ್ರೀಹಯವದನ ದಾಸರೊಳು*
*ನಿನ್ನ ಪೋಲುವರುಂಟೆ ಮಧ್ವ ಮುನಿರಾಯ?*

ಹೀಗೆ ಶ್ರೀಮಧ್ವಾಚಾರ್ಯರು ನಿಜವಾದ ಅರ್ಥದಲ್ಲಿ ಜಗದ್ಗುರುವಾಗಿದ್ದಾರೆ.

*ಗುರುವಿನಿಂದಲೆ ಜ್ಞಾನಲಾಭವು । ಗುರುವಿನಿಂದಲೇ ಸಿದ್ಧಿಸಾಧ್ಯವು*
*ಗುರುಕುಲದಿ ಗುರುಸೇವೆಗೈವುದೆ ಪರಮ ಗುರುಧರ್ಮ ।*
*ಗುರುವ ಬಿಟ್ಟನ್ಯತ್ರ ಎರಗದೆ ಗುರುವಿನಿಂ ಸತ್ಕೃಪೆಯ ಪಡೆವುದು*
*ಗುರುವೆ ಸದ್ಗತಿಧಾತ ಗುರುವಿಲ್ಲದೆಯ ಹರಿ ಒಲಿಯ ॥*

*- (ಹರಿದಾಸ ದರ್ಪಣ; ರಮಾಕಾಂತ ದಾಸರು ಪು. ೮)*

ಇಂಥ ಗುರುವಿನಿಂದ ಜ್ಞಾನದೀಕ್ಷೆ ಪಡೆದವರು ಧನ್ಯರೇ ಸರಿ. ಆದರೆ ಎಲ್ಲರಿಗೂ ಇಂಥ ಗುರು ದೊರಕಬೇಕಲ್ಲ !

"ಶ್ರೀ ಲಕ್ಷ್ಮೀಪತಿಯಾದ ಪರಮಾತ್ಮನು ಸರ್ವತಂತ್ರ ಸ್ವತಂತ್ರನು. ಅನಂತ ಕಲ್ಯಾಣ ಗುಣಪೂರ್ಣನು. ಸರ್ವತ್ರ ವ್ಯಾಪ್ತನು. ವ್ಯಕ್ತಾವ್ಯಕ್ತನು. ಮುಕ್ತಾಮುಕ್ತರಿಂದ ಸೇವ್ಯನಾದವನು. ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಮುಖ್ಯ ಕಾರಣನು. ಸಚ್ಚಿದಾನಂದ ಸ್ವರೂಪನು - ಹೀಗೆ ಸರ್ವೋತ್ತಮತ್ವಾದಿ ಲಕ್ಷಣಗಳಿಂದ ಕೂಡಿದ ಆ ಪರಮಾತ್ಮನ ಜ್ಞಾನ ಕಾರಣವಾದ ವಿಷಯ ಗಳನ್ನೂ, ಜೀವನ ಅಜ್ಞಾನಾಂಧಕಾರ ನಿವೃತ್ತಿ ನಿಮಿತ್ತವಾಗಿ, ಸೂಕ್ತ ರೀತಿಯಲ್ಲಿ ವಿಚಾರ

ಪೂರ್ವಕವಾಗಿ ಮಥನ ಮಾಡಿ, ತದ್ವರಾ ಉತ್ಪನ್ನವಾದ ಜ್ಞಾನಾಗ್ನಿಯ ಬೆಳಕಿನಲ್ಲಿ ಜಾಜ್ವಲ್ಯ ಮಾನವಾದ ಪರಮಾತ್ಮನನ್ನು ಅಂತರಂಗದಲ್ಲಿ ಕಾಣಲು ಸಹಾಯಕರಾಗುವ ಸಮರ್ಥ ಬೋಧಕರೇ ತಾರಕ ಗುರುಗಳೆಂದೂ, ನಿಯತ ಗುರುಗಳೆಂದೂ ಕರೆಸಿಕೊಳ್ಳಲ್ಪಡುವರು. ಸಕಲ ಮುಕ್ತಿ ಯೋಗ್ಯ ಚೇತನರುಗಳಿಗೂ ಸಾಧನಾಂತ್ಯದಲ್ಲಿ ತಾರಕ ಮಂತ್ರೋಪದೇಶವನ್ನಿತ್ತು, ಭಗವದಾಜ್ಞಾ ಪ್ರಕಾರ ಮೋಕ್ಷವನ್ನೀಯುವ ವಾಯುದೇವರು ಮೂಲ ಗುರುಗಳೆಂದೆನಿಸಿದಾಗ್ಯೂ ಸಾಧನ ಪರರಾಗಿ ಈ ಲೋಕದಲ್ಲಿ ದೇಹವನ್ನು ಧರಿಸಿ ಬಂದಿರುವ ಸಚ್ಚೇತನರುಗಳಿಗೆ ಗುರುದ್ವಾರ ಜ್ಞಾನಪ್ರಾಪ್ತಿಯ ಉದ್ದಿಶ್ಯ ಯಾವ ಅಧಿಷ್ಠಾನದಲ್ಲಿ ಶ್ರೀಹರಿಯು ನಿಂತು ಸುಜ್ಞಾನದಾಯಕ ನಾಗುತ್ತಾನೆಯೋ, ಆ ಅಧಿಷ್ಠಾನರೂಪರಾದ ಮಹನೀಯರಲ್ಲಿಯೇ ವಾಯುದೇವರು ಗುರುಗಳೆಂದು ಕರೆಸಿ ಕೊಳ್ಳಲ್ಪಡುತ್ತಾರೆ. ಅಂಥ ಗುರುಗಳನ್ನು ಆಶ್ರಯಿಸಿ ಅವರ ಪರಮಾನುಗ್ರಹ ವನ್ನು ಸಂಪಾದಿಸುವುದೇ ಬುದ್ಧಿವಂತರ ಕರ್ತವ್ಯ."

*– (ಹರಿದಾಸ ದರ್ಪಣ; ರಮಾಕಾಂತ ವಿಠಲರು, ಪುಟ.* xiii*)*

ಆದುದರಿಂದ *ಗುರುರಹಿತ ವಿದ್ಯ ವ ಕಲಿತು ಫಲ ಬಯಸುವುದು ಬಂಜೆಗೆ ಮಕ್ಕಳಾದಂತೆ* ಎನ್ನುತ್ತಾರೆ ರಮಾಕಾಂತ ವಿಠಲರು. ಜ್ಞಾನ ಪಡೆಯಬೇಕಾದರೆ ಸದ್ಗುರುವನ್ನು ಆಶ್ರಯಿಸಿ, ಸೇವಿಸಬೇಕು.

"*ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ*" – ಎನ್ನುತ್ತಾರೆ ಪುರಂದರದಾಸರು. *ಅಂಥ ವಿದ್ಯೆ ಅಸತಿಯ ವ್ರತದಂತೆ ಚ್ಯುತವಾಗಿ ಪೋಪುದುಸದು ಗತಿಗೆ ಸಾಧನವಲ್ಲ ! ರತಿಪತಿಪಿತ ನಮ್ಮ ವಿಜಯವಿಠಲನ್ನ ಅಶಿದಯವ ಪಡೆದವರ ಶಿಷ್ಯನಾಗದೆ ಗತಿ* ಇಲ್ಲ– ಇದು ವಿಜಯದಾಸರ ಅಭಿಪ್ರಾಯ. "*ಗುರುದ್ವಾರವಿಲ್ಲದೆ ಸಾಧ್ಯ ಸಿದ್ಧನಾಗಲು ಗುರುವಾಯು ವಿಜಯವಿಠಲಗೆ ವಂದಿಸಿಬೇಡು.*"

*ಸುರವಿದ್ಯೆ ಮಾತ್ರ, ಸ್ತೋತ್ತಮರಿಂದಲ್ಲದೆ ಎರಡನೆ ಉಪದೇಶಕೊಳ್ಳಲಾಗದು । ಹರಿ ಇಚ್ಛೆಯಿಂದಲಿ ಸಂಸ್ಕಾರ ಫಲದಿಂದ ಪರಿಪರಿ ಶ್ರುತಿಗೆ ಅವಿರೋಧವಾಗಿ ಚರ್ಯತೋರಿದರಾಗದು ಮನೆಯೊಳು ಪಿತಭ್ರಾತಾ ಹಿರಿಯರಾಜ್ಞಾದಿಂದ ತಿಳಿಯಬೇಕು ಮತ್ತೆ ತತ್ತ್ವ ವಿಚಾರಿಸೊ । ದುರಿತ ದಿಂದಲಿ ನರನು ಕಡೆಗೆ ಬೀಳುವ ಕಾಣೋ । ಸುರಪಾಲಕ ತಮ್ಮ ವಿಜಯವಿಠಲರೇಯ ॥ ತಾರತಮ್ಯ ಜ್ಞಾನವ ಕೊಟ್ಟು ಪಾಲಿಸುವ ॥* – ಎನ್ನುತ್ತಾರೆ ಅವರು.

ಇನ್ನು ಅಂಕಿತ. ಶ್ರೀನಿವಾಸ ನಾಯಕರು ವ್ಯಾಸರಾಯರ ಅನುಗ್ರಹದಿಂದ ಅಂಕಿತ ಪಡೆದು ಗುರೂಪದೇಶ ಪಡೆದ ಮೇಲೆ ಪುರಂದರದಾಸರಾದುದು. ಆಗ ಅವರೆನ್ನುತ್ತಾರೆ "*ವ್ಯಾಸರಾಯರ ಚರಣ ಕಮಲ ದರುಶನವೆನಗೆ ಏಸು ಜನ್ಮದ ಸುಕೃತ ಫಲ ದೊರಕಿತೋ । ಎನ್ನ ಸಾಸಿರ ಕುಲಕೋಟಿ ಪಾವನ್ನವಾಯಿತು । ಶ್ರೀಶನ್ನ ಭಜಿಸುವುದಕ್ಕೆ ಅಧಿಕಾರಿ ನಾನಾದೆ.*"

"*ಸತಿಗೆ ಪತಿ ಇಪ್ಪಂತೆ ಜೀವಗೆ ಹಿತವನೆಣಿಸುತ ಬಿಂಬನಾಮಕ ಪತಿಕರಿಸಿ ತಾಧರಿ ಪನಾಮವೆ ಮನುಜಗಂಕಿತವು*"– ರಮಾಕಾಂತ ವಿಠಲರೆನ್ನುತ್ತಾರೆ.

"ಅಂಕಿತವಿಲ್ಲ ದ ದೇಹ ನಿಷಿದ್ಧ । ಅಂಕಿತವಿಲ್ಲ ದ ಕಾವ್ಯ ಶೋಭಿಸದು । ಅಂಕಿತವಿಲ್ಲ ದ ಇರಬಾರದು ಎಂದು ಪಂಕಜನಾಭ ಶ್ರೀಪುರಂದರ ವಿಠಲನ್ನ ಅಂಕಿತವೆನಗಿತ್ತು ಉದ್ಧ ರಿಸಿದರು ಗುರು ವ್ಯಾಸ ಮುನಿರಾಯ ॥"- ಎನ್ನುತ್ತಾ ರೆ ಪುರಂದರದಾಸರು.

"ಮನುಜಗಂಕಿತವು ಶಾಂತಿಯು ಇಲ್ಲ ದಲೆ ಅನುವಾಗಿ ಪೇಳಿದ ತತ್ವ ಗಳು ವ್ಯರ್ಥ ಕಾಣೋ ದನುಜದಲ್ಲ ಣ ವಿಜಯವಿಠಲನ ದಾಸತ್ವ ಧರಿಸೋದು ಬಹು ಕಷ್ಟ ಕಷ್ಟ"- ಇದು ವಿಜಯದಾಸರ ಭಾವನೆ.

" ನಿನ್ನ ಭಕುತಿ ಇಲ್ಲ ದೆ ತನುವೆ ವಿಷದ ಮೊಟ್ಟೆ. ನಿನ್ನ ಅಂಕಿತವಿಲ್ಲ ದ ಕವಿತೆ ವಿಷಪೂರಿತ" ಇದು ಅವರ ಸ್ಪಷ್ಟ ಅಭಿಪ್ರಾಯ.

ಗೋಪಾಲದಾಸರಂತೂ "ಚೆನ್ನ ದಾಸರ ಮನೆಯ ಕುನ್ನಿ ಎನಿಸಿ ಎನ್ನ ನಿನ್ನ ಅಂಕಿತವಿತ್ತೆ ನಿನ್ನ ಕರುಣರಸಕ್ಕೆನ್ನು ಸರಿಯುಂಟೆ ಎನ್ನಪ್ಪ ಎನ್ನಯ್ಯ ನಿನ್ನ ಕರುಣರಸಕಿನ್ನು ಸರಿಯುಂಟೆ"- ಎಂದು ಗುರುಗಳನ್ನು ಕುರಿತು ಹಾಡಿದ್ದಾರೆ.

ಇನ್ನು ದ್ವೈತಮತದ ದೀಕ್ಷೆಯು ಹರಿದಾಸ ಸಾಹಿತ್ಯದ ಅಪರಿಹಾರ್ಯವಾದ ಭಾಗ ವಾಗಿದೆ. ಹೀಗೆ ಗುರು, ಅಂಕಿತ ಮತ್ತು ದ್ವೈತ ಸಿದ್ಧಾಂತ ನಿಷ್ಠೆ -ಇವುಗಳು ಹರಿದಾಸ ದೀಕ್ಷೆಯ ತ್ರಿಪುಟಗಳೆನಿಸುತ್ತವೆ.

ನರಹರಿತೀರ್ಥರ ಕವಿತೆಯಲ್ಲಿ ಇವು ಮೂರು ಇವೆ. ಅಷ್ಟೇ ಅಲ್ಲ, ದಾಸ ಸಾಹಿತ್ಯದ ಮುಖ್ಯ ಲಕ್ಷಣಗಳಾದ ಪಶ್ಚಾತ್ತಾಪ, ಶರಣಾಗತಿ ಮತ್ತು ವೈರಾಗ್ಯ ಭಾವಗಳು ಅವರ ಕೀರ್ತನೆಗಳಲ್ಲಿ ಅಭಿವ್ಯಕ್ತಗೊಂಡಿವೆ. ಮಾತಿನಲ್ಲಿ ಹರಿದಾಸತನ, ನೀತಿಯಲ್ಲಿ ಪ್ರಭುದಾಸತನ ಎಂಬ ಅವರ ಮಾತು ಲೆಕ್ಕಿಸುವಂತೆ ಇದೆ.

ನರಹರಿತೀರ್ಥರ ಅನಂತರ ಶ್ರೀಪಾದರಾಜರ ಕಾಲದವರೆಗೆ ಸುಮಾರು ಒಂದೂವರೆ ಶತಮಾನಗಳ ಅವಧಿಯಲ್ಲಿ ಆದ್ಯರೆಂಬ ಹೆಸರಿನ ಹರಿದಾಸರು ಆಗಿ ಹೋದರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಂಥ ಹಲವು ಹರಿದಾಸರು ಅಚಲಾನಂದವಿಠಲ, ಯೋಗೇಂದ್ರವಿಠಲ, ಮುದ್ದುವಿಠಲ, ಸೊಬಗುವಿಠಲ, ಶ್ರೀರಾಮಕೃಷ್ಣದಾಸ, ವೈಕುಂಠವಿಠಲದಾಸ, ಪಾಂಡುರಂಗ ವಿಠಲ, ನರಕಂಠೀರವದಾಸ -ಮುಂತಾದವರ ಉಗಾಭೋಗಗಳು ದೊರಕಿದ್ದರೂ, ಅವರ ಬಗ್ಗೆ ಹೆಚ್ಚಿನ ವಿವರಗಳು ದೊರಕದಾಗಿದೆ. ಇವರ ಕಾಲದ ವಿಷಯದ ಬಗೆಗೂ ನಿರ್ಣಯವಾಗಿಲ್ಲ.

ಇಲ್ಲಿಂದ ಮುಂದೆ ಹರಿದಾಸ ಸಾಹಿತ್ಯದ ಸ್ವರ್ಣಯುಗದ ಮುಂಬೆಳಕನ್ನು ನಾವು ನೋಡುತ್ತೇವೆ. ದಾಸ ಸಾಹಿತ್ಯದ ಪರಂಪರೆಯ ಬೆಳವಣಿಗೆಯಲ್ಲಿ ಸಾಮಾನ್ಯವಾಗಿ ನಾಲ್ಕು ಘಟ್ಟಗಳನ್ನು ಪ್ರಸ್ತಾಪಿಸುತ್ತಾರೆ. "ಒಂದನೆಯದು ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯ ಸಂಘವು ನರಹರಿತೀರ್ಥರ ನೇತೃತ್ವದಲ್ಲಿ ಪ್ರಕಟ ಮಾಡಿದ್ದು. ಎರಡನೆಯದು ಕೃಷ್ಣದೇವರಾಯನ ಕಾಲದಲ್ಲಿ ಪುರಂದರದಾಸರು, ಕನಕದಾಸರು ವ್ಯಾಸರಾಯರ ಗುರುತ್ವದಲ್ಲಿ ಅಭಿವ್ಯಕ್ತಗೊಳಿಸಿದ್ದು. ಮೂರನೆಯದು ವಿಜಯದಾಸ ಮುಂತಾದ ದಾಸ ವೃಂದವು ಸೃಷ್ಟಿ ಮಾಡಿದ್ದು, ನಾಲ್ಕನೆಯದು

ಪ್ರಾಣೇಶ, ಗುರುಪ್ರಾಣೇಶ ಮುಂತಾದ ದಾಸರು ರಚಿಸಿದ್ದು" - ಎಂದು ಶ್ರೀ.ರಾ.ಸ್ವಾ.ಪಂಚಮುಖಿ ಯವರು ಹರಿದಾಸ ಸಾಹಿತ್ಯ ಗ್ರಂಥದಲ್ಲಿ ಗುರುತಿಸಿದ್ದಾರೆ.

ಶ್ರೀಪಾದರಾಯರು ವ್ಯಾಸ ಹರಿದಾಸ ಸಾಹಿತ್ಯಕ್ಕೆ ಮಾಡಿದ ಸೇವೆ ಅಮೋಘವಾದುದು. ಅವರು ವಾಗ್ವಜ್ರವೆಂಬ ವ್ಯಾಸ ಸಿದ್ಧಾಂತ ಪರಿಪೂರಿತವಾದ ಪ್ರೌಢ ಗ್ರಂಥವನ್ನು ರಚಿಸಿದಂತೆ, ನೂರಾರು ಸುಂದರ ಹಾಡುಗಳನ್ನು, ದೇವರನಾಮಗಳನ್ನೂ ಕನ್ನಡದಲ್ಲಿ ರಚಿಸಿ, ಅದನ್ನು ಸಂಸ್ಥಾನದ ಪೂಜಾ ಸಮಯದಲ್ಲಿ ಹಾಡುವ ಸಂಪ್ರದಾಯವನ್ನು ಬಳಕೆಗೆ ತಂದರು. ಇವರು ವ್ಯಾಸರಾಯರಂಥ ಮಹಾನುಭಾವರನ್ನು ಹರಿದಾಸ ಸಾಹಿತ್ಯಕ್ಕೆ ಕೊಡುಗೆಯಾಗಿ ನೀಡಿದರು. ಶ್ರೀಪಾದರಾಜರೂ, ವ್ಯಾಸರಾಯರ ಗುರುಗಳಾದ ಬ್ರಹ್ಮಣ್ಯತೀರ್ಥರೂ, ಶ್ರೀಪಾದರಾಜರ ಗುರುಗಳಾದ ಸ್ವರ್ಣವರ್ಣತೀರ್ಥರೂ ಸಹೋದರಿಯರ ಮಕ್ಕಳೆಂದು ಹೇಳುತ್ತಾರೆ. ದಾಸ ಪಂಥ ಅವರ ಕಾಲದಲ್ಲಿ ಬಾಂಧವ್ಯದ ಬೆಸುಗೆಯನ್ನು ಬೆಸೆದಿತ್ತು. ಈ ಬಗ್ಗೆ ಬರೆಯುತ್ತ ಡಾ॥ಬಿ. ಎನ್.ಕೆ. ಶರ್ಮ ಅವರು ಹೀಗೆ ಹೇಳಿದ್ದಾರೆ.

"According to a tradition, recorded in the Brahmanya Tirtha Vijaya the mothers of Brahmanya and Sripadaraja were utrine sisters. The cousins were probably of the same age. It is remarkable that both should have renounced the world and devoted themselves to the cause of thier faith and played a conspicuous part in the spiritual development of their gifted disciple Vyasaraya."

ಶ್ರೀಪಾದರಾಜರು ತಮಿಳುನಾಡಿನ ಆಳ್ವಾರುಗಳು ವೈಷ್ಣವ ಮಂದಿರಗಳಲ್ಲಿ ನಡೆಸುತ್ತಿದ್ದ ಪ್ರಬಂಧ ವಾಚನಗಳಿಂದ ಪ್ರಭಾವಿತರಾಗಿ, ಈ ಪದ್ಧತಿಯನ್ನು ತಮ್ಮ ಭಾಗದಲ್ಲೂ ಪ್ರಚಾರಕ್ಕೆ ತಂದರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹೀಗೆ ಅವರು ಅನೇಕ ದೇವರ ನಾಮಗಳನ್ನೂ, ಉಗಾಭೋಗ, ಸುಳಾದಿ, ವೃತ್ತನಾಮಗಳನ್ನೂ ರಚಿಸಿದುದಲ್ಲದೆ, ಭ್ರಮರಗೀತೆ, ಗೋಪೀ ಗೀತೆಗಳನ್ನು ಕುರಿತು ಕನ್ನಡದಲ್ಲಿ ಶೃಂಗಾರ ಪೂರ್ಣವಾದ, ಚಿತ್ತಾಕರ್ಷಕವೆನಿಸುವ ಮಂಜುಳ ಗೀತೆಗಳನ್ನು ರಚಿಸಿ, ಶಿಷ್ಯರಾದ ವ್ಯಾಸರಾಯರಿಗೆ ಮಾರ್ಗದರ್ಶನ ಮೇಲ್ಪಂಕ್ತಿ ಹಾಕಿಕೊಟ್ಟರು.

ವ್ಯಾಸರಾಯರು ತಮ್ಮ ಗುರುಗಳಂತೆ ವ್ಯಾಸ ಸಾಹಿತ್ಯ ಹಾಗೂ ಹರಿದಾಸ ಸಾಹಿತ್ಯಗಳಿಗೆ ಶ್ರೇಷ್ಠ ಕಾಣಿಕೆ ನೀಡಿದರು. ಅವರು ತಾತ್ಪರ್ಯ ಚಂದ್ರಿಕಾ, ನ್ಯಾಯಾಮೃತ ಮತ್ತು ತರ್ಕತಾಂಡವ ದಂಥ ಪ್ರೌಢ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದರೂ, ಕನ್ನಡದಲ್ಲಿ ಅತ್ಯಂತ ಸುಂದರ, ಭಾವಗೀತೆ ಯಂಥ ದೇವರ ನಾಮಗಳನ್ನು ರಚಿಸಿದರು. ಇವರ ಕಾಲದಲ್ಲಿ ವ್ಯಾಸಕೂಟ, ದಾಸಕೂಟಗಳು ವ್ಯವಸ್ಥೆಗೊಂಡು ನಾಡು ನುಡಿಗಳಿಗೆ ಶ್ರೇಷ್ಠ ಕಾಣಿಕೆಗಳು ನೀಡಲ್ಪಟ್ಟಿತು. ಇವರ ಶಿಷ್ಯರೇ ಪುರಂದರದಾಸರು. ನಾರದಾಂಶ ಸಂಭೂತರೆಂದು ಇವರು ಪ್ರಸಿದ್ಧರಾಗಿದ್ದಾರೆ. ಇವರು ಸಾಹಿತ್ಯ ಸಂಗೀತ, ಶಾಸ್ತ್ರಗಳೆಂಬ ತ್ರಿವೇಣಿ ಸಂಗಮದಲ್ಲಿ ತಮ್ಮ ಹರಿದಾಸ ಸಾಹಿತ್ಯವನ್ನು ಪುನೀತ ಗೊಳಿಸಿದರು. ಇವರು ಸ್ವಪ್ನದಲ್ಲಿ ನೀಡಿದ ಅಂಕಿತ ಹಾಗೂ ಉಪದೇಶದಿಂದ ವಿಜಯದಾಸರು

ಉದ್ಧಾರವಾದರು. ವ್ಯಾಸ ಕಾಶಿಯಲ್ಲಿದ್ದಾಗ, ಪುರಂದರ ದಾಸರ ಕರುಣೆಯಿಂದ ವಿಜಯದಾಸರಿಗೆ ಅಪರೋಕ್ಷ ಜ್ಞಾನವಾಯಿತು. ಈ ನಾಲ್ವರು ಹರಿದಾಸ ಸಾಹಿತ್ಯಕ್ಕೆ ನೀಡಿದ ಸೇವೆಯನ್ನು ಆಸ್ತಿಕರೆಲ್ಲರೂ ಇಂದಿಗೂ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

*ನಮಃ ಶ್ರೀ ಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।*
*ನಮಃ ಪುರಂದರಾರ್ಯಾಯ ವಿಜಯಾರ್ಯಾಯತೇ ನಮಃ ॥*

ವ್ಯಾಸರಾಯರು ಮಾಡಿದ ಮಹತ್ಕಾರ್ಯವನ್ನು ವಿದ್ವಾಂಸರಾದ ಬಿ. ಎನ್.ಕೆ. ಶರ್ಮ ಅವರು ಹೀಗೆ ಸಂಗ್ರಹಿಸಿದ್ದಾರೆ.

"Vyasaraya is the prince of dialecticians of Dvaita system. We find in his works profoundly wide knowledge of ancient and contemporary systems of thought and an anstonishingly brilliant intellet coupled with rare clarity and incisiveness of thought and expression. He has the ability to marshal vast quantity of factual material and extraordianary ramifications of thought in to half a dozen propositions, couched interse, vigorous and energetic phases. His works embody the highest achievements of Dvaita philosophy in the spheres of consturctive exposition of the Siddhanta and an up to date dialectic view and criticism of the views of all the prominent rival systems, in all their ramifications of thought and interpretation. He carried forward the work of his distinguished predecessors Madhva, Jayatirtha and Visnudasa and explored and exhausted all the technical and sastric possibilities of making the doctrines and interpretaitons of his school inpieregnable and invulnerable to attacks from any quarter." -ಹೀಗೆ ವ್ಯಾಸರಾಯರ ಸ್ಥಾನವನ್ನು ಕುರಿತು ಹೇಳುತ್ತಾ ಅವರು Das Gupta pays him the highest tribute -ಎಂದು ನುಡಿದಿದ್ದಾರೆ.

ಇಂಥವರ ಶಿಷ್ಯರಾಗಿ, ಪುರಂದರದಾಸರು ಅಸಂಖ್ಯಾತ ದೇವರ ನಾಮಗಳನ್ನೂ ರಚಿಸಿ, ಗುರುಗಳಿಂದಲೇ ಪುರಂದರೋಪನಿಷತ್ತು- ಎಂಬ ಹೆಗ್ಗಳಿಕೆಗೆ ಪಾತ್ರರಾದರು.

ಪುರಂದರದಾಸರು ಮಾಡಿದ ಮಹತ್ ಕಾರ್ಯವನ್ನು ಬೆಂಗೇರಿ ಹುಚ್ಚೂರಾಯರು ಹೀಗೆ ಸಂಗ್ರಹಿಸಿದ್ದಾರೆ.

೧) ಶ್ರೀ ಪುರಂದರದಾಸರು ಹರಿದಾಸ ಕೂಟದಲ್ಲಿ ಸರ್ವಶ್ರೇಷ್ಠರೆಂದು ಹೊಗಳಿಸಿ ಕೊಳ್ಳುವ ಸದ್ಭಕ್ತರು.

೨) ಹೊಸತಾಗಿ ದ್ವೈತಮತ ದೀಕ್ಷೆಯನ್ನು ಪಡೆದವರಾದರೂ (?) ಅದರ ತತ್ವಗಳಲ್ಲಿ ಪರಿಣತಿಯನ್ನು ಪಡೆದ ತತ್ವಜ್ಞಾನಿಗಳು.

೩) ಭಕ್ತಿ ಮತ್ತು ತತ್ವಗಳನ್ನು ಸರ್ವ ಸಾಮಾನ್ಯರಿಗೂ ತಿಳಿಸಬೇಕೆಂದು ತಿಳಿಗನ್ನಡದಲ್ಲಿ ಉತ್ತಮ ಸಾಹಿತ್ಯವನ್ನು ರಚಿಸಿದ ಜನತಾ ಸಾಹಿತ್ಯಕರು.

೪) ಸಂಗೀತ ಶಾಸ್ತ್ರದಲ್ಲಿ ಕೂಲಂಕಷ ಜ್ಞಾನವನ್ನು ಪಡೆದ ಶ್ರೇಷ್ಠ ವಾಗ್ಗೇಯಕಾರರು.

೫) ಜನಸಾಮಾನ್ಯರ ಮನಸ್ಸು, ಬುದ್ಧಿ, ಹೃದಯಗಳು ವಿಕಾಸವಾಗುವಂತೆ ಜೀವನ ಧರ್ಮವನ್ನು ಬೋಧಿಸಿ ಅವರಲ್ಲಿ ಮಾನವಭಾವ ಜಾಗೃತಗೊಳ್ಳುವಂತೆ ಮಾಡಿದ ಸಂಸ್ಕೃತಿ ಶಿಕ್ಷರು.

- *(ಪೂಜಾತತ್ವ-ಪುರಂದರದಾಸರ ಕೃತಿ ಸಂಗ್ರಹ)*

ಪುರಂದರದಾಸರನ್ನು ದಕ್ಷಿಣಾತ್ಯ ಸಂಗೀತದ ಪಿತಾಮಹರೆಂದು ಕರೆಯುತ್ತಾರೆ. ಅವರ ಪ್ರಭಾವ ತ್ಯಾಗರಾಜರ ಹಾಗೂ ಕ್ಷೇತ್ರಜ್ಞರಂಥವರ ಮೇಲೆ ಬಿದ್ದಿರುವುದೆಂದರೆ ಅವರ ಕೃತಿರಚನೆಯಲ್ಲಿನ ವಾಗ್ಗೇಯ ಗುಣ ಎಂಥದೆಂಬುದನ್ನು ಊಹಿಸಿಕೊಳ್ಳಬಹುದು.

Purandaradasa has been justly termed the father of carnatic music, He was not merely a composer, but a Lakshanakara of highest calibre. The system of South Indian Music as we now have, it is entirely his gift.-ಎಂಬುದಾಗಿ ಮದರಾಸ್ ಮ್ಯೂಸಿಕ್ ಅಕ್ಯಾಡಮಿ ಪತ್ರಿಕೆಯಲ್ಲಿ (1942) ಹೆಸರಾಂತ ಸಂಗೀತ ವಿಮರ್ಶಕರೊಬ್ಬರು ಬರೆದಿರುವುದನ್ನು ಓದಿದರೆ ಯಾರಿಗೆ ತಾನೆ ಹೆಮ್ಮೆ ಎನಿಸುವುದಿಲ್ಲ.

- *(ಹರಿದಾಸ ಸಾಹಿತ್ಯ ; ಬೇಲೂರು ಕೇಶವದಾಸರು. ಪುಟ 31)*

ಪುರಂದರದಾಸರು ಅನುಭಾವಿಗಳು, ಅನುಭವಿಗಳು. ಉತ್ತಮ ಲೋಕ ಬೋಧಕರು. ಇವರಿಗೆ ಎರಡನೆಯವರಾಗಿ ನಿಲ್ಲತಕ್ಕವರು ಕನಕದಾಸರು. ಇವರು ಮೊದಲು ಶ್ರೀವೈಷ್ಣವರಾಗಿ ಅನಂತರ ವ್ಯಾಸರಾಯರ ಪ್ರಭಾವದಿಂದ ದ್ವೈತಮತಕ್ಕೆ ಪರಿವರ್ತಿತರಾದವರು. ಇವರು ಮೋಹನ ತರಂಗಿಣಿ ಎಂಬ ಸಾಂಗತ್ಯವನ್ನೂ, ನಳಚರಿತ್ರೆ, ಹರಿಭಕ್ತಿಸಾರ, ರಾಮಧ್ಯಾನ ಚರಿತ್ರೆಗಳೆಂಬ ಕಾವ್ಯಗಳನ್ನೂ ಬರೆದಿರುವುದಲ್ಲದೆ ನೂರಾರು ಶ್ರೇಷ್ಠ ಆಧ್ಯಾತ್ಮ ರಸದಿಂದ ಮಿಡಿಯುವ ದೇವರ ನಾಮಗಳನ್ನು ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ಬರೆದಿದ್ದಾರೆ. ಇವರಿಬ್ಬರೂ ಗೃಹಸ್ಥ ಶಿಷ್ಯರಾಗಿದ್ದು ಶ್ರೀ ವ್ಯಾಸರಾಯರಿಂದ ಗೌರವಾದರಗಳಿಗೆ ಪಾತ್ರರಾಗಿದ್ದರು.

ವ್ಯಾಸರಾಜರ ಇನ್ನೊಬ್ಬ ವಿದ್ಯಾ ಶಿಷ್ಯರೆಂದರೆ ವಾದಿರಾಜರು. ಇವರು ವಿಷ್ಣುತೀರ್ಥ ಪರಂಪರೆಯ ವಾಗೀಶತೀರ್ಥರ ಶಿಷ್ಯರು. ಇವರು ವ್ಯಾಸ ಹರಿದಾಸ ಸಾಹಿತ್ಯಕ್ಕೆ ಶ್ರೇಷ್ಠ ಗ್ರಂಥಗಳ ಕೊಡುಗೆ ನೀಡಿದ್ದಾರೆ. ಇವರು ಸೋದೆಯಲ್ಲಿ ಬೃಂದಾವನಸ್ಥರಾಗುವ ಮುನ್ನ ನೂರಾ ಇಪ್ಪತ್ತು ವರ್ಷಗಳ ಕಾಲ ಜೀವಿಸಿದ್ದರು. ಐದು ಪರ್ಯಾಯಗಳನ್ನು ಕಂಡಿದ್ದ ಮಹಾತ್ಮರು. ಇವರು ಹರಿಸರ್ವೋತ್ತಮತ್ವ ಸಾರ, ಗುಂಡಕ್ರಿಯೆ, ವೈಕುಂಠವರ್ಣನೆ, ಸ್ವಪ್ನಪದ -ಮುಂತಾದಾ ಖಂಡಕಾವ್ಯಗಳನ್ನು ರಚಿಸಿರುವುದಲ್ಲದೆ ಲಕ್ಷ್ಮೀಶೋಭನವೆಂಬ ಸಾಂಗತ್ಯ ಗ್ರಂಥ ಬರೆದಿದ್ದಾರೆ. ಸಂಸ್ಕೃತದಲ್ಲಿ ಉದ್ದಾಮ ಪಂಡಿತರಾಗಿದ್ದ ಇವರು ಯುಕ್ತಿ ಮಲ್ಲಿಕಾ, ರುಕ್ಮೀಣೀಶವಿಜಯ, ಸರಸಭಾರತಿ ವಿಲಾಸ -ಮುಂತಾದ ಪಾಂಡಿತ್ಯ ಕವಿತಾ ಚಾತುರ್ಯ, ಶಾಸ್ತ್ರ ಪ್ರೌಢಿಮೆಗಳಿಂದ ಕೂಡಿದ ಗ್ರಂಥಗಳನ್ನು ಬರೆದು ಆಚಾರ್ಯ ಪುರುಷರೆನಿಸಿದ್ದಾರೆ. ಇವರ ಬಗ್ಗೆ ಬರೆಯುತ್ತಾ ಡಾ.ಬಿ.ಎನ್.ಕೆ. ಶರ್ಮರು-

"Vadiraja is the most facile writer in Dvaita literature. His fine poetic faculty and human touch, the quick flashes of wit and humour his apt

analogics from life and literature and his racy way of putting things have made him the most popular and enthusiastically applauded writer in Dvaita literature.... He was a many sided personality. He was a sound scholar, a great controversilist, a successful organiser and a gifted religious poet, both in Sanskrit and Kannada"- ಎಂದಿದ್ದಾರೆ.

ವಾದಿರಾಜರಂತೆಯೇ ಇನ್ನೊಬ್ಬ ಸನ್ಯಾಸಿ ಶಿಷ್ಯರು ವಿಜಯೀಂದ್ರರು. ಇವರು ವಾಸ್ಯ ಸಾಹಿತ್ಯ - ಹರಿದಾಸ ಸಾಹಿತ್ಯಗಳೆರಡರಲ್ಲೂ ಸವ್ಯಸಾಚಿಗಳಾಗಿದ್ದರು. ಇವರು ೧೦೪ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆಂದು ಹೇಳುತ್ತಾರೆ. ಇವರು ವಿಜಯರಾಮವಿಠಲ ಅಂಕಿತದಲ್ಲಿ ಅನೇಕ ದೇವರ ನಾಮಗಳನ್ನು ಬರೆದಂತೆ ತಿಳಿಯುತ್ತದೆ. ಇವು ನಮ್ಮ ದುರ್ದೈವದಿಂದ ಉಪಲಬ್ಧವಿಲ್ಲ. ಇವರು ಮಾಡಿದ ಸೇವೆಯನ್ನು ಕುರಿತು ಬಿ.ಎನ್.ಕೆ.ಶರ್ಮ ಅವರು ಹೀಗೆ ಬರೆದಿದ್ದಾರೆ.

"He was the bulwark of Madhva school in the south during the age of Nayak rule in the Tamil country. But for his timely service in defence of the system against the combined onslaughts of powerful Advaitic and Visistadvaitic and Saiva Revivalists, the Madhva school would have been practically wiped out of existence in Tamilnad."

ವ್ಯಾಸರಾಯರ ಕಾಲವನ್ನು ದಾಸ ಸಾಹಿತ್ಯದ ಸ್ವರ್ಣಯುಗವೆಂದು ಕರೆಯಬಹುದಾಗಿದೆ. ಅವರ ಕಾಲದಲ್ಲಿ ವಿಶೇಷವಾಗಿ ದಾಸ ಸಾಹಿತ್ಯ, ವಿದ್ಯಾ ಪೋಷಣೆಗಳಾದವು. ಅವರ ವಿಶ್ವಪಾವನ ಮಠವು ಅಂದಿನ ವಿದ್ಯಾ ಜಗತ್ತಿನ ಕೇಂದ್ರ ಬಿಂದುವಾಗಿತ್ತು. ಸಾಹಿತ್ಯ, ಸಂಸ್ಕೃತಿ, ಕಲೆ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿ ಆ ಕಾಲದ ಸಮಾಜ ವೈಭವದ ಶಿಖರವನ್ನು ಮುಟ್ಟಿತ್ತು. ಆದರೆ ಪುರಂದರದಾಸರ ಅವಸಾನವಾದ ಒಂದೇ ವರ್ಷದಲ್ಲಿ ಅಂದರೆ ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯವು ರಕ್ಕಸತಂಗಡಿ ಯುದ್ಧದಲ್ಲಿ ಸಮಸ್ತವನ್ನು ಕಳೆದುಕೊಂಡು, ಹಾಳು ಹಂಪೆಯಾಗಿ ಮಾರ್ಪಡುವಂತಾದುದು ವಿಧಿಯ ವಿಡಂಬನೆಯೇ ಸರಿ.

ಈ ಸಾಮ್ರಾಜ್ಯ ಪತನವಾದ ನೂರು ವರ್ಷಗಳವರೆಗೆ ಅಂದರೆ ವಿಜಯದಾಸರ ಅವತಾರವೆತ್ತುವವರೆಗೆ ಹರಿದಾಸ ಸಾಹಿತ್ಯವು ಸಮಸ್ತ ಸೌಭಾಗ್ಯವನ್ನು ಕಳೆದುಕೊಂಡ ಸುಮಂಗಲಿಯಂತಾಗಿತ್ತು. ವಿಜಯದಾಸರ ಅವತಾರದೊಂದಿಗೆ ಬತ್ತಿ ಹೋಗಿದ್ದ ತೊರೆಗೆ ಹೊಸ ನೀರು ಬರುವಂತೆ ಆಯಿತು. ಬರಡಾಗಿದ್ದ ದಾಸಸಾಹಿತ್ಯ ಕ್ಷೇತ್ರದಲ್ಲಿ ಹೊಸ ಚಿಗುರು, ಹಸಿರು ತಲೆ ಎತ್ತುವಂತೆ ಆಯಿತು.

ವಿಜಯದಾಸರ ಬಗ್ಗೆ ಕೆಲವು ವಿಷಯಗಳನ್ನು ಕೂಲಂಕುಷವಾಗಿ ಇಲ್ಲಿ ವಿವರಿಸುವುದು ಅವಶ್ಯಕವಾಗಿದೆ.

೭

ವಿಜಯದಾಸರು ಭೃಗು ಋಷಿಗಳ ಅವತಾರವೆಂದು ಹೇಳುತ್ತಾರೆ. ಇವರಿಗೆ ದಾಸಪ್ಪನೆಂದು ಹೆಸರಿತ್ತು. ಹೆಚ್ಚು ವಿದ್ಯಾಬುದ್ಧಿ ಇಲ್ಲದ ಇವರನ್ನು ಕೂಸೀಮಗ ದಾಸನೆಂದು ಹೀಯಾಳಿಸುತ್ತಿದ್ದರು. ಇಂಥವರ ಮೇಲೆ ವ್ಯಾಸ ಕಾಶಿಯಲ್ಲಿ ಪುರಂದರದಾಸರ ವಿಶೇಷ ಅನುಗ್ರಹ ಪ್ರಾಪ್ತವಾಗಿ, ಅಪರೋಕ್ಷ ಜ್ಞಾನಿಗಳಾದರು. ಇವರು ಪುರಂದರದಾಸರ ನಾಲ್ವರು ಮಕ್ಕಳಲ್ಲಿ ಒಬ್ಬರಾದ ಮಧ್ವಪತಿಯ ಅವತಾರವೆಂದೂ ಹೇಳುತ್ತಾರೆ. ಇವರು ಅಸಂಖ್ಯಾತ ಕೃತಿಗಳನ್ನು ರಚಿಸಿದ್ದರೂ, ಪುರಂದರದಾಸರ ಕೃತಿಗಳಂತೆ ಅವು ನಷ್ಟವಾಗಿವೆ. ಈಗ ಉಪಲಬ್ಧವಿರುವ ಕೃತಿಗಳ ಮೇಲಿಂದ ಇವರು ಹರಿದಾಸ ಸಾಹಿತ್ಯಕ್ಕೆ ಮಾಡಿದ ಸೇವೆಯನ್ನು ನೆನೆದರೆ ಇವರನ್ನು ಕಾರಣ ಪುರುಷರೆನ್ನಬೇಕಾಗುತ್ತದೆ. ಇವರ ಸುಳಾದಿಗಳು ಮಧ್ವಶಾಸ್ತ್ರ ವಾಙ್ಮಯದ ಕನ್ನಡ ರೂಪವೆಂದು ಹೇಳಬಹುದು. ಇವರು ಚಿಕಲಪರಿವಿಯಲ್ಲಿ ಹುಟ್ಟಿ ಗುಂತಕಲ್ಲಿನ ಬಳಿಯ ಚಿಪ್ಪಗಿರಿಯಲ್ಲಿ ನಿರ್ಯಾಣರಾದರು. ಇಂದಿಗೂ ಇವರ ಕಟ್ಟೆ ಹರಿದಾಸರೆಲ್ಲರೂ ನೆರೆಯುವ ಪವಿತ್ರ ಯಾತ್ರಾ ಸ್ಥಳವಾಗಿದೆ. ಅವರ ಪ್ರಭಾವ ಇಂದಿಗೂ ಮಸಳಿಸದಾಗಿದೆ.

ವಿಜಯದಾಸರ ಸಮಕಾಲೀನರಾದ ಆನಂದದಾಸರು, ಗೋಪಾಲದಾಸರು, ಮೋಹನ ದಾಸರು ಮತ್ತು ಜಗನ್ನಾಥದಾಸರು. ಅನಂತರ ಸ್ವಪ್ನಮುಖೇನ ಅಂಕಿತ ಪಡೆದ ಮೊದಲಕಲ್ಲು ಶೇಷದಾಸರು (ಗುರುವಿಜಯ ವಿಠಲರು) ವಿಜಯದಾಸರನ್ನು ಕುರಿತು ಮಾಡಿರುವ ಸ್ತೋತ್ರ ಸಾಹಿತ್ಯದಿಂದ ಅವರ ವ್ಯಕ್ತಿತ್ವ ಹಾಗೂ ಪ್ರಭಾವ ಮುದ್ರೆಯನ್ನು ಗುರುತಿಸಬಹುದಾಗಿದೆ.

"ಅವರು ಪುರಂದರದಾಸರ ಮೇಲ್ಪಂಕ್ತಿಯನ್ನು ಅನುಸರಿಸಿ ಪದಸುಳಾದಿ ಮತ್ತು ಉಗಾಭೋಗಗಳ ತುಂಬು ಹೊಳೆಯನ್ನೇ ಹರಿಸಿದರು. ಹರಿದಾಸರ ಬಳಗವನ್ನೇ ಸಿದ್ಧಪಡಿಸಿದರು. ಹಿಂದೂಸ್ಥಾನದ ಸಮಸ್ತ ಯಾತ್ರಾ ಸ್ಥಳಗಳನ್ನೆಲ್ಲ ಮತ್ತೆ ಮತ್ತೆ ಸಂಚರಿಸಿ ನಿಂತ ನಿಲುವಿನಲ್ಲಿ ಸಾವಿರಾರು ಕೃತಿಗಳನ್ನೂ ರಚಿಸಿ, ಕಟ್ಟ ಕಡೆಯಲ್ಲಿ ಗುಂತಕಲ್ಲಿನ ಸಮೀಪದಲ್ಲಿರುವ ; ಚಿಪ್ಪಗಿರಿ ಎಂಬ ಪವಿತ್ರ ಕ್ಷೇತ್ರದಲ್ಲಿ ವೈಕುಂಠವಾಸಿಗಳಾದರು. ಸುಮಾರು ಎಪ್ಪತ್ತು ವರ್ಷಗಳ ಕಾಲ (ಕ್ರಿ.ಶ.೧೬೮೭ - ೧೭೫೫) ಜೀವಿಸಿದ್ದ ಈ ಮಹಾಮಹಿಮರು ಹರಿದಾಸ ಪ್ರಪಂಚದಲ್ಲಿ ಅತ್ಯಂತ ಹಿರಿಯ ಶ್ರೇಣಿಗೆ ಸೇರಿದವರಾಗಿದ್ದಾರೆ. ಅವರ ವಿಪುಲವಾದ ಕೃತಿ ಸಂಖ್ಯೆಯಷ್ಟೇ ಇವರ ಶಾಸ್ತ್ರ ಜ್ಞಾನವೂ ಸಹ ಅಸೀಮವಾದುದು"- ಎಂದಿದ್ದಾರೆ ಡಾ.ಜಿ. ವರದರಾಜರಾಯರು.

- (*ದಾಸ ಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ, ಪು. ೩*).

ವಿಜಯರಾಯರು ತಮ್ಮ ಕೃತಿಗಳ ಮೂಲಕ ವಿಶೇಷವಾಗಿ "ಸುಳಾದಿಗಳ ಮೂಲಕ ಬಹು ಜಟಿಲವಾದ ಮಧ್ವಶಾಸ್ತ್ರದ ಸೂಕ್ಷ್ಮವಾದ ಪ್ರಮೇಯಗಳನ್ನು, ಧ್ಯಾನ ಉಪಾಸನಾ ಪ್ರಕಾರಗಳನ್ನು, ತೀರ್ಥಕ್ಷೇತ್ರ ಮಹಿಮೆಗಳನ್ನು, ಚಕ್ರಾಬ್ಜಾದಿ ಮಂಡಲ ಮುಂತಾದ ಮಂತ್ರ ರಹಸ್ಯಗಳನ್ನೂ ತಿಳಿಸಿರುವರು. ಭಗವದಪರೋಕ್ಷಿಗಳಾಗಿದ್ದ ಇವರ ದರ್ಶನ, ಸ್ಪರ್ಶನ, ಸಂಭಾಷಣಗಳಿಂದ ಅನೇಕರ ಉದ್ಧಾರವಾಯಿತು."

ಇವರ ಶಿಷ್ಯರೇ ಗೋಪಾಲದಾಸರು. ಇವರಿಗೆ ಭಾಗಣ್ಣ ಎಂಬ ಇನ್ನೊಂದು ಹೆಸರು ಇತ್ತು. ಭಕ್ತಿಯಲ್ಲಿ ಭಾಗಣ್ಣ ಹೆಸರಾಗಿದ್ದ. ಚಿಕ್ಕಂದಿನಲ್ಲಿ ಪಿತೃವಿಯೋಗವಾಗಿ, ತಾಯಿಯು ಮಕ್ಕಳನ್ನು ಬಹಳ ಕಷ್ಟದಿಂದ ಸಾಕಿದಳು. ಬಡತನದ ಬೇಗೆಯಲ್ಲಿ ಬೆಂದಿದ್ದ ಇವನಿಗೆ ಹೆಚ್ಚು ವಿದ್ಯಾಭ್ಯಾಸ ದೊರಕಲಿಲ್ಲ. ಆದರೆ ಗಾಯತ್ರಿಮಂತ್ರ ಸಿದ್ಧಿ ದೊರಕಿದ ಮೇಲೆ, ವಿಜಯದಾಸರಿಂದ ಅನುಗ್ರಹಿತರಾಗಿ, ಸಕಲ ವೇದಾರ್ಥವನ್ನು ಅರಿತು ಮಹಾಜ್ಞಾನಿಗಳಾದರು. ವೈರಾಗ್ಯ ಶಿಖಾಮಣಿಗಳಾದ ಇವರು ತಮ್ಮ ಗುರುಗಳಾದ ವಿಜಯದಾಸರ ಸೂಚನೆಯಂತೆ ತಮ್ಮ ಆಯುಷ್ಯದ ನಲವತ್ತು ವರ್ಷಗಳನ್ನು ಜಗನ್ನಾಥದಾಸರಿಗೆ ಧಾರೆ ಎರೆದು, ಅವರಿಂದ ಹರಿಕಥಾಮೃತಸಾರ ದಂಥ ಮೇರು ಕೃತಿ ರಚನೆಯಾಗಲು ಕಾರಣರಾದರು. ಇವರು ಹೆಳವನಕಟ್ಟೆ ಗಿರಿಯಮ್ಮನಿಗೆ ಶ್ರೀಕೃಷ್ಣನ ದರ್ಶನ ಮಾಡಿಸಿದ್ದ ಮಹಾಮಹಿಮರು. ಸಾಕ್ಷಾತ್ ಗಣೇಶಾಂಶರೆಂದು ಪ್ರಖ್ಯಾತಿ ಪಡೆದಿದ್ದಾರೆ. ಕ್ರಿ.ಶ. ೧೭೬೫ರಲ್ಲಿ ಇವರು ಆಂಧ್ರ ಪ್ರದೇಶದ ಐಜಿ ಬಳಿ ಇರುವ ಉತ್ತನೂರಿನಲ್ಲಿ ನಿರ್ಯಾಣ ಹೊಂದಿದರೂ, ಇವರ ಶಾಸ್ತ್ರಾರ್ಥಗರ್ಭಿತವಾದ ಸುಳಾದಿಗಳೂ, ಚಿತ್ರಕಲೆಯೂ ಹರಿದಾಸರಲ್ಲೆಲ್ಲಾ ಖ್ಯಾತಿನಾಮರನ್ನಾಗಿ ಮಾಡಿದೆ.

ಮೋಹನದಾಸರು ವಿಜಯದಾಸರ ವಿಶೇಷವಾದ ಅಭಿಮಾನ, ಅನುಗ್ರಹಕ್ಕೆ ಪಾತ್ರರಾದ ಇನ್ನೊಬ್ಬ ಹರಿದಾಸರು. ಇವರು ೨೧೨ ನುಡಿಗಳಲ್ಲಿ ಮಾಡಿದ ಮಧ್ವ ಸಿದ್ಧಾಂತವನ್ನು ಗರ್ಭೀಕರಿಸಿ ಕೊಂಡ ಕೋಲುಹಾಡು ಗ್ರಂಥ ಅತ್ಯಂತ ಪ್ರಸಿದ್ಧವಾಗಿರುವ ಸಾಂಗತ್ಯ ರೂಪವಾಗಿದೆ.

ವಿಜಯದಾಸರ ಸಮಕಾಲೀನರೂ, ಶಿಷ್ಯರೂ ಆಗಿದ್ದ ಇನ್ನೊಬ್ಬ ಸತ್ವಶಾಲಿ ಹರಿದಾಸರೆಂದರೆ ಆದವಾನಿಯ ಪಂಗನಾಮದ ತಿಮ್ಮಣ್ಣನವರು. ಇವರು ಪುರಂದರದಾಸರ ಸಮಕಾಲೀನರಾಗಿದ್ದ, ಬೇಲೂರಿನ ಸುಪ್ರಸಿದ್ಧ ಶ್ರೀವೈಷ್ಣವ ಹರಿದಾಸರಾಗಿದ್ದ ವೈಕುಂಠದಾಸರ ಪುನರವತಾರವೆಂದು ಹೇಳುತ್ತಾರೆ. ವೈಕುಂಠದಾಸರು ವೈಷ್ಣವಾಗ್ರೇಸರಾಗಿದ್ದು, ಮೇಲಾಪುರದ ಚೆನ್ನಕೇಶವ ಸ್ವಾಮಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು, ಅವನನ್ನು ಮಗುವಿನಂತೆ ಆಡಿಸಿ ಮುದ್ದು ಮಾಡಿದ್ದ ಮಹಾನುಭಾವರು. ಇವರನ್ನು ವಾದಿರಾಜರು ಕೊಂಡಾಡಿದ್ದಾರೆ. ಇವರು ಕನಕದಾಸರ ಮಿತ್ರರೂ ಆಗಿದ್ದರು. ಇಂಥವರು ಆದವಾನಿಯಲ್ಲಿ ದಿವಾನನ ಮಗನಾಗಿ ಜನ್ಮವೆತ್ತಿ ತಿಮ್ಮಣ್ಣನಾಮದಲ್ಲಿ ಲೌಕಿಕ ಜೀವನದಲ್ಲಿ ಮುಳುಗಿದ್ದರು. ವಿಜಯದಾಸರು ತಮ್ಮ ಸಂಚಾರತ್ವೇನ ಆದವಾನಿಗೆ ಬಂದಾಗ ಇವರನ್ನು ಎಚ್ಚರಿಸಿ, ಹರಿದಾಸ ದೀಕ್ಷೆ ನೀಡಿ, ವೇಣುಗೋಪಾಲವಿಠಲ ಅಂಕಿತವನ್ನು ಇತ್ತು ಅನುಗ್ರಹಿಸಿದರು. ಇವರು ಹೃದಯಸ್ಪರ್ಶಿಯಾದ ಅನೇಕ ದೇವರ ನಾಮಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಇವರ ಶಿಷ್ಯರೇ ಕಲ್ಲೂರು ಸುಬ್ಬಣ್ಣಾಚಾರ್ಯರು. ಮುಂದೆ ವ್ಯಾಸವಿಠಲರೆಂಬ ಅಂಕಿತ ಪಡೆದು, ವಿಜಯದಾಸರ ಮಹಿಮೆಯನ್ನು ಸಾರುವ ವಿಜಯ ಕವಚವನ್ನು ರಚಿಸಿ ಪ್ರಸಿದ್ಧ ಹರಿದಾಸರಾದರು.

ವ್ಯಾಸವಿಠಲರು ಮೊದಲು ಪಂಡಿತರಾಗಿದ್ದು ವಿದ್ಯಾಮದದಿಂದ ಬೀಸಿದ ಸುಬ್ಬಣ್ಣಾಚಾರ್ಯರೆನಿಸಿದ್ದರು. ಸುಧಾ ಮಂಗಳಕ್ಕೆ ಕರೆಯದೆ ಹೋಗಿದ್ದ ವಿಜಯದಾಸರು, ಈ ಸುಜೀವರ ಉದ್ಧಾರಕ್ಕೆ ಮನಸ್ಸು ಕೊಟ್ಟು ಅವರಿಗೆ ಮಂಡಿಗೆ ತಯಾರಿಸಿ ಕೊಟ್ಟರಂತೆ. ತಮ್ಮ ಶಿಷ್ಯನೂ,

ಮಂದನೂ ಆಗಿದ್ದ ಯುವಕನ ತಲೆಯ ಮೇಲೆ ಕೈಯಿಟ್ಟು ಅವನಿಂದ ಸುಧಾ ವ್ಯಾಖ್ಯಾನ ಮಾಡಿಸಿದ್ದರು. ಈ ಘಟನೆ ಅವರ ಜೀವನದ ರೀತಿಯನ್ನೇ ಬದಲಾಯಿಸಿತು. ಆಚಾರ್ಯರು ಹರಿದಾಸರಾದರು- ಎಂಬ ಕಥೆ ಪ್ರಚಾರದಲ್ಲಿದೆ. ವಿಜಯದಾಸರ ಮಹಿಮೆ ಅಂಥದು.ಅವರು ಸುಜೀವರನ್ನು ಹುಡುಕಿಕೊಂಡು ಹೋಗಿ ಅನುಗ್ರಹಿಸಿ, ಉದ್ಧಾರ ಮಾಡುತ್ತಿದ್ದರು. ಇವರಿಂದ ಉದ್ಧಾರವಾದ ಇನ್ನೊಬ್ಬ ಆಚಾರ್ಯರು ಬ್ಯಾಗವಟ್ಟಿಯ ಮಹಾನ್ ಪಂಡಿತರಾದ ಶ್ರೀನಿವಾಸಾ ಚಾರ್ಯರು. ಇವರು ವರದೇಂದ್ರಸ್ವಾಮಿಗಳ ಆಸ್ಥಾನ ಪಂಡಿತರಾಗಿ, ಪ್ರತಿವಾದಿ ಭಯಂಕರ ರೆನಿಸಿದ್ದರು. ಚತುಶ್ಶಾಸ್ತ್ರ ಪಂಡಿತರಾಗಿದ್ದರು. ಇವರು ತಮ್ಮ ದೂರದ ಬಂಧುಗಳೇ ಆಗಿದ್ದ ವಿಜಯರಾಯರಿಗೆ ಸ್ವೋತ್ತಮ ದ್ರೋಹ ಮಾಡಿದರಂತೆ. ಅದರ ಫಲವಾಗಿ ಉದರಶೂಲೆಯಿಂದ ನರಳಿದರು. ಇದನ್ನು ಮಹಾಮಹಿಮರಾದ ವಿಜಯದಾಸರು ಶಿಷ್ಯರಾದ ಗೋಪಾಲದಾಸರಿಂದ ಅವರ ನಿಯತ ಗುರುಗಳಾಗಿದದ್ದುರಿಂದ ವಾಸಿ ಮಾಡಿಸಿ, ಆಯುರ್ದಾನ ಮಾಡಿಸಿ, ಜಗನ್ನಾಥ ದಾಸರಾಗಿ ಪರಿವರ್ತಿಸಿದರು. ಇವರಿಗೆ ಫಂಡರಪುರದಲ್ಲಿ ನದಿ ಸ್ನಾನ ಮಾಡುತ್ತಿದ್ದಾಗ, ಜಗನ್ನಾಥವಿಠಲ ಮುದ್ರಿಕೆಯುಳ್ಳ ಶಿಲಾಫಲಕ ದೊರಕಿತು. ಅಂದಿನಿಂದ ಅವರು ಅಪರೋಕ್ಷ ಜ್ಞಾನಿಗಳಾದರು. ಇವರು ಹರಿಕಥಾಮೃತಸಾರ, ತತ್ವಸುವ್ವಾಲಿಗಳಲ್ಲದೆ, ನೂರಾರು ಪ್ರಮೇಯ ಗಳಿಂದ ತುಂಬಿದ ಸುಂದರ ಕೀರ್ತನೆಗಳನ್ನು ರಚಿಸಿ, ಪ್ರಹ್ಲಾದರ ಸೋದರ ಸಹ್ಲಾದರೆಂದು ಪ್ರಖ್ಯಾತರಾಗಿದ್ದಾರೆ. ಇಂದಿಗೂ ಇವರು ವಾಸಿಸುತ್ತಿದ್ದ ಮಾನ್ವಿಯ ಮನೆ ಯಾತ್ರಾಸ್ಥಳವಾಗಿದೆ.

ಇವರ ಸಮಕಾಲೀನ ವ್ಯಕ್ತಿ ಹೆಳವನಕಟ್ಟೆ ಗಿರಿಯಮ್ಮ, ರಾಣೆಬೆನ್ನೂರಿನ ಕರಣಿಕರ ಸೊಸೆಯಾದ ಈಕೆಯು ಕನ್ನಡದಲ್ಲಿ ಅನೇಕ ದೇವರನಾಮಗಳನ್ನೂ, ಗ್ರಂಥಗಳನ್ನೂ ಬರೆದಿದ್ದಾಳೆ. ಹರಿದಾಸರ ಗುಂಪಿನಲ್ಲಿ ಎದ್ದು ಕಾಣುವ ಸ್ತ್ರೀ ಈಕೆ.

ವಿಜಯರಾಯರಿಗಿಂತ ಕೆಲವು ವರ್ಷಗಳ ಮೊದಲು ಇದ್ದ ಇನ್ನೊಬ್ಬ ಅಪರೋಕ್ಷ ಜ್ಞಾನಿಯಾದ ಹರಿದಾಸರೆಂದರೆ ಬಾಗಲಕೋಟೆಯ ಕಾಖಂಡಕಿ ಮನೆತನದ ವೆಂಕಪ್ಪ. ಇವರು ಸಾಕ್ಷಾತ್ ಶ್ರೀನಿವಾಸನಿಂದ ಅಂಕಿತ ಪಡೆದು, ಪ್ರಸನ್ನ ವೆಂಕಟದಾಸರಾಗಿ, ಅನೇಕ ದೇವರ ನಾಮಗಳನ್ನು ರಚಿಸಿ, ಸಜ್ಜನರ ಉದ್ಧಾರಕ್ಕೆ ಕಾರಣರಾದರು. ಇವರು ಬಾದಾಮಿಯಲ್ಲಿ ದೇಹವಿಟ್ಟ ಸ್ಥಳ ಪವಿತ್ರ ಸ್ಥಳವಾಗಿದೆ. ಇವರು ಭಾಗವತ ದಶಮಸ್ಕಂದ ಕೃಷ್ಣ ಚರಿತೆಯನ್ನು ಸುಂದರ ಹಾಡುಗಳಾಗಿ ಬರೆದಿದ್ದಾರೆ. ಇವರ ಅನೇಕ ಕೃತಿಗಳು ಮಳೆಯಿಂದ ತೊಯ್ದು ನಷ್ಟವಾದವಂತೆ. ಇದು ಕನ್ನಡಿಗರ ದೌರ್ಭಾಗ್ಯ.

ಗೋಪಾಲದಾಸರ ಊರಾದ ಉತ್ತನೂರಿಗೆ ಸಮೀಪದಲ್ಲಿದ್ದ ಐಜಿಯ ವೆಂಕಟರಾಮಾ ಚಾರ್ಯರು ಶಾಸ್ತ್ರಕೋವಿದರಾಗಿದ್ದರು. ಇವರಿಗೆ ಲೌಕಿಕ ಜೀವನದಲ್ಲಿ ವೈರಾಗ್ಯ ಹುಟ್ಟಿ ರಾಯರ ಮಠದ ಭುವನೇಂದ್ರತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿ, ಶ್ರೀವ್ಯಾಸತತ್ವಜ್ಞರೆನಿಸಿದರು. ಇವರು ಹರಿದಾಸ ದೀಕ್ಷೆಯನ್ನು ಸ್ವೀಕರಿಸಿ, ವಾಸುದೇವವಿಠಲ ಅಂಕಿತದಲ್ಲಿ ಅನೇಕ ದೇವರ ನಾಮಗಳನ್ನು ರಚಿಸಿ, ವೇಣಿ ಸೋಮಪುರದಲ್ಲಿ ವೃಂದಾವನಸ್ಥರಾದರು.

ವಿಜಯರಾಯರಿಂದ ಸ್ವಪ್ನದಲ್ಲಿ ಅನುಗ್ರಹಿತರಾದ ಮೊದಲುಕಲ್ಲಿನ ಶೇಷದಾಸರು ಅಪರೋಕ್ಷ ಜ್ಞಾನಿಗಳ ಸಾಲಿನಲ್ಲಿ ಬರುವ ಕೊನೆಯ ಹರಿದಾಸರೆಂದು ವಿದ್ವಾಂಸರು ಹೇಳುತ್ತಾರೆ. ಇವರು ಮೊದಲುಕಲ್ಲು-ಆದಿಶಿಲಾ-ಕ್ಷೇತ್ರದಲ್ಲಿದ್ದ ಶ್ರೀನಿವಾಸನ ಭಕ್ತರು. ಗದ್ವಾಲಿನ ದೊರೆಯ ಬಳಿ ಅಧಿಕಾರ ಮಾಡಿದವರು. ವಿರಕ್ತನಾಗಿ ಚಿಂತಲವೇರಿ ಪ್ರಾಣದೇವರ ಬಳಿ ಸಾಧನೆ ಮಾಡಿ, ಅಪರೋಕ್ಷಜ್ಞಾನ ಪಡೆದರು. ಇವರು ತಮ್ಮ ಕಾಲದಲ್ಲೇ ಪವಾಡ ಪುರುಷರಾಗಿ ಮೆರೆದರು. ಪ್ರಮೇಯ ಗರ್ಭಿತವಾದ ಅನೇಕ ದೇವರನಾಮಗಳನ್ನು ಮಾಡಿದ್ದಾರೆ. ಇಂದ್ರಾಂಶದ ಇವರು ಮೊದಲಕಲ್ಲಿನಲ್ಲಿ ನಿರ್ಯಾಣ ಹೊಂದಿದರು.

ಗುರುವಿಜಯ ವಿಠಲರಂತೆಯೇ ತಮ್ಮ ವಿಶೇಷ ವ್ಯಕ್ತಿತ್ವದಿಂದ ಬಹು ಜನ ಆಸ್ತಿಕರ ಉದ್ಧಾರಕ್ಕೆ ಕಾರಣರಾದ ಇನ್ನೊಬ್ಬ ಹರಿದಾಸರೆಂದರೆ ಕಾಖಂಡಕಿಯ ಮಹಿಪತಿದಾಸರು. ಇವರು ಬಿಜಾಪುರದ ಸುಲ್ತಾನನ ಬಳಿ ಅಧಿಕಾರ ಮಾಡಿದ್ದ ಪಂಡಿತರು. ಜೀವನದಲ್ಲಿ ವೈರಾಗ್ಯ ಹುಟ್ಟಿ, ಭಾಸ್ಕರಸ್ವಾಮಿಗಳೆಂಬ ಅವಧೂತರಿಂದ ದೀಕ್ಷೆ ಪಡೆದು ಹರಿದಾಸರಿಗೆ ಅಪರೂಪವಾದ ಯೋಗ ಮಾರ್ಗದಿಂದ ಅಪರೋಕ್ಷಜ್ಞಾನ ಪಡೆದು, ನೂರಾರು ಕೀರ್ತನೆಗಳನ್ನು ರಚಿಸಿ ಆತ್ಮೋದ್ಧಾರ ಮಾಡಿಕೊಂಡರು. ಇವರ ಕೃತಿಗಳಲ್ಲಿ ಭಕ್ತಿ ಜ್ಞಾನಗಳಿರುವಂತೆ ಯೋಗಕ್ಕೂ ಪ್ರಧಾನ್ಯತೆ ಇದೆ. ಬಿಜಾಪುರದ ಸಮೀಪದಲ್ಲಿರುವ ಕಾಖಂಡಕಿಯಲ್ಲಿ ನಿರ್ಯಾಣ ಹೊಂದಿದರು.

ಇವರ ಮಕ್ಕಳೇ ಕೃಷ್ಣರಾಯರು. ಭಗವದನುಗ್ರಹದಿಂದ ಜನಿಸಿದವರು. ಇವರು ತಂದೆಯಿಂದ ಅಂಕಿತ ಪಡೆದು ಹರಿದಾಸರಾಗಿ, ಗುರು ಮಹಿಪತಿದಾಸರೆಂಬ ಅಂಕಿತದಲ್ಲಿ ಅನೇಕ ಸುಂದರ ಕೀರ್ತನೆಗಳನ್ನೂ, ಗಜೇಂದ್ರಮೋಕ್ಷವೆಂಬ ಗ್ರಂಥವನ್ನೂ ಬರೆದಿದ್ದಾರೆ.

ವಿಜಯದಾಸರ ಅನಂತರ ಬಂದು ಕನ್ನಡದಲ್ಲಿ ಕೃತಿ ರಚನೆ ಮಾಡಿದ ಹರಿದಾಸರ ಸಂಖ್ಯೆ ಹೆಚ್ಚಾಗಿದೆ. ಇವರಲ್ಲಿ ಕೆಲವರು ಖ್ಯಾತ ನಾಮರಾಗಿದ್ದಾರೆ. ಇವರಲ್ಲಿ ಏರಿ ಮನೆತನಕ್ಕೆ ಸೇರಿದ್ದು, ಚಿಂತಾಮಣಿಯಲ್ಲಿ ನೆಲೆಸಿದ್ದ ಶೇಷಾಚಾರ್ಯರು ಶ್ರೀನಿವಾಸಕಲ್ಯಾಣವನ್ನು ಹಾಡುಗಳಲ್ಲಿ ರಚಿಸಿ ಪ್ರಖ್ಯಾತಿ ಪಡೆದಿದ್ದಾರೆ.

ಇವರಂತೆ ಸುರಪುರದ ಆನಂದದಾಸರು ಕಮಲೇಶವಿಠಲ ಅಂಕಿತದಲ್ಲಿ ಮನೋಜ್ಞವಾದ ಕೀರ್ತನೆಗಳನ್ನು ರಚಿಸಿದ್ದಾರೆ. ಇವರಂತೆ ಭೀಮಾಚಾರ್ಯರು ರಾಣಿಬೆನ್ನೂರಿನ ಸಮೀಪದ ಕದುರುಮಂಡಲಗಿ ಎಂಬ ಸ್ಥಳದಲ್ಲಿರುವ ಪ್ರಾಣದೇವರ ವಿಶೇಷವಾದ ಅನುಗ್ರಹಕ್ಕೆ ಪಾತ್ರರಾಗಿ ಕಾಂತೇಶನಾಮಕ ಸ್ವಾಮಿಯ ಮೇಲೆ ಅನೇಕ ಕೃತಿಗಳನ್ನು ರಚಿಸಿದ್ದಾರೆ.

ಇವರಂತೆ ಶಾಮರಾಯರೆಂಬುವರು ತಂದೆ ಪುರಂದರವಿಠಲ ಅಂಕಿತದಲ್ಲೂ, ಆದವಾನಿಯ ರಮಾಸುಂದರ ವಿಠಲದಾಸರೂ, ಕೋಸಗಿಆಚಾರ್ಯ ಎಂಬ ಹೆಸರಿನ ಸಂತೆ ಬಿದನೂರಿನಲ್ಲಿದ್ದ ಸ್ವಾಮಿ ರಾಮಾಚಾರ್ಯರು ಶ್ರೀಗುರು ಜಗನ್ನಾಥವಿಠಲ ಅಂಕಿತದಲ್ಲೂ, ಭೀಮವ್ವನೆಂಬ ಹರಪನಹಳ್ಳಿಯ ಸಾಧ್ವಿ ಹೆಣ್ಣು ಮಗಳು ಭೀಮೇಶಕೃಷ್ಣ ಅಂಕಿತದಲ್ಲೂ, ಆಸಗಿಹಾಳ್ ಗೋವಿಂದದಾಸರೂ, ಮಣೂರು ಹನುಮಂತದಾಸರೂ, ನಡುವಲ ಕೊಪ್ಪಾದ ರಘವಾರ್ಯರೂ ಇತ್ತೀಚಿನವರಾದ ಮಾನವಿ ಗುಂಡಾಚಾರ್ಯರು ಶ್ಯಾಮಸುಂದರ ವಿಠಲ ಅಂಕಿತದಲ್ಲೂ ಅನೇಕ

ಉತ್ತಮ ದೇವರನಾಮಗಳನ್ನು ರಚಿಸಿ ಹರಿದಾಸ ಸಾಹಿತ್ಯದ ವಾಹಿನಿಯು ಬತ್ತದಂತೆ ನೋಡಿ ಕೊಂಡಿದ್ದಾರೆ.

ಹರಿದಾಸ ಸಾಹಿತ್ಯಕ್ಕೆ ವಿಜಯದಾಸರು ಮಾಡಿದ ಸೇವೆ ಅಮೋಘವಾದುದು. ಅವರ ತಪಃಶ್ಶಕ್ತಿ ಇಂದಿಗೂ ಅವರಿಂದ ಸಂಪೂರ್ಣವಾಗಿ ಅನುಗ್ರಹಿಸಲ್ಪಟ್ಟ ಮೋಹನದಾಸರ ಪರಂಪರೆಯಲ್ಲಿ ಹರಿದಿದೆ. ಆದವಾನಿಯ ವೇಣುಗೋಪಾಲದಾಸರ ಪರಂಪರೆಯು ಇವತ್ತಿನ ವರೆಗೂ ಮುಂದುವರೆದುಕೊಂಡು ಬರುತ್ತಿರುವುದಕ್ಕೆ ವಿಜಯರಾಯರ ಪರಮಾನುಗ್ರಹವೇ ಕಾರಣವಾಗಿದೆ. ಈ ಎರಡು ಪರಂಪರೆಗಳಲ್ಲಿ ಅನೇಕ ಪ್ರತಿಭಾನ್ವಿತ ಹರಿದಾಸರು ಆಗಿಹೋಗಿದ್ದಾರೆ. ಅವರನ್ನು ಉಲ್ಲೇಖಿಸುವ ಮುನ್ನ ವಿಜಯದಾಸರ ಶಿಷ್ಯ ಮಾರ್ಗವನ್ನು ಕುರಿತು ಕೆಲವು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

ಮಹಾನುಭಾವರಾದ ವಿಜಯರಾಯರಿಂದ ಉದ್ಧೃತವಾದ ಸಂಜೀವರು ಒಬ್ಬಿಬ್ಬರಲ್ಲ ಅಸಂಖ್ಯಾತರಾಗಿದ್ದಾರೆ. ಅವರಿಗೆ ಬಹುಮಂದಿ ಶಿಷ್ಯರಿದ್ದಂತೆ ತಿಳಿಯುತ್ತದೆ. ಅಂಕಿತ ಪಡೆದ ಪ್ರಮುಖ ಶಿಷ್ಯರೆಂದರೆ ಗೋಪಾಲದಾಸರು, ಹಯವದನ ವಿಠಲರು, ಮುದ್ದು ವಿಠಲರು, ವೇಣುಗೋಪಾಲ ವಿಠಲರು, ರಾಮಚಂದ್ರ ವಿಠಲರು, ಮಧ್ವೇಶ ವಿಠಲರು, ಮೋಹನದಾಸರು, ಹಯಗ್ರೀವ ವಿಠಲರು, ಸ್ವಪ್ನದತ್ತವಾಗಿ ಅಂಕಿತ ಪಡೆದ ಗುರುವಿಜಯವಿಠಲರು ಪ್ರಮುಖ ಹರಿದಾಸರೆನಿಸಿದ್ದಾರೆ.

ಇವರಲ್ಲಿ ಗೋಪಾಲದಾಸವರ್ಯರ ಪೀಳಿಗೆಯಲ್ಲಿ ಮುಂದೆ ಬಂದ ಅವರ ಸಹೋದರರು ದಾಸಪ್ಪ (ಗುರುಗೋಪಾಲ ವಿಠಲ), ಸೀನಪ್ಪ (ವರದಗೋಪಾಲ ವಿಠಲ), ರಂಗಪ್ಪ (ತಂದೆ ಗೋಪಾಲ ವಿಠಲ), ಸುಬ್ಬಣ್ಣ (ಕೇಶವವಿಠಲ)ರು ಗೋಪಾಲದಾಸರಿಂದಲೇ ಅಂಕಿತ ಪಡೆದು ದೇವರ ನಾಮಗಳನ್ನು ರಚಿಸಿದ್ದಾರೆ. ಈ ವಂಶದವರು ಈಗಲೂ ದಾಸವರ್ಯರ ಸೇವೆ ಮಾಡುತ್ತ ಬಂದಿದ್ದಾರೆ.

ಅವರಿಂದ ಹರಿದಾಸ ದೀಕ್ಷೆ ಪಡೆದ ಮಾನ್ವಿಯ ಶ್ರೀನಿವಾಸಾಚಾರ್ಯರು ಮುಂದೆ ಜಗನ್ನಾಥದಾಸರೆಂಬ ಹೆಸರಿನಲ್ಲಿ ಪ್ರಖ್ಯಾತರಾದರು. ಇವರ ಶಿಷ್ಯ ಪರಂಪರೆಯಲ್ಲಿ ಅನೇಕ ಹರಿದಾಸರು ಕೃತಿ ರಚನೆ ಮಾಡಿದ್ದಾರೆ. ಈ ಪರಂಪರೆಯಲ್ಲಿ ಬಂದ ಹರಿದಾಸರ ಹೆಸರು ಹೀಗಿವೆ-

೧) ಪ್ರಾಣೇಶ ವಿಠಲದಾಸರು (ಯೋಗೇಂದ್ರರಾಯರು)

೨) ಶ್ರೀದರವಿಠಲದಾಸರು (ಕರ್ಜಗಿದಾಸಪ್ಪನವರು)

೩) ಶ್ರೀವಿಠಲದಾಸರು (ಹಂಡೇಕಾರ ದಾಸರು)

೪) ಅಭಿನವಜನಾರ್ಧನ ವಿಠಲದಾಸರು (ಪ್ರೇಮದಾಸರು)

೫) ವೆಂಕಟವಿಠಲದಾಸರು (ಮಾನಾಮಧುರೆ ದಾಸರು)

೬) ಅಣ್ಣಗೇರಿನಾರಾಜಿರಾಯರ ಗೋಪಾಲದಾಸರು (ಗೋಪತಿ ವಿಠಲರು)

೭) ಆನಂದಮಯ ವಿಠಲರು

೮) ಯೋಗೀಂದ್ರ ವಿಠಲದಾಸರು (ಕನತಾಳ)

೯) ಜ್ಞಾನಮಯ ವಿಠಲರು

೧೦) ಶ್ರೀನಿವಾಸ ವಿಠಲರು

೧೧) ಪ್ರಾಣೇಶ ವಿಠಲರು ( ಚಿಕ್ಕೋಡಿ ಭಗವಂತನರಾಯರು)

೧೨) ಹುಕ್ಕೇರಿದಾಸರು

೧೩) ಸಿರಿವತ್ಸಾಂಕಿತದಾಸರು (ಚಿಕ್ಕೋಡಿ ಆಚಾರ್ಯರು)

೧೪) ವಿಜಯಹಯಗ್ರೀವ ದಾಸರು

೧೫) ಪ್ರಸನ್ನ ವೆಂಕಟವಿಠಲರು (ನಾಡಿನ ತಿಮ್ಮಪ್ಪನವರು)

೧೬) ಮನೋಹರ ವಿಠಲರು (ಬೂರಲದಿನ್ನಿ ನಾರಪ್ಪನವರು)

೧೭) ಕಂಪಿಲಿದಾಸರು

೧೮) ಬಾದರಾಯಣ ವಿಠಲರು (ನಂಜನಗೂಡಿನದಾಸರು)

- ಹೀಗೆ ಅನೇಕ ಶಿಷ್ಯರು ಆಗಿ ಹೋಗಿದ್ದಾರೆ. ಪ್ರಾಣೇಶ ವಿಠಲದಾಸರ ಪರಂಪರೆಯಲ್ಲಿ ಗುರು ಪ್ರಾಣೇಶದಾಸರು, ಶ್ರೀಪ್ರಾಣೇಶ ವಿಠಲದಾಸರು ಕೃತಿ ರಚನೆ ಮಾಡಿದ್ದಾರೆ. ಶ್ರೀದ ವಿಠಲ ದಾಸರು ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಫಲಸ್ತುತಿ ಮಾಡಿದ್ದಾರೆ. ಇವರ ಪೀಳಿಗೆಯಲ್ಲಿ ಭೀಮೇಶವಿಠಲರು, ಪ್ರೇಮದಾಸರು, ಭಾಗ್ಯನಿಧಿ ವಿಠಲರು, ಶ್ರೀರಾಮವಿಠಲರು ಆಗಿದ್ದಾರೆ. ಇವರ ಶಿಷ್ಯರಾದ ಬಾಗೆಪಲ್ಲಿಯ ಗುರುರಾಮವಿಠಲದಾಸರು ಹುಟ್ಟು ಕುರುಡರಾದರೂ, ಶ್ರೀನಿವಾಸನ ದಯೆಯಿಂದ ಅನೇಕ ದೇವರ ನಾಮಗಳನ್ನು ರಚಿಸಿದ್ದಾರೆ. ವಿಜಯದಾಸರ ಪರಂಪರೆಯಲ್ಲಿ ಬಂದ ಮಧ್ವಪತಿ ವಿಠಲರು, ಶ್ರೀಪಸನ್ನ ವೆಂಕಟದಾಸರೂ, ವಿಜಯ ರಾಮಚಂದ್ರ ವಿಠಲದಾಸರೂ, ಶ್ರೀ ಜಯೇಶವಿಠಲದಾಸರೂ ಹರಿದಾಸ ದೀಕ್ಷೆಯಲ್ಲಿ ಮುಂದುವರೆದು ಕೃತಿ ರಚನೆ ಮಾಡಿ ಹೆಸರಾದರು.

ಆದವಾನಿಯ ಶ್ರೀ ವೇಣುಗೋಪಾಲದಾಸರ ಪರಂಪರೆಯ ಹರಿದಾಸರ ಪೀಳಿಗೆಯು ಇಂದಿಗೂ ಮುಂದುವರೆಯುತ್ತಿದೆ. ಇವರಲ್ಲಿ ರಘುಪತಿವಿಠಲರು ವ್ಯಾಸವಿಠಲರ ಶಿಷ್ಯರು.

ಇವರ ಆಧ್ಯಾತ್ಮ ಮೂಲ ಎಂಬ ಗ್ರಂಥವು ಮೋಕ್ಷಾಪೇಕ್ಷಿಗಳಿಗೆ ಉತ್ತಮ ಮಾರ್ಗ ದರ್ಶಕವಾಗಿದೆ. ರಘುಪತಿ ವಿಠಲದಾಸರ ಶಿಷ್ಯರು ಶ್ರೀನಿವಾಸ ಭೂವರಾಹ ರಘುಪತಿ ವಿಠಲದಾಸರು. ಇವರ ಶಿಷ್ಯರು ಶ್ರೀಪತಿವಿಠಲರು. ಇವರಿಂದ ತಂದೆ ಶ್ರೀಪತಿ ವಿಠಲರು ಅಂಕಿತ ಪಡೆದು ಹರಿದಾಸರಾದರು. ಅವರ ಶಿಷ್ಯರು ದೀಪದ ಅಣ್ಣಯ್ಯಾಚಾರ್ಯರು. ಬ್ರಹ್ಮೋತ್ಸವಕ್ಕೆ ಹೋಗಿದ್ದ ಇವರು ತಿರುಪತಿಯಿಂದ ನಂದಾದೀಪವನ್ನು ಹೊತ್ತಿಸಿ ತಮ್ಮೊಡನೆ ತಂದು ಮನೆಯಲ್ಲಿ ಸ್ಥಾಪಿಸಿದರು. ಅಂದಿನಿಂದ ಇವರಿಗೆ ಈ ಹೆಸರಾಯಿತು. ಇವರು ಶ್ರೀನಿಧಿ ವಿಠಲದಾಸರಾಗಿ ಕೃತಿ ರಚನೆ ಮಾಡಿ ಪ್ರಸಿದ್ಧರಾದರು. ಇವರಿಂದ ಅಂಕಿತ ಪಡೆದ ಶಿಷ್ಯರು ಶ್ರೀವರವಿಠಲದಾಸರು.

ಇವರ ಶಿಷ್ಯರೇ ಸುಪ್ರಸಿದ್ಧರಾದ ದೊಡ್ಡಬಳ್ಳಾಪುರದ ಮುದ್ದುಮೋಹನ ವಿಠಲದಾಸರು. ಚಿಪ್ಪಗಿರಿಯಲ್ಲಿ ಇವರಿಗೆ ಅಂಕಿತವಾಯಿತು. ಈ ಪರಂಪರೆಯಲ್ಲಿ ಬಂದವರೇ

ಶ್ರೀಪರಮಪ್ರಿಯ ಸುಬ್ಬರಾಯದಾಸರು. ಇವರ ಅಂಕಿತ ಶ್ರೀತಂದೆ ಮುದ್ದುಮೋಹನವಿಠಲ, ಇವರು ಅನೇಕ ಕೃತಿಗಳನ್ನು ರಚಿಸಿ ನೂರಾರು ಹರಿದಾಸರಿಗೆ ದಾಸದೀಕ್ಷೆ ಇತ್ತ ಮಹಾನುಭಾವರು. ವಿಜಯದಾಸರ ಸಾಕ್ಷಾತ್ ಶಿಷ್ಯರಾದ ವೇಣುಗೋಪಾಲದಾಸರಾಯರ ಪರಂಪರೆಯನ್ನು ಬೆಳಗಿದ ಈ ಮಹನೀಯರು ಇತ್ತೀಚಿನವರೆಗೂ ಈ ಪೀಳಿಗೆಯನ್ನು ಬೆಳೆಸಿದರು. ತಮ್ಮ ಸಾತ್ವಿಕ ಜೀವನ, ಹರಿದಾಸ ದೀಕ್ಷೆ, ಮಧ್ವಮತದ ನಿಷ್ಠೆ, ಸರಳವಾದ ಋಜುಜೀವನಗಳಿಂದ ಎಲ್ಲರ ಗೌರವಕ್ಕೆ ಪಾತ್ರರಾಗಿ ಅನೇಕಶಿಷ್ಯರನ್ನು ಬಿಟ್ಟು ಹೋದರು. ಅವರಲ್ಲಿ ಮುಖ್ಯರಾದವರು ಶ್ರೀಮಧ್ವಾಂತರ್ಗತ ವಿಠಲದಾಸರೂ, ಉರಗಾದ್ರಿ ವಿಠಲದಾಸರೂ, ರಘುರಾಮ ವಿಠದಾಸರೂ, ಸೀತಾಪತಿರಾಮ ವಿಠಲದಾಸರೂ, ರಮಾಕಾಂತ ವಿಠಲದಾಸರೂ ವಿಜಯದಾಸರು ಹೊತ್ತಿಸಿದ ಜ್ಞಾನಕಾರ್ಯವನ್ನು ಮುಂದುವರೆಸಿದರು. ಇವರೆಲ್ಲರಂತೆ ತಮ್ಮ ಪ್ರತಿಭೆಯಿಂದ ಬೆಳಗಿದವರು ಮೈಸೂರಿನ ಗುರುಗೋವಿಂದ ವಿಠಲದಾಸರು.

ಹೀಗೆ ಪುರಂದರದಾಸರಿಂದ ಸ್ವಪ್ನಾಂಕಿತರಾದ ವಿಜಯದಾಸರ ಪೀಳಿಗೆಯಲ್ಲಿ ಆದವಾನಿಯ ವೇಣುಗೋಪಾಲದಾಸರ ದ್ವಾರ ಇಂದಿವರೆಗೂ ಹರಿದಾಸರ ಆದರ್ಶಗಳನ್ನು ಎತ್ತಿ ಹಿಡಿಯುತ್ತಾ, ಆ ಪ್ರಣತಿಗೆ ತೈಲವೆರೆದು ಜ್ಞಾನಜ್ಯೋತಿಯನ್ನು ಬೆಳಗುತ್ತಾ ಬಂದಿದ್ದಾರೆ.

## ೮

ಪುರಂದರದಾಸರು ಹಚ್ಚಿಟ್ಟ ದಾಸ ಜ್ಯೋತಿ ಇಂದಿನ ಕಾಲದವರೆಗೂ ಆರದೆ, ಮತ್ತೆ ಮತ್ತೆ ಹೊಸ ತೈಲ ಧಾರೆಯ ಸಂಪರ್ಕದಿಂದ ನೂರಾರು ಏಕೆ ಸಹಸ್ರಾರು ಸುಜೀವರ ಜೀವನವನ್ನು ಹರಿದಾಸ ದೀಕ್ಷೆಗೆ ಪ್ರೇರೇಪಿಸಿ, ಬೆಳಗುತ್ತ ಬಂದಿರುವುದರ ರಹಸ್ಯವೇನು? ಅದು ಹರಿದಾಸರ ತಪಶ್ಶಕ್ತಿಯಲ್ಲಿ ಅಡಗಿರುವವರ ಭಕ್ತಿ, ಜ್ಞಾನ ವೈರಾಗ್ಯಗಳ ಉದಾತ್ತ ಜೀವನದಲ್ಲಿ ಅಡಗಿದೆ ಎನ್ನಬಹುದು.

"ಹರಿದಾಸರುಗಳು ನಿಷ್ಕಾಮವಂತ ಜ್ಞಾನಿಗಳು ಮತ್ತು ಭಗವದ್ಭಕ್ತರು. ವೇದಾದಿ ಸಚ್ಛಾಸ್ತ್ರಗಳ ಸಾರವನ್ನರಿತು ಅನುಷ್ಠಾನಕ್ಕೆ ತಂದು ಹರಿಪ್ರಸಾದವನ್ನು ಪಡೆಯುವ ಪರಮಪುನೀತರು. ಹರಿಯನುಗ್ರಹಕ್ಕಾಗಿ ಹಾತೊರೆದು ಮಿಡಿಯುವ ಭಕ್ತರು. ಹರಿಯೊಡನೆ ನಾನಾ ರೀತಿಯ ಭಾವ ಭಂಗಿಗಳಲ್ಲಿ ಹಾಡಿ ನಲಿದ ಭಾಗ್ಯವಂತರು. ಹರಿಯ ಉನ್ಮಾದದಿಂದ ಹಿಗ್ಗುವವರು. ಹರಿಯನ್ನು ತಮ್ಮ ಹೃದಯ ಗುಹೆಯಲ್ಲಿ ಕಾಣುವ ಮಹಾ ಯೋಗಿಗಳು. ತಾವುಗಳು ಮಾತ್ರ ಸುಖಾನುಭವದಿಂದ ಮೈಮರೆಯದೆ, ತಾವು ತಿಳಿದು ಕಂಡು ಕೊಂಡ ಸತ್ಯವನ್ನು ಅರ್ಹರಿಗೆ ಉಪದೇಶಿಸಿ ಅವರನ್ನು ತಮ್ಮಂತೆ ಆತ್ಮಾರಾಮರನ್ನಾಗಿ ಮಾಡುವ ಮಹಾ ಪುರುಷರು. ಉಚ್ಚ ತರಗತಿಯ ಸಮಾಜ ಸುಧಾರಕರು, ಕೀರ್ತಿಗಾಗಿ ಕೃತಿ ರಚನೆ ಮಾಡದೆ ಜನಾಂಗದ ಕಲ್ಯಾಣಕ್ಕಾಗಿ ತಮ್ಮ ಜ್ಞಾನ ಮತ್ತು ಅನುಭವದ ತಿರುಳನ್ನು ತಮ್ಮ ಸಾಹಿತ್ಯದಲ್ಲಿ ಹುದುಗಿಸಿ ನೀಡುವ ನಿಷ್ಕಾಮ ಉಪದೇಶಕರು. ಜಗತ್ತು

ತಮಗೊದಗಿಸಿರುವ ತುಮುಲ ಅಶಾಂತಿಯನ್ನು ನೀಗಿ ಶಾಂತಿಯ ಮತ್ತು ಶಾಶ್ವತ ಸುಖದ ತಾಣವನ್ನು ಸೇರಲು ದಾರಿ ತೋರುವ ದಾರ್ಶನಿಕರು."

"ಹರಿದಾಸರುಗಳ ಸಾಹಿತ್ಯವೆಂದರೆ ಕಚ್ಚಿದರೆ ಕಬ್ಬು, ಹಿಂಡಿದರೆ ಜೇನು. ಕಸದಿಂದ ರಸ ತೆಗೆಯುವವರು. ಪಶುವಿನಂತಿರುವವರಿಗೆ ಪಶುಪತಿಪ್ರಿಯನನ್ನು ತೋರುವವರು ಹರಿದಾಸರು. ಏಕಮುಖ ವಿಚಾರಧಾರೆ, ನಿರ್ದಿಷ್ಟವಾದ ಧ್ಯೇಯಗಳಿಂದೊಡಗೂಡಿರುವ ಈ ದಾಸ ಸಾಹಿತ್ಯ ಭಾರತದ ದಾರ್ಶನಿಕ, ಧಾರ್ಮಿಕ, ಯೋಗ ಶಾಸ್ತ್ರಗಳಿಗೆ, ನಾಡಿಗೆ, ನುಡಿಗೆ ಮಾಡಿರುವ ಮಹದುಪಕಾರ ಅತ್ಯಂತ ಹಿರಿಯದು. ಇವರ ಕೃತಿಗಳು ಪ್ರಾಸಕ್ಕಾಗಿ ತ್ರಾಸಪಟ್ಟು ಬರೆದು ಹೊಡೆದು ತಿದ್ದಿ ರೂಪುಗೊಂಡ ಕವನಗಳಲ್ಲ. ಹರಿದಾಸರುಗಳ ಮುಖದಿಂದ ತಾನೇ ತಾನಾಗಿ ಹೊರಟ ಅನುಭವ ಪೂರ್ಣವಾದ ಸದುಕ್ತಿಗಳೇ ಅಪಾರವಾದ ದಾಸ ಸಾಹಿತ್ಯ ರಾಶಿ. ಇವರ ನುಡಿ ಜ್ಞಾನವೇ ಕಿಡಿ. ಇವರ ಮಾತು ಎಣ್ಣೆ ಬತ್ತಿಗಳಿಲ್ಲದೆ ಉರಿಯುವ ತಣ್ಣಗಿನ ಜ್ಯೋತಿ. ಅಂದದ್ದೇ ಅಂದದ ಕವನ, ನುಡಿದದ್ದೇ ನುಡಿಗಟ್ಟು, ಉರಿಸಿದ್ದೇ ಉಗಾಭೋಗ, ವಾಕ್ಕಿನಲ್ಲಿ ಸುಳಿದದ್ದೇ ಸುಳಾದಿ. ಇವರ ಮನಸ್ಸು ಆಕಾಶದಷ್ಟು ವಿಶಾಲವಾದುದು. ಅಲ್ಲಿ ಗರುಡ ಪಕ್ಷಿಯಂತೆ ನೊಣಕ್ಕೂ ಹಾರುವ ಸ್ವತಂತ್ರವುಂಟು. ಪ್ರಪಂಚದ ಎಲ್ಲ ಯೋಗ್ಯ ಜೀವಿಗಳಿಗೂ ಮುಕ್ತಿ ದೊರೆಯುವ ತನಕ ತಮಗೆ ಮುಕ್ತಿ ಬೇಡ ಎನ್ನುವ ಪರೋಪಕಾರಿಗಳು ಹರಿದಾಸರು."

-( *ಹರಿದಾಸಪರಂಪರೆ; ಖಗವರಧ್ವಜವಿಠಲ ದಾಸರು, ಪು. ೧-೨*)

ಈ ಸಿದ್ಧಾಂತದಲ್ಲಿ ಹರಿದಾಸ ವಾಙ್ಮಯದ ಅಮರತೆಯ ಹೊಳಹು ಅಡಗಿದೆ. ಹರಿದಾಸ ಪಂಥದ, ದಾಸದೀಕ್ಷೆಯ ರಹಸ್ಯ ಅಡಗಿದೆ.

ಇಷ್ಟೆಲ್ಲ ಸನ್ನಡತೆ, ಸುವಿಚಾರಗಳನ್ನು ಸಮಾಜಕ್ಕೆ ಎತ್ತಿ ಹಿಡಿಯುವ ಬೆಳಕಿನ ಕಂಬಗಳು ಹರಿದಾಸರಾದರೂ ಅವರ ಕೃತಿಗಳೇಕೆ ಜನಮನದ ಅವಜ್ಞಾತೆಗೆ, ಅನಾದರಕ್ಕೆ ಪಾತ್ರವಾಗಿ, ಹೇಳ ಹೆಸರಿಲ್ಲದಂತೆ ನಷ್ಟವಾಯಿತು? ಪುರಂದರೋಪನಿಷತ್ ಎಂಬ ಸತ್ಕೀರ್ತಿಗೆ ಬಾಧ್ಯವಾಗಿದ್ದ ಪುರಂದರದಾಸರ ಬಹು ಸಂಖ್ಯಾತ ಕೃತಿಗಳೂ, ವಿಜಯದಾಸರ ಬಹುಪಾಲು ಕೃತಿಗಳೂ ಏಕೆ ನಷ್ಟವಾಯಿತು! ಈ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ.

ಹರಿದಾಸ ಸಾಹಿತ್ಯವು ನಷ್ಟವಾಗಲು ಕಾರಣಗಳು ಅನೇಕ. ಇವುಗಳಲ್ಲಿ ಪ್ರಮುಖವಾದುದು ಕನ್ನಡಿಗರ ಅಭಿಮಾನ ಶೂನ್ಯತೆ ಮತ್ತು ಸಂಕುಚಿತ ದೃಷ್ಟಿ. ಈ ಬಗ್ಗೆ ಬೇಲೂರು ಕೇಶವದಾಸರು ತಮ್ಮ ಕೊರಗನ್ನು ಹೀಗೆ ತೋಡಿಕೊಂಡಿದ್ದಾರೆ.

"ಕರ್ಣಾಟಕದಲ್ಲಿ ಮಹಾರಾಷ್ಟ್ರದಂತೆ ಎಲ್ಲ ಜಾತಿಗಳಲ್ಲೂ ಸತ್ಪುರುಷರ ಅವತಾರವಾಗಿದೆ. ಶಿವಶರಣರು, ಹರಿಶರಣರು ಎಂಬ ದೊಡ್ಡ ವಿಭಾಗ ಮಾಡಿ ದೊಡ್ಡ ದೊಡ್ಡ ವಹಿಗಳನ್ನು ವಾಚಕರ ಮುಂದೆ ಬರೆದಿಡಲು ಅವಕಾಶವಿದೆ. ಮಹಾರಾಷ್ಟ್ರರು ತಮ್ಮಲ್ಲವತರಿಸಿದ ರಾಮದಾಸ, ತುಕಾರಾಮ, ನಾಮದೇವ, ಮೋರೋಪಂತ, ವಾಮನ ಪಂಡಿತ ಮೊದಲಾದವರ ದಿವ್ಯ ಗ್ರಂಥಗಳನ್ನು ಶೇಖರಿಸಿದರು. ನಮ್ಮ ಕರ್ಣಾಟಕದಲ್ಲಿ ಅಂಥ ವ್ಯವಸ್ಥಿತ ಪ್ರಯತ್ನ ನಡೆಯಿಲ್ಲ. ದುರ್ದೈವಕ್ಕೆ

ತಕ್ಕಂತೆ ಕನ್ನಡ ಮಹಾತ್ಮರ ಗ್ರಂಥಗಳು ಉಪಲಬ್ಧವಿಲ್ಲ. ಎಲ್ಲವೂ ಸಿಗದಿದ್ದರೆ ಬೇಡ; ಇದ್ದಷ್ಟನ್ನು ಶೇಖರಿಸಿಡಲೂ ತಕ್ಕ ಪ್ರಯತ್ನವಾಗಿಲ್ಲ. ಪ್ರಯತ್ನ ಮಾಡುವವರಿಗೆ ಸಮಾಜದಲ್ಲಿ ಉತ್ತೇಜನ ವಿಲ್ಲ. ಸತ್ಪುರುಷರ ಹೆಸರೆತ್ತಿದರೆ ಅದರಲ್ಲಿ ಸಹ ಜಾತಿ ಮತಗಳ ಸಂಕುಚಿತ ಭಾವನೆಗಳು ಈಗೀಗ ತಲೆಯಲ್ಲಿ ಬರುತ್ತಲಿವೆ."

*-( ಕರ್ನಾಟಕ ಭಕ್ತ ವಿಜಯ, ಪು.iv)*

ಹರಿದಾಸರು ವಿಶ್ವ ಪ್ರಜೆಗಳು. ಅವರ ವಿಚಾರವಾಣಿ ಜಗತ್ತಿನ ಸಮಸ್ತ ಸಜ್ಜನರ ಉದ್ಧಾರಕ್ಕಾಗಿ ಇರುವುದು. ಇಂಥ ಹರಿದಾಸರ ನುಡಿಮುತ್ತುಗಳನ್ನು ಸಂಗ್ರಹಿಸುವ, ಕಾದಿರಿಸುವ, ಪ್ರಕಟಿಸುವ ಪ್ರಯತ್ನ ಮಾಡದಿದ್ದರೆ ನಷ್ಟ ಅವರಿಗಲ್ಲ- ನಮಗೆ ಎಂಬುದನ್ನು ನಾವು ತಿಳಿದಿರ ಬೇಕಾದ ಅಂಶ.

"ಈ ಸಾಹಿತ್ಯವನ್ನು ಶುಷ್ಕವಾದ ಮತೀಯ ವಾಙ್ಮಯವೆಂದು ದೂರವಿಡುವಂತಿಲ್ಲ. ಮತವನ್ನು ಮೀರಿದ ತತ್ವ, ಸರ್ವಜನ ಹೃದಯಾನಂದಕರವಾದ ಕಾವ್ಯ ಎರಡನ್ನೂ ಒಳಗೊಂಡ ಹರಿದಾಸ ಸಾಹಿತ್ಯ, ಸರ್ವಕಾಲಿಕ, ಸರ್ವದೇಶಿಕ ತತ್ವ, ನೀತಿ, ಧರ್ಮ, ಜೀವನ ಮೌಲ್ಯಗಳನ್ನರಿತ ದಾಸರು ನಿರ್ಮಿಸಿದ ಸಾಹಿತ್ಯ ಯಾವ ಒಂದು ಮತದ ಸೊತ್ತಲ್ಲ. ಕನ್ನಡಿಗರೆಲ್ಲರ ಹೃದಯ ಶ್ರೀಮಂತ್ರಿಕೆಯನ್ನು ಹೆಚ್ಚಿಸುವ ಕಾವ್ಯ ಭಂಡಾರ. ಈ ಸಂಯೋಗ ಸಾಧಕರಾದ ದಾಸರೆಲ್ಲ ರಸ ಋಷಿಗಳು."

*ಸಾಮಾನ್ಯ ಜನ ಬಳಕೆಯ ಗ್ರಾಮ್ಯ ರೂಪಗಳನ್ನು ಧಾರಾಳವಾಗಿ ಬಳಸಿ ಪಂಡಿತರ ಅವಹೇಳನೆಗೆ ಪಾತ್ರವಾಗುವಂತೆ ದಾಸ ಸಾಹಿತ್ಯದ ರೀತಿ ಇರುವುದು ನಿಜ. ಆದರೆ ಜನಬಳಕೆಯ ಭಾಷೆಯನ್ನು, ಕಾವ್ಯದ ಹಾಗೂ ತತ್ತ್ವದರ್ಶನದ ಉನ್ನತ ಶಿಖರಕ್ಕೇರಿಸುವ ಮಹಾಕಾರ್ಯ ಇಲ್ಲಿ ಸುಲಭ ಸಾಧ್ಯವಾಗುತ್ತದೆ. ಜನರಿಂದ ದೂರ ಸರಿದು ಅರಣ್ಯ ವಾಸಿಯಾಗುವ ಜ್ಞಾನಿಯ, ತಪಸ್ವಿಯ ನಿವೃತ್ತಿ ಮಾರ್ಗವಲ್ಲವಿದು. ಜನ ಮಧ್ಯದಲ್ಲಿ ನಿಂತು ಜನತೆಯನ್ನೇ ಜ್ಞಾನದ ವೈಕುಂಠಕ್ಕೆ ಎತ್ತುವ ಸಾಹಸವಿದು. ಅಂತೆಯೇ ಗ್ರಾಮ್ಯವೂ ಸಾಮ್ಯವಾಗುತ್ತದೆ* - ಎಂಬುದಾಗಿ ಪಿ.ಕೆ. ಭಾಗೋಜಿ ಅವರು ದಾಸ ಸಾಹಿತ್ಯದ ಮೇಲೆ ಬಂದಿರುವ ಆಕ್ಷೇಪಣೆಗಳಿಗೆ ಉತ್ತರ ನೀಡಿದ್ದಾರೆ.

೯

ಹರಿದಾಸರ ದಾಸ್ಯ ಭಾವದ ಲಕ್ಷಣಗಳೇನು?

ದಾಸ ಧರ್ಮ ದೀಕ್ಷೆಯನ್ನು ಕುರಿತು ಪುರಂದರದಾಸರೂ, ವಿಜಯದಾಸರೂ ಜಗನ್ನಾಥದಾಸರೂ ತಮ್ಮ ಕೀರ್ತನೆ ಸುಳಾದಿಗಳಲ್ಲಿ ವಿಪುಲವಾಗಿ ಅದನ್ನು ನಿರೂಪಿಸಿದ್ದಾರೆ. ಗುರುಗಳಿಂದ ಅಂಕಿತ ಸ್ವೀಕರಿಸುವಾಗ ಶಿಷ್ಯರು ಹರಿದಾಸ ದೀಕ್ಷೆಯನ್ನು ವಹಿಸಿ, ಆ ಬಗ್ಗೆ ನಿಷ್ಠೆಯಿಂದ ಇರುವುದಾಗಿ ಪ್ರಮಾಣ ವಚನ ಸ್ವೀಕರಿಸುವ ಒಂದು ಪದ್ಧತಿ ಇದೆ. ಇದರಂತೆ ದೀಕ್ಷಾಂತ ಹರಿದಾಸರು -

೧) ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ಸಂಪೂರ್ಣ ನಂಬಿಕೆಯಿಡುವೆನೆಂದು ಪ್ರಮಾಣ ಮಾಡಬೇಕು.

೨) "ಸಾಲ ಮಾಡುವುದಿಲ್ಲ ; ಸಾಲದೆನ್ನುವುದಿಲ್ಲ, ನಾಳೆಗಿಡುವುದಿಲ್ಲ"- ಎಂಬ ಮೂರು ಮಾತುಗಳನ್ನೊಪ್ಪಿ ನಡೆಯಬೇಕು.

೩) ಬಲವತ್ತರ ಕಾರಣಗಳಿದ್ದವಿನಾ ಹರಿದಿನ, ವ್ರತಾಚರಣೆಗಳನ್ನು ಬಿಡುವುದಿಲ್ಲ ವೆಂದು ಪ್ರತಿಜ್ಞೆ ಸ್ವೀಕರಿಸಬೇಕು.

೪) ಹರಿನಿಂದೆ, ಹರಿಭಕ್ತರ ನಿಂದೆಗಳನ್ನು ಕೇಳಿದರೆ ಪರಿತಪಿಸಿ ಆತ್ಮ ಶುದ್ಧಿಗಾಗಿ ಉಪವಾಸ ಮಾಡಬೇಕು.

೫) ಹರಿನಾಮ ಸ್ಮರಣೆಯಿಂದ ಪ್ರಾಪ್ತವಾದ ಪವಿತ್ರಾನ್ನವನ್ನೇ ಉಣಬೇಕು. ಹರಿ ಸೇವೆಗಾಗಿ ತನ್ನ ಜೀವನವನ್ನು ಮೀಸಲಿಡಬೇಕು.

*- (ಕರ್ನಾಟಕ ಭಕ್ತ ವಿಜಯ; ಬೇಲೂರು ಕೇಶ ದಾಸರು ಪುಟ. ೭೭೯-೮೦)*

ಇಂಥ ಪ್ರತಿಜ್ಞೆಗೆ ಬದ್ಧರಾಗಿ ಜೀವನ ನಡೆಸುವರೇ ಪವಿತ್ರಾತ್ಮರಾದ ಹರಿದಾಸರು. ಅವರ ವಾಣಿಯಲ್ಲಿ ಬಂದುದೇ ಹರಿದಾಸ ಸಾಹಿತ್ಯ. ಅವರ ಅನುಭವಕ್ಕೆ ಬಂದುದೇ ವೇದಾಂತಸಾರ.

ಹರಿದಾಸರು ಲೋಕಕ್ಕೆ ನೀಡುವ ಸಂದೇಶವೇನು? ಈ ಮಾತಿಗೆ ಉತ್ತರ ಹೇಳುವುದು ಸುಲಭ. ಅವರು ಮಾಡಿದ ಕಾರ್ಯ ಬಹು ದೊಡ್ಡದು. ಲೋಕ ಶಿಕ್ಷಣಾರ್ಥವಾಗಿ ಅವರು ಜನ ಸಾಮಾನ್ಯರಿಗೆ ಭಕ್ತಿ ಜ್ಞಾನ ವೈರಾಗ್ಯಗಳನ್ನು ಬೋಧಿಸಿದರು. ಇಷ್ಟರಿಂದಲೇ ಅವರು ತೃಪ್ತಿಗೊಳ್ಳಲಿಲ್ಲ. ಜೀವನಕ್ಕೆ ಬೇಕಾದ ಭರವಸೆಯ ಮಾತನ್ನೂ ಹೇಳಿದರು. ಸಂಸಾರದ ಅನಿತ್ಯತೆಯನ್ನು ಹೇಳಿದ ನಾಲಿಗೆಯಲ್ಲೇ ಜೀವನದ ಸಾರ್ಥಕತೆಗಾಗಿ ಮಾರ್ಗವನ್ನೂ ಸೂಚಿಸಿದರು.

*"ಈ ಸಂಸಾರ ಇರಬಂದುದಲ್ಲ. ಸಂಸಾರವೆಂಬುದು ನೀರಮೇಲಣ ಗುಳ್ಳೆ. ಆದುದರಿಂದ ಇರುವಷ್ಟು ದಿನ ಜ್ಞಾನದಲ್ಲಿ ದಾನ ಧರ್ಮ ಮಾಡಬೇಕು. ಪರಸತಿಯರಿಗೆ ಆಸೆ ಪಡಬಾರದು. ಭಾಗವತರ ಸಹವಾಸ ಮಾಡಬೇಕು. ಸಾವನ್ನು ಪ್ರತಿಯೊಬ್ಬ ವ್ಯಕ್ತಿಯು ಒಂಟಿಯಾಗಿಯೇ ಎದುರಿಸಬೇಕಾಗುವುದು. ಆದುದರಿಂದ ಯಾರು ಹಿತವರೆಂದು ನಂಬುವಂತಿಲ್ಲ. ಮಗನಿಂದ ಸದ್ಗತಿ ಎಂಬುದು ಸುಳ್ಳು. ಆದಿಕೇಶವನ ಧ್ಯಾನಿಸಿದವನಿಗೆ ಸದ್ಗತಿ ತಾನಾಗಿ ದೊರೆಯುವುದು. ಎರಡು ದಿನದ ಈ ಸಂಸಾರದಲ್ಲಿ ಬದುಕಿನ ಎಲ್ಲ ಚಟುವಟಿಕೆಗಳೂ ಕೃಷ್ಣಾರ್ಪಣ ಎಂದು ನೆಮ್ಮದಿಯಿಂದ ಬದುಕಬೇಕು."*

*- (ಕೀರ್ತನಕಾರರು; ಎಚ್. ಎಸ್. ವೆಂಕಟೇಶಮೂರ್ತಿ, ಪುಟ. ೩೦)*

ಈ ಸಂದೇಶವನ್ನೇ ಎಲ್ಲ ಹರಿದಾಸರು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

*ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ* - ಎಂದು ಹೇಳಿದ ಪುರಂದರದಾಸರು, ಮಾನವರಾಗಿ ಹುಟ್ಟಿದ ಮೇಲೆ ಮಾಡಬೇಕಾದ ಕರ್ತವ್ಯದ ಕಡೆ ಗಮನ ಹರಿಯುವಂತೆ ತಮ್ಮ ಕೃತಿಗಳಿಂದ ಮಾಡಿದ್ದಾರೆ.

ಹರಿದಾಸರು "ವೈಕುಂಠಕ್ಕೆ ಭೂಮಿಗೆ ಹರಿನಾಮದ ಸೋಪಾನವ ಮಾಡಿ, ಭಕ್ತರಿಗೆ ಮಾರ್ಗ ತೋರಿದವರಾದರೂ, ದಾಸನಾಗೋ ಭವಪಾಶನೀಗೋ-ಎಂಬ ಮಂತ್ರ ಸದೃಶ ಮಾತನ್ನು ಜಗತ್ತಿಗೆ ಬೋಧಿಸಿದ್ದಾರೆ. ದೇಹವು ತಾನೆಂಬ, ದೈಹಿಕ ಸುಖಗಳಿಗಾಗಿ ಜಗತ್ತಿನ ಜೀವನವೆಂಬ ಭೌತವಾದಿಗಳಿಗೆ ಅವರು ನೀಡುವ ಎಚ್ಚರಿಕೆಯ ಮಾತು ಗಮನಾರ್ಹವಾಗಿದೆ. ದೇಹವೇ ತಾನೆಂಬ ಭ್ರಮೆಯಿಂದ ಜಗತ್ತಿನಲ್ಲಿ ಇಂದು ಅಶಾಂತಿ, ದ್ವೇಷ, ವೈಷಮ್ಯಗಳ ದಳ್ಳುರಿಯಲ್ಲಿ ಮಾನವರ ಬದುಕು ನರಕವಾಗುಗುತ್ತಿದೆ. ಸ್ವಾರ್ಥ ಮೂಲವಾದ ಈ ಭೌತ ವ್ಯಾಪಾರ ಬದುಕನ್ನು ಶಾಪಗ್ರಸ್ತ ಗೊಳಿಸಿದೆ. ಆದುದರಿಂದ ಹರಿದಾಸರ ಸಂದೇಶ ನೊಂದ ಬಾಳಿಗೆ ತಂಪೆರೆಯುತ್ತದೆ. ಮಾನವನ ನಿಜವಾದ ಗುರಿಯತ್ತ ನಡೆಸಲು ನೆರವಾಗುತ್ತಿದೆ ಅದು ನೊಂದವರ ಬೆಂದವರ ದಾರಿ ದೀಪವಾಗಿದೆ."

*"ಶರೀರ ತಾನಲ್ಲ ; ತನ್ನದಲ್ಲ" "ಹಿಗ್ಗುವ ಕುಗ್ಗುವ ದೇಹಕ್ಕೆ ಕುಗ್ಗುವ ಕಾರಣವಿಲ್ಲ. ಈ "ಎರವಿನ ಸಂಸಾರ ನೀರ ಮೇಲಣ ಗುಳ್ಳೆ" "ಅನುಗಾಲವು ಚಿಂತೆ ಜೀವಕ್ಕೆ." "ಪುರಂದರ ವಿಠಲನನ್ನು ನೆನೆದರೆ ಮಾತ್ರ ಚಿಂತೆ ನಿಶ್ಚಿಂತೆ." "ಅತ್ತಲೋ ಇತ್ತಲೋ ಎತ್ತಲೋ ಈ ಸಂಸಾರ! ಒತ್ತಲೆಗೆ ಒತ್ತಲೆ ನಿತ್ಯವಿಲ್ಲ ಪರಿಮಿತಿ ಇಲ್ಲ" " ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಇದೆಲ್ಲವನ್ನು ನೆನೆದು "ವಿಷಯದ ಮೀಸಾರ ಬಿಡು, ವಿಹಿತ ಕರ್ಮದ ಮಾಡು. ವೈರಾಗ್ಯ ಭಾಗ್ಯ ಬೇಕು." "ತಾನ್ಯಾಕೋ ತನ್ನ ದೇಹವ್ಯಾಕೋ, ದಿವ್ಯಜ್ಞಾನದಿಂದ ತಿಳಿದವನೆ ಪರಮ ಯೋಗಿ" "ಹರಿಚಿತ್ತ ಸತ್ಯ, ನರಚಿತ್ತಕ್ಕೆ ಬಂದುದು ಲವಲೇಶ ನಡೆಯದು." "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ." "ಹ್ಯಾಂಗಿರಬೇಕು ಸಂಸಾರದಲ್ಲಿ - ಇರಬೇಕು ಇರದಿರಬೇಕು." "ಬಿನುಗು ವಿಷಯ ಬಿಡಬೇಕು. ದೃಢ ಮನದಿ ಸಂಸಾರ ನೀಡ್ಯಾಡಲು ಬೇಕು." "ಅನುಮಾನವನ್ನು ಬಿಡಬೇಕು ತನ್ನ ತನುವನ್ನು ಧರ್ಮಕೊಪ್ಪಿಸಬೇಕು."* - ಎಂದು ಮಾರ್ಗದರ್ಶನ ಸೂತ್ರಗಳನ್ನು ಬೋಧಿಸಿ, "ಈಸಬೇಕು ಇದ್ದು ಜೈಸಬೇಕು"- ಎಂಬ ಅತ್ಯಂತ ಮನೋಜ್ಞವಾದ ಅರ್ಥಗರ್ಭಿತವಾದ ಕರೆಯನ್ನು ಮಾನವನಿಗೆ ನೀಡಿದ್ದಾರೆ. ಇಂಥ ಹರಿದಾಸರನ್ನು ಧರ್ಮದ ಗೊಡ್ಡುಗಳೆಂದೂ, ನಿರಾಶಾವಾದಿಗಳೆಂದು, ಪರಲೋಕದ ಚಿಂತಕರು ಇಹಲೋಕಕ್ಕೆ ಪ್ರಯೋಜನ ವಿಲ್ಲವೆಂದು ದೂರಕರಿಸಲು ಸಾಧ್ಯವೇ?

ಹರಿದಾಸರಿಂದ ಲೋಕಕ್ಕೆ ಆಗಿರುವ ಉಪಕಾರ ಬಹು ದೊಡ್ಡದು. ಮಾನವನಲ್ಲಿ ಇರುವ ಸಂಕುಚಿತ ಬುದ್ಧಿಯನ್ನು ಹೊಡೆದಿಟ್ಟು, ನಿಸ್ಸಾಹಯಕರೆಂಬ ಭಾವನೆಯನ್ನೂ ಕಿತ್ತು ಬಿಸುಟು, ಜೀವನು ತಾನು ಒಂಟಿಯಲ್ಲ, ತನ್ನ ಒಳ ಹೊರಗೆ ಪರಮಾತ್ಮನು ತುಂಬಿದ್ದಾನೆ. ಅವನು ತನ್ನನ್ನು ನಡೆಸುವ ಗುರುದೈವ, ಬಂಧುವಾಗಿ ಕರುಣಾಮೂರ್ತಿಯಾಗಿದ್ದಾನೆ. ಅವನಿಗೆ ಒಪ್ಪಿಸಿ, ತನ್ನ ಕರ್ತವ್ಯವನ್ನು ಮಾಡುವುದೊಂದೇ, ಸರಳವಾದ ಮಾರ್ಗ. ಹರಿಪ್ರೀತಿಗಳಿಸುವ ಭಕ್ತಿಯಿಂದ ನಿವೃತ್ತಿ, ನಿವೃತ್ತಿಯಿಂದ ಮುಕ್ತಿ, ಇದು ಹರಿದಾಸರ ಸಂದೇಶ.

ಈ ಜಗತ್ತು ಸತ್ಯ. ಇಲ್ಲಿನ ಬದುಕೂ ಅಷ್ಟೇ ಸತ್ಯ. ಆದುದರಿಂದ ಇಲ್ಲಿನ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂದು ಹರಿದಾಸರು ಬೋಧಿಸುತ್ತಾರೆ.

# ೧೦

ವಿಶೇಷವೆಂದರೆ ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ ತತ್ತ್ವಜ್ಞಾನ ಅಂದರೆ ದ್ವೈತ ಸಿದ್ಧಾಂತದ ಸಾರಭೂತವಾದ ಬೇಧವಾದವನ್ನೂ, ಸದೃಢ ಜ್ಞಾನದಿಂದ ಮಾಡುವ ಭಕ್ತಿಯನ್ನೂ, ಭಗವಂತನ ಅನಂತ ಗುಣಗಳ ಸ್ತೋತ್ರ ರೂಪವಾದ ಹರಿನಾಮ ಸಂಕೀರ್ತನೆ ಹಾಗೂ ನಿಷ್ಕಾಮಾಚರಣೆಗಳನ್ನೂ ಪ್ರತ್ಯಕ್ಷವಾಗಿ ಅಲ್ಲದಿದ್ದರೂ, ಪರೋಕ್ಷವಾಗಿ ಜಗತ್ತಿಗೆಲ್ಲ ಆಚಾರ್ಯರ ಸಂದೇಶವನ್ನು ಉತ್ತರಭಾರತದಲ್ಲಿ ಪ್ರಸಾರ ಮಾಡಿದವರೂ, ಪಾಶ್ಚಾತ್ಯ ದೇಶಗಳಲ್ಲಿ ಒಂದು ಭಕ್ತಿಯ ಚಳುವಳಿಯ ಸ್ವರೂಪವನ್ನು ಕೊಟ್ಟಿರುವವರು ಗೌರಾಂಗ ಪ್ರಭುವೆಂದು ಪ್ರಖ್ಯಾತರಾದ ಬಂಗಳಾದದ ಚೈತನ್ಯ ಮಹಾಪ್ರಭು ಹಾಗೂ ಅವರ ಅನುಯಾಯಿಗಳು. ಸ್ವಾರಸ್ಯದ ವಿಷಯವೆಂದರೆ ವ್ಯಾಸರಾಯರ ಕಾಲದಲ್ಲಿ ಚೈತನ್ಯರು ವಿಜಯನಗರಕ್ಕೆ ಭೇಟಿ ಕೊಟ್ಟಿದ್ದರು. ಅವರಿಂದ ಪ್ರಭಾವಿತರಾಗಿ ಅವರು ಉಡುಪಿ ಕ್ಷೇತ್ರಕ್ಕೂ ಹೋಗಿ, ಅಲ್ಲಿನ ಶ್ರೀಕೃಷ್ಣನ ದಿವ್ಯ ದರ್ಶನದಿಂದ ಪುಳಕಿತರಾಗಿ, ಮೈಮರೆತು ಹಾಡಿ, ಕುಣಿದರು. ಇಷ್ಟರಿಂದಲೇ ತೃಪ್ತರಾಗದೆ, ಶ್ರೀ ಮಧ್ವಾಚಾರ್ಯರ ದಿವ್ಯಜ್ಞಾನ ಜ್ಯೋತಿಯನ್ನು ಅವರು ಉಡುಪಿಯ ಶ್ರೀಕೃಷ್ಣ ಮಂದಿರದಿಂದ ಹಚ್ಚಿಕೊಂಡು ತಮ್ಮೊಡನೆ ತೆಗೆದುಕೊಂಡು ಹೋದರು. ಅವರು ಶ್ರೀಕೃಷ್ಣನ ಲೀಲಾ ಭೂಮಿಯಾದ ಬೃಂದಾವನದ ತಮ್ಮ ಮಠದಲ್ಲಿ ಈ ಜ್ಞಾನ ಭಕ್ತಿ ವೈರಾಗ್ಯಗಳ ನಂದಾ ದೀವಿಗೆಯನ್ನು ಬಿಟ್ಟು ಹೋದರು. ಇಂದಿಗೆ ಐದುನೂರು ವರ್ಷಗಳು ಗತಿಸಿದರೂ, ಬೃಂದಾವನದ ಗೌಡೀಯ ಸಂಪ್ರದಾಯದ ಚೈತನ್ಯ ಮಠದಲ್ಲಿ ಅವರ ಈ ನಂದಾದೀಪವು ಶ್ರೀ ಮದಾಚಾರ್ಯರ ಪ್ರಭಾವದ ದಿವ್ಯ ಸಂಕೇತವಾಗಿ ಪ್ರಜ್ವಲಿಸುತ್ತಾ ನಿಂತಿದೆ.

ಚೈತನ್ಯದ ಪರಂಪರೆಯನ್ನು ಕುರಿತು, ಕರ್ಣಪೂರನೆಂಬ ಕವಿಯು ತನ್ನ ಗೌರಾಂಗದೀಪ ಎಂಬ ಗ್ರಂಥದಲ್ಲಿ ಹೀಗೆ ಉಲ್ಲೇಖಿಸಿದ್ದಾನೆ. ಶ್ರೀ ಮಧ್ವಾಚಾರ್ಯರು ಈ ಭಕ್ತಿ ಪರಂಪರೆಗೆ ಆದಿ ಪುರುಷರೆಂದು ಹೇಳಿದ್ದಾನೆ. ಅವರ ಶಿಷ್ಯರು ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವ ತೀರ್ಥರು ಮತ್ತು ಅಕ್ಷೋಭ್ಯತೀರ್ಥರು. ಇವರಲ್ಲಿ ಅಕ್ಷೋಭ್ಯತೀರ್ಥರ ಶಿಷ್ಯರು ಜಯತೀರ್ಥರು. ಅವರ ಶಿಷ್ಯರು ಜ್ಞಾನಸಿಂಧುವೆಂದು ಹೇಳಿದ್ದಾನೆ. ಅವರ ಶಿಷ್ಯರು ದಯಾನಿಧಿಗಳು (ಇವರಿಬ್ಬರ ಹೆಸರುಗಳು ಮಾಧ್ವ ಪೀಠಾಧಿಪತಿಗಳ ಪೀಳಿಗೆಯಲ್ಲಿ ಬರುವುದಿಲ್ಲ) ಅನಂತರ ಬಂದವರು ವಿದ್ಯಾಧಿ ರಾಜರು. ಅವರ ಶಿಷ್ಯರು ರಾಜೇಂದ್ರತೀರ್ಥರು (ಇವರೇ ಪೂರ್ವಾದಿಮಠದ ಮೂಲ ಪುರುಷರು). ಇವರ ಶಿಷ್ಯರು ಜಯ(ಧ್ವಜ)ಧರ್ಮರು. ಮುಂದೆ ಪುರುಷೋತ್ತಮ ಮತ್ತು ಬ್ರಹ್ಮಣ್ಯತೀರ್ಥರು ಆಗಿ ಹೋದರು. (ಕ್ರಿ.ಶ.೧೪೭೮)ಅವರ ಶಿಷ್ಯರು ವ್ಯಾಸತೀರ್ಥರು (ಕ್ರಿ.ಶ.೧೫೩೯) ಮುಂದೆ ಲಕ್ಷ್ಮೀಪತಿ ವೇದಾಂತ ಸಿಂಹಾಸನವನ್ನು ಆಳಿದರೆಂದು ಕವಿಕರ್ಣಪೂರನು ತಿಳಿಸುತ್ತಾನೆ. ಅವರ ಶಿಷ್ಯರು ಮಾದೇಂದ್ರಪುರಿ. ಈ ಮಾದೇಂದ್ರಪುರಿಗಳಿಗೆ ಈಶ್ವರಪುರಿ ಮತ್ತು ನಿತ್ಯಾನಂದರೆಂಬ ಇಬ್ಬರು ಶಿಷ್ಯರು. ಈಶ್ವರಪುರಿಯ ಶಿಷ್ಯರೇ ಮಹಾಪ್ರಭುಗಳೆಂದು ಹೆಸರಾದ ಗೌರಾಂಗರು.

ಈ ಬಗ್ಗೆ ಬರೆಯುತ್ತಾ ಬಂಗಾಳದ ಸುಪ್ರಸಿದ್ಧ ವಿದ್ವಾಂಸರಾದ ರಾವ್ ಸಾಹೇಬ್

ದಿನೇಶ ಚಂದ್ರಸೇನರು ತಮ್ಮ Chaitanya and his friends(ಚೈತನ್ಯ ಮತ್ತು ಅವರ ಮಿತ್ರರು) - ಎಂಬ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ-

"It was to the Madhwa sect that Bengal owes her great Vieshnava faith, the culminating point of which was reached in the life of Chaitanya. We find in the Bhakti Ratnakara that Vishnupuri a disciple of Jayadharma (Jayadwaja) the tenth leader of their sect, popularised the Bhagavatha amongst the Bengalis about the middle of 13th century by his celebrated Sanskrit work called Bhakti Ratnavali. This seems to be the first inpetus to Vieshnavism that came from Madhwa order in Bengal"

*-( ಕರ್ನಾಟಕ ಭಕ್ತ ವಿಜಯ; ಬೇಲೂರು ಕೇಶವದಾಸರು, ಪುಟ - ೬೧)*

ಕವಿಕರ್ಣಪೂರ ಮತ್ತು ದಿನೇಶಚಂದ್ರಸೇನರು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿರುವ ಚೈತನ್ಯನಗುರು (ಭಕ್ತಿ ರತ್ನಾಕರದ ಪ್ರಕಾರ ವಿಷ್ಣುಪುರಿ) ವಿನ ಹೆಸರಿನ ಬಗೆಗೆ ವ್ಯತ್ಯಾಸವಿದ್ದರೂ, ಬಂಗಾಳದ ವೈಷ್ಣವ ಪಂಥಕ್ಕೆ ಶ್ರೀಮಧ್ವಾಚಾರ್ಯರೇ ಮೂಲವೆಂಬ ಬಗ್ಗೆ ಭಿನ್ನಾಭಿಪ್ರಾಯ ವಿರುವುದಿಲ್ಲ.

ಕ್ರಿ.ಶ. ೧೪೫೬ರಲ್ಲಿ ಬಂಗಾಳದ ನದಿಯಾ ಪ್ರಾಂತ್ಯದಲ್ಲಿ ಅವತರಿಸಿದ ಶ್ರೀಕೃಷ್ಣ ಭಕ್ತ ಚೈತನ್ಯರು ಭಕ್ತಿ ಸಂಪ್ರದಾಯದ ದೊಡ್ಡ ವಿಭೂತಿ ಪುರುಷರು. ಉತ್ತರ ಭಾರತದಲ್ಲೆಲ್ಲಾ ರಾಧಾಕೃಷ್ಣರ ಭಕ್ತಿ ಸಂಪ್ರದಾಯವನ್ನು ಪ್ರಚಾರ ಮಾಡಿದರು. ಇದಕ್ಕೆ ಬೇಕಾದ ಜ್ಞಾನದ ಹಿನ್ನೆಲೆಯನ್ನು ಒದಗಿಸಿದವರೇ ಶ್ರೀ ಮಧ್ವಾಚಾರ್ಯರು. ಇವರಿಗೆ ರಘುನಾಥಭಟ್ಟ, ರೂಪ ಗೋಸ್ವಾಮಿ, ಜೀವಗೋಸ್ವಾಮಿ, ರಘುನಾಥದಾಸ, ಗೋಪಾಲಭಟ್ಟ, ಸನಾತನಗೋಸ್ವಾಮಿ - ಎಂಬ ಆರುಮಂದಿ ಶಿಷ್ಯರು ಪ್ರಸಿದ್ಧರಾಗಿದ್ದರು. ಇವರಲ್ಲಿ ರೂಪಗೋಸ್ವಾಮಿ ಮತ್ತು ಜೀವ ಗೋಸ್ವಾಮಿ ಇವರು ಅನೇಕ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ. ಚೈತನ್ಯ ಚರಿತಾಮೃತವನ್ನು ಬರೆದ ಕೃಷ್ಣದಾಸ ಕವಿರಾಜರು ಜೀವಗೋಸ್ವಾಮಿಯ ಶಿಷ್ಯರು.

ಮುಂದೆ ಬಂದ ಚೈತನ್ಯ ಸಂಪ್ರದಾಯದ ಭಕ್ತರಲ್ಲಿ ಗ್ರಂಥಕಾರರಾದ ವಿಶ್ವನಾಥ ಚಕ್ರವರ್ತಿ ಪ್ರಮುಖರು. ಇವನು ಇಪ್ಪತ್ತು ಗ್ರಂಥಗಳನ್ನು ಬರೆದಿದ್ದಾನೆ. ಇವರಲ್ಲೆಲ್ಲಾ ಶಿಖರ ಪ್ರಾಯನೆಂದರೆ ಬಲದೇವ ವಿದ್ಯಾಭೂಷಣ. ಉತ್ಕಲ ಪ್ರಾಂತ್ಯದಲ್ಲಿ ಜನಿಸಿದ ಈ ಆಚಾರ್ಯ ಪುರುಷನು ಶ್ರೀವ್ಯಾಸರಾಯರ ಅಭಿಮಾನಿಗಳಲ್ಲಿ ಅಗ್ರಗಣ್ಯನಾಗಿದ್ದನು. ಅವರ ಗ್ರಂಥಗಳನ್ನು ಕುರಿತು ಪ್ರಮೇಯ ರತ್ನಾವಲಿಯನ್ನು ರಚಿಸಿದ್ದನು. ಮುಂದೆ ಬಂದ ಗ್ರಂಥಕಾರರು ಭಕ್ತಿ ವಿನೋದ ಠಕ್ಕರ, ರಾಧಾವಿನೋದ ಗೋಸ್ವಾಮಿ, ಅತುಲ ಕೃಷ್ಣ ಗೋಸ್ವಾಮಿ, ರಸಿಕಮೋಹನ ವಿದ್ಯಾಭೂಷಣ ಮತ್ತು ಗೋಸ್ವಾಮಿ ದಾಮೋದರಶಾಸ್ತ್ರಿ. ಇವರೆಲ್ಲರಿಗಿಂತ ಆದರ್ಶ ಪ್ರಾಯವಾದ ಅದ್ಭುತ ಕಾರ್ಯ ಮಾಡಿದವರು ಭಕ್ತಿ ಸಿದ್ಧಾಂತ ಸರಸ್ವತಿ ಪ್ರಭುಪಾದರು.

ಇವರು ಕ್ರಿ.ಶ. ೧೮೭೪ರಲ್ಲಿ ಉತ್ಕಲ ಪ್ರಾಂತ್ಯದಲ್ಲಿ ಜನಿಸಿದರು. ತಮ್ಮ ಜೀವಿತ

ಕಾಲದಲ್ಲೇ ೭೫ ಮಠಗಳನ್ನು, ದ್ವೈತಸಿದ್ಧಾಂತ ಕೃಷ್ಣಭಕ್ತಿಗಳ ಪ್ರಸಾರಕ್ಕಾಗಿ ಸ್ಥಾಪಿಸಿದರು. ಇವರು ಹೋದಲ್ಲೆಲ್ಲಾ ಚೈತನ್ಯಮಠ, ಮಧ್ವ ಗೌಡೀಮಠ, ಬ್ರಹ್ಮ ಮಾಧ್ವ ಮಠಗಳನ್ನು ಸ್ಥಾಪಿಸಿದುದಲ್ಲದೆ, ಅಮೆರಿಕಾದಲ್ಲಿ ನೆಲೆಸಿ, ISKCON – ಇಂಟರ್‌ನ್ಯಾಷನಲ್ ಸೊಸೈಟಿ ಫಾರ್ ಕೃಷ್ಣ ಕಾನ್ಷಸ್‌ನೆಸ್ ಎಂಬ ಭಕ್ತಿಪಂಥ – ಹರೇ ಕೃಷ್ಣ ಪಂಥವನ್ನು ಸ್ಥಾಪಿಸಿ, ಅಲ್ಲೇ ನಿರ್ಯಾಣ ಹೊಂದಿದರು. ಇವರು ಅಲಭ್ಯವಾಗಿದ್ದ ಅನೇಕ ಸಂಸ್ಕೃತ, ಬಂಗಾಳಿ ಗ್ರಂಥಗಳನ್ನು ಪ್ರಕಟಿಸಿದರು. ಪತ್ರಿಕೆಗಳನ್ನು ನಡೆಸಿದರು.

ಪ್ರಭುಪಾದರು ಮಹಾ ವಿದ್ವಾಂಸರೂ, ಸಂಘಟನಾ ಚತುರರೂ, ಗ್ರಂಥಕಾರರೂ ಆಗಿದ್ದರು. ಇವರ ಪ್ರಭಾವಕ್ಕೆ ಬಿದ್ದ ಸಹಸ್ರಾರು ಪಾಶ್ಚಾತ್ಯ ಯುವಕರು ಶ್ರೀಕೃಷ್ಣಭಕ್ತಿ ಪಂಥವನ್ನು ಸೇರಿದರು. ಇಡೀ ಕುಟುಂಬಗಳೇ ಭಕ್ತಿ ಪಂಥಕ್ಕೆ ದೀಕ್ಷಿತವಾಗಿ, ಶುದ್ಧ ಭಾಗವತ ಪಂಥದ ಅನುಯಾಯಿಗಳಾಗಿ ಸರಳವೂ, ಪವಿತ್ರವೂ ಆದ ರೀತಿಯಲ್ಲಿ ಸದಾಚಾರಸಂಪನ್ನರಾಗಿ ಬಾಳಿದರು. ಭಾರತೀಯರಲ್ಲಿ ಕಾಣದಿರುವ ಇವರ ಭಗವದ್ಭಕ್ತಿ, ಆಚಾರ, ವೈಷ್ಣವ ಸಂಪ್ರದಾಯಗಳು ನಮ್ಮೆಲ್ಲರಿಗೆ ಸ್ಫೂರ್ತಿಯ ಚಿಲುಮೆಯಾಗಿದೆ.

ಹೀಗೆ ಶ್ರೀ ಮಧ್ವಾಚಾರ್ಯರು ಕನ್ನಡನಾಡಿನಲ್ಲಿ ಬೆಳಗಿದ್ದ ಜ್ಞಾನಜ್ಯೋತಿ – ಪೂರ್ಣಪ್ರಜ್ಞಜ್ಯೋತಿಯು ಇಡೀ ನಾಡನ್ನೆಲ್ಲಾ ಬೆಳಗಿತು. ಅಷ್ಟು ಮಾತ್ರವಲ್ಲ, ದೇಶ ವಿದೇಶಗಳಿಗೂ ವ್ಯಾಪಿಸಿ ಜ್ಞಾನ ತೃಷ್ಣೆಯುಳ್ಳ ಸುಜೀವರಿಗೆಲ್ಲಾ ಬೆಳಕನ್ನು ನೀಡಿತು. ಅಂತಲೇ ವಂಗದೇಶವು ದ್ವೈತಮತಕ್ಕೆ ಮನಸೋತು ಅದನ್ನು ಹೃತ್ಪೂರ್ವಕವಾಗಿ ಅಪ್ಪಿಕೊಂಡದರಲ್ಲಿ ಆಶ್ಚರ್ಯವೇನು?

## ೧೧

ಮಾನವನ ಬದುಕಿನ ಜೀವಂತ ಸಮಸ್ಯೆಗಳಿಗೆ ನೇರವೂ, ತರ್ಕಬದ್ಧವೂ ವ್ಯಾವಹಾರಿಕವೂ ಆದ ಪರಿಹಾರಗಳನ್ನು ನೀಡುವ ಹರಿದಾಸ ಸಾಹಿತ್ಯವನ್ನು ಪ್ರಚಾರ ಮಾಡಿದ ಪ್ರಯತ್ನಗಳು ಇಂದು ನಿನ್ನೆಯದಲ್ಲ. ಒಂದೂವರೆ ಶತಮಾನದ ಹಿಂದೆಯೆ ಜರ್ಮನಿಯಿಂದ ಮತ ಪ್ರಾಸರಕ್ಕೆಂದು ಬಂದಿದ್ದ ಮೊಗ್ಲಿಂಗ್ ಎಂಬ ಕ್ರೈಸ್ತ ಪಾದ್ರಿಯು ತನ್ನ ಗಮನಕ್ಕೆ ಬಂದ ದಾಸಸಾಹಿತ್ಯದ ಅಣಿಮುತ್ತುಗಳನ್ನು ಆರಿಸಿ ಅವುಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿ, ಪ್ರಥಮ ಬಾರಿಗೆ ಪಾಶ್ಚಾತ್ಯ ಜಗತ್ತಿಗೆ ಪರಿಚಯ ಮಾಡಿಕೊಟ್ಟನು. ತದನಂತರ ಕರ್ನಾಟಕ ರಾಜ್ಯದ ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ರೈಸ್ ಸಾಹೇಬರೂ, ಕನ್ನಡಕ್ಕೊಂದು ಕೋಶ ರಚಿಸಿಕೊಟ್ಟರಲ್ಲದೆ- ಈ ದಾಸಸಾಹಿತ್ಯದ ಸೌಂದರ್ಯ, ವಿಚಾರ, ಸರ್ವಕಾಲಿಕ ಮೌಲ್ಯಗಳಿಂದ ಪ್ರಭಾವಿತರಾಗಿ ಅಳಿಯುತ್ತಿದ್ದ ದಾಸ ಸಾಹಿತ್ಯದ ಹಸ್ತ ಪ್ರತಿಮೆಗಳನ್ನು ರಕ್ಷಿಸುವ, ಪರಿಷ್ಕರಿಸುವ, ಪ್ರಕಟಿಸುವ ಕಾರ್ಯವನ್ನು ಕೈಗೊಂಡರು. ಇವರೆಲ್ಲರೂ ಕನ್ನಡಿಗರ ಪಾಲಿಗೆ ಪ್ರಾತಃ ಸ್ಮರಣೀಯರಾಗಿದ್ದಾರೆ. ಈ ಶತಮಾನದ ಮೊದಲ ದಶಕದಲ್ಲಿ ಬೆಂಗಳೂರಿನ ಮೂರ್ತಿರಾವ್ ಎಂಬುವರೂ, ಅನಂತರ ಮದರಾಸಿನ ತಿರುಮಲರಾವ್ ಎಂಬುವರೂ ತಮ್ಮ ಮಾಧ್ವ ಸಿದ್ಧಾಂತ ಗ್ರಂಥ ಮಾಲೆಯಲ್ಲಿ ಕೆಲವು ಗ್ರಂಥಗಳನ್ನು ಪ್ರಕಟಿಸಿದರು.

ದಾಸ ಸಾಹಿತ್ಯ ಸಂಗ್ರಹ,ಸಂಸ್ಕರಣ ಪ್ರಚಾರಗಳಲ್ಲಿ ಅನಂತರ ಕಾಣುವ ದೊಡ್ಡ ಹೆಜ್ಜೆ ಎಂದರೆ ಬೇಲೂರು ಕೇಶವದಾಸರು ಬಹಳ ಶ್ರಮದಿಂದ ಪ್ರಕಟಿಸಿದ ಅಮೂಲ್ಯ ಗ್ರಂಥ ಕರ್ನಾಟಕ ಭಕ್ತ ವಿಜಯ !

ಬೇಲೂರು ಕೇಶವದಾಸರು ಸುಪ್ರಸಿದ್ಧ ಹರಿದಾಸರ ಕೀರ್ತನಕಾರರ ವಂಶದಲ್ಲಿ ಹುಟ್ಟಿದರು. ಇವರ ತಂದೆ ಬೇಲೂರು ವೆಂಕಟಸುಬ್ಬದಾಸರು. ಭೃಗು ಅಂಶದವರೂ, ಮಹಾನುಭಾವರೂ ಆದ ವಿಜಯದಾಸರ ಶಿಷ್ಯ ಪೀಳಿಗೆಯಲ್ಲಿ ಬಂದವರು. ವೆಂಕಟೇಶದಾಸರು ಪೂರ್ಣಯ್ಯನವರ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದ್ದರು. ಇವರ ಪುತ್ರ ವೆಂಕಟಸುಬ್ಬ ದಾಸರು ಬೇಲೂರಿನಲ್ಲಿ ನೆಲೆಸಿ, ಕೀರ್ತನಕಾರರಾಗಿ ದಾಸಸಾಹಿತ್ಯ ಪ್ರಚಾರ ಮಾಡಿದರು. ಇವರ ಮಕ್ಕಳಾದ ಕೇಶವದಾಸರು ಅನೇಕ ಊರುಗಳನ್ನು ತಿರುಗಿ ದಾಸರ ಬಗ್ಗೆ ವಿಪುಲ ವಿಷಯಗಳನ್ನು ಸಂಗ್ರಹಿಸಿ ಅವರ ಚರಿತ್ರೆಯನ್ನು ಎರಡು ಸಂಪುಟಗಳಲ್ಲಿ (ಕ್ರಿ.ಶ. ೧೯೨೦)ರಲ್ಲಿ ಪ್ರಕಟಿಸಿದರು. ಇದು ಅನೇಕ ದೃಷ್ಟಿಗಳಲ್ಲಿ ಒಂದು ಆಚಾರ್ಯ ಗ್ರಂಥ.

ಈ ಗ್ರಂಥವನ್ನು ಬರೆಯಲು ಒಂದು ಘಟನೆ ಕಾರಣವಾಯಿತೆಂದು ಹೇಳುತ್ತಾರೆ. ಅವರು ಹಂಪೆಯಲ್ಲಿದ್ದಾಗ ತುಂಗಭದ್ರೆಯಲ್ಲಿ ಸ್ನಾನ ಮಾಡಲು ಹೋಗಿ, ಮುಳುಗಿದರಂತೆ. ಯಾರೋ ಪುಣ್ಯಾತ್ಮನ ಸಹಾಯದಿಂದ ಬದುಕಿ ಉಳಿದರಂತೆ. ಉಳಿದ ಶೇಷಾಯಸ್ಸನ್ನು ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ಮೀಸಲಿಡಲು ನಿರ್ಧರಿಸಿದರಂತೆ. ಹೀಗೆ ಆರಂಭವಾದ ಅವರ ದಾಸ ದೀಕ್ಷೆ ಈ ಶ್ರೇಷ್ಠ ಗ್ರಂಥದ ನಿರ್ಮಾಣ ಪ್ರಕಟಣೆಗಳಲ್ಲಿ ಪರ್ಯವಸಾನಗೊಂಡಿತು.

ಈ ಗ್ರಂಥದಲ್ಲಿ ಅಚಲಾನಂದ ದಾಸರಿಂದ ಮೊದಲುಕಲ್ಲು ಶೇಷದಾಸರವರೆಗೆ ಎಲ್ಲ ಅಪರೋಕ್ಷ ಜ್ಞಾನಿಗಳ ಚರಿತ್ರೆ, ಅವರ ಕೃತಿಗಳ ಪರಿಚಯಗಳು ಇರುವುದಲ್ಲದೆ , ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದ ಎಲ್ಲ ಪ್ರಮುಖ ಹರಿದಾಸರ ಪರಿಚಯವನ್ನು ಮಾಡಿಕೊಡಲಾಗಿದೆ. ಕರ್ಣಾಕಟದ ಇತರ ಹರಿದಾಸರು ಎಂಬ ಶೀರ್ಷಿಕೆಯ ಅಡಿಯಲ್ಲಿ ಅಡವಿ ರಾಮದಾಸರು, ಆದವಾನಿಯ ರಾಮಸುಂದರದಾಸರು, ಪ್ರೇಮದಾಸರು, ಶ್ರೀನಿವಾಸದಾಸರು, ಮೈಸೂರು ಕೃಷ್ಣದಾಸರು, ರಾಮರಾಯರು, ದೂರ್ವಾಸರಾಯರು, ತುಳಸೀ ರಾಮದಾಸರು, ಮಡಕಶಿರದ ಭೀಮದಾಸರು, ಕಮಲಾಪತಿದಾಸರು, ಗುಂಡಾಚಾರ್ಯರು, ಬೇಲೂರು ವೆಂಕಟಸುಬ್ಬದಾಸರು, ಜೋಗಿವೆಂಕಟಪ್ಪಾಚಾರ್ಯರು, ಹರಪನಹಳ್ಳಿ ರಾಮಾಚಾರ್ಯರು, ತುಂಗಮ್ಮನವರು – ಹೀಗೆ ಮೂವತ್ತಕ್ಕೂ ಹೆಚ್ಚಿನ ಹರಿದಾಸರನ್ನು ಪರಿಚಯಿಸಿದ್ದಾರೆ.

ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಮೈಸೂರಿನ ಗುರುಗೋವಿಂದ ವಿಠಲದಾಸರು ತಮ್ಮ ಹರಿಭಕ್ತ ವಿಜಯ ಗ್ರಂಥ ಮಾಲೆಯಲ್ಲಿ ಏಳು ಸಂಪುಟಗಳನ್ನು ಪ್ರಕಟಿಸಿ, ಪರಮಪ್ರಿಯ ಸುಬ್ಬರಾಯರು, ವಾದಿರಾಜರು, ವಿಶ್ವಪ್ರಿಯತೀರ್ಥರು, ಜಮಖಂಡಿ ವಾದಿರಾಜಾಚಾರ್ಯರು, ತಂದೆ ವರದಗೋಪಾಲದಾಸರು, ಶ್ರೀವರವಿಠಲದಾಸರು, ಶ್ರೀನಿಧಿವಿಠಲದಾಸರು, ತಂದೆ ಶ್ರೀಪತಿ ದಾಸರು, ಶ್ರೀಪತಿವಿಠಲದಾಸರು, ಭೂವರಾಹ ರಘುಪತಿವಿಠಲದಾಸರು, ರಘುಪತಿವಿಠಲ ದಾಸರು, ವ್ಯಾಸವಿಠಲದಾಸರು, ಮೋಹನದಾಸರು, ಮಧ್ವಪತಿ ವಿಠಲದಾಸರು, ಪ್ರಸನ್ನ ವೆಂಕಟಪತಿದಾಸರು,

ವಿಜಯರಾಮಚಂದ್ರ ವಿಠಲದಾಸರು, ಶ್ರೀಜಯೇಶವಿಠಲದಾಸರು, ಮಣೂರುದಾಸರು, ಹರಪನ ಹಳ್ಳಿ ಭೀಮವ್ವ, ಶ್ರೀವಿಷ್ಣುತೀರ್ಥರು (ವ್ಯಾಸಸಾಹಿತ್ಯ) ವಿಠಿಶೇಷಾಚಾರ್ಯರು, ರಾಘವಾ ಚಾರ್ಯರು, ಪಾಂಡುರಂಗಿ ಹುಚ್ಚಾಚಾರ್ಯರು – ಮುಂತಾದ ಹರಿದಾಸರ ಜೀವನ ಚರಿತ್ರೆಗಳನ್ನೂ ಅವರ ಮಹಿಮಾತಿಶಯಗಳನ್ನೂ ಕೃತಿಸಂಗ್ರಹವನ್ನೂ ಪರಿಚಯ ಮಾಡಿಕೊಟ್ಟು ಮಹೋಪಕಾರ ಮಾಡಿಕೊಟ್ಟಿದ್ದಾರೆ. ಇದರಂತೆ ಮುದ್ದು ಮೋಹನದಾಸರು, ಪ್ರಸನ್ನ ಶ್ರೀನಿವಾಸದಾಸರ ಬಗೆಗೂ ಇತರರು ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

ಪುರಂದರದಾಸರ ಹಾಗೂ ಕನಕದಾಸರ ಚತುಶ್ಶತಮಾನೋತ್ಸವಗಳ ಸಂದರ್ಭದಲ್ಲಿ ದಾಸರಾಯರ ಎಲ್ಲ ಕೃತಿಗಳನ್ನು ಪ್ರಕಟಿಸಿ, ಆಸಕ್ತರಿಗೆ ಅವರ ಕೃತಿಗಳ ವಿರಾಟ್‌ದರ್ಶನ ಮಾಡಿಸಿದ್ದಾರೆ. ಅಲ್ಲದೆ ಬೆಂಗಳೂರಿನ ಹರಿದಾಸರತ್ನಂ ಗೋಪಾಲದಾಸರು ತಮ್ಮ ಹರಿದಾಸ ಭಾರತಿ ಗ್ರಂಥ ರತ್ನ ಮಾಲೆಯಲ್ಲಿ ಕೆಲವು ದಾಸ ಸಾಹಿತ್ಯ ಗ್ರಂಥಗಳನ್ನು ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಈ ದಿಸೆಯಲ್ಲಿ ಗೋಪಾಲದಾಸರು ಆರಂಭಿಸಿದ ಹರಿದಾಸ ಭಾರತಿ ಪತ್ರಿಕೆಯು ದಾಸ ಸಾಹಿತ್ಯ ಪ್ರಚಾರ ಕಾರ್ಯದಲ್ಲಿ ಮಹತ್ವ ಪಾತ್ರವಹಿಸಿತು. ಇದು ನಿಲ್ಲಬೇಕಾಗಿ ಬಂದುದು ದೌರ್ಭಾಗ್ಯ. ಶ್ರೀ ರಾಜಾಗುರುರಾಜಾಚಾರ್ಯರು ತಮ್ಮ ಪರಿಮಳ ಗ್ರಂಥ ಮಾಲೆಯಲ್ಲೂ, ಶ್ರೀ ಎಚ್.ಎಸ್. ಶ್ರೀನಿವಾಸಮೂರ್ತಿ ಅವರು ಉರುಗಾದ್ರಿ ವಿಠಲ ಗ್ರಂಥಮಾಲೆಯಲ್ಲೂ ಹರಿದಾಸರ ಕೃತಿ ಪರಿಚಯ ಮಾಡಿಕೊಟ್ಟಿದ್ದಾರೆ.

ಹುಬ್ಬಳ್ಳಿಯ ಕಲಮದಾನಿ ಗುರುರಾಯರು ಹರಿದಾಸರ ಕಥೆಗಳು ಎಂಬ ಗ್ರಂಥವನ್ನು ರಚಿಸಿ, ಇದರಲ್ಲಿ ಶ್ರೀಪಾದರಾಜರಿಂದ ಆರಂಭಿಸಿ ಗೋವಿಂದ ವಿಠಲದಾಸರವರೆಗೆ ೬೬ ಮಂದಿ ಖ್ಯಾತ ಹರಿದಾಸರೆಲ್ಲರ ಪರಿಚಯವನ್ನು ಮಾರ್ಮಿಕವಾಗಿ ಮಾಡಿಕೊಟ್ಟು ಅಮೂಲ್ಯ ವಿಷಯ ಗಳನ್ನು ಹೊರಗೆಡಹಿದ್ದಾರೆ.

ದಾಸ ಸಾಹಿತ್ಯದ ಸಂಪುಟಗಳು ಅಲಭ್ಯವಾದುದನ್ನು ಅರಿತು ಧಾರವಾಡದ ಸಮಾಜ ಪುಸ್ತಕಾಲಯದವರು ಹತ್ತು ಸಂಪುಟಗಳಿಗೂ ಹೆಚ್ಚಿನ ಕಾವ್ಯಪ್ರೇಮಿ ಅವರ ದಕ್ಷ ಸಂಪಾದಕತ್ವದಲ್ಲಿ ಎಲ್ಲ ಹರಿದಾಸರ ಕೃತಿಗಳ ಪರಿಚಯವನ್ನು ಜನ ಸಾಮಾನ್ಯರಿಗೆ ಮಾಡಿಕೊಟ್ಟು ಉಪಕಾರ ಮಾಡಿದ್ದಾರೆ.

ಈ ದಿಸೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದವರು ಕೆಲವು ಹೊತ್ತಿಗೆಗಳನ್ನು ಪ್ರಕಟಿಸುವ ಸಾಹಸ ಮಾಡಿದ್ದಾರೆ. ಇದು ಸ್ತುತ್ಯಕಾರ್ಯ.

ಎಲ್ಲಕ್ಕಿಂತಲೂ ಸಂತೋಷದಾಯಕವಾದ ಸಂಗತಿ ಎಂದರೆ ತಿರುಪತಿ ತಿರುಮಲೆ ದೇವಸ್ಥಾನದ ಸಂಸ್ಥೆಯು ಉತ್ತಮ ವ್ಯಕ್ತಿಗಳ ಮಾರ್ಗ ದರ್ಶನದಲ್ಲಿ ಹರಿದಾಸ ಸಾಹಿತ್ಯ ಪ್ರಾಜೆಕ್ಟ್ ಯೋಜನೆಯ ಅಡಿಯಲ್ಲಿ ವಾಙ್ಮಯವನ್ನು ಜಗದಾದ್ಯಂತ ಪ್ರಚಾರ ಮಾಡಲು ಒಂದು ಕಾರ್ಯಕ್ರಮ ಹಾಕಿಕೊಂಡುದು. ಈ ಸಂಸ್ಥೆಯಿಂದ ಹಲವು ಉತ್ತಮ ಪ್ರಕಟಣೆಗಳ ಜತೆಯಲ್ಲಿ ಹರಿದಾಸರ ಸ್ಮಾರಕ ಪ್ರದರ್ಶನ, ಪ್ರಚಾರ, ವಿಚಾರ ಸಂಕಿರಣ, ತತ್ತ್ವಜ್ಞಾನ ಸಮ್ಮೇಳನ ಮುಂತಾದ ದಿಸೆಯಲ್ಲಿ ಸ್ತುತ್ಯವಾದ ವ್ಯಾಪಕವಾದ ಕಾರ್ಯಕ್ರಮಗಳು ನಡೆಯು

ತ್ತಿರುವುದು ಸಾಕ್ಷಾತ್ ಶ್ರೀನಿವಾಸನೇ ಹರಿದಾಸ ಸಾಹಿತ್ಯ ಪ್ರಚಾರಕ್ಕೆ ಟೊಂಕಕಟ್ಟಿ ನಿಂತಿರುವಂತೆ ಭಾಸವಾಗುತ್ತದೆ. ಮುಂದೆ ಬರಲಿರುವ ದಿನಗಳು ಹರಿದಾಸ ವಾಙ್ಮಯದ ಮರೆತು ಹೋದ ಸ್ವರ್ಣಯುಗವನ್ನು ಮರಳಿ ತರಬಹುದೆಂದು ನಿರೀಕ್ಷಿಸಬಹುದಾಗಿದೆ. ತಿರುಪತಿ ಶ್ರೀನಿವಾಸನ ಇಚ್ಛೆಯೂ ಇದೇ ಆಗಿರಬಹುದು.

ಇವರೆಲ್ಲರಿಗೆ ಸ್ಫೂರ್ತಿಯನ್ನೂ, ಮೂಲ ಸಾಮಗ್ರಿಯನ್ನು ಒದಗಿಸಿ, ಹರಿದಾಸ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸಿ ಅವರ ವ್ಯೋಮ ದರ್ಶನ ಮಾಡಿಸಿದವರು ಪ್ರಾತಃಸ್ಮರಣೀಯರಾಗಿ ಉಡುಪಿ ಕ್ಷೇತ್ರದಲ್ಲಿ ಇದ್ದುಕೊಂಡು ತಮ್ಮ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯವನ್ನು ಆರಂಭಿಸಿ ಅದರ ಮೂಲಕ ಮಹತ್ತರ ಸೇವೆ ಸಲ್ಲಿಸಿದ ಪಾವಂಜೆ ಗುರುರಾಯರು, ಬೆಂಗಳೂರಿನಲ್ಲಿ ಸುಬೋಧ ಪತ್ರಿಕೆಯನ್ನು ಆರಂಭಿಸಿ ಕರ್ನಾಟಕ ಹರಿದಾಸ ವಾಙ್ಮಯವನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಉಪಕಾರ ಮಾಡಿದ ರಾಮರಾಯರು. ಇವರೆಲ್ಲರಿಗೆ ಕೀರ್ತಿ ಶಿಖರದಂತೆ ನಿಲ್ಲುವ ಕಾರ್ಯ ಮಾಡಿದವರು ಗೋರೆಬಾಳ ಹನುಮಂತರಾಯರು. ಇವರು ಹರಿದಾಸ ಸಾಹಿತ್ಯದ ಸಂಗ್ರಹ, ಶೋಧನೆ, ಪರಿಷ್ಕರಣ, ಪ್ರಕಟನೆ ಪ್ರಚಾರ ಕಾರ್ಯಕ್ಕಾಗಿ ತಮ್ಮ ಸಮಸ್ತ ಶಕ್ತಿಯನ್ನು ಮೀಸಲಿಟ್ಟು, ಅವಿಶ್ರಾಂತವಾಗಿ ದುಡಿದು, ಕರ್ನಾಟಕದ ಎಲ್ಲ ಹರಿದಾಸರ ಕೃತಿಗಳನ್ನು ಧಾರಾವಾಹಿಯಾಗಿ, ತಮ್ಮ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಮೂಲಕವಾಗಿ ಪ್ರಕಟಿಸಿದ್ದಾರೆ. ಈ ಮೂವರು ಪ್ರಾತಃ ಸ್ಮರಣೀಯ ದಾಸ ತಪಸ್ವಿಗಳ ಪ್ರಯತ್ನದ ಫಲವಾಗಿ, ಮೈಸೂರು ವಿಶ್ವ ವಿದ್ಯಾನಿಲಯದವರು ಹರಿದಾಸರ ಸಮಗ್ರ ಸಾಹಿತ್ಯವನ್ನು ಪ್ರಕಟಿಸಲು ಒಂದು ಯೋಜನೆಯನ್ನು ಹಾಕಿಕೊಳ್ಳುವಂತೆ ಆಯಿತು.

ಇತ್ತೀಚೆಗೆ ಕರ್ನಾಟಕ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖೆಯ ವತಿಯಿಂದ ದಾಸಸಾಹಿತ್ಯದ ಸಮಗ್ರ ಕೃತಿಗಳನ್ನೂ ಸುಮಾರು ೫೦ ಸಂಪುಟಗಳಲ್ಲಿ ಪ್ರಕಟಿಸಿ, ಸುಲಭ ಬೆಲೆಯಲ್ಲಿ ಎಲ್ಲ ಆಸಕ್ತರಿಗೂ ದೊರೆಯುವಂತೆ ಒಂದು ಸಾರ್ಥಕ ಕಾರ್ಯ ಮಾಡಿರುವುದು ಗಮನಾರ್ಹ.

ದಾಸ ವಾಙ್ಮಯದಲ್ಲಿ ಕೃತಿ ರಚನೆ ಮಾಡಿದ ಪುರುಷರ ಸಂಖ್ಯೆ ಹೆಚ್ಚಿಸಿದ್ದರೂ, ಸ್ತ್ರೀಯರೂ ಕೃತಿ ರಚನೆ ಮಾಡದೆ ಇಲ್ಲ. ಇಂಥ ಹಲವಾರು ಮಹಿಳಾ ಮಣಿಗಳು ಬರೆದ ದೇವರನಾಮ, ಕೀರ್ತನೆ ಮತ್ತು ಸಾಹಿತ್ಯ ಗ್ರಂಥಗಳು ದೊರತಿವೆ. ಇವುಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳ ಪ್ರತಿಪಾದನೆ ಇದೆ. ಇವರಲ್ಲಿ ಮುಖ್ಯವಾಗಿ ಹೆಳವನಕಟ್ಟೆ ಗಿರಿಯವ್ವ ಮತ್ತು ಹರಪನಹಳ್ಳಿ ಭೀಮವ್ವ. ಇವರು ಎಲ್ಲರ ಗಮನಕ್ಕೆ ಪಾತ್ರರಾಗಿದ್ದಾರೆ. ಇವರ ಕೃತಿಗಳಲ್ಲಿ ಆಳವಾದ ಆಧ್ಯಾತ್ಮಿಕ ಅನುಭವವಿದೆ. ಇವರಂತೆಯೇ ದಾಸ ಸಾಹಿತ್ಯಕ್ಕೆ ವಿಶಿಷ್ಟ ಕಾಣಿಕೆಯನ್ನು ನೀಡಿದ ಇತರ ಮಾಧ್ವ ಮಹಿಳೆಯರೆಂದರೆ ಗಲಗಲಿಯ ಅವ್ವನವರು, (ರಾಮೇಶ) ತುಳಸಾಬಾಯಿ, ತುಂಗಮ್ಮ, ಓರಬಾಯಿ ಲಕ್ಷ್ಮೀದೇವಮ್ಮ – ಮುಂತಾ ದವರೂ ಕೃತಿರಚನೆ ಮಾಡಿದ್ದಾರೆ. ಇತ್ತೀಚಿನವರೆಗೂ ಮಹಿಳಾ ಮಣಿಗಳು ದೇವರ ನಾಮಗಳನ್ನು ರಚಿಸುವ ಪರಿಪಾಠ ಮುಂದುವರೆದುಕೊಂಡು ಬಂದಿದೆ ಎಂಬುದಕ್ಕೆ ರುಕ್ಮಿಣಿ ಗಿರಿಮಾಜಿ ಅವರ ರಚನೆಗಳು ಸಾಕ್ಷಿಯಾಗಿವೆ.

ಈ ದಿಸೆಯಲ್ಲಿ ಹರಿದಾಸ ಸಾಹಿತ್ಯಕ್ಕೆ ತಮ್ಮ ಜೀವಿತವನ್ನು ಮುಡುಪಿಟ್ಟು ಹುತಾತ್ಮರಾದ ಪಾವಂಜೆ ಗುರುರಾಯರು, ಗೊರೆಬಾಳ ಹನುಮಂತರಾಯರು ಮತ್ತು ಸುಬೋಧ ರಾಮರಾಯರು ಈ ಮೂವರು ಹರಿದಾಸ ಪ್ರವರ್ತಕರನ್ನು ಕುರಿತು ಕಿರು ಪರಿಚಯವನ್ನು ಮಾಡಿಕೊಡುವ ಪ್ರಯತ್ನ ನಡೆದಿದೆ. ಈ ಕಾರ್ಯವು ಮುಂದೆ ಬರಲಿರುವ ಬೃಹದ್ಗ್ರಂಥಗಳಿಗೆ ಅವರ ಸಾರಸ್ವತ ಸೇವೆಯ ವಿಸ್ತಾರವಾದ ಅಧ್ಯಯನಕ್ಕೆ ಪ್ರೇರಣೆ ನೀಡಲಿ ಎಂದು ಹಾರೈಸುತ್ತೇನೆ. ಈ ಹರಿದಾಸ ರತ್ನತ್ರಯರ ಹೆಸರಿನಲ್ಲಿ ಸಂಶೋಧನಾ ಪೀಠಗಳು ಏರ್ಪಟ್ಟು ಆ ಮೂಲಕ ಹರಿದಾಸ ಸಾಹಿತ್ಯದ ಪ್ರಚಾರ ಕಾರ್ಯದ ನಡೆದು, ಹರಿದಾಸರ ಕನಸು ನನಸಾಗಲೆಂದು ಈ ಸಮಯದಲ್ಲಿ ಬಯಸುತ್ತೇನೆ. ಆ ದಿನ ಬೇಗ ಬರಲೆಂದು ಶ್ರೀನಿವಾಸನನ್ನು ಬೇಡುತ್ತೇನೆ.

## ಪರಿಶಿಷ್ಟ:

## ಹರಿದಾಸ ಪರಂಪರೆ

೧) ಶ್ರೀಮದಾನಂದತೀರ್ಥರು ೨) ನರಹರಿತೀರ್ಥರು ೩) ಸುಲುಭಾಚಾರ್ಯರು ೪)ಶ್ರೀಪಾದರಾಯರು ೫)ವ್ಯಾಸರಾಯರು ೬) ವಾದಿರಾಜರು ೭)ಪುರಂದರದಾಸರು ೮)ಕನಕದಾಸರು ೯)ವೈಕುಂಠದಾಸರು ೧೦)ಅಚ್ಯುತವಿಠಲ ೧೧) ಹಿರಿಪುರಂದರವಿಠಲ ೧೨) ವರದಪುರಂದರವಿಠಲ ೧೩)ಗುರುಪುರಂದರವಿಠಲ ೧೪) ಅಭಿನವಪುರಂದರವಿಠಲ ೧೫) ಮಧ್ವಪತಿವಿಠಲ ೧೬) ತಂದೆ ಪುರಂದರವಿಠಲ ೧೭) ಶ್ರೀ ರಾಘವೇಂದ್ರಸ್ವಾಮಿಗಳು ೧೮)ಅಚಲಾನಂದವಿಠಲ ೧೯)ಆನಂದವಿಠಲ ೨೦)ಕನಕಾದ್ರಿವಿಠಲ ೨೧)ಗುಣ ನಿಧಿವಿಠಲ ೨೨)ಗುರುರಾಜವಿಠಲ ೨೩)ಜನಾರ್ಧನವಿಠಲ ೨೪)ಚನ್ನಕೇಶವವಿಠಲ ೨೫)ಕಪಿಲವಿಠಲ ೨೬)ದೇವವಿಠಲ ೨೭)ನರಕಂಠೀರವವಿಠಲ ೨೮) ಪದ್ಮನಾಭವಿಠಲ ೨೯)ಪ್ರದ್ಯುಮ್ನವಿಠಲ ೩೦)ಪ್ರಣವಪತಿವಿಠಲ ೩೧)ಮಹಾನಿಧಿವಿಠಲ ೩೨)ಮಾನನಿಧಿವಿಠಲ ೩೩)ಮೇಲಗಿರಿವಿಠಲ ೩೪)ಮೋದಿನಿಪತಿವಿಠಲ ೩೫)ಮನೋರಮವಿಠಲ ೩೬)ಮುಕುಂದವಿಠಲ ೩೭)ಯೋಗೀಂದ್ರ ವಿಠಲ ೩೮)ರಮಾಸುಂದರವಿಠಲ ೩೯)ರಘುನಾಥವಿಠಲ ೪೦)ರಾಜವಿಠಲ ೪೧)ಲಕ್ಷ್ಮೀಶವಿಠಲ ೪೨)ಶ್ರೀಕಾಂತವಿಠಲ ೪೩) ಶ್ರೀಕೃಷ್ಣವಿಠಲ ೪೪)ಶ್ರೀಧರವಿಠಲ ೪೫)ಸ್ವಾಮಿವಿಠಲ ೪೬)ವಾಮನವಿಠಲ ೪೭) ಕಮಲೇಶವಿಠಲ ೪೮) ಗದುಗಿನ ವೀರ ನಾರಾಯಣ ೪೯)ಗರುಡವಾಹನ ಲಕ್ಷ್ಮೀನಾರಾಯಣ ೫೦) ಗುರುಹಯಮುಖ ೫೧) ಗುರುವೇಣು ಗೋಪಾಲ ೫೨)ಗೋಪಾಲಕೃಷ್ಣ ೫೩)ವರಸಿಂಹದೇವ ೫೪) ಭಗವದಾಸ ೫೫)ಬೆಟ್ಟದಶ್ರೀನಿವಾಸ ೫೬)ಬೆಟ್ಟಗಿರಿಧಾಮ ೫೭) ರಂಗ ನಾಯಕ ೫೮)ರಂಗಧಾಮ ೫೯)ಮುದ್ದುರಂಗ ೬೦)ಮೂಲಗಿರಿತಿಮ್ಮ ೬೧)ವರದರಾಜಕೃಷ್ಣ ೬೨)ವರದರಾಜರಂಗ ೬೩)ವರದರಾಮರಾಜ ೬೪)ವರದರಾಜವೆಂಕಟೇಶ ೬೫)ವರದರಾಜಕೃಷ್ಣ ೬೬)ವೆಂಕಟರಮಣ

೬೭)ವೆಂಕಟದಾಸ ೬೮)ವೇಲಾಪುರಚೆನ್ನ ೬೯)ವಿಜಯೀಂದ್ರರಾಮ ೭೦)ಶ್ರೀದ ವೆಂಕಟ
೭೧)ಶೇಷಾದ್ರೀಶ ೭೨)ಹನುಮೇಶ ೭೩)ಸುಖರಘುಪತಿ ೭೪)ಹಯಮುಖ ೭೫)ವ್ಯಾಸಪತಿಕೃಷ್ಣ
೭೬)ಅಂಬೆಗಾಲುಕೃಷ್ಣ ೭೭)ಪ್ರಸನ್ನವೆಂಕಟದಾಸರು ೭೮)ರುಕ್ಮಿಣೀಪಂಡಿತರು ೭೯)ವಿಜಯ
ದಾಸರು ೮೦)ಅವ್ವನವರು ೮೧)ಹಯಗ್ರೀವವಿಠಲ ೮೨)ಗೋಪಾಲದಾಸರು ೮೩)ವೇಣು
ಗೋಪಾಲವಿಠಲ ೮೪)ಮೋಹನದಾಸರು ೮೫)ಹಯವದನವಿಠಲ ೮೬)ಮುದ್ದುವಿಠಲ
೮೭)ಮಧ್ವೇಶ ವಿಠಲ ೮೮)ರಾಮಚಂದ್ರವಿಠಲ ೮೯)ವ್ಯಾಸತತ್ವಜ್ಞ ವಿಠಲ ೯೦)ನರಸಿಂಹವಿಠಲ
೯೧)ಗುರುಶ್ರೀನಿವಾಸ ವಿಠಲ ೯೨)ವರದವಿಠಲ ೯೩)ಹೆಳವನಕಟ್ಟೆರಂಗ ೯೪)ವರಹತಿಮ್ಮಪ್ಪ
ವಿಠಲ೯೫)ವಿಠಲದಾಸರು೯೬)ರಾಮದಾಸರು೯೭)ರಂಗಪ್ಪದಾಸರು೯೮)ಗೋವಿಂದದಾಸರು
೯೯)ವರದ ಗೋಪಾಲವಿಠಲ ೧೦೦)ಗುರುಗೋಪಾಲವಿಠಲ ೧೦೧)ಕೇಶವವಿಠಲ
೧೦೨)ಜಗನ್ನಾಥದಾಸರು ೧೦೩) ತಂದೆಮೋಹನ ವಿಠಲ ೧೦೪)ಮಧ್ವವರವಿಠಲ
೧೦೫)ಮಿರಜಿಪ್ರಾಣೇಶವಿಠಲ ೧೦೬)ಬಾದರಾಯಣವಿಠಲ ೧೦೭) ವ್ಯಾಸವಿಠಲ
೧೦೮)ಅನಿರುದ್ಧ ವಿಠಲ ೧೦೯)ತಂದೆವಾಸುದೇವವಿಠಲ ೧೧೦)ಕದರಮಂಡಲಗಿಹನುಮಯ್ಯ
೧೧೧)ಮಹಿಪತಿವಿಠಲ೧೧೨)ಕಮಲೇಶವಿಠಲ೧೧೩)ರಘುಪತಿ ವಿಠಲ೧೧೪)ಶ್ರೀನಿವಾಸವಿಠಲ
೧೧೫)ಏರಿವೆಂಕಟ ೧೧೬)ಭೂವರಾಹರಘುಪತಿವಿಠಲ ೧೧೭)ಶ್ರೀದವಿಠಲ ೧೧೮)ಪ್ರಾಣೇಶ
ವಿಠಲ ೧೧೯)ಶ್ರೀಶವಿಠಲ ೧೨೦)ಅಭಿನವಜನಾರ್ಧನವಿಠಲ ೧೨೧)ಗುರುಶ್ರೀಶವಿಠಲ
೧೨೨)ಮನೋಹರವಿಠಲ ೧೨೩)ವೆಂಕಟವಿಠಲ ೧೨೪)ಜ್ಞಾನಮಯವಿಠಲ ೧೨೫)ಆನಂದ
ಮಯವಿಠಲ ೧೨೬)ಪ್ರಸನ್ನವಿಠಲ ೧೨೭)ಗೋಪತಿವಿಠಲ ೧೨೮)ಪಾಂಡುರಂಗವಿಠಲ
೧೨೯)ಶಿರಿವೆಂಕಟವಿಠಲ೧೩೦)ನರಹರಿವಿಠಲ೧೩೧)ಕಮಲಾಪತಿವಿಠಲ೧೩೨)ಶ್ರೀಪತಿವಿಠಲ
೧೩೩)ಶೇಷಗಿರೀಶವಿಠಲ೧೩೪)ಪ್ರಸನ್ನವೆಂಕಟವಿಠಲ೧೩೫)ರಾಮದಾಸರು೧೩೬)ಶ್ಯಾಮಸುಂದರ
ದಾಸರು ೧೩೭)ಗುರುಪ್ರಾಣೇಶ ೧೩೮)ಭಾಗ್ಯನಿಧಿವಿಠಲ ೧೩೯)ರಾಮವಿಠಲ
೧೪೦)ವರದಕಮಲಾ ಪತಿವಿಠಲ ೧೪೧)ಜ್ಞಾನಶ್ರೀಪತಿವಿಠಲ೧೪೨)ಗುರುಕಮಲಾ ಪತಿವಿಠಲ
೧೪೩)ಮಾಧವವಿಠಲ ೧೪೪)ಭೂತನಾಥವಿಠಲ ೧೪೫)ಗಣೇಶವಿಠಲ ೧೪೬)ಶ್ರೀಕರವಿಠಲ
೧೪೭)ಇಭವರದವಿಠಲ ೧೪೮)ಯದುಪತಿವಿಠಲ ೧೪೯)ಹರಿವಿಠಲ ೧೫೦)ಶ್ರೀರಮಣವಿಠಲ
೧೫೧)ಪೂತಾತ್ಮ ವಿಠಲ ೧೫೨)ತಂದೆಶ್ರೀಪತಿವಿಠಲ ೧೫೩)ವಿಜಯರಾಮಚಂದ್ರವಿಠಲ
೧೫೪)ಶ್ರೀನಿಧಿವಿಠಲ ೧೫೫)ಶ್ರೀವರ ವಿಠಲ ೧೫೬)ತಂದೆ ಶ್ರೀನಿಧಿವಿಠಲ ೧೫೭)ಗುರುವಿಜಯ
ವಿಠಲ ೧೫೮)ವರದೇಂದ್ರ ವಿಠಲ ೧೫೯)ಶ್ರೀಶಪ್ರಾಣೇಶವಿಠಲ ೧೬೦)ವೇದವಿಠಲ
೧೬೧)ಕದರಮಂಡಲಿಪಾಂಡುರಂಗ ೧೬೨)ಜಯವಿಠಲ ೧೬೩)ಜಯೇಶವಿಠಲ
೧೬೪)ಬಾಲಕೃಷ್ಣ ೧೬೫)ಹನುಮೇಶವಿಠಲ ೧೬೬)ಪಾರ್ಥಪಾದವಿಠಲ ೧೬೭)ಗೋಪತಿ
ಕೃಷ್ಣವಿಠಲ ೧೬೮) ಶ್ರೀಪಾದವಿಠಲ ೧೬೯)ಗುರುವಿಜಯ ರಾಮಚಂದ್ರವಿಠಲ
೧೭೦)ಭೀಮೇಶವಿಠಲ ೧೭೧)ಸುಖನಿಧಿವಿಠಲ೧೭೨)ಸುಂದರವಿಠಲ೧೭೩)ಸುಖಸುಂದರವಿಠಲ
೧೭೪)ವರದಪ್ರಾಣೇಶವಿಠಲ ೧೭೫)ತಂದೆ ವೆಂಕಟೇಶವಿಠಲ ೧೭೬)ರಮಾಪತಿವಿಠಲ

೧೭೭)ಗುರುರಾಮ ವಿಠಲ ೧೭೮)ಶಿರಿವತ್ಸಾಂಕಿತವಿಠಲ ೧೭೯)ವಿಜಯ ಮೋಹನವಿಠಲ ೧೮೦)ಗುರು ಇಂದಿರೇಶವಿಠಲ ೧೮೧)ವರದೇಶವಿಠಲ ೧೮೨)ಮುದ್ದುಮೋಹನವಿಠಲ ೧೮೩)ಗುರುಜಗನ್ನಾಥವಿಠಲ ೧೮೪)ಬಾಲಕೃಷ್ಣ ವಿಠಲ ೧೮೫)ಭೀಮೇಶಕೃಷ್ಣ ೬)ಐಹೊಳೆ ವೆಂಕಟ ೧೮೭)ಗೋವಿಂದವಿಠಲ ೧೮೮)ವೆಂಕಟರಮಣ ದಾಸರು ೧೮೯)ವೆಂಕಟಸುಬ್ಬದಾಸರ ೧೯೦)ಬೇಲೂರು ಕೇಶವದಾಸರು ೧೯೧)ಶ್ರೀವರವಿಠಲ ೧೯೨)ಶ್ರೀಪಾರ್ಥವಿಠಲ ೧೯೩)ಮುದ್ದುಮೋಹನವಿಠಲ ೧೯೪)ಸಿರಿವಿಠಲ ೧೯೫) ತಂದೆ ಮೋಹನವಿಠಲ ೧೯೬)ಮಧ್ವಾಂತರ್ಗತವಿಠಲ ೧೯೭)ಉರಗಾದ್ರಿವಾಸವಿಠಲ ೧೯೮)ತಂದೆವೆಂಕಟೇಶವಿಠಲ ೧೯೯) ಗುರುಗೋವಿಂದವಿಠಲ ೨೦೦) ಜಗದ್ಭರಿತವಿಠಲ ೨೦೧) ಕಮಲನಾಭವಿಠಲ ೨೦೨)ವೆಂಕಟೇಶ ವಿಠಲ - ಇತ್ಯಾದಿ.

(ಆಕರ ; ಮಾಧ್ವವಾಙ್ಮಯ ತಪಸ್ವಿಗಳು) ಡಾ || ಕೆ. ಎಂ. ಕೃಷ್ಣರಾಯರು ತಮ್ಮ ಜಗನ್ನಾಥದಾಸರು-ಪ್ರೌಢ ಪ್ರಬಂಧದಲ್ಲಿ ೨೦೦ ಜನ ಹರಿದಾಸರ ಹೆಸರುಗಳನ್ನು ಕೊಟ್ಟಿರುತ್ತಾರೆ.

ಪರಮಪ್ರಿಯ ಸುಬ್ಬರಾಯದಾಸರೂ, ಅವರ ಶಿಷ್ಯರಾದ ಗುರುಗೋವಿಂದದಾಸರೂ ಸಹಸ್ರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಹರಿದಾಸರಿಗೆ ಅಂಕಿತ ಪ್ರಧಾನ ಮಾಡಿರುವುದಾಗಿ ತಿಳಿದು ಬರುತ್ತದೆ.

ಉರುಗಾದ್ರಿವಿಠಲ ಪ್ರಕಾಶನದವರು ಸುಮಾರು ೧೦೭ ಜನ ಹರಿದಾಸರ ಪಟ್ಟಿಯನ್ನು ತಮ್ಮ ಹರಿದಾಸರ ವಂಶ ವೃಕ್ಷದಲ್ಲಿ ಕೊಟ್ಟಿರುತ್ತಾರೆ.

## ದಾಸರ ಪದಗಳ ಸಂಗ್ರಹಕಾರರು :

೧) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
೨) ಹರಿದಾಸರತ್ನಂ ಶ್ರೀಗೋಪಾಲದಾಸರ ಸಂಗ್ರಹ, ಬೆಂಗಳೂರು
೩) ತಾಳೂರು ಹನುಮಂತರಾಯರ ಲಿಖಿತ ಪ್ರತಿ ಸಂಗ್ರಹ, ಬಳ್ಳಾರಿ
೪) ದ.ರಾ.ಬೇಂದ್ರೆಯವರ ಸಂಗ್ರಹ, ಧಾರವಾಡ
೫) ದಾಸರ ಲಕ್ಷ್ಮೀನಾರಾಯಣರಾಯರ ಸಂಗ್ರಹ, ಬೆಂಗಳೂರು
೬) ಶ್ರೀಮತಿ ಲೀಲಾವತಿಯವರ ಸಂಗ್ರಹ, ಸೂರತ್ಕಲ್
೭) ವರವಣಿ ರಾಮರಾಯರ ಸಂಗ್ರಹ, ಬೆಂಗಳೂರು
೮) ಹುಬ್ಬಳ್ಳಿ ಜಾಗೀರದಾರರ ಸಂಗ್ರಹ, ಹುಬ್ಬಳ್ಳಿ
೯) ಎ.ಆರ್.ಗೋವಿಂದರಾಯರ ಸಂಗ್ರಹ, ಮೈಸೂರು
೧೦) ಡಿ.ವಿ.ಗುರುರಾಜಾರಾಯರ ಸಂಗ್ರಹ, ಬೆಂಗಳೂರು
೧೧) ಕಾವ್ಯಪ್ರೇಮಿ ಅವರ ಹರಿದಾಸರ ಕೃತಿಗಳು, ಧಾರವಾಡ
೧೨) ನಾಗರಾಜಾಚಾರ್ ಅವರ ಸಂಗ್ರಹ, ಮೈಸೂರು

೧೩) ತಾತಾಚಾರ್ಯ ಪಾಂಢ್ರಿಯವರ ಸಂಗ್ರಹ, ಬೆಳಗಾಂ
೧೪) ಮುಗಳಿ ಭುಜಂಗರಾಯರ ಸಂಗ್ರಹ
೧೫) ಬಿ.ಕೆ. ಕೃಷ್ಣಮೂರ್ತಿ ಅವರ ಸಂಗ್ರಹ, ಬೆಂಗಳೂರು
೧೬) ಎ.ಆರ್. ಸಂಜೀವರಾಯರ ಸಂಗ್ರಹ, ಆರಕೆರೆ
೧೭) ಟಿ.ವಿ.ಗೋಪಿನಾಥದಾಸರ ಸಂಗ್ರಹ, ಬೆಂಗಳೂರು
೧೮) ಬೆಟಗೇರಿ ಕೃಷ್ಣಶರ್ಮರ ಸಂಗ್ರಹ, ಧಾರವಾಡ
೧೯) ಪಾಮಡಿ ಆಚಾರ್ಯರ ಸಂಗ್ರಹ, ಧಾರವಾಡ
೨೦) ಕರ್ಣಾಟಕ ವಿಶ್ವವಿದ್ಯಾಲಯದ ಸಂಗ್ರಹ, ಧಾರವಾಡ
೨೧) ಲಕ್ಷ್ಮಣರಾವ್ ಬಾಬುರಾವ ಸಾವಕಾರರ ಸಂಗ್ರಹ, ಸವಣೂರು
೨೨) ಪಾರ್ವರ್ತಿಕರ ತಮ್ಮಣ್ಣರಾಯರ ಸಂಗ್ರಹ, ಧಾರವಾಡ
೨೩) ಲಕ್ಷ್ಮಣರಾವ್ ಇನಾಮದಾರರ ಸಂಗ್ರಹ, ಧಾರವಾಡ
೨೪) ಆಬಾಜಿರಾಮಚಂದ್ರಸಾವಂತರ ಸಂಗ್ರಹ, ಬೆಳಗಾವಿ
೨೫) ಪಾವಂಜೆ ಗುರುರಾಯರ ಸಂಗ್ರಹ, ಉಡುಪಿ
೨೬) ಹರಿಭಜನೆ ಕೀರ್ತನೆ ಸಂಗ್ರಹ, ಮದರಾಸು
೨೭) ದಾಸಕೂಟ ಭಜನ ಮಂಜರಿ, ಮದರಾಸು
೨೮) ದಾಮೋದರ ಪೈ (ದಾಸರಪದಗಳು) ಮಂಗಳೂರು
೨೯) ಉಪಾಧ್ಯಾಯ ಪ್ರಕಟನಾಲಯ, ಬೆಂಗಳೂರು
೩೦) ಎಚ್.ಕೆ.ರಾಮಾರಾಧ್ಯರ ಸಂಗ್ರಹ, ಬೆಂಗಳೂರು
೩೧) ಎಚ್.ಕೆ.ಅಶ್ವತ್ಥನಾರಾಯಣರಾಯರ ಸಂಗ್ರಹ, ಬೆಂಗಳೂರು
೩೨) ಚಿಂಚೋಳಿ ಪ್ರಹ್ಲಾದಾಚಾರ್ ಅವರ ಸಂಗ್ರಹ, ಬೆಂಗಳೂರು
೩೩) ಜಿ.ಕೆ.ಲಕ್ಷ್ಮಣದಾಸರ ಸಂಗ್ರಹ, ಬೆಂಗಳೂರು
೩೪) ಶ್ರೀ ಎಚ್.ಎಸ್. ಶ್ರೀನಿವಾಸಮೂರ್ತಿ, ಉರಗಾದ್ರಿವಿಠಲ ಪ್ರಕಾಶನ ಅವರ ಸಂಗ್ರಹ, ಬೆಂಗಳೂರು.
೩೫) ಕೊರಟಿ ಶ್ರೀನಿವಾಸರಾವ್ (ಗೌಡಗೆರೆ ಗೋಪಾಲಕೃಷ್ಣಾಚಾರ್ ಮೂಲಕ ದೊರೆತ ಸಂಗ್ರಹ), ಬೆಂಗಳೂರು
೩೬) ಟಿ.ಕೆ.ವೇಣುಗೋಪಾಲದಾಸರ ಸಂಗ್ರಹ, ಬೆಂಗಳೂರು
೩೭) ಸೀತಾರಾಮದಾಸರು ಅವರ ಸಂಗ್ರಹ, ಬೆಂಗಳೂರು - ಇತ್ಯಾದಿ.

-೦-



ಹರಿದಾಸ ಸಾಹಿತ್ಯಕ್ಕೆ ತಮ್ಮ ಜೀವನವನ್ನು ಮುಡುಪಿಟ್ಟು
ಹುತಾತ್ಮರಾದ ಮೂವರು ಪ್ರಾತಃಸ್ಮರಣೀಯರ
ಕಿರುಪರಿಚಯವನ್ನು ಮಾಡಿಕೊಡುವ ಪ್ರಯತ್ನ
ಮುಂದಿನ ಪುಟಗಳಲ್ಲಿ ಇವೆ.

**ಪಾವಂಜೆ ಗುರುರಾಯರು**

**ಗೋರೆಬಾಳ ಹನುಮಂತರಾಯರು**

**ಸುಬೋಧ ರಾಮರಾಯರು**

ಈ ಹರಿದಾಸ ರತ್ನತ್ರಯರ ಹೆಸರಿನಲ್ಲಿ
ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಸಂಶೋಧನಾ
ಪೀಠಗಳು ಏರ್ಪಟ್ಟು, ಆ ಮೂಲಕ ದಾಸರ ಕನಸು
ನನಸಾಗಲೆಂದು ಕೋರುತ್ತೇನೆ.

– ಲೇಖಕ.

# ಪಾವಂಜೆ ಗುರುರಾಯರು

## (ಕ್ರಿ.ಶ ೧೮೭೮-೧೯೪೮)

೧

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಿಸಿ, ತಮ್ಮ ವಿಶಿಷ್ಟ ಸಾಹಿತ್ಯ ಸೇವೆಯಿಂದ ಕನ್ನಡ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದ ಇಬ್ಬರು ಮಹನೀಯರು ತಮ್ಮ ಕಾಲದ ಜನರಿಂದ ಗುರುತಿಸಲ್ಪಡದೆ ಹೋದರು. ಇವರಲ್ಲಿ ನಂದಳಿಕೆ ನಾರಣಪ್ಪಯ್ಯ, ಮುದ್ದಣ್ಣನೆಂಬ ಕಾವ್ಯನಾಮದಿಂದ ಜನಪ್ರಿಯ ಕೃತಿಗಳಾದ ಶ್ರೀರಾಮಾಶ್ವಮೇಧ, ಶ್ರೀರಾಮಪಟ್ಟಾಭಿಷೇಕ ಮುಂತಾದ ಗ್ರಂಥಗಳನ್ನೂ, ಕಲಾವತಿ ಪರಿಣಯವೆಂಬ ಯಕ್ಷಗಾನ ಪ್ರಸಂಗವನ್ನೂ ಬರೆದಿದ್ದರೂ ಅವರು ಅನಾದರಕ್ಕೆ ಪಾತ್ರರಾಗಿ, ಡ್ರಿಲ್ ಮಾಸ್ತರರಾಗಿ ಜೀವನ ಸಾಗಿಸಿ ಬಡತನದ ಬೇಗೆಯಲ್ಲಿ ಬೆಂದು ತಾರುಣ್ಯದಲ್ಲೆ ಕ್ಷಯರೋಗಕ್ಕೆ ತುತ್ತಾಗಿ ಕ್ರಿ.ಶ. ೧೯೦೧ರಲ್ಲಿ ಅಸುನೀಗಿದರು. ಇನ್ನೊಬ್ಬರು ದುರ್ಲಭವಾಗಿದ್ದ ಶಾಸ್ತ್ರ ಗ್ರಂಥಗಳನ್ನೂ, ಸ್ತೋತ್ರ ಸಾಹಿತ್ಯವನ್ನೂ, ಜನಪದ ಸಾಹಿತ್ಯವೆಂದು ತಿರಸ್ಕಾರಕ್ಕೆ ಒಳಗಾಗಿದ್ದ ಯಕ್ಷಗಾನ ಮತ್ತು ಹೆಣ್ಣುಮಕ್ಕಳ, ಗರತಿಯರ ಅನೇಕ ಹಾಡುಗಳನ್ನೂ, ದಾಸಸಾಹಿತ್ಯವನ್ನೂ ಬಹಳ ಶ್ರಮದಿಂದ ಸಂಗ್ರಹಿಸಿ, ಸಂಶೋಧಿಸಿ, ಪ್ರಕಟಿಸಿ ಪ್ರಚಾರ ಮಾಡಿ, ಈ ವಿಶಿಷ್ಟ ಸಾಹಿತ್ಯವನ್ನು ಕಷ್ಟಪಟ್ಟು ಉಳಿಸಿದವರು ಪಾವಂಜೆ ಗುರುರಾಯರು. ಒಬ್ಬರು ತೀರಿಕೊಂಡ ಮೇಲೆ ಪ್ರಸಿದ್ಧಿಯನ್ನು ಪಡೆದರು. ವಿದ್ವಾಂಸರ ಮಂಡಳಿಯಲ್ಲಿ ಕೀರ್ತಿಶೇಷರಾದರು. ವಿಮರ್ಶಕರು ಅವರನ್ನು ನವೋದಯ ಸಾಹಿತ್ಯದ ಮುಂಬೆಳಕಿನಲ್ಲಿ ಬೆಳಕಿನ ಬೆಳ್ಳಿಚುಕ್ಕೆ ಎಂದು ಹೊಗಳಿದರು. ಅವರ ಅಭಿಮಾನಿಗಳು ಶತಮಾನೋತ್ಸವವನ್ನು ಆಚರಿಸಿ ಪ್ರಶಸ್ತಿ ಗ್ರಂಥಗಳನ್ನು ಪ್ರಕಟಿಸಿದರು. ಸರಕಾರವು ಎಚ್ಚೆತ್ತುಕೊಂಡು ಮುದ್ದಣನ ಸ್ಮಾರಕ ಭವನವನ್ನು ನಿರ್ಮಿಸಲು ಮುಂದಾಯಿತು. ಆದರೆ ಇದಾವ ಪ್ರಶಸ್ತಿ ಗೌರವಗಳು ಪಾವಂಜೆ ಗುರುರಾಯರ ಪಾಲಿಗೆ ಬರಲಿಲ್ಲ. ಜನರು ಅವರು ಮಾಡಿದ ಸಾಹಿತ್ಯ ಸೇವೆಯಿಂದ ತಮ್ಮ ಜ್ಞಾನಜ್ಯೋತಿಯನ್ನು ಬೆಳಗಿಸಿಕೊಂಡರು. ಅನೇಕರು ಅವರು ಪ್ರಕಟಿಸಿದ ಶಾಸ್ತ್ರ ಗ್ರಂಥಗಳಿಂದ ಸದಾಚಾರ ಸಂಪನ್ನರಾದರು. ಯಕ್ಷಗಾನ ಸಾಹಿತ್ಯವು ಅವರಿಂದಾಗಿ ಬೆಳಕನ್ನು ಕಂಡಿತು. ಹರಿದಾಸ ಸಾಹಿತ್ಯವು ಪಾವಂಜೆಯವರ ಅವಿರತ ಪರಿಶ್ರಮದ ಫಲವಾಗಿ ಕ್ರಿಮಿಕೀಟ, ಗೆದ್ದಲು, ಪಂಡಿತರ ಅವಜ್ಞತೆಗಳಿಗೆ ಆಹಾರವಾಗದೆ ಬದುಕಿ ಉಳಿದುಕೊಂಡುದಲ್ಲದೆ, ಅಶಿಕ್ಷಿತ ಹೆಣ್ಣುಮಕ್ಕಳ ಬಾಯಲ್ಲಿ ಅಶುದ್ಧವಾಗಿ ಅಪೂರ್ಣ ರೂಪದಲ್ಲಿ ಇದ್ದುದು, ಪರಿಷ್ಕಾರಗೊಂಡು, ಲಿಖಿತ ರೂಪದಲ್ಲಿ ಶುದ್ಧಪಾಠದೊಂದಿಗೆ ದೊರಕುವಂತಾಯಿತು. ಪುರಂದರದಾಸರಿಂದ ತೊಡಗಿ ಜಗನ್ನಾಥದಾಸರವರೆಗಿನ ಎಲ್ಲಾ ಅಪರೋಕ್ಷ ಜ್ಞಾನಿಗಳಾದ ಹರಿದಾಸರ ನೂರಾರು ಕೃತಿಗಳು ಶುದ್ಧರೂಪದಲ್ಲಿ ಪ್ರಕಟವಾದುದಲ್ಲದೆ ಕೇವಲ ಹೆಸರಿನಲ್ಲಿ ಉಳಿದಿದ್ದ ಅಸಂಖ್ಯಾತ ಹರಿದಾಸ

ಕೃತಿಗಳು ಪುಸ್ತಕ ರೂಪದಲ್ಲಿ ದೊರಕುವಂತೆ ಆಯಿತು. ತಮ್ಮ ಜೀವಿತದ ೭೫ ವರ್ಷಗಳ ಅವಧಿಯಲ್ಲಿ ಐದು ನೂರಕ್ಕೂ ಹೆಚ್ಚಿನ ಚಿಕ್ಕ, ದೊಡ್ಡ ಗ್ರಂಥಗಳನ್ನು ಪ್ರಕಟಿಸಿ, ಸುಮಾರು ಹತ್ತು ಸಹಸ್ರ ಪುಟಗಳಿಗೂ ಮೀರಿದ ಶ್ರೇಷ್ಠ ಸಾಹಿತ್ಯವನ್ನು ನಾಡಿಗೆ ನೀಡಿದರು. ಇಷ್ಟನ್ನೆಲ್ಲಾ ಅವರು ಕೇವಲ ಕರ್ತವ್ಯ ಬುದ್ಧಿಯಿಂದ, ಭಗವಂತನ ಸೇವೆ ಎಂಬ ಭಾವನೆಯಿಂದ, ನಿಷ್ಕಾಮ ಬುದ್ಧಿಯಿಂದ ಮಾಡಿದರು. ಅವರು ಯಾವುದೇ ಸಿದ್ಧಿ, ಪ್ರಸಿದ್ಧಿ, ಅಧಿಕಾರ, ಕೀರ್ತಿ, ಗೌರವಗಳಿಗೆ ಆಸೆಪಡದೆ, ಭಗವಂತನು ತಮಗೆ ಒಪ್ಪಿಸಿದ ಕಾರ್ಯವನ್ನು ಅವನ ಆರಾಧನೆ ಎಂಬ ಭಾವದಿಂದ ಶ್ರದ್ಧಾ ಭಕ್ತಿಗಳಿಂದ ಮಾಡಿ, ಕಣ್ಮುಚ್ಚಿಕೊಂಡರು. ಅವರು ಬದುಕ್ಕಿದ್ದಾಗ ಎಂತೋ ತೀರಿಕೊಂಡ ಮೇಲೂ ಅವರಿಂದ ಉಪಕೃತರಾದವರು ಅವರನ್ನು ನೆನೆಯಲಿಲ್ಲ; ಅವರ ನೆನಪಿನಲ್ಲಿ ಶತಮಾನೋತ್ಸವ ಏರ್ಪಡಲಿಲ್ಲ ; ಸಂಸ್ಮರಣ ಗ್ರಂಥಗಳು ಪ್ರಕಟವಾಗಲಿಲ್ಲ, ಸುತ್ತಲಿದ್ದ ಜನರೂ ಅವರ ಸೇವೆಯನ್ನು ಗುರುತಿಸಿ ಗೌರವಿಸಲಿಲ್ಲ; ಪ್ರಶಸ್ತಿಗಳನ್ನು ನೀಡಿ ಶ್ರದ್ಧಾಂಜಲಿಯನ್ನು ಅರ್ಪಿಸಲಿಲ್ಲ, ಅವರು ಬದುಕಿದ್ದಾಗ ಎಲೆ ಮರೆಯ ಕಾಯಿಯಂತೆ ಜೀವಿಸಿದ್ದರು. ಸತ್ತ ಮೇಲೂ ಎಲೆಮರೆಯ ಹಣ್ಣಾಗಿಯೇ ನೆಲಕ್ಕುರುಳಿ, ಮಣ್ಣಿನಲ್ಲಿ ಮಣ್ಣಾಗಿ ಬೆರೆತು ಹೋದರು. ಆದರೇನು? ಅವರು ಮಾಡಿದ ಸಾರಸ್ವತ ಸೇವೆ, ಮಣ್ಣಿನ ಗಂಧವಾಗಿದೆ. ಅವರು ಅವತಾರಮಾಡಿ ಇಂದಿಗೆ ನೂರಹನ್ನೆರಡು ವರ್ಷಗಳ ಅನಂತರವೂ, ಭಾವುಕರ ಕೃತಜ್ಞತೆಗೆ ಪಾತ್ರವಾಗಿದೆ. ಯಕ್ಷಗಾನ, ಹೆಣ್ಣುಮಕ್ಕಳ ಹಾಡು, ಸ್ತೋತ್ರ ಸಾಹಿತ್ಯ, ನಿತ್ಯಾನುಷ್ಠಾನ ಗ್ರಂಥಗಳು -ಇವುಗಳಿಗೆ ರತ್ನಪ್ರಾಯವಾಗಿ ತಮ್ಮ ನಿರ್ಮಲ ಕಾಂತಿಯಿಂದ ಇಂದಿಗೂ ಬೆಳಗುತ್ತಿರುವ ಪಾವಂಜೆ ಗುರುರಾಯರ ಹರಿದಾಸ ಸಾಹಿತ್ಯ ಅವರ ಕೀರ್ತಿಧ್ವಜವಾಗಿ, ವೈಜಯಂತಿಯಾಗಿ ಕಂಗೊಳಿಸುತ್ತಿವೆ. ಅವರ ಸಾಹಸ, ಕಷ್ಟಸಹಿಷ್ಣುತೆ, ಸಾತ್ವಿಕ ಹಾಗೂ ಸರಳ ಜೀವನಗಳು ಸ್ಫೂರ್ತಿಯ ಚಿಲುಮೆಯಾಗಿ, ಅವರ ಹೆಸರು ಪ್ರಾತಃಸ್ಮರಣೀಯರ ಸಾಲಿನಲ್ಲಿದೆ.

೨

ಪಾವಂಜೆ ಗುರುರಾಯರು ತಾವು ನಂಬಿದ ಒಂದು ಶ್ರೇಷ್ಠ ಆದರ್ಶಕ್ಕೆ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಂಡು, ಅದನ್ನು ಕಾರ್ಯರೂಪಕ್ಕೆ ತರಲು ಯತ್ನಿಸಿದ ಒಂದು ಸಾಧಕ ಜೀವ. ಗ್ರಂಥ ಪ್ರಕಟನೆ ಅವರ ಪಾಲಿಗೆ ಕೇವಲ ವೃತ್ತಿಯಾಗಿರಲಿಲ್ಲ, ಪ್ರವೃತ್ತಿಯಾಗಿರಲಿಲ್ಲ, ಅದೊಂದು ಭಗವಂತನನ್ನು ಒಲಿಸಿಕೊಳ್ಳಲು ತಮ್ಮ ಪಾಲಿಗೆ ಬಂದ ಪವಿತ್ರ ಕರ್ತವ್ಯವೆಂದು ತಿಳಿದಿದ್ದರು. ಈ ಕರ್ತವ್ಯವನ್ನು ಅವರು ಪೂಜೆ ಎಂಬಂತೆ ದಣಿವಿಲ್ಲದೆ ಮಾಡಿದರು. ಆ ಕಾಲದಲ್ಲಿ ಪಶ್ಚಿಮ ಕರಾವಳಿಯಲ್ಲಿ ಮಂಗಳೂರು, ಉಡುಪಿ, ಧಾರವಾಡ, ಬೆಂಗಳೂರುಗಳಲ್ಲಿ ನೆಲೆಸಿ, ತಾವು ನಂಬಿದ್ದ ಕ್ರೈಸ್ತಧರ್ಮದ ಪ್ರಸಾರಕ್ಕೆ ತಮ್ಮ ಸರ್ವಸ್ವವನ್ನು ಮುಡುಪಿಟ್ಟು, ಕೇವಲ ಸೇವಾ ದೀಕ್ಷೆಯಿಂದ, ಜನ ಸಂಪರ್ಕ ಭಾಷೆಗಳಾದ ತುಳು, ಕೊಂಕಣಿ, ಕನ್ನಡಗಳನ್ನು ಕಲಿತು, ಅವರ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ, ಅವರ ಭಾಷೆಯಲ್ಲಿ ಗ್ರಂಥಗಳನ್ನು ರಚಿಸಿ, ಆ ಮೂಲಕ ತಮ್ಮ ಧರ್ಮ ಪ್ರಸಾರಕ್ಕೆ ದೀಕ್ಷಾಬದ್ಧರಾಗಿದ್ದ ಕ್ರೈಸ್ತ ಮಿಷನರಿಗಳ ಪಾದ್ರಿಗಳ-ಕಾರ್ಯಪ್ರಜ್ಞೆ, ಅವಿಶ್ರಾಂತ ದುಡಿಮೆ, ಕಷ್ಟ ಸಹಿಷ್ಣುತೆ, ಆದರ್ಶ, ಸೇವಾಕಾಂಕ್ಷೆಗಳು ಪಾವಂಜೆ ಗುರುರಾಯರ

ಕಣ್ಣ ಮುಂದಿತ್ತು. ಸಹಸ್ರಾರು ಮೈಲಿಗಳ ಕಷ್ಟಸಾಧ್ಯವಾದ ಪ್ರಯಾಣ, ಅನೇಕ ಎಡರು ತೊಡರುಗಳನ್ನು ಎದುರಿಸಿ, ದೇಶೀಯರ ತಿರಸ್ಕಾರ, ಅಗೌರವಗಳಿಗೆ ಪಾತ್ರರಾಗಿ, ಶ್ರೇಷ್ಠ ವರ್ಣೀಯರ ನಿಂದೆ, ಟೀಕೆಗಳಿಗೆ ಹೆದರದೆ, ಜನಸಾಮಾನ್ಯರ ಸೇವೆಗೆ ಕಂಕಣ ತೊಟ್ಟು ನಿಂತು, ಹೋದಲ್ಲಿ ಶಾಲೆಗಳು, ಬಂದಲ್ಲಿ ವೈದ್ಯಕೀಯ ಸಂಸ್ಥೆಗಳನ್ನು ತೆರೆದು, ಧರ್ಮಪ್ರಸಾರಕ್ಕೆಂದೇ ಅವರ ಭಾಷೆಗಳನ್ನು ಕಲಿತು, ಅವರ ಕಷ್ಟ ಕಾರ್ಪಣ್ಯಗಳಿಗೆ ಒದಗುತ್ತಿದ್ದ ಈ ಕ್ರೈಸ್ತ ಮಿಷನರಿಗಳು ಮಾಡುತ್ತಿದ್ದ ಕೆಲಸವನ್ನು ಅವರು ಕಣ್ಣಾರ ಕಂಡಿದ್ದರು. ವಿದೇಶಿಯರಾದ ಈ ಜನ ಮಾಡಿದ ಕನ್ನಡದ ಸೇವೆ, ಅದರಲ್ಲೂ ಹರಿದಾಸ ಸಾಹಿತ್ಯದ ಸೇವೆಯನ್ನು ನೋಡಿ, ಇಂಗ್ಲಿಷ್ ಕಲಿತಿದ್ದ ಪಾವಂಜೆ ಗುರುರಾಯರಿಗೆ ಆಶ್ಚರ್ಯವಾಗಿತ್ತು. ಕನ್ನಡ ಸಾಹಿತ್ಯ, ಸಂಸ್ಕೃತಿಗಳಿಗೆ ಅವರು ನೀಡಿದ್ದ ಬೆಲೆಯುಳ್ಳ ಕಾಣಿಕೆಗಳನ್ನು ನೋಡಿ ಅವಕ್ಕಾಗಿದ್ದರು. ಇಂಥವೇ ಕಾರ್ಯಕ್ಕೆ ತಮ್ಮನ್ನು ಏಕೆ ಒಪ್ಪಿಸಿಕೊಳ್ಳಬಾರದು? ಇದರಿಂದ ಐಹಿಕ ಹಾಗೂ ಪಾರಮಾರ್ಥಿಕ ಸಾಧನೆಯಾಗುವುದಿಲ್ಲವೆ? ಇಂಥ ನಾಡು ನುಡಿಗಳ ಸೇವೆಗೆ ಭಗವಂತನು ಒಲಿಯುವುದಿಲ್ಲವೆ? ಅವನಿಗೆ ಪ್ರಿಯವಾದ ಜ್ಞಾನಕಾರ್ಯಕ್ಕೆ, ಆ ಮೂಲಕ ಭಕ್ತಿ ವೈರಾಗ್ಯಗಳಿಗೆ ಸಾಧಕವಾಗುವ ಸದಾಚಾರ ನಿಷ್ಠೆಗೆ ತಮ್ಮನ್ನು ಏಕೆ ಒಪ್ಪಿಸಿಕೊಳ್ಳಬಾರದು? ತಾವೂ ಕ್ರೈಸ್ತ ಮಿಷನರಿಗಳಂತೆ, ತಾವು ನಂಬಿದ್ದ ತತ್ವಗಳಿಗೆ, ದ್ವೈತಶಾಸ್ತ್ರ ಪ್ರಚಾರಕ್ಕೆ ತಮ್ಮ ಜೀವನವನ್ನು ಮೀಸಲಾಗಿಸಬಾರದೇಕೆ? ಹೀಗೆ ಚಿಂತಿಸಿದ ರಾಯರು ಅನೇಕ ವೃತ್ತಿಗಳನ್ನು ಆಯ್ದು ಕೈಯಾಡಿಸಿ ಕಡೆಗೆ ಜ್ಞಾನಕಾರ್ಯಕ್ಕೆ, ದಾಸಸಾಹಿತ್ಯ ಪ್ರಚಾರಕ್ಕೆ ತಮ್ಮ ಬಾಳನ್ನು ಅರ್ಪಿಸಿಕೊಂಡರು.

## ೨

ಪಾವಂಜೆ ಗುರುರಾಯರು ಜನಿಸುವ ವೇಳೆಗಾಗಲೇ ಬ್ರಿಟಿಷರು ಭಾರತದಲ್ಲಿ ನೆಲೆನಿಂತು, ಸುಭದ್ರವಾದ ಆಡಳಿತ ವ್ಯವಸ್ಥೆಯನ್ನು ಸಾಧಿಸಿದ್ದರು. ೧೮೫೭ರಲ್ಲಿ ನಡೆದ ಪ್ರಥಮ ಸ್ವಾತಂತ್ರ್ಯ ಹೋರಾಟವನ್ನು ಹತ್ತಿಕ್ಕಲು ಆಂಗ್ಲರು ಸಮರ್ಥರಾದರು. ಈ ಹೋರಾಟದಿಂದ ಪಾಠಕಲಿತ ಅವರು ಕಂಪನಿಯ ಸರಕಾರದಿಂದ ಆಡಳಿತವನ್ನು ವಿಕ್ಟೋರಿಯಾ ರಾಣಿಯು ಸ್ವೀಕರಿಸುವಂತೆ ವ್ಯವಸ್ಥೆಗೊಳಿಸಿದರು. ಅವಳನ್ನು ಭಾರತದ ಚಕ್ರವರ್ತಿನಿಯಾಗಿ ಘೋಷಿಸಿದ್ದರು. ಹೀಗಾಗಿ ಭಾರತವು ಇಂಗ್ಲೆಂಡಿನ ಪಾರ್ಲಿಮೆಂಟಿನ ಅಧೀನಕ್ಕೆ ಬಂದಿತ್ತು. ಇದರಿಂದಾದ ಒಂದು ಪ್ರಯೋಜನವೆಂದರೆ, ಭಾರತದ ಹಲವು ಕಡೆಗಳಲ್ಲಿ ವಿಶ್ವವಿದ್ಯಾನಿಲಯಗಳು ಏರ್ಪಟ್ಟು, ವಿದ್ಯಾಭ್ಯಾಸಕ್ಕೆ ಹೆಚ್ಚು ಪ್ರೋತ್ಸಾಹ ನೀಡಲ್ಪಟ್ಟಿತು. ಹಲವು ಮುದ್ರಣಾಲಯಗಳು ಆರಂಭವಾದವು. ಅಚ್ಚುಕೂಟಗಳಿಂದಾಗಿ, ವೃತ್ತಪತ್ರಿಕೆಗಳೂ, ಗ್ರಂಥ ಪ್ರಕಟನೆಗಳೂ ಅಸ್ತಿತ್ವಕ್ಕೆ ಬಂದು, ಜ್ಞಾನಪ್ರಸಾರಕ್ಕೆ ಹೆದ್ದಾರಿ ನಿರ್ಮಾಣವಾಯಿತು. ಕನ್ನಡ ಸಾಹಿತ್ಯವೂ ಈ ದಿಸೆಯಲ್ಲಿ ಪ್ರಗತಿಯನ್ನು ಸಾಧಿಸಿತು. ಹತ್ತೊಂಬತ್ತನೆಯ ಶತಮಾನದ ವೇಳೆಗೆ ಹೇಂಡ್ಸ್, ರೀವ್, ಮೆಕ್ರಿಲ್, ಗೇರೆಟ್, ವೀಗರ್, ಮ್ಯಾಗ್ಲಿಂಗ್, ಸೇಂಟರ್ಸನ್, ವೂರ್ಥ್, ರೈಸ್, ಜ್ಸಿಗ್ಲರ್, ಕಿಟ್ಟೆಲ್ ಮತ್ತು ಫ್ಲೀಟ್ ಮುಂತಾದವರು ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ, ಈ ಭಾಷೆಯಲ್ಲಿ ಶ್ರೇಷ್ಠ ದರ್ಜೆಯ ಆಕರ ಗ್ರಂಥಗಳನ್ನು ನಿರ್ಮಾಣಮಾಡಿ, ನಾಡು ನುಡಿಗಳ ಸೇವೆ ಸಲ್ಲಿಸಿದ್ದರು. ಇವರಲ್ಲಿ ಫರ್ನಾಂಡಿಸ್ ಕಿಟ್ಟೆಲ್ ರಚಿಸಿದ ಕನ್ನಡ-ಕನ್ನಡ ಶಬ್ದಕೋಶವು

ಒಂದು ಮೇರುಕೃತಿ. ಇದರೊಂದಿಗೆ ಇವನು ಶಬ್ದಮಣಿದರ್ಪಣ, ಛಂದೋಂಬುಧಿಯನ್ನು ಸಂಪಾದಿಸಿ ಪ್ರಕಟಿಸಿದನು. ಇಷ್ಟು ಮಾತ್ರದಿಂದ ಕಿಟ್ಟಲನು ತೃಪ್ತಿಗೊಳ್ಳಲಿಲ್ಲ. ೧೮೭೩ರಲ್ಲಿ Vaishnava Dasas of Karnataka -ಎಂಬ ಗ್ರಂಥದಲ್ಲಿ ಪುರಂದರದಾಸರು, ಕನಕದಾಸರು, ವಿಜಯದಾಸರು ಮತ್ತು ವೆಂಕಟದಾಸರ ಹಲವು ಕೃತಿಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿ, ಅದರ ಸೊಗಸು ಪಾಶ್ಚಾತ್ಯರಿಗೆ ತಿಳಿಯುವಂತೆ ಮಾಡಿದನು.

ಇವನಿಗೂ ಹಿಂದೆ ಇಂಥ ಕಾರ್ಯ -ಶಿವಶರಣರ ವಚನಗಳನ್ನು, ಹರಿದಾಸರ ಕೀರ್ತನೆಗಳನ್ನು ಇಂಗ್ಲಿಷ್ ಹಾಗೂ ಜರ್ಮನ್ ಭಾಷೆಗಳಿಗೆ ಅನುವಾದಿಸುವ ಕಾರ್ಯ ಹಲವು ವಿದ್ವಾಂಸರಿಂದ ಆರಂಭವಾಗಿತ್ತು. ರೆವರೆಂಡ್‌ಜಾನ್ ಗಾರೆಟ್ಟ (Rev. John Garrett) ಎಂಬುವನು ೧೮೪೦-೧೮೭೦ರವರೆಗೆ ಹಳೆ ಮೈಸೂರು ರಾಜ್ಯದ (Director of Public Instruciton) ವಿದ್ಯಾಧಿಕಾರಿಯಾಗಿ ನೇಮಕಗೊಂಡಿದ್ದನು. ಇವನು೧೮೪೪ರಲ್ಲಿ ಭಗವದ್ಗೀತೆಯನ್ನು ಕನ್ನಡಭಾಷೆಯಲ್ಲಿ ಗದ್ಯವಾಗಿ ಭಾಷಾಂತರಿಸಿ, ಬೆಂಗಳೂರು ವೆಸ್ಲಿ ಭಾಷಾಖಾನೆಯಲ್ಲಿ ಅಚ್ಚು ಮಾಡಿಸಿ, ಪ್ರಕಟಿಸಿದ್ದನು. ಕ್ರಿ.ಶ ೧೬೪೨-೪೪ರಲ್ಲಿ ಡಾ|| ಮೊಗ್ಲಿಂಗನು (Dr. Moegling) "ಮಂಗಳೂರು ಸಮಾಚಾರ, ಕನ್ನಡ ಸಮಾಚಾರ" ಪತ್ರಿಕೆಗಳನ್ನು ಮಂಗಳೂರು ಮತ್ತು ಬಳ್ಳಾರಿಗಳಲ್ಲಿ ಆರಂಭಿಸಿದನು. ಇವು ಕನ್ನಡದ ಆರಂಭದ ಪತ್ರಿಕೆಗಳು. ಇವನು ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಲ್ಲಿ ಅಸಾಧಾರಣ ಪಂಡಿತನಾಗಿದ್ದನು. ಅಲ್ಲದೆ ಲಿಪಿ ತಜ್ಞನೂ ಆಗಿದ್ದನು.

ಇವನು ತನ್ನ ಸಂಚಾರ ಕಾಲದಲ್ಲಿ ತಾನು ಕೇಳಿದ ದಾಸರ ಕೀರ್ತನೆಗಳಿಂದ ಆಕರ್ಷಿತನಾಗಿದ್ದನು. ಅವುಗಳನ್ನು ಸಂಗ್ರಹಿಸುವ ಕಾರ್ಯ ಕೈಗೊಂಡು ೧೮೬೦ರಲ್ಲಿ ಪುರಂದರದಾಸರು, ಕನಕದಾಸರು ಮತ್ತು ವಿಜಯದಾಸರು - ಮುಂತಾದವರ ಕೆಲವು ಕೀರ್ತನೆಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿ, ೫೧೬ ಪುಟಗಳ ಒಂದು ಹೊತ್ತಿಗೆಯನ್ನು ೧೮೬೪ರಲ್ಲಿ ಲಿಪ್‌ಸ್ಜಿಗ್‌ನಲ್ಲಿ ಪ್ರಕಟಿಸಿ, ಜರ್ಮನ್ ಓದುಗರಿಗೆ ಕನ್ನಡ ನಾಡಿನ ಹರಿದಾಸರ ಕೃತಿಗಳನ್ನು ಪ್ರಥಮ ಬಾರಿಗೆ ಪರಿಚಯ ಮಾಡಿಕೊಟ್ಟನು. ಅಲ್ಲದೆ ಇವನು ಜರ್ಮನ್ ಓರಿಯಂಟಲ್ ಸೊಸೈಟಿಯ ಪತ್ರಿಕೆಯಲ್ಲಿ ಹರಿದಾಸ ಸಾಹಿತ್ಯವನ್ನು ಕುರಿತು ಹಲವು ಲೇಖನಗಳನ್ನು ಬರೆದನು. ಅಷ್ಟೇ ಅಲ್ಲ, ಲಕ್ಷ್ಮೀಶನ ಜೈಮಿನಿ ಭಾರತವನ್ನು ಓದಿ ಮೆಚ್ಚಿಕೊಂಡಿದ್ದ ಇವನು ಇಡೀ ಗ್ರಂಥವನ್ನು ಜರ್ಮನ್ ಭಾಷೆಗೆ ಅನುವಾದಿಸಿ ಪ್ರಕಟಿಸಿದನು. ಈ ಗ್ರಂಥವು ३೨೪ ಪುಟಗಳಿದ್ದು, ೧೮೭೦ರಲ್ಲಿ ಲಿಪ್‌ಸ್ಜಿಗ್‌ನಲ್ಲಿ ಪ್ರಕಟವಾಯಿತು. ಇವನು ಕನ್ನಡದ ३೫೪೭ ಗಾದೆಗಳನ್ನು, ಕೊಡಗಿಗೆ ಸಂಬಂಧಿಸಿದ ಜನಜೀವನವನ್ನು ಕುರಿತು ಜರ್ಮನ್ ಭಾಷೆಯಲ್ಲಿ ಗ್ರಂಥಗಳನ್ನು ರಚಿಸಿದನು. ತುಳುವಿನ ನೂರಾರು ಪಾಡ್ದನಗಳನ್ನು "ಕೋಟಿ ಚೆನ್ನಯ"ವನ್ನು ಸಂಗ್ರಹಿಸಿ, ಕನ್ನಡದಲ್ಲಿ ಪ್ರಕಟಿಸಿ, ತುಳುನಾಡಿನ ಸಂಸ್ಕೃತಿಗೆ ಅಮೂಲ್ಯ ಸೇವೆ ಸಲ್ಲಿಸಿದನು.

ಇವನಿಂದ ಸ್ಫೂರ್ತಿ ಪಡೆದು ಡೇನಿಯಲ್ ಸ್ಯಾಂಡರಸನ್ (Daniel Sanderson) ಎಂಬಾತನು ಜೈಮಿನಿ ಭಾರತವನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿದನು. ೨೧೭ ಡೆಮ್ಮಿ ಪುಟಗಳಿರುವ ಈ ಗ್ರಂಥವು ೧೮೫೨ರಲ್ಲಿ ಬೆಂಗಳೂರಿನಲ್ಲಿ ಮುದ್ರಣಗೊಂಡು ಪ್ರಕಟವಾಯಿತು. ರೆವರೆಂಡ್

ಜಾನ್‌ಸ್ಟಿಫನ್ ಸನ್ (John Stephenson) ಎಂಬುವನು ತುಮಕೂರಿನಲ್ಲಿ ಇದ್ದ ಇನ್ನೊಬ್ಬ ಕ್ರೈಸ್ತ ಧರ್ಮಗುರು. ಇವನು ೧೮೮೦ ರಲ್ಲಿ ೬೦ ಉತ್ತಮವಾದ ಹರಿದಾಸರ ಕೀರ್ತನೆಗಳನ್ನೂ, ಸೋಮೇಶ್ವರ ಶತಕದಿಂದ ಆರಿಸಿದ ಪದ್ಯಗಳನ್ನು ೫೧ ಪುಟಗಳ ಹೊತ್ತಿಗೆಯಲ್ಲಿ ಸಂಗ್ರಹಿಸಿ ಪ್ರಕಟಿಸಿದನು. ಸಹಸ್ರಾರು ಪ್ರತಿಗಳು ಮಾರಾಟವಾಯಿತು. ಜನ ಸಾಮಾನ್ಯರಿಗೂ, ಗ್ರಾಮೀಣ ಜನತೆಗೂ ದಾಸರ ಹಾಡುಗಳು, ಸೋಮೇಶ್ವರ ಶತಕಗಳೂ ಮುಟ್ಟುವಂತೆ ಆಯಿತು. ಇವನು ಅರುಣೋದಯ ಎಂಬ ಪತ್ರಿಕೆಯನ್ನು ಹೊರಡಿಸಿ, ಅದರಲ್ಲಿ ಅನೇಕ ದಾಸರ ಹಾಡುಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿ ಪ್ರಕಟಿಸಿದನು (೧೮೭೨).

ಇದರಲ್ಲಿ ಕನಕದಾಸರ ಒಂದು ಕೃತಿ-

ಅರುಹಿತವರು ನಿನಗೆ ಮೂರು ಮಂದಿಗಳೊಳಗೆ

ನಾರಿಯೋ ಧಾರುಣಿಯೋ ಬಲುಧನದ ಸಿರಿಯೋ

Which please the best of these three
Woman, or land or Laxmi with abundant wealth?
A man brings a female born of strangers,
And makes her mistress of his house,
His undivided other half his wife,
On the seductive influence of this age-
One cannot bear to see it.
Land over which a hundred crore of Kings formerly ruled,
He calls his own, gets the title deed and engraved
Builds a splendid house, and erects a fort and bastins.
Then the fine fellow yields up his breath,
And they cast him out....

ಇವನಂತೆ ಚಾರ್ಲ್ಸ್ ಗೋವರನು (Charle E Gover) ೧೮೭೫ ರಲ್ಲಿ ಏಸಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಅನೇಕ ಹರಿದಾಸರ ಕೀರ್ತನೆಗಳನ್ನು ಇಂಗ್ಲೀಷಿಗೆ ಅನುವಾದಿಸಿ, ಭಾರತದ ಎಲ್ಲಾ ಭಾಷೆಗಳ ಜನರ ಗಮನ ಸೆಳೆದನು. ಹೀಗೆ ೧೮೭೨ ರ ವೇಳೆಗಾಗಲೇ ಅನೇಕ ಪಾಶ್ಚಾತ್ಯ ಪಂಡಿತರು ದಾಸ ಸಾಹಿತ್ಯವನ್ನು ಕರ್ನಾಟಕದ ಹೊರಗಿನ ಜನಕ್ಕೆ ಇಂಗ್ಲೀಷ್ ಭಾಷೆಯ ಮೂಲಕ ಪರಿಚಯ ಮಾಡಿಕೊಡುವ ಪ್ರಯತ್ನ ನಡೆಸಿದ್ದರು. ಇವರೆಲ್ಲರ ಪ್ರಯತ್ನಕ್ಕೆ ಕಿರೀಟವಿಟ್ಟಂತೆ ರೆವರೆಂಡ್ ಕಿಟ್ಟೆಲರು ೧೮೭೩ ರಲ್ಲಿ Vaishnava Dasas of Karnataka- ಎಂಬ ಗ್ರಂಥವನ್ನು ಪ್ರಕಟಿಸಿ, ಪುರಂದರಾದಿ ದಾಸವರ್ಯರ ಅನೇಕ ಶ್ರೇಷ್ಠ ಕನ್ನಡ ಕೃತಿಗಳನ್ನು ಆಂಗ್ಲ ಭಾಷೆಯನ್ನಾಡುವ ಜನರಿಗೆ ಪರಿಚಯಮಾಡಿಕೊಟ್ಟು ದೊಡ್ಡ ಉಪಕಾರ ಮಾಡಿದರು.

ಅವರು ಅನುವಾದಿಸಿದ ಒಂದು ಪುರಂದರದಾಸರ ಹಾಡು ಹೀಗಿದೆ :

All the gods are behind, Vishnu,
In charming devotion all are behind the Snake-Lord

All the published books are behind Bharatha
All trees are behind the sacred Tulsi,
All the Vitality is behind the wind;
All the vows are behind Madhva's doctrine-sea
All the various castes are behind the Brahmana
All the excellent gifts are behind the gifts of food,
In the world all are behind the badges of honour,
... in being called a fond devotee of Purandara Vittala.

*-( ಆಕರ; ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ; ಲೇ. ಐ.ಮಾ.ಮುತ್ತಣ್ಣ)*

ಪಾವಂಜೆ ಗುರುರಾಯರು ತಮ್ಮ ಕಾಲಕ್ಕೆ ವಿಶೇಷ ಪರಿಶ್ರಮದಿಂದ ಕಷ್ಟ ಸಾಧ್ಯವಾಗಿದ್ದ ಇಂಗ್ಲಿಷ್ ಶಿಕ್ಷಣವನ್ನು ಪಡೆದು, ಆ ಭಾಷೆಯಲ್ಲಿದ್ದ ಸಾಹಿತ್ಯವನ್ನು ಚೆನ್ನಾಗಿ ಅಧ್ಯಯನ ಮಾಡಿ, ರಸಾಸ್ವಾದನೆ ಮಾಡಿ, ಮೈಗೂಡಿಸಿಕೊಂಡರು. ಈ ಜನರ ಕರ್ತವ್ಯನಿಷ್ಠೆ, ಸಾಹಸ ಬುದ್ಧಿ, ಮಹತ್ವಾಕಾಂಕ್ಷೆ, ಆದರ್ಶಗಳನ್ನು, ಸೇವಾದೀಕ್ಷೆಯನ್ನು ಜೀವನದ ಧ್ಯೇಯಗಿ ಸ್ವೀಕರಿಸಿ, ಜ್ಞಾನ ಪ್ರಚಾರ ಕಾರ್ಯಕ್ಕೆ ತಮ್ಮನ್ನು ಮೀಸಲಿಟ್ಟು ದುಡಿದರು. ಹಿಂದೆಂದೂ, ಹಿಂದಾರೂ ಕೆಲಸ ಮಾಡದಿದ್ದ ಜನಪದ ಸಾಹಿತ್ಯ-ಯಕ್ಷಗಾನ, ಮನೆಯ ಹೆಣ್ಣು ಮಕ್ಕಳ ಹಾಡು -ಮುಂತಾದವನ್ನು ಲಿಖಿತಗೊಳಿಸಿ, ಸಂಗ್ರಹಿಸಿ, ಪ್ರಕಟಿಸಲು ಮುಂದಾದದರು.ಅಲ್ಲಿಯ ತನಕ ಗ್ರಂಥಸ್ಥವಾಗದೆ, ಕೇವಲ ದಾಸರ, ಹೆಣ್ಣು ಮಕ್ಕಳ ಬಾಯಲ್ಲಿದ್ದ ಹರಿದಾಸರ ಪದಗಳನ್ನು ಲೇಖನಕ್ಕಿಳಿಸಿ, ಶುದ್ಧರೂಪದಲ್ಲಿ ಪ್ರಕಟಿಸಲು ಸಾಹಸಗೈದರು. ಅವರು ವೇದಾಂತಿಯಾಗಿರಲಿಲ್ಲ. ನಿಷ್ಕಾಮ ಗೃಹಸ್ಥರಾಗಿದ್ದರು. ಸರಸ ಸಜ್ಜನಿಕೆಯ, ವಿನೋದಶೀಲ, ತಂದೆ, ಗಂಡ, ಗೆಳೆಯ, ಬಂಧು ಎಲ್ಲರೂ ಆಗಿದ್ದರು. ಹೊರನೋಟಕ್ಕೆ ಗಂಭೀರದ ಹಿಮಪರ್ವತ; ಒಳಹೊಕ್ಕರೆ ಸಕ್ಕರೆಯ ಮೂಟೆ. ಅವರ ಸದ್ಗುಣಗಳ ಸವಿಯನ್ನು ಉಂಡು ಬೆಳೆದವರು, ಉಪಕಾರ, ಸ್ನೇಹ, ಸಹಾಯಗಳ ಲಾಭ ಪಡೆದು ಉದ್ಧಾರವಾದವರು ಒಬ್ಬಿಬ್ಬರಲ್ಲ, ಹಲವರು. ಆದರೆ ಎಡಗೈಯಿಂದ ಮಾಡಿದ ದಾನ, ಉಪಕಾರ ಬಲಗೈಗೆ ತಿಳಿಯುತ್ತಿರಲಿಲ್ಲ. ಅವರೆಂದೂ ತಮಗೆ ಇತರರು ಮಾಡಿದ ಉಪಕಾರವನ್ನು ಮರೆಯುತ್ತಿರಲಿಲ್ಲ; ತಾವು ಅನ್ಯರಿಗೆ ಮಾಡಿದ ಉಪಕಾರವನ್ನು ಸ್ಮರಿಸುತ್ತಿರಲಿಲ್ಲ.

ಪಾವಂಜೆ ಗುರುರಾಯರು ಎಪ್ಪತ್ತೊಂಭತ್ತು ವರ್ಷಗಳ ಸುಧೀರ್ಘ ಜೀವನದಲ್ಲಿ ಕೊನೆಯವರೆಗೂ ಗಾಂಧಿವಾದಿಯಾಗಿ ಬಾಳಿದರು. ಗಾಂಧೀಜಿ ಅವರ ಆದರ್ಶ ಗುರು. ಎಂದ ಮಾತ್ರಕ್ಕೆ ಗಾಂಧೀಜಿ ಹೇಳಿದ ಎಲ್ಲವನ್ನೂ, ಬರೆದ ಮಾತನ್ನೂ ವಿಮರ್ಶಿಸದೆ ಹಾಗೇ ಸ್ವೀಕರಿಸುತ್ತಿದ್ದರೆಂದಲ್ಲ. ಅದರಲ್ಲಿ ತಮ್ಮ ಚೇತನಕ್ಕೆ ಪರಿಗ್ರಾಹ್ಯವಾದ ಅಂಶಗಳಿದ್ದರೆ, ಅಂಥವನ್ನು ಮಾತ್ರ ಸ್ವೀಕರಿಸಿ, ಅದನ್ನು ತಮ್ಮದಾಗಿ ಮಾಡಿಕೊಳ್ಳುತ್ತಿದ್ದರು. ಅವರು ಅಪ್ಪಟ ಗಾಂಧೀವಾದಿಯಾದರೂ, ಅವರೆಂದೂ ರಾಜಕೀಯಕ್ಕೆ ಇಳಿಯಲಿಲ್ಲ. ಚಳವಳಿ ಮಾಡಲಿಲ್ಲ; ಸೆರೆಮನೆಗೆ ಹೋಗಲಿಲ್ಲ; ತಾವು ದೊಡ್ಡ ದೇಶಪ್ರೇಮಿ ಎಂದು ಹೇಳಿಕೊಂಡು ತಿರುಗಿದವರಲ್ಲ. ಈ ಬಂಡವಾಳದಿಂದ ಸಮಾಜದಲ್ಲಿ, ಅಧಿಕಾರ ಲಾಭವನ್ನು ಪಡೆದವರಲ್ಲ. ಇಂಥ ಎಲ್ಲ ವಿಚಾರಗಳಿಂದ ಅವರು ಪರಾಙ್ಮುಖರಾಗಿದ್ದರು.

ಇವನ್ನೆಲ್ಲ ತಮ್ಮ ಅಳಿಯಂದಿರಾಗಿದ್ದ ಪಣಿಯಾಡಿಯವರಿಗೆ ಬಿಟ್ಟು ಬಿಟ್ಟದ್ದರು. ತಾವು ಮಾತ್ರ ಗಾಂಧೀವಾದದ ತತ್ತ್ವವನ್ನು, ತಿರುಳನ್ನು ಒಪ್ಪಿ ನಡೆದಿದ್ದರು. ಅದರ ಪ್ರಧಾನ ಅಂಶಗಳಾದ ಸಾಹಿತ್ಯ ಪ್ರೇಮ, ಸ್ವರಾಜ್ಯ ನಿಷ್ಠೆ, ಸತ್ಯ-ಅಹಿಂಸೆ-ಸದಾಚಾರ ಮುಂತಾದ ಜೀವನದ ಸೂತ್ರಗಳನ್ನು ಅನುಷ್ಠಾನಕ್ಕೆ ತಂದಿದ್ದರು. ಗಾಂಧೀಜಿಯವರ ಸನಾತನ ಧರ್ಮದ ಶ್ರದ್ಧೆ, ದೈವಭಕ್ತಿ, ಸರಳ ಜೀವನ, ನಿಸ್ಪೃಹತೆ, ಪ್ರಾಮಾಣಿಕತೆ, ನೇರ ನಡೆನುಡಿ, ನಿಸ್ವಾರ್ಥ, ಸಮಾಜಸೇವೆ, ಕೌಟುಂಬಿಕ ನಿಷ್ಠೆ, ಭ್ರಷ್ಟಾಚಾರವಿಲ್ಲದ ವ್ಯಾಪಾರ ಅವರದಾಗಿತ್ತು. ಓಲೆಗರಿಗಳಲ್ಲಿ ಅಡಗಿದ್ದು, ಪಂಡಿತರ ದೇವರ ಮನೆಗಳಲ್ಲಿ, ವಿದ್ವಾಂಸರ, ಗುರುಪೀಠಗಳ ಕಡತಗಳನ್ನು ಸೇರಿ, ಪಾಮರರ ಪಾಲಿಗೆ ದುರ್ಮಿಳವಾಗಿದ್ದ ಸಂಸ್ಕೃತದ ಅನೇಕ ಸ್ತೋತ್ರಗಳನ್ನು, ಭಗವದ್ಭಕ್ತಿಯ ಸಾಧನ, ಅನುಷ್ಠಾನಕ್ಕೆ ಬರಬೇಕಾಗಿದ್ದ ಅಪೂರ್ವ ಶಾಸ್ತ್ರ ಸಾಹಿತ್ಯವನ್ನು ಕತ್ತಲ ಕೋಣೆಯಿಂದ ಹೊರತೆಗೆದು, ಬೆಳಕಿಗೆ ಒಡ್ಡಿದರು. ಜ್ಞಾನದಾಹದಿಂದ ತೊಳಲುತ್ತಿದ್ದ ಅಸಂಖ್ಯ ಸುಜೀವರ ಬಾಳಿಗೆ ಬೆಳಕಾಗಿ ಬಂದರು. ಅವರು ಮಾಡಿದ ಈ ಸೇವೆಯೇನೂ ಅಲ್ಪವಲ್ಲ.

೪

ಪಾವಂಜೆ ಗುರುರಾಯರು ತಮ್ಮ ಕಾಲದಲ್ಲಿ ಅನೇಕ ವಿಷಯಗಳಲ್ಲಿ ಕ್ರಾಂತಿಕಾರರಾಗಿದ್ದರು. ಸ್ತ್ರೀಶಿಕ್ಷಣ, ಪಾಮರಸಾಹಿತ್ಯ ಪ್ರಕಟಣೆ, ಕನ್ನಡದ ದೀಕ್ಷೆ, ಕನ್ನಡ ಭಾಷೆಯಿಂದಲೇ ಕನ್ನಡಿಗರಿಗೆ ಮುಕ್ತಿ - ಎಂಬ ದೃಢ ವಿಶ್ವಾಸ, ಸನ್ಯಾಸಕ್ಕೆ ವೈರಾಗ್ಯವೊಂದೇ ಅರ್ಹತೆ, ಗುರುಪೀಠಗಳ ಪವಿತ್ರ್ಯತೆ, ನಿರಾಡಂಬರ ಜೀವನ, ಪತ್ರಿಕೆಗಳಿಂದ, ಗಾಂಧೀತತ್ವದಿಂದ ಜನಜಾಗ್ರತಿ, ಖಾದಿ ಗ್ರಾಮೋದ್ಯೋಗಗಳಿಂದ ಬಡಜನರ ಉದ್ಧಾರ, ತ್ಯಾಗಶೀಲ ರಾಜಕೀಯ, ಇಂಗ್ಲೀಷ್, ಸಂಸ್ಕೃತ, ಕನ್ನಡಗಳ ಸಮನ್ವಯ, ಶಿಕ್ಷಣದ ಉನ್ನತಾದರ್ಶ, ಸರಳ ಜೀವನ, ಉನ್ನತ ವಿಚಾರ, ಗೃಹಸ್ಥ ಜೀವನದ ಆದರ್ಶಗಳ ಪಾಲನೆ, ಕೌಟುಂಬಿಕ ಶಾಂತಿಗೆ ಶುಚಿ ಜೀವನದ ಅಗತ್ಯ - ಮುಂತಾದ ವಿಷಯಗಳಲ್ಲಿ ಅವರದು ಸ್ಪಷ್ಟವಾದ ಅಭಿಪ್ರಾಯವಾಗಿತ್ತು. ಇವುಗಳಿಂದ ಅವರೆಂದಿಗೂ ಯಾರ ದಾಕ್ಷಿಣ್ಯಕ್ಕೂ ಸರಿಯುತ್ತಿರಲಿಲ್ಲ. ಅವರ ಜೀವನ ತತ್ತ್ವನಿಷ್ಠೆ, ಅನುಷ್ಠಾನ, ಸದಾಚಾರಗಳಿಗೆ ಒಂದು ಸುಂದರ ವ್ಯಾಖ್ಯಾನವಾಗಿತ್ತು. ಇವು ಮೂರು ಅವರ ಜೀವನ ಪ್ರವಾಹದಲ್ಲಿ ತ್ರಿವೇಣಿ ಸಂಗಮವಾಗಿದ್ದು, ಬದುಕಿನ ಅವಿಭಾಜ್ಯ ಭಾಗವೇ ಆಗಿತ್ತು. ವ್ಯವಹಾರದಲ್ಲೂ ಅಷ್ಟೆ, ಅವರದು ಅದೇ ತತ್ವ; ಆದರ್ಶ, ದುಂದುವೆಚ್ಚ ಸಹಿಸರು. ಕಾಲದ ವ್ಯರ್ಥಹರಣವಾಗಲೀ, ಲೆಕ್ಕಾಚಾರದಲ್ಲಿ ನಿರ್ಲಕ್ಷ್ಯವನ್ನಾಗಲೀ, ಸ್ನೇಹದಲ್ಲಿ ಕಾರ್ಪಣ್ಯವನ್ನಾಗಲೀ, ಅಪಾತ್ರರಲ್ಲಿ ಪ್ರೀತಿ ಗೌರವಗಳನ್ನಾಗಲೀ ಎಂದಿಗೂ ಸಹಿಸುತ್ತಿರಲಿಲ್ಲ. ಅವರು ನಿರ್ಭೀತರು. ಮಾತಿನಿಂದ, ಉಡುಗೆಯಿಂದ, ನಡವಳಿಕೆಯಿಂದ ಅವರು ಅಪ್ಪಟ ಗಾಂಧಿವಾದಿಯಾಗಿದ್ದರು. ಹೀಗಾಗಿ ಅವರನ್ನು ತುಳುನಾಡಿನ ಗಾಂಧಿ ಎಂದು ಮಿತ್ರರು ವಿನೋದಕ್ಕೆ ಹೇಳುತ್ತಿದ್ದರು. ಹರ್ಡೀಕರ ಮಂಜಪ್ಪನವರನ್ನು ಉತ್ತರ ಕರ್ನಾಟಕದವರು ಕರ್ನಾಟಕದ ಗಾಂಧಿ ಎಂದು ಕರೆಯುತ್ತಿದ್ದಂತೆ, ತುಳುನಾಡಿನ ಜನ, ಕಾರ್ನಾಡು ಸದಾಶಿವರಾಯರಿಗೆ ಈ ಬಿರುದನ್ನು ಕೊಟ್ಟದ್ದರು. ಅಂಥ ಕಾರ್ನಾಡು ಸದಾಶಿವರಾಯರು ಒಮ್ಮೆ

ಪಾವಂಜೆಯರನ್ನು ನೋಡಿ "ನಿಜವಾದ ತುಳುನಾಡಿನ ಗಾಂಧಿ ನಾನಲ್ಲ, ನೀವು"- ಎಂದಿದ್ದರಂತೆ.

ಹೀಗೆ ತಮ್ಮ ಮನೆ, ತಮ್ಮ ಅಂಗಡಿ, ತಮ್ಮ ಪುಸ್ತಕ ಪ್ರಪಂಚ -ಇವುಗಳ ಆಚೆ ಎಂದೂ ಹೋಗದಿದ್ದ ಪಾವಂಜೆಯವರು ತುಳುನಾಡಿನ ಜನಕ್ಕೆ ಗಾಂಧಿ ಎನಿಸಿದ್ದರೆ ಆಶ್ಚರ್ಯವಿಲ್ಲ. ಇದಕ್ಕೊಂದು ಕಾರಣವನ್ನು ಊಹಿಸಿಕೊಳ್ಳಬಹುದಾದರೆ, ಇವರಿಬ್ಬರಿಗೂ ಇದ್ದ ಅವತಾರ ಸಾಮ್ಯ. ಮಹಾತ್ಮ ಗಾಂಧಿಯವರು ಕಾಥೇವಾಡದ ಪೋರ್ ಬಂದರಿನಲ್ಲಿ ಸನಾತನ ಸದ್ಗೃಹಸ್ಥರಾದ ಬನಿಯ ವಂಶದಲ್ಲಿ ಕ್ರಿ.ಶ.೧೮೬೯ ಅಕ್ಟೋಬರ್ ಎರಡರಂದು ಜನಿಸಿದ್ದರು. ಇದರಂತೆ ಪಾವಂಜೆ ಗುರುರಾಯರು ಉಡುಪಿಗೆ ಸುಮಾರು ಎಂಟು-ಹತ್ತು ಮೈಲಿ ದೂರದಲ್ಲಿರುವ ಮುಲ್ಕಿ ಸಮೀಪದ ಪಾವಂಜೆ ಗ್ರಾಮದಲ್ಲಿ ಅದೇ ವರ್ಷ ಮೇ ತಿಂಗಳ ಎರಡರಂದು ಜನಿಸಿದ್ದರು. ಗಾಂಧೀಜಿಯವರು ಕ್ರಿ.ಶ. ೧೯೪೮ ಅಂದರೆ ಭಾರತಕ್ಕೆ ಸ್ವಾತಂತ್ರ್ಯ ಬಂದ ಕೆಲವು ತಿಂಗಳ ಅನಂತರ ಜನವರಿ ೩೧ ರಂದು ತಮ್ಮ ಅವತಾರ ಲೀಲೆಯನ್ನು ಮುಗಿಸಿದರು. ಆಗ ಅವರ ವಯಸ್ಸು ಎಪ್ಪತ್ತೊಂಭತ್ತು. ಪಾವಂಜೆ ಗುರುರಾಯರೂ ಅಷ್ಟೆ. ತಮ್ಮ ಎಪ್ಪತ್ತೊಂಭತ್ತನೆಯ ವಯಸ್ಸಿನಲ್ಲಿ ಅದೇ ವರ್ಷ ಸೆಪ್ಟೆಂಬರ್ ೨೩ ನೇ ದಿನಾಂಕ ಅವರು ತಮ್ಮ ಇಹಬಾಳಿನ ಯಾತ್ರೆಯನ್ನು ಮುಗಿಸಿದರು! ಹುಟ್ಟಿದ್ದು ಒಂದೇ ವರ್ಷ, ಸತ್ತದ್ದು ಒಂದೇ ವರ್ಷ. ಇಬ್ಬರ ಉದಾತ್ತ ಚೇತನರಿಗೆ ಎಂಥ ಸಾಮ್ಯ? ವಿಧಿ ಇಬ್ಬರನ್ನು ಕಾಣದ ತಂತುವಿನಿಂದ ಬೆಸೆದಿತ್ತೆಂದು ಕಾಣುತ್ತದೆ. ಹೀಗಾಗಿ ಅವರು ತುಳುನಾಡಿನ ಗಾಂಧಿ ಎನಿಸಿದ್ದರೆ ಆಶ್ಚರ್ಯವೇನು ಇಲ್ಲ.

೨

ಗುರುರಾಯರು ಮಂಗಳೂರು ತಾಲ್ಲೂಕಿನ ಪಾವಂಜೆ ಗ್ರಾಮದಲ್ಲಿ ಒಂದು ಶ್ರೀ ಸಾಮಾನ್ಯ ಕುಟುಂಬದಲ್ಲಿ ಜನಿಸಿದರು. ಇವರ ತಂದೆ ಕೊಳುವೈಲು ರಾಮಕೃಷ್ಣಯ್ಯ, ತಾಯಿ ರಾಜಮ್ಮ - ಮಾಧ್ವರು. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಪುತ್ತಿಗೆ ಮಠದ ಶಿಷ್ಯರು. ತಂದೆ ತಾಯಿಗಳು ಮೇಲಿಂದ ಮೇಲೆ ಉಡುಪಿಗೆ ಬರುತ್ತಿದ್ದರು. ವ್ಯವಹಾರ ನಿಮಿತ್ತವಾಗಿ, ಶ್ರೀಕೃಷ್ಣನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಉತ್ಸವ, ಸಮಾರಾಧನೆ, ಮನರಂಜನೆ ಕಾರ್ಯಕ್ರಮಗಳು, ಎರಡು ವರ್ಷಗಳಿಗೊಮ್ಮೆ ನಡೆಯುತ್ತಿದ್ದ ಪರ್ಯಾಯ, ಹೀಗೆ ವರ್ಷಕ್ಕೆ ಹತ್ತಾರು ಬಾರಿ ಅವರು ಉಡುಪಿಗೆ ಬಂದಾಗ, ತಪ್ಪದೆ ಶ್ರೀಕೃಷ್ಣನ ದರ್ಶನ ಪಡೆದು ಹಿಂದಿರುಗುತ್ತಿದ್ದರು. ಇಂಥ ಭಗವದ್ಭಕ್ತರೂ, ಸಾತ್ವಿಕರೂ ಆದ ದಂಪತಿಗಳಿಗೆ ಮನೆಯ ತುಂಬ ಮಕ್ಕಳು. ಗುರುರಾಯನಲ್ಲದೆ ಭೀಮರಾವ್, ಹನುಮಂತರಾವ್, ಗುಂಡೂರಾವ್ ಎಂಬ ಗಂಡು ಮಕ್ಕಳೂ, ಜಲಜಾಕ್ಷಿ ಮತ್ತು ಭವಾನಿ ಎಂಬ ಹೆಣ್ಣು ಮಕ್ಕಳೂ ಇದ್ದರು. ರಾಮಕೃಷ್ಣಯ್ಯನ ತಂದೆ ಬೇಸಾಯದಿಂದ ಜೀವನ ಮಾಡುತ್ತಿದ್ದರು. ಎಷ್ಟು ಕಷ್ಟಪಟ್ಟರೂ ಹೊಟ್ಟೆ ಬಟ್ಟೆಗೆ ಸಾಕಾಗುತ್ತಿರಲಿಲ್ಲ. ಅವರು ತೀರಿಕೊಂಡ ಮೇಲೆ ಮನೆತನದ ಹೊಣೆ ಹೊತ್ತ ರಾಮಕೃಷ್ಣಯ್ಯ ಪಾವಂಜೆಯಲ್ಲಿ ನಿಂತರು. ಕೊಳವೈಲು-ಪಾವಂಜೆಗಳು ಸಮೀಪದ, ಆಸುಪಾಸಿನ ಗ್ರಾಮಗಳು. ಮುಲ್ಕಿಗೆ ಸಮೀಪದ ಗ್ರಾಮಗಳು. ಸಮುದ್ರಕ್ಕೆ ಹತ್ತಿರವಿದ್ದ ಹಳ್ಳಿಗಳು. ನೀರಿಗೆ ಬರಗಾಲವಿಲ್ಲ, ತೋಡುಬಾವಿಯಿಂದ ಬೆಳೆದ ತೆಂಗಿನ ಬೇಸಾಯ, ಭತ್ತದ ಗದ್ದೆಗಳು,

ಕಾಯಿಪಲ್ಲೆಗಳ ತೋಟ - ಹೇಗೋ ಜೀವನ ಕಳೆಯುತ್ತಿತ್ತು. ಮಗಳು ಜಲಜಾಕ್ಷಿಗೆ ಮದುವೆಯಾಗಿ ಗಂಡನ ಮನೆಗೆ ಹೋದಳು. ಅತ್ಯಲ್ಪ ಕಾಲದಲ್ಲಿ ವಿಧವೆಯಾಗಿ ತವರಿಗೆ ಹಿಂತಿರುಗಿದಳು. ಬರುವಾಗ ತನ್ನ ಗಂಡನ ಮನೆಯಿಂದ ಉದರಂಭರಣಕ್ಕಾಗಿ ವಡವೆ, ವಸ್ತು, ಕೊಂಚ ಹಣ ತಂದಳು. ಇದರಿಂದ ರಾಮಕೃಷ್ಣಯ್ಯ ಹಾಗೂ ಅವನ ಗಂಡುಮಕ್ಕಳು ಊರಿನಲ್ಲಿ ಒಂದು ಕಿರಾಣಿ ಅಂಗಡಿಯನ್ನು ಆರಂಭಿಸಿದರು. ಕೆಲವು ಕಾಲ ಅದು ಲಾಭದಾಯಕವಾಗಿ ನಡೆಯಿತು. ಮುಂದೆ ತಂದಿದ್ದ ದಿನಸಿ ಮನೆಗೆ ಬಳಕೆಯಾಗಿ, ಕೊಟ್ಟಿದ್ದ ಸಾಲ ಕೈಸೇರದೆ ಅಂಗಡಿ ಮುಚ್ಚಬೇಕಾಯಿತಂತೆ.

ಬಾಲಕ ಗುರುರಾಜ ಹುಟ್ಟಿದ ಮೇಲೆ ಮನೆಯ ಸ್ಥಿತಿಗತಿಗಳೇನೂ ಬದಲಾವಣೆ ಯಾಗಿರಲಿಲ್ಲ. ಅದೇ ಬಡತನದ, ಕಾರ್ಪಣ್ಯ ಜೀವನ ಮುಂದುವರೆದಿತ್ತು. ಆಚಾರ ನಿಷ್ಠರಾದ ರಾಮಕೃಷ್ಣಯ್ಯ ಮಗನಿಗೆ ಐದು ಆರು ವರ್ಷವಾದ ಮೇಲೆ ಕೊಳವೈಲಿನ ಐಗಳ ಮಠಕ್ಕೆ ಕಳುಹಿಸಿದರು. ಆ ಕಾಲದ ವಿದ್ಯಾಭ್ಯಾಸವೆಂದರೆ, ಅಮರಕೋಶ, ಕೆಲವು ಸ್ತೋತ್ರಗಳನ್ನು ಮಕ್ಕಳಿಗೆ ಉರು ಹಾಕಿಸುವುದು. ಸಂಸ್ಕೃತ ಮತ್ತು ಕನ್ನಡ ವರ್ಣಮಾಲೆಯ ಪರಿಚಯ; ಧಾತು ರೂಪಗಳನ್ನು ಗಟ್ಟಿ ಮಾಡಿಸುವುದು, ಕನ್ನಡದ ಪ್ರಾಚೀನ ಕಾವ್ಯಗಳಿಂದ ಆಯ್ದ ಭಾಗಗಳನ್ನು ಹೇಳಿಕೊಡುವುದು. ಸಾಮಾನ್ಯ ಲೆಕ್ಕಮಾಡುವುದು, ಗುಣಿಸುವುದು ಕಲಿಸುವುದು - ಇಷ್ಟರಲ್ಲೇ ಮುಗಿದು ಹೋಗುತ್ತಿತ್ತು. ಕರ್ನಾಟಕಕ್ಕೆ ಕ್ರೈಸ್ತಧರ್ಮದ ಪ್ರಚಾರದ ಸಲುವಾಗಿ ಆಗಮಿಸಿದ್ದ ಪಾದ್ರಿಗಳು ಕನ್ನಡದಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸಲು, ತಮ್ಮ ಮತ ಗ್ರಂಥಗಳೊಡನೆ, ಕೆಲವು ದೇಶೀ ಕಾವ್ಯ ಸಂಗ್ರಹ ಗಳನ್ನು ಮುದ್ರಿಸಿದರು. ಪಶ್ಚಿಮ ಕರಾವಳಿಯ ಅನೇಕ ಊರುಗಳಲ್ಲಿ ಅವರಿಂದ ಶಾಲೆಗಳು ಆರಂಭವಾಗಿತ್ತು. ಸಾಮಾಜಿಕ ಸುಧಾರಣೆಗಳ ಮೂಲಕ ಅಂದರೆ ಜಾತೀಯತೆಯ ನಿರ್ಮೂಲ, ಮದ್ಯಪಾನ ನಿರೋಧ, ಸತಿಪದ್ಧತಿ ನಿಲ್ಲಿಸುವುದು, ಬಾಲ್ಯ ವಿವಾಹ ಪದ್ಧತಿ ರದ್ದುಗೊಳಿಸುವುದು, ನರಬಲಿ ಮತ್ತು ಪ್ರಾಣಿಬಲಿಗಳನ್ನು ಬಹಿಷ್ಕರಿಸುವುದು - ಮುಂತಾದ ಕಾರ್ಯಗಳೊಂದಿಗೆ, ಧರ್ಮ ಪ್ರಚಾರಕ್ಕಾಗಿ ಶಾಲೆಗಳ ನಿರ್ಮಾಣ, ಗ್ರಂಥಗಳ ಮುದ್ರಣ ವೃತ್ತಾಂತ ಪತ್ರಿಕೆಗಳ ಸ್ಥಾಪನೆ ಕಾರ್ಯವನ್ನೂ ಕೈಗೊಂಡಿದ್ದರು.

ಕರ್ನಾಟಕಕ್ಕೆ ಮುದ್ರಣಕಲೆಯನ್ನೂ ತಂದ ರೆ. ವಿಲಿಯಂ ಕ್ಯಾರಿಯು (Rev. William Carey) ಕನ್ನಡದಲ್ಲಿ ಒಂದು ಸಹಸ್ರ ಪುಟದ ಬೈಬಲ್ ಧರ್ಮ ಗ್ರಂಥವನ್ನು ೧೮೨೦ರ ವೇಳೆಗೆ ಪ್ರಕಟಿಸಿದ್ದನು. ಅಲ್ಲದೆ ೧೮೧೭ರವೇಳೆಗೆ ಕ್ಯಾರಿಯು ಒಂದು ಕನ್ನಡ ವಾಕ್ಯಾರ್ಥ ಗ್ರಂಥವನ್ನು ಪ್ರಕಟಿಸಿದ್ದನು. ೧೮೩೨ ರಲ್ಲಿ ಕನ್ನಡ- ಇಂಗ್ಲಿಷ್ ಅರ್ಥಕೋಶವು ರೆ. ವಿಲಿಯಂ ರೀವನಿಂದ ಪ್ರಕಟವಾಗಿತ್ತು. ೧೮೪೦ ರಲ್ಲಿ ಇಂಗ್ಲಿಷ್ ಕನ್ನಡ ಬಾಲಬೋಧೆಯೊಂದು ಬಳ್ಳಾರಿಯಲ್ಲಿ ಮುದ್ರಣ ವಾಗಿತ್ತು. ಇದಕ್ಕೆ ಮೊದಲು ೧೮೩೮ ರಲ್ಲಿ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನಿಂದ ಆಧುನಿಕ ದೇಶೀಯ ವ್ಯಾಕರಣವೊಂದು ಅಚ್ಚಾಗಿತ್ತು. ತೆಲುಗು ಭಾಷಾ ವ್ಯಾಕರಣ ಮತ್ತು ನಿಘಂಟುಗಳನ್ನು ರಚಿಸಿದ್ದ ಚಾರ್ಲಸ್ ಬ್ರೌನ್ ೧೮೫೨ ರಲ್ಲಿ ಇಂಗ್ಲಿಷ್ ಕನ್ನಡ ಬಾಲಬೋಧೆಯನ್ನು ತೆಲುಗು ಲಿಪಿಯಲ್ಲಿ ರಚಿಸಿ ಪ್ರಕಟಿಸಿದ್ದನು. ೧೮೪೮ ರ ಹೊತ್ತಿಗೆ ಮಂಗಳೂರಿನ ಮುದ್ರಣಾಲಯದಲ್ಲಿ ಕನ್ನಡ ಜೈಮಿನಿ ಭಾರತವು ಅಚ್ಚಾಗಿ, ಓದುಗರಿಗೆ ದೊರತಿತ್ತು. ಹೀಗೆ ೧೮೦೦ ರಿಂದ ೧೮೫೦ ರವರೆಗೆ ಮುದ್ರಣಯಂತ್ರ,

ಲಿಪಿ ಪರಿಷ್ಕರಣ, ಹಲವು ರೀತಿಯ ಕನ್ನಡದ ಅಚ್ಚು ಮೊಳೆಗಳ ನಿರ್ಮಾಣ -ಪ್ರಯೋಗಗಳು ನಡೆದಿತ್ತು. ಗುರುರಾಯರು ಓದುವ ವೇಳೆಗೆ ಅನೇಕ ಕನ್ನಡ ಗ್ರಂಥಗಳು ಪೇಟೆಯಲ್ಲಿ, ಕ್ರೈಸ್ತರ ಡಿಪೋನಲ್ಲಿ ದೊರಕುತ್ತಿದ್ದವು. ೧೮೪೭ ರಲ್ಲಿ ಸಂಸ್ಕೃತ ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿ ಮಾತ್ರವಲ್ಲ - ಲ್ಯಾಟಿನ್ ಮತ್ತು ಜರ್ಮನ್ ಅವತರಣಿಕೆ, ಉಪೋದ್ಘಾತಗಳಿಂದ ಕೂಡಿ, ಸಂಸ್ಕೃತದ ಭಗವದ್ಗೀತೆಯು ಕನ್ನಡದ ಓದುಗರಿಗೆ ರೆ.ಜಿ. ಗ್ಯಾರೆಟ್ಟನು ಅಧಿಕ ಶ್ರಮದಿಂದ ಪ್ರಕಟಿಸಿದ್ದನು. ಇದೊಂದು ಕನ್ನಡ ವಿದ್ಯಾವಂತರ ಪಾಲಿಗೆ ಜ್ಞಾನ ನಿಧಿ ದೊರೆತಂತೆ ಆಗಿತ್ತು. ೧೮೫೬ರಲ್ಲಿ ಡಾ.ರಾಬರ್ಟ್‌ಕಾಲ್ಡವೆಲ್ ಎಂಬ ವಿದ್ವಾಂಸನು ದ್ರಾವಿಡ ಭಾಷೆಗಳನ್ನು ತೌಲನಾತ್ಮಕವಾಗಿ ಅಭ್ಯಾಸ ಮಾಡಿ ಈ ಭಾಷೆಗಳಿಗೆ ಸ್ವತಂತ್ರ ಅಸ್ತಿತ್ವವಿದೆ ಎಂದು ಪ್ರಮಾಣಗಳಿಂದ ತೋರಿಸಿ, ತನ್ನ ಭಾಷಾಶಾಸ್ತ್ರ - ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನ ಗ್ರಂಥ ಬರೆದು ಜಗತ್ತಿಗೆ ಇತ್ತನು. ದುರ್ಗಸಿಂಹನ ಪಂಚತಂತ್ರ, ಮುದ್ರಾಮಂಜೂಷ, ಜೈಮಿನಿ ಭಾರತ, ಕನ್ನಡ ಶಿವಶರಣರ, ಹರಿದಾಸರ ಕೃತಿಗಳು ಕನ್ನಡದಲ್ಲಿ ಗ್ರಂಥ ರೂಪದಲ್ಲಿ ದೊರಕುವಂತಾಗಿತ್ತು. ಅನೇಕ ಕಾವ್ಯಗಳಿಂದ ಸಂಗ್ರಹಿಸಿದ ಕಾವ್ಯ ಸಂಗ್ರಹಗಳೂ, ಕಾವ್ಯ ಮಾಲೆಯೂ, ವ್ಯಾಕರಣ, ಛಂದಸ್ಸು ಭಾಷಾ ನಿಘಂಟುಗಳೂ ಹೇರಳವಾಗಿ ರಚನೆಗೊಂಡು, ವಿದ್ಯಾಸಕ್ತರಿಗೆ ಮನಸ್ಸು ತಣಿಸಲು ಕಾದು ನಿಂತಿದ್ದವು. ಇಂಥ ಕಾಲದಲ್ಲಿ ಗುರುರಾಜನು ತನ್ನ ಪ್ರಾಥಮಿಕ ಶಾಲೆಯ ಶಿಕ್ಷಣ ಮುಗಿಸಿದ್ದನು. ಮುಂದೇನು ಎಂಬುದು ಅವನ ಮಂದಿದ್ದ ಸಮಸ್ಯೆಯಾಗಿತ್ತು.

ಮುಂದೆ ಓದುವುದಾದರೆ ಇಂಗ್ಲಿಷ್ ಶಾಲೆ ಓದಬೇಕು. ಇಲ್ಲವೇ ಸಂಸ್ಕೃತ ಪಾಠ ಶಾಲೆಯಲ್ಲಿ ಕಲಿಯಬೇಕು. ಅಂದರೆ ದೂರದ ಮಂಗಳೂರು, ಉಡುಪಿಗಳಿಗೆ ಹೋಗಬೇಕಾಗಿತ್ತು. ಉಡುಪಿಯಲ್ಲಿ ಆಗಿನ್ನೂ ಸಂಸ್ಕೃತ ಶಾಲೆಗಳಾಗಲಿ, ಇಂಗ್ಲಿಷ್ ಶಿಕ್ಷಣಕ್ಕೆ ಸೌಕರ್ಯವಾಗಲೀ ಇರಲಿಲ್ಲ. ಬ್ರಾಹ್ಮಣರು ಆ ಕಾಲದಲ್ಲಿ ಈಗಿನಂತೆ ಕಲಿಯಲು ಮದರಾಸು ಬೊಂಬಾಯಿಗೆ ಹೋಗುತ್ತಿರಲಿಲ್ಲ. ಜನರು ಉದ್ಯೋಗವರಸಿಕೊಂಡು ಅಲ್ಲಿಗೆ ಹೋಗುವ ಪರಿಪಾಠ ಇನ್ನು ಆರಂಭವಾಗಿರಲಿಲ್ಲ. ವಿದ್ಯಾವಂತರಿಗೆ ಹೋಟಲು ಉದ್ಯಮ ಇನ್ನೂ ಕೀಳೆಂಬ ಮನೋಭಾವವಿದ್ದ ಕಾಲ. ಅನ್ನ ವಿಕ್ರಯವನ್ನು ವೈದಿಕ ವಿದ್ಯೆ ಕಲಿತವರು, ಶಾಸ್ತ್ರ ಸಂಪನ್ನ ಮನೆತನದವರು, ಆಚಾರ ನಿಷ್ಠರು, ಅಪಮಾನ ಮಾತ್ರವಲ್ಲ, ಅದೊಂದು ಪಾಪವೆಂದು ತಿಳಿದಿದ್ದ ಕಾಲ ಅದು. ಆ ಸಮಯದಲ್ಲಿ ಇಂಗ್ಲಿಷ್ ಶಿಕ್ಷಣಕ್ಕಾಗಲೀ, ಸಂಸ್ಕೃತ ಶಿಕ್ಷಣಕ್ಕಾಗಲೀ ವಿದ್ಯಾವಂತರನ್ನು ಆಕರ್ಷಿಸುತ್ತಿದ್ದ ಊರೆಂದರೆ ಕೇರಳದ ತಿರುವನಂತಪುರ ಅಥವಾ ತಿರವೇಂದ್ರಂ. ಇಲ್ಲಿನ ದೊರೆಗಳು ಆ ಕಾಲದ ಇತರ ರಾಜರಿಗಿಂತ ವಿದ್ಯಾಪಕ್ಷಪಾತಿಗಳಾಗಿದ್ದರು. ಸಂಸ್ಕೃತ ವಿದ್ಯೆಗೆ, ವೇದವಿದ್ಯೆಗೆ, ವೈದಿಕ ವಿದ್ಯೆಗೆ ಬಹಳ ಪ್ರೋತ್ಸಾಹ ನೀಡಿ, ವಿದ್ಯಾರ್ಥಿಗಳಿಗೆ ಹಲವು ಸೌಕರ್ಯಗಳನ್ನು ಒದಗಿಸುತ್ತಿದ್ದರು. ಸಂಸ್ಕೃತವಾಗಲೀ, ಇಂಗ್ಲೀಷಾಗಲೀ ಕಲಿಯುವುದಿದ್ದರೆ ಎಲ್ಲರೂ ಆ ಕಾಲದಲ್ಲಿ ಕೇರಳಕ್ಕೆ ಹೋಗುತ್ತಿದ್ದರು. ವಿದ್ಯೆ ಕಲಿತವರಿಗೆ ಮಾನಗೌರವಗಳು, ವೃತ್ತಿ ಭರವಸೆಯೂ ಅಲ್ಲಿ ಇರುತ್ತಿತ್ತು. ಹೀಗಾಗಿ ಅವರಿವರ ಬಾಯಿಂದ ಈ ಬಗ್ಗೆ ಕೇಳಿದ್ದ ಹದಿನಾರು ವರ್ಷದ ಹುಡುಗ ಗುರುರಾಜನಿಗೆ ತಾನೂ ಇಂಗ್ಲಿಷ್ ವಿದ್ಯೆ ಕಲಿಯಲು ತಿರುವೇಂದ್ರಂಗೆ ಹೋಗಲು ಆಸೆಯಾಯಿತು.

ಈ ಸಮಯದಲ್ಲಿ ಕೇರಳದ ಗಡಿಸೀಮೆಯಾಗಿದ್ದ ಕಂಬಳೆಯಲ್ಲಿ ಶ್ರೀಪದ್ಮನಾಭ ಇರ್ನಿತ್ತಾಯರೆಂಬುವರು ಆಯುರ್ವೇದ ವಿದ್ಯೆಯಲ್ಲಿ ನಿಷ್ಣಾತರಾಗಿ, ಎಲ್ಲರ ಗಮನಕ್ಕೆ ಪಾತ್ರರಾದ ವೈದ್ಯರಾಗಿದ್ದರು. ಅವರ ಬಂಧುಗಳು ಉಡುಪಿಯಲ್ಲಿದ್ದರು. ಇರ್ನಿತ್ತಾಯರು ಆಗಾಗ್ಗೆ ಉಡುಪಿಗೆ ಬರುತ್ತಿದ್ದರು. ಒಮ್ಮೆ ಗುರುರಾಜನು ಉಡುಪಿಗೆ ಬಂದಿದ್ದಾಗ, ಇರ್ನಿತ್ತಾಯರ ಪರಿಚಯವಾಯಿತು. ಅವರ ಸ್ನೇಹಿತನೊಬ್ಬನು ಇರ್ನಿತ್ತಾಯರ ದೂರದ ಬಂಧುವಾಗಬೇಕು. ಅವನಿಂದ ಪರಿಚಯ ಪಡೆದ ಗುರುರಾಜನು, ಇರ್ನಿತ್ತಾಯರಲ್ಲಿ ತನ್ನ ಆಕಾಂಕ್ಷೆಯನ್ನು ಹೇಳಿಕೊಂಡನು. ಸ್ವಯಂ ಇಂಗ್ಲಿಷ್ ಶಿಕ್ಷಣ ಪಡೆದಿದ್ದ ಪದ್ಮನಾಭ ಇರ್ನಿತ್ತಾಯ ಪಂಡಿತರು ಈ ತರುಣ ವರ್ಚಸ್ವಿ ಬಾಲಕನಿಂದ ಆಕರ್ಷಿತರಾಗಿ, ಅವನಿಗೆ ಇಂಗ್ಲಿಷ್ ಕಲಿಯಲು ಕೇರಳಕ್ಕೆ ಬರಲು ಆಹ್ವಾನಿಸಿದರು, ಮಾತ್ರವಲ್ಲ, ಅಲ್ಲಿನ ಶಾಲೆಯೊಂದರಲ್ಲಿ ಶಿಕ್ಷಣಾವಕಾಶ ಕಲ್ಪಿಸಿಕೊಟ್ಟದ್ದಲ್ಲದೆ, ವಿದ್ಯಾರ್ಥಿ ನಿಲಯದಲ್ಲಿ ಊಟ ವಸತಿಗಳಿಗೂ ಅನುಕೂಲ ಪಡಿಸಿಕೊಟ್ಟರು.

ಹೀಗೆ ತಿರುವನಂತಪುರದಲ್ಲಿ ಎಂಟು ವರ್ಷಗಳ ಕಾಲವಿದ್ದು ಗುರುರಾಜನು ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಪಾವಂಜೆಗೆ ಆಧುನಿಕ ವಿಚಾರಗಳ ಸಂಸ್ಕಾರವುಳ್ಳ ಯುವಕನಾಗಿ ಹಿಂತಿರುಗಿದನು. ಈಗ ಗುರುರಾಜನು ಪಾವಂಜೆ ಗುರುರಾಯನಾಗಿದ್ದನು. ಇಪ್ಪತ್ತುನಾಲ್ಕು ಹರೆಯದ ಯುವಕನಾಗಿದ್ದ ಅವನು ಹೊಟ್ಟೆಪಾಡಿಗಾಗಿ ಯಾವ ವೃತ್ತಿಯನ್ನು ಆರಿಸಿಕೊಳ್ಳಬೇಕು ಎಂಬ ಸಮಸ್ಯೆಯನ್ನು ಎದುರಿಸಬೇಕಾಯಿತು.

ಪಾವಂಜೆಯಲ್ಲಿದ್ದ ಹಿರಿಯರ ಭೂಮಿ-ಆಸ್ತಿ ಒಂದು ಕುಟುಂಬಕ್ಕೆ ಮಾತ್ರ ಉದರ ಪೋಷಣೆ ನೀಡುವಂಥಾದ್ದು. ಅವರ ತಮ್ಮಂದಿರು ಅದನ್ನೇ ಆಶ್ರಯಿಸಿ ಬದುಕಿದ್ದರು. ಇನ್ನು ಅಧ್ಯಾಪಕ ವೃತ್ತಿ - ಮಾತುಗಾರರೂ, ಹರಟೆಮಲ್ಲರೂ ಆಗಿರದ ಗುರುರಾಯರಿಗೆ, ಈ ಅಧ್ಯಾಪಕನ ಕಾರ್ಯ, ಹುಡುಗರೊಂದಿಗೆ ಬಾಯಿಬಡಿಯುವ ವೃತ್ತಿ ಹಿಡಿಸಲಿಲ್ಲ. ಆಗ ಶಾಲೆಗಳು ವಿರಳವಾಗಿತ್ತು. ಅಧ್ಯಾಪಕನ ನೌಕರಿಗೂ ಅಷ್ಟು ಕಳೆ ಇರಲಿಲ್ಲ. ಇನ್ನು ಕೋರ್ಟುಗಳಲ್ಲಿ ಪ್ಲೀಡರ್ ಆಗಿ, ನ್ಯಾಯಾಲಯದ ಕಟ್ಟೆಯನ್ನು ಆಶ್ರಯಿಸುವುದು. ಸುಳ್ಳು ಮೋಸಗಳ ಆಗರವಾದ ಈ ವೃತ್ತಿಯೂ ಗುರುರಾಯರಿಗೆ ಹಿಡಿಸಲಿಲ್ಲ. ಸರಕಾರಿ ನೌಕರಿ ಹಿಡಿದಿದ್ದರೆ ದೂರದ ಊರುಗಳಿಗೆ ಹೋಗಬೇಕಾಗಿತ್ತು. ಉಡುಪಿಯಲ್ಲಿ ನಿಂತು ಜನಸಾಮಾನ್ಯರಿಗೆ ಸೇವೆ ಸಲ್ಲಿಸಬೇಕೆಂದಿದ್ದ ರಾಯರಿಗೆ ಇದು ಹಿಡಿಸಲಿಲ್ಲ. ತಾವು ಕೈಗೊಳ್ಳುವ ವೃತ್ತಿಯಿಂದ ತಮ್ಮ ಚರಿತಾರ್ಥ ಸಾಗಬೇಕು, ಇದರಿಂದ ಸಮಾಜಕ್ಕೂ ಸೇವೆಯಾಗಬೇಕು. ಅಂಥ ವೃತ್ತಿ ಹಿಡಿಯಬೇಕೆಂದು ಯೋಚಿಸಿ ಅವರು ಹೆಚ್ಚುಕಾಲ ಉಡುಪಿಯ ಗೆಳೆಯರ ಜತೆಯಲ್ಲಿ ಕಳೆಯುತ್ತಿದ್ದರು.

ಒಮ್ಮೆ ಉಡುಪಿಗೆ ಬಂದ ಇರ್ನಿತ್ತಾಯರಿಂದ ಮೆಟ್ರಿಕ್ ಮುಗಿಸಿದ ಗುರುರಾಯರಿಗೆ ಕರೆಬಂತು. ಅವನ ಯೋಗಕ್ಷೇಮವನ್ನು ವಿಚಾರಿಸಿದುದಲ್ಲದೆ ಮದುವೆಯ ಮಾತನ್ನು ಆಡಿದರು. "ಮೊದಲು ನನ್ನ ಕಾಲ ಮೇಲೆ ನಾನು ನಿಲ್ಲುವಂತಾಗಲಿ, ಆಮೇಲೆ ಮದುವೆ" - ಎಂದರು ರಾಯರು ನಗುತ್ತಾ.

"ಹಾಗಾದರೆ ನೀನೇಕೆ ನನ್ನಂತೆ ವೈದ್ಯನಾಗಬಾರದು?" - ಎಂಬ ಪದ್ಮನಾಭ ಪಂಡಿತರ

ಪ್ರಶ್ನೆ ಅನಿರೀಕ್ಷಿತವಾಗಿ ಬಂದಿತ್ತು. ಗುರುರಾಯರು ವಿಚಾರಮಾಡಿದರು. ಹೌದು, ತಾನೇಕೆ ಇರ್ನಿತ್ತಾಯರಂತೆ ವೈದ್ಯರಾಗಬಾರದು. ಇದರಿಂದ ಪುಣ್ಯ ಪುರುಷಾರ್ಥಗಳೆರಡೂ ಸಾಧಿಸುವು ದಲ್ಲ - ಎಂದುಕೊಂಡು, ವೈದ್ಯರಾಗಲು ನಿರ್ಧರಿಸಿದರು. ಇರ್ನಿತ್ತಾಯರು ಗುರುರಾಯರರ ಮೇಧಾಶಕ್ತಿ ಹಾಗೂ ಸಮಾಜ ಸೇವೆಯ ಹಂಬಲವನ್ನು ಬಲ್ಲವರಾಗಿದ್ದುದರಿಂದ, ಈ ತರುಣನನ್ನು ತಮ್ಮ ಬಳಿ ಕೆಲಸ ಕಲಿಯಲು ಕಂಬಳೆಗೆ ಕರೆದೊಯ್ದರು.

ಆಗ ಕೇರಳ ಸಂಸ್ಕೃತ ವಿದ್ಯೆಗೆ ಹೆಸರಾಗಿದ್ದಂತೆ, ವೈದ್ಯವಿದ್ಯೆ, ವಾಮಾಚಾರ, ಮಂತ್ರ ತಂತ್ರಗಳಿಗೂ ಹೆಸರಾಗಿತ್ತು. ಕೊಟ್ಟಾಯಂನ ಆರ್ಯುವೈದ್ಯ ಶಾಲೆ ಇನ್ನೂ ತಲೆ ಎತ್ತಿರಲಿಲ್ಲ ವಾದರೂ, ಅಲ್ಲಲ್ಲಿ ಅನೇಕ ವೈದ್ಯರು ಆಯುರ್ವೇದ ಶಾಸ್ತ್ರದಲ್ಲಿ ಪರಿಣಿತರಾಗಿದ್ದರು.

ಬಾಲಕನಾಗಿರುವಾಗ ತಾಯಿ ಹಾಗೂ ಅಜ್ಜಿಯರಿಂದ ಮನೆಮದ್ದು ಅನೇಕ ವ್ಯಾಧಿಗಳಿಗೆ ಪ್ರಯೋಗಕ್ಕೆ ಬಂದದನ್ನು ಗುರುರಾಯರು ಕಂಡಿದ್ದರು. ಕರಾವಳಿಯ ಕಾಡುಗಳಲ್ಲಿ ವನಸ್ಪತಿ ಸಂಮೃದ್ಧವಾಗಿತ್ತು. ಆ ಕಾಲದ ಹಳ್ಳಿಯ ಜನರಿರಲಿ, ಶ್ರೀಮಂತರಿರಲಿ, ಇಂಗ್ಲಿಷ್ ಔಷಧದಲ್ಲಿ ನಂಬಿಕೆ ಹೊಂದಿರಲಿಲ್ಲ. ಅಲ್ಲದೆ ಇಂಗ್ಲಿಷ್ ಔಷಧ ಸ್ವೀಕರಿಸಿದರೆ, ಜಾತಿಕೆಡುವ ಭಯವೂ, ಅಜ್ಞಾನವೂ ಇದ್ದ ಕಾಲ ಅದು. ಹೀಗಾಗಿ ಕೇವಲ ಅಸ್ಪೃಶ್ಯರು, ಬೆಸ್ತರು ಮತ್ತು ಕೊರವರು ಮುಂತಾದವರಲ್ಲಿ ಕ್ರೈಸ್ತ ಮತ ಸ್ವೀಕರಿಸಿದವರು ಮಾತ್ರ ಇಂಗ್ಲಿಷ್ ಔಷಧ ತೆಗೆದು ಕೊಳ್ಳುತ್ತಿದ್ದರು. ಆ ಕಾಲದ ಪಾದ್ರಿಗಳು ರೋಗಿಗಳ ಶುಶ್ರೂಷೆ, ಔಷಧೋಪಚಾರಗಳಿಂದ ಜನರನ್ನು ಕ್ರೈಸ್ತಧರ್ಮಕ್ಕೆ ಸೇರಿಸಿಕೊಳ್ಳುತ್ತಿದ್ದರು. ಮೇಲ್ವರ್ಗದವರನ್ನು ಇಂಥ ಉಪಾಯಗಳಿಂದ ಮತಾಂತರಗೊಳಿಸಲು ಸಾಧ್ಯವಿರಲಿಲ್ಲ. ಹೀಗಾಗಿ ಗುರುರಾಯರು ಶ್ರದ್ಧಾ ಭಕ್ತಿಯಿಂದ ಆಯುರ್ವೇದ ಶಾಸ್ತ್ರವಿದ್ಯೆ, ವೈದ್ಯಗಳನ್ನು ಚೆನ್ನಾಗಿ ಕಲಿತರು. ಯೋಗ್ಯ ಗುರುಗಳು ದೊರತಿದ್ದರು. ಕಲಿಯಲು ಉತ್ಸಾಹವಿತ್ತು. ಅತ್ಯಲ್ಪ ಕಾಲದಲ್ಲಿ ಗುರುರಾಯರು ನಿಷ್ಣಾತ ವೈದ್ಯರಾಗಿ ಪರಿವರ್ತಿತರಾದರು.

## ೬

ಭಾರತೀಯ ಆಯುರ್ವೇದ ಶಾಸ್ತ್ರವು ಅತ್ಯಂತ ವೈಜ್ಞಾನಿಕವೂ, ಸುಲಭವೂ, ಪರಿಣಾಮಕಾರಿಯೂ, ಆದ ವೈದ್ಯಪದ್ಧತಿ ಎಂದು ಹೆಸರು ಪಡೆದಿದೆ.

"ಭಾರತೀಯ ವೈದ್ಯಶಾಸ್ತ್ರವೆಂದು ವೇದಕಾಲದಿಂದಲೂ ಪ್ರಸಿದ್ಧವಾದದ್ದು ಆಯುರ್ವೇದ. ಧರ್ಮಾರ್ಥ ಸುಖಸಾಧನಗಳಿಗೆ ಅನುಕೂಲವಾಗುವ ಆಯುಷ್ಯದ ಹಿತಾಹಿತ ಗಳನ್ನು ಕುರಿತು ವಿಷದವಾದ ವರ್ಣನೆಯು ಆಯುರ್ವೇದದಲ್ಲಿ ಬರುತ್ತದೆ. ಆಯುರ್ವೇದವು ಪ್ರಸನ್ನಾತ್ಮೇಂದ್ರಿಯ ಉಳ್ಳವರನ್ನೇ ಆರೋಗ್ಯವಂತರೆಂದೂ ವ್ಯಾಖ್ಯಾನ ಮಾಡುವುದು. ಇದರ ಇತಿಹಾಸ ಹಾಗೂ ಪರಂಪರೆಗಳನ್ನು ನಾವು ಸೂಕ್ಷ್ಮವಾಗಿ ಅರಿತು ಕೊಂಡಾಗ ನಮಗೆ ಇದರ ಭವ್ಯತೆಯ ಅರಿವಾಗದಿರದು. ಆಯುರ್ವೇದ ಎಂದರೆ ಕೇವಲ ಚರಕ, ಶುಶ್ರುತಾದಿ ಸಂಹಿತೆಗಳ ಸಂಗ್ರಹವಾಗಿರದೆ, ಕೇವಲ ರೋಗಿಗಳ ಚಿಕಿತ್ಸೆಯನ್ನು ಹೇಳುವ ವೈದ್ಯಶಾಸ್ತ್ರವಾಗಿರದೆ, ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾದ ಅನೇಕ ತತ್ವಗಳನ್ನು ಒಳಗೊಂಡ ಸುಸಂಗತ ಶಾಸ್ತ್ರವಾಗಿದೆ;

ವಿಜ್ಞಾನವಾಗಿದೆ "- ಎಂದು ತಿಳಿಯಬೇಕೆಂದು ಅನೇಕ ಶಾಸ್ತ್ರಗ್ರಂಥಗಳು ಹೇಳಿವೆ.

*- ( ಆಯುರ್ವೇದ ಶಾಸ್ತ್ರ ; ಡಾ। ಧನ್ಯಕುಮಾರ ಇಹಾರಿ)*

"ಯಾವುದೇ ವೈದ್ಯವಾಗಲಿ ಶರೀರದ ಸ್ವರೂಪ, ಸ್ವಭಾವಗಳು ಏನು ಎಂಬುದನ್ನು ಅರಿತುಕೊಳ್ಳಬೇಕಲ್ಲವೇ? ಹೀಗೆ ಅರಿತುಕೊಂಡಾಗಲೇ ರೋಗ ಬರುವುದು ಹೇಗೆ, ರೋಗ ಬೇರೂರಿಕೊಳ್ಳುವುದು ಹೇಗೆ, ರೋಗ ಕಾಣಿಸಿಕೊಳ್ಳುವುದು ಹೇಗೆ, ಶರೀರದಿಂದ ರೋಗವನ್ನು ತೊಲಗಿಸುವುದು ಹೇಗೆ " -ಎಂಬುದನ್ನು ತಿಳಿಯಬಹುದು. ಚಿಕಿತ್ಸೆಯು ಫಲಕಾರಿಯಾಗಲು ರೋಗವನ್ನೂ ತಿಳಿದಿರಬೇಕು. ವೈದ್ಯವನ್ನು ತಿಳಿದಿರಬೇಕು. ಎಂದರೆ ತಿಳಿವಳಿಕೆಯು ಚೊಕ್ಕವಾಗುವುದು ಶರೀರದ ರಚನೆಯನ್ನೂ ಕೆಲಸವನ್ನೂ ಅರಿತುಕೊಂಡಾಗಲೇ.

ಶರೀರದ ರಚನೆ ಮತ್ತು ಸ್ವಭಾವಗಳನ್ನು ಅರಿತುಕೊಳ್ಳಬೇಕಾದರೆ ತತ್ವಜ್ಞಾನದ ಆಸರೆ ಆಗತ್ಯವಾಗುತ್ತದೆ. ಆಯುರ್ವೇದಕ್ಕೆ ಮೊದಲಿನಿಂದಲೂ ಸಿದ್ಧಾಂತದ ಬೆಂಬಲವಿದೆ; ದರ್ಶನದ ಚೌಕಟ್ಟಿನಲ್ಲಿ ಸ್ಪಷ್ಟವಾದ ವಿವರಗಳ ಮೇಲೆ ಈ ವೈದ್ಯವು ನಿಂತಿರುವುದು. ಆಯುರ್ವೇದವು ಒಪ್ಪಿಕೊಂಡಿರುವುದು ನಮ್ಮ ಷಡ್ದರ್ಶನಗಳಲ್ಲಿ ತುಂಬ ಹಳೆಯದೂ, ಆಧಾರಭೂತವೂ ಆದ ಸಾಂಖ್ಯ ದರ್ಶನವನ್ನು. ಇದರ ಜೊತೆಗೆ ಆಯುರ್ವೇದವು ನ್ಯಾಯ ವೈಶೇಷಿಕ ದರ್ಶನಗಳನ್ನೂ ಅಳವಡಿಸಿಕೊಂಡಿದೆ. ಇವುಗಳಲ್ಲಿ ಹಾಸುಹೊಕ್ಕಾಗಿ ಬರುವ ಪ್ರಕೃತಿ,ಪುರುಷ, ದ್ರವ್ಯ, ಗುಣ, ಕರ್ಮ ಮೊದಲಾದ ಕಲ್ಪನೆಗಳು ಆಯುರ್ವೇದ ಪ್ರಕ್ರಿಯಗಳಾಗಿವೆ. ಮುಖ್ಯವಾಗಿ ಆಯುರ್ವೇದದ ಅಡಿಗಲ್ಲಾಗಿರುವುದು ಪಂಚಭೌತಿಕತತ್ತ್ವ. ಇದನ್ನು ಭಾರತೀಯ ದರ್ಶನಗಳೆಲ್ಲವೂ ಒಪ್ಪಿಕೊಂಡಿವೆಯಾಗಿ ಆಯುರ್ವೇದದ ಅಡಿಗಲ್ಲು ಗಟ್ಟಿಯಾಗಿದೆ. ಇದರಂತೆಯೇ ಇರುವ ತ್ರಿಗುಣ ಸಿದ್ಧಾಂತವನ್ನು ಆಯುರ್ವೇದ ಆಸರೆಯಾಗಿ ಒಪ್ಪಿಕೊಂಡಿದೆ.

ಮನುಷ್ಯನ ಶರೀರವು ಇತರ ಎಲ್ಲ ಪದಾರ್ಥಗಳಂತೆ "ಪಂಚಭೂತವಿಕಾರಾತ್ಮಕ"ವಾದುದು. ನೆಲ, ನೀರು, ಬೆಂಕಿ, ಗಾಳಿ -ಈ ನಾಲ್ಕು ಮಹಾಭೂತಗಳ ಪರಮಾಣುಗಳು ಆಕಾಶವೆಂಬ ಐದನೆಯ ಮಹಾಭೂತದಲ್ಲಿ ಬೆರೆತುಕೊಂಡಿರುವುದು ಶರೀರ. ಶರೀರ ಎಂದರೆ ಶರೀರವನ್ನು ಪಡೆದಿರುವ, ಶರೀರವನ್ನು ಬಳಸಿಕೊಳ್ಳುವ, ಶರೀರದಿಂದ ಬೇರೆಯಾಗಿರುವ ಚೇತನ.

ಚೇತನವು ನಿಲ್ಲುವುದಕ್ಕೆ ಆಸರೆಯಾಗಿ, ಐದು ಮಹಾಭೂತಗಳು ಬಗೆ ಬಗೆಯಾಗಿ ಮಾರ್ಪಟ್ಟು, ಒಟ್ಟಾಗಿ ಬೆರೆತಿರುವುದೇ ಶರೀರವೆಂದು ಚರಕನ ಒಕ್ಕಣೆ. ಶರೀರವೆನ್ನುವ ಮಾತಿನಲ್ಲಿ ತಲೆ, ಹೊಟ್ಟೆ, ಬೆನ್ನು, ತೊಡೆ, ತೋಳು ಮೊದಲಾಗಿ ಹೊರಗೆ ಕಾಣುವ ಅಂಗಗಳೂ, ಹೃದಯ, ಅಂಡಾಶಯ, ಯಕೃತ್, ಪ್ಲೀಹ, ಅಸ್ಥಿ, ಸ್ನಾಯು, ಮಾಂಸ, ಸಂಧಿ, ಸ್ರೋತಸ್ಸು, ಸಿರಹಾ, ಧಮನಿ ಮೊದಲಾದ ಒಳಗಿನ ವಿವರಗಳೂ, ಹೊರಗಣ ವಿಷಯಗಳನ್ನು ಅರಿತುಕೊಳ್ಳಲೆಂದು ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ-ಈ ಐದು ಜ್ಞಾನೇಂದ್ರಿಯಗಳೂ, ಶರೀರದ ಕೆಲಸವನ್ನು ಮಾಡಲು ಐದು ಕರ್ಮೇಂದ್ರಿಯಗಳೂ (ಹಿಡಿದು ಕೊಳ್ಳಲು ಕೈ, ನಡೆಯಲು ಕಾಲು, ಮಾತನಾಡಲು ಬಾಯಿ, ಮಲಗಳನ್ನು ಹೊರದೂಡಲು ವಾಯು, ಜನನೇಂದ್ರಿಯವಾದ ಉಪಸ್ಥ) ಮತ್ತು ಎರಡು ಬಗೆಯ ಇಂದ್ರಿಯಗಳೊಂದಿಗೆ ಇರುವ ಮನಸ್ಸು ಇಷ್ಟೂ ಸೇರುತ್ತವೆ. ಹೀಗೆ ಶರೀರ ಇಂದ್ರಿಯ, ಮನಸ್ಸು,

ಚೇತನ, ಇಷ್ಟೂ ಕೂಡಿಕೊಂಡಿರುವವನೇ ಪುರುಷ. ರೋಗ ಬರುವುದು ಅವನಿಗೇ, ಚಿಕಿತ್ಸೆ ನಡೆಯುವುದೂ ಅವನಲ್ಲೇ. ಆಯುರ್ವೇದದಲ್ಲಿ ಇವನಿಗೆ ಕರ್ಮಪುರುಷ ಅಥವಾ ಚಿಕಿತ್ಸಾಧಿಕೃತ ಪುರುಷನೆಂದು ಹೆಸರಿದೆ.

ಶರೀರವೇ ಬೇರೆ, ಇಂದ್ರಿಯವೇ ಬೇರೆ, ಮನಸ್ಸೇ ಬೇರೆ, ಚೇತನವೇ ಬೇರೆ ಎನ್ನುವುದು ಆಯುರ್ವೇದದ ನಿಲುವಲ್ಲ. ರೋಗದ ಕಾರಣವನ್ನು ಕಾಣಬೇಕಾದರಾಗಲೀ, ರೋಗವನ್ನ ಮದ್ದಿನಿಂದ ಸರಿಪಡಿಸಬೇಕಾದರಾಗಲೀ, ಶರೀರ, ಇಂದ್ರಿಯ, ಮನಸ್ಸು, ಚೇತನ ಇದನ್ನು ಒಂದುಗೂಡಿಯೇ ನೋಡಬೇಕು.

– (*ಆಯುರ್ವೇದ ಪರಿಚಯ ; ಪ್ರೊ.ಎಸ್.ಕೆ.ರಾಮಚಂದ್ರರಾವ್*)

ಹೀಗೆ ಶರೀರವನ್ನು ಪೂರ್ಣದೃಷ್ಟಿಯಿಂದ ನೋಡಿ ಚಿಕಿತ್ಸೆ ಮಾಡುವ ಭಾರತೀಯ ವೈದ್ಯಶಾಸ್ತ್ರ ಪದ್ಧತಿಯೇ ಆಯುರ್ವೇದ.

"ಆಯುರ್ವೇದವೆಂದರೆ ಆಯುಸ್ಸಿನ ವೇದ. ಆಯುಸ್ಸೆಂದರೇನು? ಬದುಕು ಯಾರ ಬಾಳಿನಲ್ಲಾದರೂ ಒದಗುವ ಹಿತ (ಎಂದರೆ ಒಳಿತು) ಅಹಿತ (ಕೆಡಕು) ಸುಖ, ದುಃಖ- ಇವುಗಳ ಒಕ್ಕೂಟವನ್ನೆ ಬದುಕು ಎನ್ನುವುದು. ಬದುಕು ಏತಕ್ಕೆ? ಧರ್ಮ, ಕರ್ಮ, ಅರ್ಥ -ಈ ಮೂರು ಗುರಿಗಳನ್ನು ಮುಟ್ಟಲೆಂದಲ್ಲವೆ? ಈ ಗುರಿಯನ್ನು ಮುಟ್ಟಬೇಕಾದರೆ ದೇಹಗಟ್ಟಿಯಾಗಿರಬೇಕು. ಮನಸ್ಸು ನೆಮ್ಮದಿಯಿಂದ ಇರಬೇಕು. ಇದೇ ಹಿತ. ಬದುಕಿನಲ್ಲಿ ಅಡಚಣೆಗಳನ್ನು ತಂದೊಡ್ಡುವುದು, ಮೈಯೂ, ಮನಸ್ಸೂ ಬಳಲುವಂತೆ ಮಾಡುವುದು, ಗುರಿಗಳನ್ನು ಮುಟ್ಟಲಾರದಂತೆ ದೂರವಿರಿಸುವುದು ಅಹಿತ. ಸುಖ ದುಃಖಗಳು ಹಿತ, ಅಹಿತಗಳನ್ನು ಅನುಸರಿಸಿಕೊಂಡು ಬರುವ ಮನೋ ಧರ್ಮಗಳು ತಾನೆ? ಆಯುರ್ಹಿತಾಹಿತಂ- ಎಂದು ಆಯುರ್ವೇದದ ಒಕ್ಕಣೆ. (ಅದೇನೇ ಬದುಕು) ಮಾನವನ ದೇಹವನ್ನ ನಿರೋಗಿಯನ್ನಾಗಿ ಮಾಡಿ, ಮೋಕ್ಷ ಸಾಧಕವಾಗಿ ಮಾಡುವ ಶಾಸ್ತ್ರ ಆಯುರ್ವೇದವಾಗಿರುವುದರಿಂದ ಎಲ್ಲ ಶಾಸ್ತ್ರಕ್ಕೂ ಇದೇ ಮೂಲ. ಶರೀರವು ದೋಷ, ಧಾತು, ಮಲಗಳ ಒಕ್ಕೂಟವಾಗಿದೆ. ದೋಷಗಳು ಮೂರು- ವಾತ, ಪಿತ್ತ ಮತ್ತು ಕಫ. ಧಾತುವೆಂದರೆ ಶರೀರ ರಚನೆ, ಕಾರ್ಯಕ್ಕೆ ನೆರವಾಗುವ ಪದಾರ್ಥಗಳು. ಇವುಗಳು ರಸ, ರಕ್ತ, ಮಾಂಸ, ಮೇದಸ್ಸು, ಮೂಳೆ, ಮಜ್ಜ ಮತ್ತು ಶುಕ್ರ. ದ್ರವ್ಯಗಳು ಮೂರು- ಮೂತ್ರ, ಪುರೀಷ, ಸ್ವೇದ (ಬೆವರು) ಹೀಗೆ ದೋಷಗಳು ಶರೀರವನ್ನು ಏರಿಳಿತಗೊಳಿಸಿ, ಧಾತುಗಳನ್ನು ಕೆಡಿಸುವುದರಿಂದ, ಶರೀರವು ರೋಗ ಹೊಂದಿ, ಕಡೆಗೆ ನಾಶವಾಗುವುದು. ಈ ದೋಷಗಳನ್ನು ಪತ್ತೆಹಚ್ಚಿ ತಕ್ಕ ಚಿಕಿತ್ಸೆ ಮಾಡುವುದೇ ಆಯುರ್ವೇದಶಾಸ್ತ್ರದ ಮುಖ್ಯ ಉದ್ದಿಶ್ಯ. ಅಂದರೆ ರೋಗವೆಂದರೆ ದೋಷಗಳ ಏರುಪೇರು ; ಆರೋಗ್ಯವೆಂದರೆ ದೋಷಗಳು ಸಮನಾಗಿರುವುದು ಎಂದು ಹೇಳಬಹುದು. ಈ ಸಮತೆಯನ್ನು ಸಾಧಿಸಲು ಚಿಕಿತ್ಸೆ ಅವಶ್ಯಕ. ಇದಕ್ಕೆ ಗಿಡಮೂಲಿಕೆ ರಸಗಳು ಸಾಧನವಾಗಿ ಒದಗುತ್ತದೆ. ಇದರಲ್ಲಿ ತ್ರಿದೋಷಗಳನ್ನು ತಿಳಿದು ಸಕಾಲದಲ್ಲಿ ಚಿಕಿತ್ಸೆ ಮಾಡಿದರೆ ಆರೋಗ್ಯವನ್ನು ಸಾಧಿಸಿ, ಮನುಷ್ಯನನ್ನು ಪೂರ್ಣಾರೋಗ್ಯವಂತನನ್ನಾಗಿ ಮಾಡುವುದು ಸಾಧ್ಯವಾಗುತ್ತದೆ.

ಆಯುರ್ವೇದದಲ್ಲಿ ನಾಲ್ಕು ವಿಭಾಗಗಳಿವೆ. ವೈದ್ಯ, ಔಷಧಗಳು, ಪರಿಚಾರಕ ಹಾಗೂ

ರೋಗಿ- ಇವು ಚಿಕಿತ್ಸಾ ಚತುಷ್ಪಾದಗಳು. ರೋಗೋತ್ಪತ್ತಿಗೆ ಕಾರಣವಾದ ದುಷ್ಟ ದೋಷ - ಧಾತು ಮಲಗಳನ್ನು ಅನೇಕ ವಿಧದ ಔಷಧ, ಆಹಾರ ವಿಹಾರಗಳ ಕ್ರಮಗಳಿಂದ ದೋಷ ನಿರ್ವಹಣ ಮಾಡಿ ಅಲ್ಪವಾಗಿರುವ ದೋಷಗಳನ್ನು ವೃದ್ಧಿಪಡಿಸಿ, ಸಮಪ್ರಮಾಣಕ್ಕೆ ತರುವುದು ಅಧಿಕವಾಗಿರುವ ದೋಷಗಳನ್ನು ಕಡಿಮೆ ಮಾಡಿ ಸಮಪ್ರಮಾಣಕ್ಕೆ ತರುವುದು ಯೋಗ್ಯ ಚಿಕಿತ್ಸೆ ಎನ್ನಿಸುತ್ತದೆ. ಚಿಕಿತ್ಸೆ ಕ್ರಮಗಳು ಶರೀರಕ ಮತ್ತು ಮಾನಸಿಕವಾಗಿರುವಂತೆ, ಔಷಧ ವಿಧಾನಗಳು ವನಸ್ಪತಿ, ರಸೌಷಧಿ ಎಂದು ಎರಡು ವಿಧವಾಗಿದೆ. ಹಿಂದೆ ರೂಢಿಯಲ್ಲಿದ್ದ ಶಾಸ್ತ್ರ ಪದ್ಧತಿ ಈಗ ಆಯುರ್ವೇದ ಚಿಕಿತ್ಸೆಯಲ್ಲಿ ನಷ್ಟವಾಗಿದೆ.

ಹೀಗೆ ಮಾನವ ಜೀವನಕ್ಕೆ ಹತ್ತಿರವಿರುವ, ಸರಳ ಚಿಕಿತ್ಸಾ ಪದ್ಧತಿಯಿಂದ ವನಸ್ಪತಿ ರಸೌಷಧಗಳಿಂದ ಜನ ಸಾಮಾನ್ಯರ ಸೇವೆ ಮಾಡಬೇಕೆಂದು ಪಾವಂಜೆ ಗುರುರಾಯರು ಸಂಕಲ್ಪಿಸಿದರು.

## ೭

ಪಾವಂಜೆ ಗುರುರಾಯರು ಮೊದಲಿಂದಲೂ ಹಠದ ಸ್ವಭಾವದವರು. ಒಮ್ಮೆ ಹಿಡಿದುದನ್ನು ಅವರೆಂದೂ ಅದನ್ನು ಕೊನೆಮುಟ್ಟದೆ ಕೈ ಬಿಡುತ್ತಿರಲಿಲ್ಲ. ಅವರ ಹಲವು ವರ್ಷಗಳ ಸತತ ಪರಿಶ್ರಮ, ದುಡಿಮೆಗಳಿಂದ ಆಯುರ್ವೇದ ಚೆನ್ನಾಗಿ ನುರಿತು, ಸ್ವತಂತ್ರ ವೈದ್ಯರೆಂದು ವೃತ್ತಿಯನ್ನು ಆರಂಭಿಸಲು ಬೇಕಾದ ಆತ್ಮವಿಶ್ವಾಸವನ್ನು, ಜ್ಞಾನವನ್ನು ರೂಢಿಸಿಕೊಂಡರು. ಪದ್ಮನಾಭ ಇರ್ನಿತ್ತಾಯರು ಪಾವಂಜೆಯವರನ್ನು ಆಶೀರ್ವದಿಸಿ ಅವರನ್ನು ಬೀಳ್ಕೊಟ್ಟರು.

ಗುರುರಾಯರು ಊರಿಗೆ ಹಿಂತಿರುಗಿದರು. ಈಗ ತಮ್ಮ ವೃತ್ತಿಯನ್ನು ಎಲ್ಲಿ ಆರಂಭಿಸುವುದು? ಅವರು ಯಾವ ನಿಶ್ಚಯಕ್ಕೆ ಬರಲಾರದೆ, ಹಳ್ಳಿಯಲ್ಲಿ ಕೆಲವು ತಿಂಗಳು ಇರಬೇಕಾಯಿತು. "ಇವರಲ್ಲಿ (ಪದ್ಮನಾಭ ಇರ್ನಿತ್ತಾಯರು) ಆಯುರ್ವೇದ (ವೈದ್ಯ) ವಿದ್ಯೆಯನ್ನೇನೊ ಕರಗತಮಾಡಿ ಕೊಂಡಿದ್ದಾಯಿತು. ಆದರೆ ಅದನ್ನು ಸಾಧನ ಸಂಪತ್ತಾಗಿ ಉಳಿಸಲು ದಾರಿ ಹುಡುಕಬೇಕಾಯಿತು. ತಾನು ಕಲಿತ ವಿದ್ಯೆಯ ಪ್ರಯೋಜನದ ಸೌಲಭ್ಯವನ್ನು ಅಲ್ಲಿನವರೆಗೆ ಕಲ್ಪಿಸಿ ಕೊಡುವುದೆಂದರೆ ಅದು ಆಗದ ಮಾತು. ಏಕೆಂದರೆ ಅವೂರಾದರೋ ಚಿಕ್ಕ ಹಳ್ಳಿ, ಅಲ್ಲಿಯ ಜನರು ಬಹಳ ಕಡಿಮೆ ಜನ ಸಂಖ್ಯೆಯವರಾಗಿದ್ದು ರೋಗ ಬಂದಾಗ ಸರಳುತ್ತಾ ಹಿತ್ತಲ ಗಿಡಿದ ಮದ್ದಿನಲ್ಲಿ ಗುಣ ಮುಖವನ್ನು ಕಾಣತಕ್ಕವರು. ಇದರಿಂದಾಗಿ ರಾಯರಿಗೆ ಹುಟ್ಟೂರನ್ನು ಬಿಟ್ಟು ಉಡುಪಿಯನ್ನು ಸೇರಬೇಕಾದ ಕಾಲವೊದಗಿತು"- ಎಂದು ಅಂದಿನ ಅವರ ಸ್ಥಿತಿಯನ್ನು ಕುರಿತು ಎಸ್.ಕೆ.ಶ್ರೀಪತಿ ಆಚಾರ್ಯರು ಬಣ್ಣಿಸಿದ್ದಾರೆ.

ಈ ವೇಳೆಗೆ ಗುರುರಾಯರಿಗೆ ಮದುವೆಯಾಗಿತ್ತು. ಪದ್ಮಾವತಿ ಎಂಬ ಹೆಸರಿನ ಸಾಧ್ವಿಯು ಇವರ ಕೈ ಹಿಡಿದು ಮನೆ ತುಂಬಿದ್ದಳು. ಇವರಿಗೆ ಒಂದಾದ ಮೇಲೆ ಒಂದರಂತೆ ನಾಲ್ವರು ಹೆಣ್ಣು ಜನಿಸಿದ್ದರು. ಹೊನ್ನಮ್ಮನು ಹೆಣ್ಣು ಹೆತ್ತ ತಂದೆತಾಯಿಗಳನ್ನು ತನ್ನ ಹದಿಬದೆಯ ಧರ್ಮಗ್ರಂಥದಲ್ಲಿ ಉತ್ಸಾಹದಿಂದ ವರ್ಣಿಸಿದ್ದಾಳೆ. *ಪೆಣ್ಣಾದ ಲಕ್ಷ್ಮಿಯನ್ನು ಪೆತ್ತು ಸಾಗರನು ಪೆರ್ಚು ಪಡೆದನಂತ*

ಹೆಣ್ಣು ಮಕ್ಕಳಿಂದ ಕುಲಬೆಳಗುವುದಂತೆ. ಸದ್ಯಕ್ಕ ರಾಯರಿಗೆ ಒಬ್ಬರಾದ ಮೇಲೆ ಒಬ್ಬರಂತೆ ಜಾನಕಿ, ಸರಸ್ವತಿ, ಮಂದಾಕಿನಿ ಮತ್ತು ಭಾರತಿ - ಹೀಗೆ ಹೆಣ್ಣು ಮಕ್ಕಳು ಹುಟ್ಟಿದ್ದರು. ಈ ಕುಟುಂಬದ ಪೋಷಣೆಯ ಭಾರ ಒಂದು ಕಡೆ, ಸ್ವಾಲಂಬನ, ಸ್ವತಂತ್ರ ವೃತ್ತಿಯ ಮಹತ್ವಾಕಾಂಕ್ಷೆ ಇನ್ನೊಂದು ಕಡೆ - ಹೀಗೆ ಎರಡು ಕಡೆಯ ಸೆಳತಕ್ಕೆ ಬಿದ್ದು, ಪ್ರಾಪಂಚಿಕ ಸುಳಿಯಲ್ಲಿ ಸಿಕ್ಕಿ ಮುಳುಗುತ್ತಿದ್ದ ಗುರುರಾಯರಿಗೆ ಪಾರಾಗಲು ಒಂದು ನಿಮಿತ್ತ ಬೇಕಾಗಿತ್ತು.

ಮನೆಯಲ್ಲಿ ಅಣ್ಣತಮ್ಮಂದಿರು, ಅಕ್ಕತಂಗಿಯರು, ಅವರ ಮಕ್ಕಳು - ಹೀಗೆ ತುಂಬಿದ ಸಂಸಾರಕ್ಕೆ ಇವರಿಂದ ಯಾವ ರೀತಿಯ ನೆರವು ದೊರೆಯದಾಗಿತ್ತು. ಸಣ್ಣ ಸ್ವಭಾವದ ಜನ ಸಣ್ಣ ಮಾತನಾಡುವುದು ಇವರ ಕಿವಿಗೆ ಬಿತ್ತು. ಇಷ್ಟೆಲ್ಲ ಓದಿದ್ದಾನೆ; ಹೆಂಡತಿ ಮಕ್ಕಳನ್ನು ಸಾಕಲಾರದವನಾಗಿದ್ದಾನೆ. ಏನೂ ಓದಿಲ್ಲದ ನಾವೇ ವಾಸಿ. ಈ ಮಾತು ಕೇಳಿ ಹೆಂಡತಿ ಪದ್ಮಾವತಿ ಕಣ್ಣೀರಿನ ಕೋಡಿ ಹರಿಸಿದಳು. ಬಹುಕಾಲ ಅವಳ ದುಃಖದ ಕಾರಣ ತಿಳಿಯಲಿಲ್ಲ. ಒಮ್ಮೆ ಉದ್ರೇಕದ ಭರದಲ್ಲಿ ಈ ವಿಷಯ ಸೂಕ್ಷ್ಮವಾಗಿ ತಿಳಿಯಿತು. ಗುರುರಾಯರು ಅಂತರ್ಮುಖರಾದರು. ಅವರಿಗೆ ಏನು ಮಾಡಬೇಕೆಂದು ತಿಳಿಯದಿದ್ದರೂ, ಮೊದಲು ಊರು ಬಿಡಬೇಕೆಂದು ನಿಶ್ಚಯಕ್ಕೆ ಬಂದರು. ಹೆಂಡತಿ ಮಕ್ಕಳಿಗೆ ಸಮಾಧಾನ ಹೇಳಿ ಒಂದು ದಿನ ಅವರು ಪಾವಂಜೆಯನ್ನು ಉಟ್ಟ ಬಟ್ಟೆಯಲ್ಲಿ ತೊರೆದರು.

ನೇರ ಅವರು ಬೊಂಬಾಯಿಗೆ ಬಂದರು. ಕೆಲವು ದಿನ ಕೂಲಿ ಮಾಡಿ ಜೀವಿಸಿದರಂತೆ. ಅನಂತರ ಅಲ್ಲಿನ ಪೋಸ್ಟ್ ಆಫೀಸಿನಲ್ಲಿ ಒಂದು ಸಣ್ಣ ನೌಕರಿ ದೊರಕಿಸಿಕೊಂಡರು. ಕೆಲವು ದಿನಗಳಲ್ಲಿ ಸಂಸಾರವನ್ನು ಕರೆಸಿಕೊಂಡು ಮನೆ ಮಾಡುವ ಬಯಕೆ ಹೊಂದಿದರು. ಆದರೆ ಅದು ವಿಧಿಯ ಇಚ್ಛೆಗೆ ಬರಲಿಲ್ಲ. ಮೇಲಾಧಿಕಾರಿ ಬಂದು ಅವರಿಂದಾದ ಒಂದು ಸಣ್ಣ ತಪ್ಪಿಗೆ ಅವರನ್ನು ಮೂದಲಿಸಿ, ಜರೆದನಂತೆ. "ಇಷ್ಟೆಲ್ಲ ಓದಿ ವಿದ್ಯಾವಂತರಾಗಿದ್ದೀರಿ, ದಡ್ಡರು ಮಾಡದ ತಪ್ಪು ನೀವು ಮಾಡಿದ್ದೀರಿ"- ಎಂದು ಅವರ ವಿದ್ಯಾ ಸಾಧನೆಯನ್ನು ಕೇಳಿ ಸಹಿಸದಿದ್ದ ಆ ಮೇಲಾಧಿಕಾರಿ ನಿಂದಿಸಿದನಂತೆ.

ಅಂದೇ ರಾಯರು ತಮ್ಮ ನೌಕರಿಗೆ ರಾಜಿನಾಮೆ ನೀಡಲು ನಿರ್ಧರಿಸಿದರು. ಮುಂಬಯಿಯಲ್ಲಿ ಮನೆಮಾಡಿ, ಮಡದಿ ಮಕ್ಕಳನ್ನು ಕರೆಸಿಕೊಳ್ಳುವ ಹಂಬಲವನ್ನು ತೊರೆದರು. ಅವರು ಆ ತಿಂಗಳ ಸಂಬಳವನ್ನು ತೆಗೆದುಕೊಂಡು ಮುಂಬಯಿ ಬಿಟ್ಟರು. ಅಲ್ಲಿಂದ ನೇರ ಜಹಜಿನಲ್ಲಿ ಮಂಗಳೂರು ತಲುಪಿ, ಉಡುಪಿಗೆ ಬಂದರು.

ಈ ಸಮಯದಲ್ಲಿ ಉಡುಪಿಯ ಗೆಳೆಯರು ಈ ಎಲ್ಲ ಸಂಗತಿಯನ್ನು ಕೇಳಿ ಅವರನ್ನು ಸಂತೈಸಿದರು. ಉಡುಪಿಯಲ್ಲೇ ಏಕೆ ಅವರು ವೈದ್ಯಶಾಲೆ ಆರಂಭಿಸಬಾರದೆಂದು ಸಲಹೆ ಇತ್ತರು. ಈ ಕಾರ್ಯದಲ್ಲಿ ತಮ್ಮಿಂದಾಗುವ ನೆರವು ನೀಡುವುದಾಗಿ ಭರವಸೆ ಇತ್ತರು. ಹೀಗೆ ಪಾವಂಜೆ ಗುರುರಾಯರು ತಮ್ಮ ಮೂವತ್ತೊಂದನೆಯ ವರ್ಷದಲ್ಲಿ ಉಡುಪಿಯಲ್ಲಿ ತಳವೂರಿ ಮನೆಮಾಡಿ ನಿಂತರು.

ಪಾವಂಜೆ ಗುರುರಾಯರಿಗೆ ಅಷ್ಟಮಠಗಳಲ್ಲಿ ಒಬ್ಬರಾಗಿದ್ದ ಮುಂದೆ ಶತಾಯುಷಿಗಳಾದ ಪುತ್ತಿಗೆ ಮಠದ ಶ್ರೀ ಮತ್ಸುಧೀಂದ್ರತೀರ್ಥ ಶ್ರೀಪಾದಂಗಳವರಲ್ಲಿ ಬಹಳ ಗೌರವವಿತ್ತು. ಇವರು

ಗುರುರಾಯರಿಗಿಂತ ಐದಾರು ವರ್ಷ ದೊಡ್ಡವರು. ಮೊದಲಿನಿಂದಲೂ ಇವರಿಬ್ಬರಿಗೂ ವಿಶೇಷವಾದ ಪ್ರೀತಿ ಗೌರವಗಳು ಇದ್ದವು. ಇವರ ಪ್ರೋತ್ಸಾಹದಿಂದ ಉಡುಪಿಯ ರಥ ಬೀದಿಯಲ್ಲಿ ಭಂಡಾರಕೇರಿ ಮಠದ ಬಳಿ ಒಂದು ಸಣ್ಣ ಅಂಗಡಿಯಲ್ಲಿ ತಮ್ಮ ಔಷಧಾಲಯವನ್ನು ತೆರೆದರು.

ಈ ಪ್ರಯತ್ನ ಫಲಪ್ರದವಾಗಲಿಲ್ಲ. ಹಗಲೆಲ್ಲ ದುಡಿದರೂ, ಒಪ್ಪತ್ತಿನ ಜೀವನಕ್ಕೆ ಅವರ ವರಮಾನ ಸಾಕೂ ಸಾಲದಾಗುತ್ತಿತ್ತು. ಇದನ್ನು ನೋಡಿ ಈ ವೃತ್ತಿಯನ್ನೇ ಕೈಬಿಡಲು ರಾಯರು ಆರಂಭದಲ್ಲಿ ಯೋಚಿಸಿದರು. ಆದರೆ ಹಿತೈಷಿಗಳ ಮಾತು ಕೇಳಿಕೊಂಡು ಹಾಗೆ ಮಾಡದೆ, ಈ ವೃತ್ತಿಯ ಜತೆಯಲ್ಲಿ ಪೂಜಾ ಸಾಮಾನುಗಳನ್ನೂ, ನಿತ್ಯಾನುಷ್ಠಾನಕ್ಕೆ ಬೇಕಾಗುವ ಇನ್ನಿತರ ವಸ್ತುಗಳನ್ನೂ ತಮ್ಮ ಬಿಡುವಿನ ಕಾಲದಲ್ಲಿ ಮಾರಲು ಉಪಕ್ರಮಿಸಿ, ವೈದ್ಯವೃತ್ತಿಯನ್ನು ಕೆಲವು ವರ್ಷಗಳು ಮುಂದುವರೆಸಿದರು. ಹೀಗೆ ಹತ್ತು ವರ್ಷಗಳು ಅಹರ್ನಿಷೆ ದುಡಿದಿದ್ದರಿಂದ ರಾಯರ ವ್ಯಾಪಾರ ಕುದುರಿದ್ದರೂ, ಅವರ ಆಪ್ತರ ಹಿತೈಷಿಗಳ ಬಳಗವು ವಿಸ್ತರಿಸಿತು. ಪಾವಂಜೆ ಗುರುರಾಯರು ತಮ್ಮ ೪೦ರ ಪ್ರಾಯದಲ್ಲಿ ಅಂದಿನ ಎಲ್ಲ ಗಣ್ಯವ್ಯಕ್ತಿಗಳ ಪರಿಚಯವಾಗಿತ್ತು. ಅಷ್ಟಮಠದ ಯತಿಗಳಲ್ಲೂ ಅವರ ಸಲಹೆ ಸಮಾಲೋಚನೆಗಳಿಗೆ ಮಹತ್ವದ ಗೌರವ ದೊರಕುವಂತೆ ಆಗಿತ್ತು.

ಅಂದಿನ ಅವರ ಹೋರಾಟದ ಬದುಕನ್ನು ಶ್ರೀಪತಿ ಆಚಾರ್ಯರು ಹೀಗೆ ವರ್ಣಿಸಿದ್ದಾರೆ-

"ಪಾವಂಜೆ ಗುರುರಾಯರು ನಾರುಬೇರು ಕಷಾಯಗಳ ಔಷಧಿಯನ್ನೇ ಮಾರುವ ಪ್ರವೃತ್ತಿಯಲ್ಲಿಯೇ ನಿರತರಾಗಿ ತಮ್ಮ ಜೀವನವನ್ನು ಸಾಗಿಸಿದ್ದರೆ, ಅವರ ಹೆಸರು ಮತ್ತೆ ಮತ್ತೆ ನಮ್ಮ ನಾಡಿನಲ್ಲಿ ಕೇಳಿ ಬರುತ್ತಿರಲಿಲ್ಲ. ಆದುದರಿಂದ ಕನ್ನಡದಲ್ಲಿ ಅಪೂರ್ವ ಗ್ರಂಥಗಳನ್ನು ಪ್ರಕಟಿಸಿ, ನಮ್ಮ ನಾಡಿನಲ್ಲಿ ಮನೆಮಾತಾಗಿ ಕೀರ್ತಿ ಪಡೆಯುವಂತಾದುದು ಯೋಗಾ ಯೋಗವೆಂದೇ ಹೇಳಬೇಕು."

ಗುರುರಾಯರು ತಾವು ಬಹಳ ವರ್ಷಗಳ ಶ್ರಮದಿಂದ ಗಳಿಸಿಕೊಂಡಿದ್ದ ಈ ವೈದ್ಯಕೀಯ ವೃತ್ತಿಯನ್ನು ಅವರು ಮುಂದುವರೆಸುವುದು ಅವರ ಉಪಾಸ್ಯಮೂರ್ತಿ ಶ್ರೀಕೃಷ್ಣನಿಗೆ ಪ್ರಿಯ ವಾಗಲಿಲ್ಲವೆಂದು ತೋರುತ್ತದೆ. ಅಂತಲೇ ಬೇರೊಂದು ನಿಮಿತ್ತದಿಂದ ಅವರನ್ನು ವೈದ್ಯ ವೃತ್ತಿಯಿಂದ ಬಿಡುಗಡೆ ಮಾಡಿದನು.

ಈ ಬಗ್ಗೆ ಒಂದು ಕಥೆ ಪ್ರಚಾರದಲ್ಲಿದೆ. ಅದು ಹೀಗಿದೆ;-

ಈ ಅವಧಿಯಲ್ಲಿ ಪಾವಂಜೆ ಗುರುರಾಯರ ಹೆಣ್ಣುಮಕ್ಕಳು ವಿವಾಹ ವಯಸ್ಕರಾದುದ ರಿಂದ ರಾಯರು ಅವರಿಗೆಲ್ಲ ಅನುಕೂಲವಾದ ಕಡೆಗಳಲ್ಲಿ ವರವನ್ನು ನೋಡಿ, ವಿವಾಹ ಮಾಡಿದ್ದರು. ಸರಸ್ವತಿಬಾಯಿಯನ್ನು ಅವರು ತಿರುವನಂತಪುರದ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದ ಮಹಾಮಹೋಪಧ್ಯಾಯ ಪದ್ಮನಾಭಶಾಸ್ತ್ರಿಯವರೊಡನೆ ವಿವಾಹ ಮಾಡಿಕೊಟ್ಟರು. ಮಂದಾಕಿನಿಬಾಯಿಯು ವಿವಾಹವಾದರೂ ಅವರ ದಾಂಪತ್ಯ ಜೀವನ ಸುಖ ಮಯವಾಗದೆ ಅವರು ತಮ್ಮ ಶಿಕ್ಷಣವನ್ನು ಮುಂದುವರಿಸಿ, ಮುಂದೆ ಅಧ್ಯಾಪಕಿಯಾಗಿ ಸ್ವತಂತ್ರ

ಜೀವನ ಸಾಗಿಸಿದರು. ನಾಲ್ಕನೆಯ ಮಗಳು ಮುಂದೆ ಪಣೆಯಾಡಿ ಎಂಬುವರನ್ನು ವಿವಾಹ ವಾದರು. ಎಸ್.ಯು. ಪಣೆಯಾಡಿ ಅವರು ನಿಷ್ಠಾವಂತ ಗಾಂಧಿ ಭಕ್ತರು. ಉಡುಪಿಯ ಸಾಮಾಜಿಕ ಕಾರ್ಯಕರ್ತರು. ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ, ಸೆರೆಮನೆಗೂ ಹೋದ ಮಹನೀಯರು. ಇವರ ಪತ್ನಿಯಾಗಿ ಈ ಎಲ್ಲ ಕಷ್ಟನಷ್ಟಗಳಲ್ಲಿ ಪತಿಯ ನೆರಳಾಗಿ ಅನುಸರಿಸಿದರು. ಈ ದಂಪತಿಗಳಿಗೆ ಹುಟ್ಟಿದ ಮೂವರು ಮಕ್ಕಳು ಜವಹರ, ವಾದಿರಾಜ ಮತ್ತು ಹರಿಣಿ. ಇವರು ತಂದೆ ತಾಯಿಗಳ ದಾರಿಯನ್ನು ಹಿಡಿಯದೆ, ಕಲೋಪಾಸಕರಾಗಿ ಚಿತ್ರರಂಗವನ್ನು ಪ್ರವೇಶಿಸಿ ಹೆಸರು ಗಳಿಸಿದರು.

ಈ ನಾಲ್ಕು ಮಂದಿ ಹೆಣ್ಣು ಮಕ್ಕಳಲ್ಲಿ ಜಾನಕೀಬಾಯಿಯನ್ನು ಕಂಡರೆ ತಂದೆಯವರಿಗೆ ತುಂಬ ಪ್ರೀತಿ. ಇದಕ್ಕೆ ಕಾರಣ ಅವಳು ದಿಟ್ಟೆ. ಸ್ತ್ರೀ ಶಿಕ್ಷಣ ಪಡೆದ ಅವಳ ಓರಗೆ ಹೆಣ್ಣು ಮಕ್ಕಳಲ್ಲಿ ಅವಳೇ ಪ್ರಥಮ ಹೆಣ್ಣು ಮಗಳು. ಇವಳ ವಿವಾಹ ಸುಖಮಯವಾಗಲಿಲ್ಲ. ಅವಳು ಪತಿಯಿಂದ ದೂರವಿದ್ದು ಹೆಣ್ಣು ಮಕ್ಕಳಿಗಾಗಿ ಒಂದು ಶಾಲೆಯನ್ನು ನಡೆಸಿದಳು. ಒಂದು ಬಾರಿ ಅವಳಿಗೆ ಭಯಂಕರ ಹೊಟ್ಟೆ ನೋವು ಬಂದಿತು. ಆ ಸಮಯದಲ್ಲಿ ಗುರುರಾಯರು ಯಾವುದೋ ಕಾರ್ಯ ನಿಮಿತ್ತ ಊರ ಹೊರಗಿದ್ದರು. ಔಷಧವನ್ನು ಕೊಡಲು ತಮ್ಮ ಕಾಂಪೌಂಡರಿಗೆ ತಿಳಿಸಿ ಹೋಗಿದ್ದರು. ಒಂದು ದಿನ ಉದರ ಶೂಲೆ ವಿಪರೀತವಾಗಿ, ಅವಳ ಕಷ್ಟ ನೋಡಲಾಗದೆ, ಕಾಂಪೌಂಡರನು ಯಾವುದೋ ಔಷಧ ನೀಡಿದನು. ಅದರ ಪರಿಣಾಮವಾಗಿ ಜಾನಕಿಬಾಯಿ ನರಳಿ ನರಳಿ ಮರಣೋತ್ಕ್ರಮಣ ಸ್ಥಿತಿಗೆ ಬಂದಳು. ಗುರುರಾಯರು ಹಿಂದಿರುಗಿ ಬರುವ ವೇಳೆಗೆ ಎಲ್ಲವೂ ಮುಗಿದಿತ್ತು. ಅವಳು ಉದರ ಶೂಲೆಯಿಂದಲೇ ಮೃತಳಾಗಿದ್ದಳು. ಮನೆ ಶೋಕದ ಮಡುವಾಗಿತ್ತು. ಗುರುರಾಯರು ಬಂದವರೇ ಮಗಳ ಮೈ ತಡವಿದರು ; ನಾಡಿ ನೋಡಿದರು ; ಎಲ್ಲವೂ ಸ್ತಬ್ಧ ವಾಗಿತ್ತು. ಏನು ಔಷಧಿ ಕೊಟ್ಟೆ -ಎಂದು ಕಾಂಪೌಂಡರನ್ನು ವಿಚಾರಿಸಿದರು. ಅವನು ಕೊಟ್ಟ ಔಷಧವನ್ನು ತೋರಿಸಿದ, "ಅಯ್ಯೋ, ನನ್ನ ಮಗಳನ್ನು ಕೊಂದೆ! ಉದರವ್ಯಾಧಿಗೆ ಕೊಡುವ ಔಷಧ ಅದು ಅಲ್ಲ"- ಎಂದು ರಾಯರು ಉದ್ಗಾರ ತೆಗೆದರು.

ಮೂರು ದಿನಗಳಕಾಲ ಅವರು ದುಃಖ ವ್ಯಕ್ತಪಡಿಸದೆ ಶಿಲಾಮೂರ್ತಿಗಳಾಗಿದ್ದರು. ಅಂದೇ ನಿರ್ಧರಿಸಿದರು. ತಮ್ಮ ಮಗಳನ್ನು ಉಳಿಸಿಕೊಳ್ಳಲಾಗದಿದ್ದ ವೈದ್ಯವನ್ನು ನಂಬಿ ಪ್ರಯೋಜನ ವೇನು? ಈ ವೃತ್ತಿಯನ್ನು ಮುಂದುವರೆಸುವುದು ಭಗವಂತನಿಗೆ ಬೇಡವೆಂದು ಕಾಣುತ್ತೆ. ಇದನ್ನು ಬಿಟ್ಟುಬಿಡುತ್ತೇನೆ - ಹೀಗೆ ನಿರ್ಧಾರಕ್ಕೆ ಬಂದವರು ಮತ್ತೆ ಆ ವೈದ್ಯದ ಅಂಗಡಿಗೆ ಹೋಗಲಿಲ್ಲ. ನಾರುಬೇರು, ಔಷಧಗಳನ್ನು ಮುಟ್ಟಲಿಲ್ಲವಂತೆ. ಅಲ್ಲಿದ್ದ ಪದಾರ್ಥಗಳನ್ನು ಕೇಶವಾಚಾರ್ಯ ರೆಂಬುವರಿಗೆ ಅಂಗಡಿ ಸಮೇತ ಪ್ರತಿಫಲವಿಲ್ಲದೆ ಕೊಟ್ಟುಬಿಟ್ಟರಂತೆ.

(ಈ ಕತೆಯಲ್ಲಿ ಉತ್ಪ್ರೇಕ್ಷೆ ಇರಬಹುದೇನೋ! ನಡೆದ ಸತ್ಯ ಸಂಗತಿ ಹೀಗೆ ನಡೆದಿರ ಬಹುದೆಂಬ ಆಧಾರದ ಮೇಲೆ ಈ ಸಂಗತಿಯನ್ನು ಕೇಳಿದಂತೆ ನಿರೂಪಿಸಿದ್ದೇನೆ).

ಹೀಗೆ ಪಾವಂಜೆ ಗುರುರಾಯರ ಜೀವನದ ಒಂದು ಪ್ರಮುಖ ಘಟ್ಟ ಮುಗಿದು, ಅವರ ಜೀವನದ ನಿಜವಾದ ಕಾರ್ಯಕ್ಕೆ ವಿಧಿ ಅವರನ್ನು ಸಜ್ಜು ಮಾಡಿತ್ತು.

# ೮

ಪಾವಂಜೆ ಗುರುರಾಯರನ್ನು ಹರಿದಾಸ ಸಾಹಿತ್ಯ ಕ್ಷೇತ್ರಕ್ಕೆ, ಪುಸ್ತಕ ಪ್ರಕಾಶನಕ್ಕೆ, ಕರೆತಂದ ಶಕ್ತಿ ಯಾವುದು? ಈ ಕಾರ್ಯ ಕೈಗೊಳ್ಳಲು ಅವರಿಗೆ ದೊರೆತ ಪ್ರೇರಣೆ ಯಾವುದು? ಇದಕ್ಕೆ ಉತ್ತರವಾಗಿ ಈ ಬಗ್ಗೆ ಶ್ರೀಪತಿ ಆಚಾರ್ಯರು ಹೀಗೆ ಬರೆದಿದ್ದಾರೆ-

"ಭಾರತೀಯ ಭಾಷಾ ಸಾಹಿತ್ಯದಲ್ಲಿ ಕನ್ನಡ ಸಾಹಿತ್ಯಕ್ಕೊಂದು ವಿಶಿಷ್ಟ ಸ್ಥಾನವಿದೆ. ಈ ಮಹತ್ವದ ಸ್ಥಾನವನ್ನು ಪಡೆಯಲು ಕಾರಣವಾದವುಗಳೆಂದರೆ ಮೊದಲನೆಯದಾಗಿ ಶಿವಶರಣರ ವಚನಗಳು, ಎರಡನೆಯದಾಗಿ ಹರಿದಾಸರ ಕೀರ್ತನೆಗಳು. ವಚನಗಳ ಪ್ರಕಾರಗಳು ಕನ್ನಡ ಸಾಹಿತ್ಯದಲ್ಲಿ ಪದ್ಯಗಳೆಡೆಯಲ್ಲಿ ಗದ್ಯರೂಪವಾಗಿ ತೋರಿ ಬಂದರೂ, ಶಿವಶರಣರ ವಚನಗಳು ಗದ್ಯಾತ್ಮಕಗವಾಗಿ, ತಾಳ ಲಯ ಬದ್ಧವಾಗಿ ಹಾಡಿದಾಗ ಪದ್ಯರೂಪವನ್ನು ಪಡೆಯಬಲ್ಲ ವಿಶಿಷ್ಟ ಪ್ರಕಾರದವುಗಳು. ಆದುದರಿಂದ ಬೇರಾವ ಭಾಷೆಯ ಸಾಹಿತ್ಯಗಳಲ್ಲಿಯೂ ಈ ರೀತಿಯ ವಚನಗಳನ್ನು ನಾವು ಕಾಣಲಾರೆವು."

ಅಂತೆಯೇ ಹರಿದಾಸರ ಪದಗಳು ಒಂದು ತೆರನಾಗಿ ಜಾನಪದ ಸಾಹಿತ್ಯ ಪ್ರಕಾರವೆಂದೆನ್ನಿಸಿ ಶ್ರೀಸಾಮಾನ್ಯನಿಗಾಗಿ ರಚಿಸಿದಂತವುಗಳು ಎನಿಸಬಹುದಾದರೂ, ಕೆಲವು ಕೀರ್ತನೆಗಳ ಪ್ರಾಸ, ಬಂಧ, ಗಾಢವಾದ ಅರ್ಥವುಳ್ಳವುಗಳಾಗಿ ವಿದ್ವನ್ಮಾನ್ಯನಿಗೂ ಅರ್ಥವಿಸಲು ನಿಗೂಢವಾದವುಗಳಾಗಿ ಪರಿಣಮಿಸಿರುತ್ತವೆ. ಉದಾಹರಣೆಗಾಗಿ ಶ್ರೀಜಗನ್ನಾಥದಾಸರ ಭಕ್ತಿಸಾರವು (?)- ಹರಿಕಥಾಮೃತ ಸಾರವು ಗೂಢತತ್ವಗಳಿಂದ ಕೂಡಿದ್ದು ಇದಕ್ಕೆ ಸಂಸ್ಕೃತದಲ್ಲಿ ಟೀಕೆಯನ್ನು ಬರೆದುದು ಲಭ್ಯವಾಗುವುದು ಎನ್ನುವಾಗ ದಾಸರ ಪದಗಳು ಅತಿ ಸಾಮಾನ್ಯವಾದವುಗಳೆಂದು ನಾವು ಗುಣಿಸುವಂತಿಲ್ಲ.

"ಕನ್ನಡ ಸಾಹಿತ್ಯದಲ್ಲಿ ಭಾವಗೀತೆಗಳ ಸ್ವರೂಪ ತಾಳಿದ ಈ ದಾಸರ ಕೀರ್ತನೆಗಳು ಸಹಜ ಮನೋಹರವಾದ ಗೇಯತೆಯನ್ನು ಪಡೆದವುಗಳಾಗಿ ಆಧ್ಯಾತ್ಮಕ ರೂಪವನ್ನು ತಾಳಿರುವುವು. ಇವುಗಳನ್ನು ಮನೆಗಳಲ್ಲಿ ಹೆಣ್ಣು ಮಕ್ಕಳು ಸಂಗೀತ ಶಾಸ್ತ್ರದ ಪರಿಚಯವಿಲ್ಲದಿದ್ದರೂ ಹಳೆಯ ಧಾಟಿಯಲ್ಲಿ ಸೊಗಸಾಗಿ ಹಾಡುತ್ತಿದ್ದರು. ಹಳ್ಳಿಯ ದಾಸಯ್ಯಗಳು ಏಕನಾದವನ್ನು ಮೀಂಟುತ್ತಾ ತಮ್ಮ ಜೀವಿತಕ್ಕಾಗಿ ಮನೆಮನೆಗೆ ಇವುಗಳನ್ನು ಅನಾಯಾಸವಾಗಿ ಪ್ರಚುರ ಪಡಿಸುತ್ತಿದ್ದರು. ಈ ರೀತಿಯಾಗಿ ಕೀರ್ತನೆಗಳು ಬಾಯಿಂದ ಬಾಯಿಗೆ ಹರಡುತ್ತಾ ಕಿವಿಯಿಂದ ಕಿವಿಗೆ ಶ್ರುತಪಡಿಸಿದವು ಗಳಾಗಿ, ಬರಹ ರೂಪದಲ್ಲಿ ವಿರಳ ರೂಪವಾಗಿ ಕಂಡು ಬರುತ್ತಿದ್ದವು. ತಾಳೆಗರಿಯ ಮೇಲೆ ಕಂಟದಿಂದ ಬರೆದ ಕೆಲವು ಕೀರ್ತನೆಗಳು ಅಪರೂಪವಾಗಿ ದೊರೆಯುತ್ತಿದೆ. ಆದುದರಿಂದಲೇ ದಾಸರುಗಳ ಲಕ್ಷ ಲಕ್ಷ ಸಂಖ್ಯೆಯಲ್ಲಿ ರಚಿಸಿರುವ ಕೀರ್ತನೆಗಳು ಕೆಲವೆ ಸಹಸ್ರ ಸಂಖ್ಯೆಯಲ್ಲಿ ನಮಗಿಂದು ದೊರಕಿವೆ. ಇವುಗಳನ್ನೆಲ್ಲಾ ಪರಿಶ್ರಮವಹಿಸಿ ಅಚ್ಚುಕೂಟಗಳ ಮೂಲಕ ಪ್ರಕಟ ಪಡಿಸತಕ್ಕಂಥ ಸಾಹಸಕ್ಕೆ ಕೈಯಿಕ್ಕಿದವರು ಪಾವಂಜೆ ಗುರುರಾಯರು."

"ಅರವತ್ತು ವರ್ಷಗಳ ಹಿಂದಿನ ಮಾತು. ಉಡುಪಿಯಲ್ಲಿ ಈಗಲೂ ಪ್ರಸಿದ್ಧಿ ಪಡೆದ ಪರ್ಯಾಯ ಜಾತ್ರೆಗೆ ಆಗ ದೇಶ ದೇಶಗಳಿಂದ ಜನರು ಸಾಗಿ ಬರುತ್ತಿದ್ದರೂ, ಅವರಲ್ಲಿ ಹೆಂಗಳೆಯರು

ಶ್ರೀಕೃಷ್ಣಮಠದ ಒಳಗೆ, ಅನಂತೇಶ್ವರ ದೇವಾಲಯದ ಒಳ ಪೌಳಿ ಮುಂತಾದೆಡೆಗಳಲ್ಲಿ ಸಣ್ಣ ಗುಂಪುಗಳಾಗಿ ಕೂಡಿ ದಾಸರ ಪದಗಳನ್ನು ಅಬದ್ಧವಾಗಿಯೋ, ಸುಬದ್ಧವಾಗಿಯೋ, ಭಕ್ತಿ ಪ್ರಧಾನವಾಗಿಯೋ ಹಾಡುತ್ತಿದ್ದರು. ಅಪೂರ್ವಗಳಾದ ಈ ದಾಸರ ಕೀರ್ತನೆಗಳನ್ನು ಅವರು ಇನ್ನೊಬ್ಬರು ಕೇಳಿದರೆ ಹೇಳುವಂಥ ಉದಾರಮತಿಗಳಾಗಿರಲಿಲ್ಲ. ಇಂಥ ಪ್ರವೃತ್ತಿ ನಮ್ಮ ದೇಶದಲ್ಲಿ, ವಿಶೇಷವಾಗಿ ನಮ್ಮ ನಾಡಿನಲ್ಲಿ ಅಲ್ಲಲ್ಲಿ ಈಗಲೂ ಕಂಡುಬರುತ್ತಿದೆ. ತಮ್ಮಲ್ಲಿ ಇರತಕ್ಕ ಅಪೂರ್ವವಾಗಿರುವ ಕಲೆ, ಔಷಧಿ, ವಿದ್ಯೆ ಮುಂತಾದವುಗಳನ್ನು ಬೇರೆಯವರಿಗೆ ತಿಳಿಸಿಕೊಟ್ಟರೆ ಅದರ ಹಿರಿಮೆಯೇ ಹರಿದು ಹೋಗುವುದೆಂಬುದು ಅವರ ಭಾವನೆ. ಆದುದರಿಂದಲೇ ಅದೆಷ್ಟೋ ಗಿಡ ಮೂಲಿಕೆಗಳ, ಔಷಧಿಗಳ, ವಿಷದಂಶನದ ಮದ್ದುಗಳು ಹೇಳ ಹೆಸರಿಲ್ಲದೆ ಅಳಿದು ಹೋಗಿರುತ್ತದೆ. ಕಲೆಗಳ ಪ್ರಸಾರಕ್ಕೂ ಬಹುಮಟ್ಟಿಗೆ ಈ ಮಾತು ಅನ್ವಯಿಸುತ್ತದೆ. ಅಂತೆಯೇ ಈ ದಾಸರ ಪದಗಳು ಜನರ ಬಾಯ್ಮಾತಿನಲ್ಲಿ ಬಳಕೆಯಾಗಿರುವುಗಳನ್ನು ಅವರ ಮನವೊಲಿಸಿ ಹಾಡಿಸಿ ಮತ್ತು ಕೇಳಿದಂತೆ ಬರೆಯಿಸಿ, ತಪ್ಪು ತಡೆಗಳಿದ್ದರೆ ಸರಿಪಡಿಸಿ ಅವುಗಳನ್ನು ಮುದ್ರಿಸಿಪ್ರಕಾಶಪಡಿಸಿದುದು ಪಾವಂಜೆ ಗುರುರಾಯರ ಸಾಹಸವಲ್ಲದೆ ಮತ್ತಿನ್ನೇನು? ಆದುದರಿಂದಲೇ ಶ್ರೀರಾಯರು ಕರ್ಣಾಟಕದ ಮನೆಮಾತಿನ ಮಹನೀಯರಾಗಿ ಮೆರೆದರು. ಅವರೇನು ಕವಿಗಳಲ್ಲ, ರಾಜಕೀಯ ಧುರೀಣರಲ್ಲ ಅಥವಾ ಶ್ರೀಮಂತ ಉದ್ದಿಮೆದಾರರೂ ಅಲ್ಲ. ಆದರೆ ಕೀರ್ತಿಕಾಮನೆಗಳಿಗೆ ಬಲಿಯಾಗದೆ ಎಲೆಯಮರೆಯ ಕಾಯಿಯಂತೆ ಕೀರ್ತಿವಂತರಾಗಿ ಬಾಳಿ ಬೆಳಗಿದವರು."

ಹೀಗೆ ಗುರುರಾಯರನ್ನು ಚೆನ್ನಾಗಿ ಬಲ್ಲ, ಉಡುಪಿಯ ಎಂ.ಜಿ.ಎಂ.ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಎಸ್.ಕೆ. ಶ್ರೀಮತಿ ಆಚಾರ್ಯ ಅವರು ಗುರುರಾಯರ ಜೀವನ ಹಾಗೂ ಸಾಧನೆಯ ಮಹತ್ವವನ್ನು ಮಾರ್ಮಿಕವಾಗಿ ವರ್ಣಿಸಿದ್ದಾರೆ.

ಆ ಕಾಲದಲ್ಲಿ ಉಡುಪಿಯಾತ್ರೆಯು ಬಹಳ ಕಷ್ಟದಿಂದ ಸಾಧ್ಯವಾಗುತ್ತಿದ್ದ ಯಾತ್ರೆ ಯಾಗಿತ್ತು. ಆಗ ಈಗಿನಂತೆ ಬಸ್ಸು ರೈಲುಗಳ ಸಂಚಾರ ಹೆಚ್ಚಿರಲಿಲ್ಲ. ಉಡುಪಿಗೆ ಬಸ್ಸಿನಿಂದ ಬರಬೇಕಾದವರು ಶಿವಮೊಗ್ಗೆಗೆ ಬಂದು, ಅಲ್ಲಿಂದ ಘಟ್ಟ ಇಳಿದು, ಬಹಳ ಪ್ರಯಾಸದಿಂದ ಉಡುಪಿಗೆ ಬಸ್ಸಿನಲ್ಲೋ, ಎತ್ತಿನ ಗಾಡಿಯಲ್ಲೋ, ಕಾಲ್ನಡಿಗೆಯಲ್ಲೋ ಬಂದು ಸೇರಬೇಕಾಗಿತ್ತು.

ಹೀಗೆ ಬಂದ ಭಕ್ತರಲ್ಲಿ ವೈದಿಕ ಬ್ರಾಹ್ಮಣರೂ, ಆಚಾರ, ಮಡಿಮೈಲಿಗೆ ಇಟ್ಟುಕೊಂಡಿದ್ದ ವರೂ ಊಟ ತಿಂಡಿಗಳಿಗೆ ಬಹಳ ಕಷ್ಟ ಪಡಬೇಕಾಗಿತ್ತು. ಸ್ವಯಂಪಾಕ, ಇಲ್ಲವೇ ಕಟ್ಟಿತಂದ ಅವಲಕ್ಕಿ, ಹುರಿಟ್ಟುಗಳೇ ಅವರಿಗೆ ಗತಿಯಾಗಿತ್ತು. ಇವುಗಳಲ್ಲಿ ಹೊತ್ತು ಕಳೆದರೆ ಬಂದ ಯಾತ್ರೆ ಕುಂಠಿತವಾಗುವುದಿಲ್ಲವೆ? ಹೀಗೆಂದು ಈ ಹೆಣ್ಣುಮಕ್ಕಳು, ಆಚಾರಶೀಲ ಗೃಹಿಣಿಯರು ತಮಗೆ ಇಳಿಯಲು ಬಿಡಾರ ಕಲ್ಪಿಸಿಕೊಟ್ಟು, ತಮ್ಮ ಸ್ನಾನ, ಮಡಿಮೈಲಿಗೆ, ಪೂಜೆಗಳಿಗೆ ಅವಕಾಶ ಕೊಟ್ಟು ದಲ್ಲದೆ, ಹೊತ್ತು ಹೊತ್ತಿಗೆ ಊಟ ಫಲಹಾರಗಳನ್ನು ಏರ್ಪಡಿಸಿ, ಪ್ರೀತಿ ಗೌರವಗಳಿಂದ ಮನೆಯವರಂತೆ ನೋಡಿಕೊಳ್ಳುತ್ತಿದ್ದ ಗುರುರಾಯರ ಕುಟುಂಬದವರ, ಅವರ ಪತ್ನಿ ಮತ್ತು ಹೆಣ್ಣುಮಕ್ಕಳ ಸೌಜನ್ಯ ಸ್ನೇಹಾಂತಕರಣಗಳಿಗೆ ಕಟ್ಟುಬಿದ್ದು ತಮಗೆ ಬರುತ್ತಿದ್ದ ದೇವರನಾಮ ಗಳನ್ನೆಲ್ಲಾ ದಿನರಾತ್ರಿ ಎನ್ನದೆ ಹೇಳುತ್ತಿದ್ದರು. ಮಂದಾಕಿನಿಬಾಯಿ, ಜಾನಕಿಬಾಯಿ, ಮತ್ತು ಸರಸ್ವತಿ

ಯಾರಿದ್ದರೆ ಅವರು ಅವುಗಳನ್ನು ಕಾಗದದ ಮೇಲೆ ಬರೆದುಕೊಂಡು ತಮ್ಮ ತಂದೆಗೆ ಒಪ್ಪಿಸುತ್ತಿದ್ದರು. ಹೀಗೆ ಪಾವಂಜೆಯವರಲ್ಲಿ ಬಹಳ ಸಂಖ್ಯೆಯಲ್ಲಿ ಹೆಣ್ಣುಮಕ್ಕಳ ಸಂಪ್ರದಾಯದ ಹಾಡುಗಳು, ಬೀಗರ ಹಾಡುಗಳು, ಹರಿದಾಸರ ಪದಪದ್ಯ ರಚನೆಗಳೂ ಸಂಗ್ರಹವಾದವು. ಇವು ರಾಯರಿಗೆ ಬೇಕಾದ ಮೂಲ ಸಾಮಗ್ರಿ ಒದಗಿಸುತ್ತಿದ್ದವು.

ಅಲ್ಲದೆ ಗುರುರಾಯರು ಸಾತ್ವಿಕರು, ಅತಿಥಿ ಸತ್ಕಾರಕ್ಕೆ ಎತ್ತಿದ ಕೈ, ಆಚಾರನಿಷ್ಠ ಬ್ರಾಹ್ಮಣರು. ಅವರ ಪರಿಚಯ ಒಮ್ಮೆ ಆದವರು ಮತ್ತೆ ಉಡುಪಿಗೆ ಬಂದಾಗ ಅವರ ಅತಿಥಿಗಳಾಗಿ ಇರುತ್ತಿದ್ದರು. ಇಂಥವರಲ್ಲಿ ಮದರಾಸಿನ ಯು.ರಾಮರಾವ್, ತಿರುಚುನಾಪಳ್ಳಿಯ ಪ್ರಸನ್ನ ವೆಂಕಟೇಶರಾವ್, ಬೆಂಗಳೂರಿನ ಕರ್ಪೂರ ಶ್ರೀನಿವಾಸರಾವ್- ಮುಂತಾದ ಮಹನೀಯರೂ ಕುತ್ತೆತ್ತೂರಿನ ಶ್ರೀ ಗೋವಿಂದದಾಸರೂ, ಉಡ್‌ಲ್ಯಾಂಡ್ಸಿನ ಕೃಷ್ಣರಾಯರೂ ಶ್ರೀ ಗುರುರಾಯರಲ್ಲಿ ಬಹಳ ಗೌರವವಿಟ್ಟುಕೊಂಡಿದ್ದರು. ಅವರು ಇನ್ನೊಬ್ಬರಿಂದ ಯಾವುದೇ ಸಹಾಯವನ್ನು ಅಪೇಕ್ಷಿಸದೆ, ತನ್ನಿಂದ ಮತ್ತೊಬ್ಬರಿಗೆ ಏನು ಸಹಾಯ ಬೇಕು ಎಂದು ತುಡಿಯುತ್ತಿದ್ದ ಜೀವ ; ಹೀಗಾಗಿ ಶ್ರೀಮಂತರಿರಲಿ, ಬಡವರಿರಲಿ, ಹರಿದಾಸರಿರಲಿ, ಸಾಮಾನ್ಯ ಗೃಹಸ್ಥನಿರಲಿ, ವೈದಿಕ ಬ್ರಾಹ್ಮಣರಿರಲಿ ಎಲ್ಲರೂ ಗುರುರಾಯರಿಗೆ ಬೇಕಾದವರಾಗಿದ್ದರು.

ಅವರ ಆತಿಥ್ಯಕ್ಕೆ ಲಿಂಗಭೇದವಿರಲಿಲ್ಲ. ವರ್ಗ ಭೇದವಿರಲಿಲ್ಲ. ಎಲ್ಲರೂ ಅವರ ಬಂಧುಗಳಾಗಿರುತ್ತಿದ್ದರು. ಉಡುಪಿಗೆ ಬಂದ ಎಲ್ಲ ಕೀರ್ತನಕಾರರು, ಹರಿದಾಸರು ಅವರ ಮನೆಯಲ್ಲಿ ಇದ್ದೇ ಕೀರ್ತನ ಮಾಡಿ, ಸನ್ಮಾನಿತರಾಗಿ ಹೋಗುತ್ತಿದ್ದರು. ಇಂಥವರಲ್ಲಿ ಬೇಲೂರು ಕೇಶವ ದಾಸರು, ಹಂಡೆ ಶ್ರೀಪಾದದಾಸರು, ಗುಂಡಾಚಾರ್ಯರು ಅವರ ಆಶ್ರಯದಲ್ಲಿ ಅನೇಕ ದಿನಗಳು ನಿಂತು ಹರಿಕಥೆ ಮಾಡಿ, ಸಂತೋಷಪಡಿಸಿದ್ದರು.

ಆ ಕಾಲದಲ್ಲಿ ತಿರುವಾಂಕೂರಿನಲ್ಲಿ ನೆಲೆಸಿದ್ದ ಉಡುಪಿ ಲಕ್ಷ್ಮಿಬಾಯಿ ಎಂಬುವರು ಗಾನ ವಿದುಷಿಯಾಗಿ ಸಂಗೀತ ಕ್ಷೇತ್ರದಲ್ಲಿ ತುಂಬ ಪ್ರಸಿದ್ಧರಾಗಿದ್ದರು. ಈಕೆಯನ್ನು ಆಕಾಲದ ಎಂ.ಎಸ್. ಸುಬ್ಬಲಕ್ಷ್ಮಿ ಎಂದು ಹೆಸರಿಸಬಹುದಾಗಿತ್ತು. ಅಷ್ಟು ಖ್ಯಾತಿ ಅವರದು. ಜಗದೋದ್ಧಾರನಾ, ಎಲ್ಲಿರುವೆ ತಂದೆ ಮಾರುತಿ- ಈ ಹಾಡುಗಳು ಗ್ರಾಮಫೋನ್ ಪ್ಲೇಟುಗಳಾಗಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಮಾರಾಟವಾಗಿದ್ದವು. ಈಕೆಯು ಉಡುಪಿಗೆ ಬಂದಾಗಲೆಲ್ಲ ಗುರುರಾಯರಲ್ಲಿ ತಂಗಿದ್ದು, ಅವರನ್ನು ತಮ್ಮ ಗಾಯನದಿಂದ ಸಂತೋಷಪಡಿಸಿ, ಸನ್ಮಾನ ಪಡೆದು ಹೋಗುತ್ತಿದ್ದರು.

ಆ ಕಾಲದಲ್ಲಿ ಗುರುರಾಯರ ಉತ್ತರೋತ್ತರ ದಿನಗಳಲ್ಲಿ ಕನ್ನಡ ಸಾಹಿತ್ಯದಲ್ಲಿ ಹೆಸರು ಪಡೆದ ಎಲ್ಲ ಖ್ಯಾತನಾಮರಾದ ಕನ್ನಡ ಸಾಹಿತಿಗಳು, ಲೇಖಕರು, ಪತ್ರಕರ್ತರು ಉಡುಪಿಗೆ ಬಂದಾಗಲೆಲ್ಲ ಇವರನ್ನು ಭೇಟಿ ಮಾಡದೆ ಹೋಗುತ್ತಿರಲಿಲ್ಲ. ಹೀಗಾಗಿ ಪಾವಂಜೆ ಗುರುರಾಯರಿಗೆ ಮುಳಿಯ ತಿಮ್ಮಪ್ಪಯ್ಯ, ಗೋವಿಂದ ಪೈ, ಉಗ್ರಾಣದ ಮಂಗೇಶರಾಯರು, ಪಂಜೆ ಮಂಗೇಶ ರಾಯರು, ದಾಮೋದರ ಬಾಳಿಗ, ಮಂಜೇಶ್ವರ ಅನಂತರಾಯರು, ಎಂ.ಎನ್.ಕಾಮತರು, ಶಹಬಾಜಿ ಶ್ರೀನಿವಾಸಾಚಾರ್, ಒಡ್ಲುಮನೆ ಸೀತಾರಾಮಶಾಸ್ತ್ರಿ, ಡಿ.ಕೆ.ಭಾರದ್ವಾಜ, ಬಿ. ಶಂಕರ

ಭಟ್ಟರು, ಕಪ್ಪಿ ವಾಸುದೇವಶೆಣೈ ಮುಂತಾದವರ ಪರಿಚಯವಿತ್ತು. ಹುರುಳಿ ಭೀಮರಾಯರು, ಕೆ.ರಾಜಗೋಪಾಲ ಕೃಷ್ಣರಾಯರು ಆತ್ಮೀಯ ಸ್ನೇಹಿತರಾಗಿದ್ದರು. ಅಲ್ಲದೆ ಅವರ ಕಾಲದಲ್ಲಿ ಇದ್ದ ಎಲ್ಲ ಸುಪ್ರಸಿದ್ಧ ಯಕ್ಷಗಾನ ನಟರು, ಗಾಯಕರು, ಭಾಗವತರ ಪರಿಚಯವಿತ್ತು. ಅದಲ್ಲದೆ ಬೆಂಗಳೂರು, ಮೈಸೂರು, ಧಾರವಾಡ, ಬೆಳಗಾಂ, ಹುಬ್ಬಳ್ಳಿ, ದಾವಣಗೆರೆಗಳಿಂದ ಅಲ್ಲಿಗೆ ಬರುತ್ತಿದ್ದ ನಾಟಕಕಂಪನಿಗಳ ಎಲ್ಲ ನಟರೂ, ಗಾಯಕರೂ ಬಂದು ರಾಯರನ್ನು ಕಂಡು ಕ್ಷೇಮಸಮಾಚಾರ ವಿಚಾರಿಸಿ ಹೋಗುತ್ತಿದ್ದರು. ಅಷ್ಟಮಠದ ಯತಿಗಳಿಗೂ, ದೇಶದೇಶದ ಪಂಡಿತ ಮಾನ್ಯರೂ ಒಂದು ಮಾತಿನಲ್ಲಿ ಉಡುಪಿಗೆ ಬರುತ್ತಿದ್ದ ಪಂಡಿತರೆಲ್ಲರೂ ಅವರನ್ನು ಕಾಣದೆ ಹೋಗುತ್ತಿರಲಿಲ್ಲ. ಇಷ್ಟೆಲ್ಲ ಕೀರ್ತಿಗೆ ಪಾವಂಜೆ ಗುರುರಾಯರು ಪಾತ್ರವಾದುದು ಅವರು ನಿಸ್ವಾರ್ಥವಾಗಿ ಕೈಗೊಂಡಿದ್ದ ಜ್ಞಾನಕಾರ್ಯ ದಿಂದ, ಸಾಹಿತ್ಯ ಪ್ರಚಾರದಿಂದ ಎಂದರೆ ಆಶ್ಚರ್ಯವೇನು?

ತಮ್ಮ ಗ್ರಂಥಪ್ರಕಾಶನವನ್ನು ಆರಂಭದಲ್ಲಿ ಗುರುರಾಯರು ಹವ್ಯಾಸವಾಗಿ ಮಾಡುತ್ತಿದ್ದವರು ಮುಂದೆ ವೃತ್ತಿಯಾದ ವೈದ್ಯವನ್ನು ಬಿಟ್ಟು ಅದನ್ನೇ ಪ್ರಧಾನ ಕಾರ್ಯವಾಗಿ ಸ್ವೀಕರಿಸಿ, ಅದಕ್ಕಾಗಿ ದುಡಿದರು. ಈ ಕಾರ್ಯದ ಅಗಾಧತೆಯನ್ನು ಅವರು ಅರಿತುಕೊಂಡಿದ್ದರಿಂದಲೇ ತಾವು ಅವರಿಗೆ ವ್ಯಾಪಾರ ಮಾಡುತ್ತಿದ್ದ ದೇವತಾರ್ಚನೆಯ, ನಿತ್ಯಪೂಜೆಗೆ ಬೇಕಾಗುತ್ತಿದ್ದ ದೇವರ ಪೂಜೋಪಕರಣಗಳ ವ್ಯಾಪಾರವನ್ನು ಕಲ್ಮಂಜೆ ವ್ಯಾಸಾಚಾರ್ಯರಿಗೆ ಒಪ್ಪಿಸಿ ಕೈತೊಳೆದು ಕೊಂಡರು.

## ೬

ಪಾವಂಜೆ ಗುರುರಾಯರು ಮಾಡಿದ ಸಾರಸ್ವತ ಸೇವೆ-ಜ್ಞಾನಪ್ರಸಾರ ಕಾರ್ಯವನ್ನು ನಾಲ್ಕು ಮುಖ್ಯ ಘಟಗಳಾಗಿ ಪರಿಶೀಲಿಸಬಹುದು. ಮೊದಲನೆಯದು ನಿತ್ಯಾನುಷ್ಠಾನಕ್ಕೆ ಬೇಕಾದ ಸ್ತೋತ್ರ ಸಾಹಿತ್ಯದ ಪ್ರಕಟನೆ; ಎರಡನೆಯದು ಹೆಣ್ಣು ಮಕ್ಕಳ ಹಾಡು, ಮೂರನೆಯದು ಜನಪದ ಸಾಹಿತ್ಯವಾದ ಯಕ್ಷಗಾನ ಗ್ರಂಥಗಳ ಪ್ರಕಟನೆ, ನಾಲ್ಕನೆಯದು ಹರಿದಾಸ ಸಾಹಿತ್ಯ ಸಂಗ್ರಹ, ಸಂಶೋಧನೆ, ಪ್ರಕಟನೆ ಮತ್ತು ಮಾರಾಟ.

ಇವುಗಳಲ್ಲಿ ಅವರು ಮುಟ್ಟಿದ್ದನ್ನು ತಮ್ಮ ಸತತ ಪರಿಶ್ರಮದಿಂದಾಗಿ, ತಪಸ್ಸಿನಿಂದಾಗಿ, ಹೊನ್ನಾಗಿಸಿದರು. ಅದರ ಪೂರ್ಣತೆಯ ಕಡೆಗೆ ಒಯ್ದರು. ಒಂದು ಸಂಸ್ಥೆ, ನೂರಾರು ಜನ ವಿದ್ವಾಂಸರ ಸಹಾಯದಿಂದ, ಅಧಿಕ ಹಣದ ಬೆಂಬಲದಿಂದ ಮಾಡಬಹುದಾಗಿದ್ದ ಕೆಲಸವನ್ನು ಗುರುರಾಯರು, ಏಕಾಂಗ ವೀರರಾಗಿ, ಹಣಕಾಸಿನ ನೆರವು ಇಲ್ಲದೇ, ಮುದ್ರಣ ಸೌಕರ್ಯವಾಗಲೀ ಪ್ರಕಾಶಕರಾಗಲೀ ಇಲ್ಲದಿದ್ದ ಕಾಲದಲ್ಲಿ ಸದ್ದುಗದ್ದಲಗಳಿಲ್ಲದೆ, ಕೇವಲ ಸೇವಾಮನೋಭಾವ ದಿಂದ ನಡೆಸಿಕೊಂಡು ಬಂದರು. ಇದು ಅವರು ಮಾಡಿದ ಮಹತ್ಕಾರ್ಯ.

ಗುರುರಾಯರಿಗೆ ಸಂಸ್ಕೃತ, ಇಂಗ್ಲಿಷ್, ಮಲೆಯಾಳಿ, ತುಳು, ಕನ್ನಡ ಹಿಂದೂಸ್ಥಾನಿಗಳು ಚೆನ್ನಾಗಿ ಬರುತ್ತಿತ್ತು; ತೆಲಗು, ಮರಾಠಿ, ತಮಿಳುಗಳನ್ನು ಅರ್ಥ ಮಾಡಿಕೊಳ್ಳಬಲ್ಲವರಾಗಿದ್ದರು. ಹೀಗಿದ್ದು ತಾವು ಸರ್ವಜ್ಞರೆಂಬ ಅಹಂಕಾರ ಅವರಿಗಿರಲಿಲ್ಲ. ಸಾಹಿತ್ಯವನ್ನು ಚೆನ್ನಾಗಿ ಬಲ್ಲ ವಿದ್ವಾಂಸರಿಂದ ಆಯಾ ಪ್ರಕಾರದ ಸಾಹಿತ್ಯವನ್ನು ಕೊಟ್ಟು ತಿದ್ದಿಸಿ, ಒಪ್ಪಗೊಳಿಸಿ, ತಪ್ಪಿಲ್ಲದಂತೆ

ಮುದ್ರಿಸುವುದು ಅವರಿಗೆ ಪ್ರಿಯವಾದ ಕಾರ್ಯವಾಗಿತ್ತು. ಈ ಕಲೆಯನ್ನು ಅವರು ಸಾಧಿಸಿದ್ದರು. ಅವರು ಸಂಸ್ಕೃತ ಗ್ರಂಥಗಳನ್ನು ಸಂಸ್ಕೃತ ಪಾಠಶಾಲೆಯ ಬಿ. ಶ್ರೀನಿವಾಸಭಟ್ಟ ಅವರಿಂದಲೂ, ಹರಿದಾಸ ಸಾಹಿತ್ಯವನ್ನು ಹಂಡೆ ಶ್ರೀಪಾದದಾಸ ಕಲಮದಾನಿ ಮತ್ತು ಬೇಲೂರು ಕೇಶವದಾಸ ಮುಂತಾದ ವಿದ್ವಾಂಸರ ಕೈಯಿಂದಲೂ ತಿದ್ದಿ ಪರಿಷ್ಕರಿಸಿ, ಪ್ರಕಟಿಸುತ್ತಿದ್ದರು. ಈ ಕಾರ್ಯ ಎಷ್ಟು ಕಷ್ಟ ಹಾಗೂ ಶ್ರಮದಾಯಕವೆಂಬುದನ್ನು ಅವರು ಅನೇಕ ಗ್ರಂಥಗಳ ಮುನ್ನುಡಿಗಳಲ್ಲಿ, ಪ್ರಸ್ತಾವನೆ, ಅರಿಕೆಗಳಲ್ಲಿ ಹೇಳಿಕೊಂಡಿದ್ದಾರೆ. ಇದರಂತೆ ಯಕ್ಷಗಾನ ಸಾಹಿತ್ಯವನ್ನು ನುರಿತವರಿಂದ ತಿದ್ದಿಸಿ ಪ್ರಕಟಿಸುತ್ತಿದ್ದರು.

ಪುಸ್ತಕಗಳ ಮುದ್ರಣ ಪಾವಂಜೆಯವರ ಪಾಲಿಗೆ ಒಂದು ವ್ರತವಾಗಿದ್ದಂತೆ ಪೂಜೆಯೂ ಆಗಿತ್ತು. ಗ್ರಂಥಗಳ ಮುದ್ರಣದ ಅಚ್ಚುಕಟ್ಟು, ಶ್ರದ್ಧತೆ, ಒಪ್ಪ ಓರೆಗಳ ಕಡೆಗೆ ಅವರು ತುಂಬಾ ಗಮನ ಕೊಡುತ್ತಿದ್ದರು. ಅವರ ಕಣ್ಣ ಮುಂದೆ ಸದಾ ಇದ್ದದು ಬೊಂಬಾಯಿಯ ನಿರ್ಣಯ ಸಾಗರ ಪ್ರೆಸ್, ವಾರಣಾಸಿಯ ಸಂಸ್ಕೃತ ಸೀರೀಸ್, ಚೌಖಾಂಬ ಮತ್ತು ಕುಂಭಕೋಣದ ಮಧ್ವವಿಲಾಸ ಡಿಪೋಗಳವರು ಪ್ರಕಟಿಸುತ್ತಿದ್ದ ಸಂಸ್ಕೃತ ಗ್ರಂಥಗಳ ಮೇಲ್ಪಂಕ್ತಿ. ಈ ಕಾರ್ಯಕ್ಕಾಗಿಯೇ ಅವರು ಕೃಷ್ಣಾ ಮುದ್ರಣಾಲಯವನ್ನು ಸ್ಥಾಪಿಸಿದ್ದು, ಇಲ್ಲಿ ಮುದ್ರಣವಾಗುತ್ತಿದ್ದ ಗ್ರಂಥಗಳು ಎಷ್ಟು ಶುದ್ಧವಾಗಿತ್ತೆಂದರೆ, ಹರಿದಾಸ ಸಾಹಿತ್ಯಕ್ಕೆ ತಮ್ಮ ಸರ್ವಸ್ವವನ್ನು ಅರ್ಪಿಸಿಕೊಂಡು ದುಡಿದ ಗೋರೆಬಾಳು ಹನುಮಂತರಾಯರೂ, ತಮ್ಮ ಗ್ರಂಥಗಳು ಅಷ್ಟೇ ಶುದ್ಧವಾಗಿ ಪ್ರಕಟವಾಗಲು ಹಂಬಲಿಸುವಂತಾಗಿತ್ತು. ಒಮ್ಮೆ ಉಡುಪಿಗೆ ಬಂದಿದ್ದಾಗ ಪಾವಂಜೆಯವರ ಸಹಕಾರವನ್ನು ಈ ಬಗ್ಗೆ ಯಾಚಿಸಿದ್ದರಂತೆ!

ಈ ಗ್ರಂಥಗಳ ಅಚ್ಚುಕಟ್ಟು, ಹೊರಗಿನ ಪ್ರಭಾವ ಎಷ್ಟಿತ್ತೆಂದರೆ ಹೊರಗಿನಿಂದ ಬಂದ ಜನ, ಇದೊಂದು ಲಕ್ಷಾಂತರ ರೂಗಳು ಹಾಕಿ ಮಾಡಿದ ಪ್ರಕಾಶನ ಸಂಸ್ಥೆ ಎಂದು ತಿಳಿಯುತ್ತಿದ್ದರಂತೆ. ಬಂದು ನೋಡಿದಾಗ, ಗುರುರಾಯರ ಪ್ರಕಾಶನದ ಕಾರ್ಯ ಚಾಪೆಯ ಮೇಲೆ ನಡೆಯುತ್ತಿದ್ದುದನ್ನು ನೋಡಿ ಬೆರಗಾಗಿ ಹೋಗುತ್ತಿದ್ದರಂತೆ.

ಗುರುರಾಯರು ಗೋರಖಪುರದ ಗೀತಾ ಪ್ರೆಸ್ಸಿನ ಹನುಮಾನ್ ಪ್ರಸಾದ ಪೋತದಾರನನ್ನು ಆದರ್ಶವಾಗಿರಿಸಿಕೊಂಡಿದ್ದರು. ಕುಂಭಕೋಣದ ಟಿ.ಆರ್.ಕೃಷ್ಣಾಚಾರ್, ಬೆಳಗಾಂನ ರಾಮಕೃಷ್ಣ ಡಿಪೋಗಳ ಗ್ರಂಥಗಳನ್ನು ಅವರು ಅನುಕರಿಸ ಬಯಸಿದ್ದರು. ಪುಟಕ್ಕೆ ತಕ್ಕ ಬೆಲೆ, ಗ್ರಂಥದ ಗಾತ್ರಕ್ಕೆ ತಕ್ಕ ಮುದ್ರಣ ವಿನ್ಯಾಸ, ಹೊರ ರಕ್ಷಾಕವಚ ಇರುತ್ತಿತ್ತು. ಪಾವಂಜೆ ಗುರುರಾಯರು ಈ ಬಗ್ಗೆ ಒಂದು ಸೂತ್ರ ಹಾಕಿಕೊಂಡು ನಡೆಯುತ್ತಿದ್ದರು. ಗ್ರಂಥದ ಬೆಲೆ ಎಲ್ಲರ ಕೈಗೆಟುಕುವಂತೆ ಅತ್ಯಂತ ಸುಲುಭ ದರದಲ್ಲಿ ಇರಬೇಕೇ ಹೊರತು, ಗ್ರಂಥದ ಮೌಲ್ಯ ಮಾತ್ರ ಯಾವಾಗಲೂ ತೂಕದ್ದೂ, ಬೆಲೆಯುಳ್ಳದ್ದೂ ಆಗಿರಬೇಕು -ಎಂದು ಹೇಳುತ್ತಿದ್ದರು. ತಮ್ಮ ಪ್ರಕಟನೆಗಳ ವಿಷಯದಲ್ಲಿ ಈ ಸೂತ್ರವನ್ನು ಅಕ್ಷರಶಃ ಪಾಲಿಸುತ್ತಿದ್ದರು.

ಈ ದೃಷ್ಟಿಯಿಂದ ಗುರುರಾಯರು ತಮ್ಮ ಕಾಲದಲ್ಲೇ ಒಂದು ವಿಕ್ರಮವನ್ನು ಸಾಧಿಸಿದರು. ಪ್ರಕಟಣ ಪ್ರಂಪಚದಲ್ಲಿ ಪವಾಡವನ್ನೇ ಮಾಡಿದರು. ಅವರು ಪ್ರಕಟಿಸಿದ ಗ್ರಂಥಗಳು

ಒಂದಾಣೆ ಬೆಲೆಯಿಂದ ಆರಂಭವಾಗಿ, ಹತ್ತು ರೂಪಾಯಿಗಳವರೆಗೆ ಇರುತ್ತಿತ್ತು. ಹತ್ತು ಪುಟಗಳ ಸಾಹಿತ್ಯದಿಂದ ತೊಡಗಿ ಸಹಸ್ರ ಪುಟಗಳವರೆಗೆ ವ್ಯಾಪಿಸಿರುತ್ತಿತ್ತು. ಹೀಗಾಗಿ ಕೆಲವು ಗ್ರಂಥಗಳು ಅನೇಕ ಮುದ್ರಣಗಳನ್ನು ಕಂಡವು; ಕೆಲವು ಅಚ್ಚಾಗುತ್ತಿದ್ದಂತೆ ಮಾರಾಟವಾಗಿ ಹೋಗುತ್ತಿದ್ದವು. ಮತ್ತೆ ಕೆಲವು ಗ್ರಂಥಗಳು ನಲವತ್ತು ಐವತ್ತು ವರ್ಷಗಳ ಕಾಲ ಮಾರಾಟವಾಗದೆ ಉಳಿದು, ಕೊನೆಗೆ ಕಾಗದ ಹಿಟ್ಟಾಗಿ, ನುಸಿಹಿಡಿದು ಪುಡಿಪುಡಿಯಾಗಿ, ರದ್ದಿಯಾಗಿ ಬಿದ್ದಿರುತ್ತಿತ್ತು ! ಆಶ್ಚರ್ಯದ ಸಂಗತಿ ಯೆಂದರೆ ಮುಟ್ಟಿದರೆ ಹಿಟ್ಟಾಗುತ್ತಿದ್ದ ಕಾಗದದ ಪ್ರತಿಗಳಿಗೂ ಹೊನ್ನ ಬೆಲೆಕೊಟ್ಟರೂ ಅನ್ಯತ್ರ ದೊರಕದು. ಅವರು ಪ್ರಕಟಿಸಿ, ಮಾರಾಟ ಮಾಡಿದ ಅಸಂಖ್ಯಾತ ಗ್ರಂಥಗಳು ಈ ಬಗೆಯವು. ಈ ಕೃತಿಗಳನ್ನು - ಎಲ್ಲ ಪ್ರಕಟಿತ ಗ್ರಂಥಗಳನ್ನು, ಎಲ್ಲ ಮುದ್ರಣದ ಪ್ರತಿಗಳನ್ನು ಕೊಂಡು ಸಂಗ್ರಹಿಸಿಟ್ಟುಕೊಂಡವರು ಅಪರೂಪವೇ ಸರಿ. ಅವರು ನಿಜವಾಗಿಯೂ ಇದ್ದರೆ ಭಾಗ್ಯಶಾಲಿಗಳೆಂದೇ ಹೇಳಬೇಕು. ದೃಷ್ಟಾಂತಕ್ಕೆ ಹೇಳುವುದಾದರೆ ಇದುವರೆಗೆ ಶ್ರೀಪಾವಂಜೆ ಗುರುರಾಯರು ೧೯೦೮ರಲ್ಲಿ ಸ್ಥಾಪಿಸಿದ ಮಾಧ್ವ ಸಿದ್ಧಾಂತ ಗ್ರಂಥಾಲಯವು ಇದುವರೆಗೆ ಚಿಕ್ಕದೊಡ್ಡ ಹೊತ್ತಿಗೆಗಳನ್ನು ಲೆಕ್ಕಕ್ಕೆ ತೆಗೆದು ಕೊಂಡರೆ ಸುಮಾರು ೪೫೦ಗ್ರಂಥಗಳನ್ನು ಇದುವರೆವಿಗೆ ಪ್ರಕಟಿಸಿದೆ ; ಇವುಗಳಲ್ಲಿ ಕನ್ನಡ, ಸಂಸ್ಕೃತ, ಮರಾಠ ಗ್ರಂಥಗಳಿವೆ ; ಇವುಗಳ ಒಟ್ಟು ಪುಟಗಳು ಸುಮಾರು ಹತ್ತು ಸಹಸ್ರ ಪುಟಗಳಿಗೂ ಹೆಚ್ಚಾಗುತ್ತದೆ. ಇವುಗಳಲ್ಲಿ ಪುರಂದರದಾಸರ ಗ್ರಂಥವು ಅತ್ಯಂತ ಜನಪ್ರಿಯವಾಯಿತು. ೯೨ ಪುಟಗಳ ಮೊದಲನೆಯ ಭಾಗವು ೧೯೬೭ ರಲ್ಲಿ ಪ್ರಕಟಿಸಿದಾಗ, ೨೨ ನೆಯ ಮುದ್ರಣ ಕಂಡಿತು. ಬೆಂಗಳೂರು, ಮೈಸೂರು, ಧಾರವಾಡ, ಬೆಳಗಾಂ, ಹುಬ್ಬಳ್ಳಿ, ದಾವಣಗೆರೆಗಳಿಂದ ಮಾತ್ರವಲ್ಲ- ಕರ್ಣಾಟಕದ ಎಲ್ಲ ಪುಸ್ತಕ ಪ್ರಕಾಶಕರು, ಮಾರಾಟಗಾರರಿಂದ ಸದಾ ಬೇಡಿಕೆ ಇರುತ್ತಿತ್ತು. ಜನತೆ ಪುಸ್ತಕ ಪ್ರಕಟವಾಗಿ ಮಾರಾಟಕ್ಕೆ ಬಂದಾಗ, ಅದನ್ನು ಕೈಗೆತ್ತಿಕೊಂಡು ಕೇಳುತ್ತಿದ್ದುದು ಉಡುಪಿ ಸಿಟಿಯೋ, ಬೆಂಗಳೂರು ಸಿಟಿಯೋ -? ಎಂದು. ಪಾವಂಜೆ ಗುರುರಾಯರ ಗ್ರಂಥಗಳಿಗೆ ಅಂಥ ಬೆಲೆ ಇರುತ್ತಿತ್ತು. ಜನರು ಬೇಡಿ ಕ್ರಯಕೊಟ್ಟು ಪಡೆಯುತ್ತಿದ್ದರು. ಅವರಲ್ಲಿ ಅಚ್ಚಾದ ಪುಸ್ತಕ ಕೈಗೊಂದು ಭೂಷಣ ಮಾತ್ರವಾಗಿರಲಿಲ್ಲ, ಓದಿ ಆನಂದಿಸುವುದೇ ಒಂದು ಭಾಗ್ಯವೆನಿಸುತ್ತಿತ್ತು.

ಒಮ್ಮೆ ಮುಳಿಯ ತಿಮ್ಮಪ್ಪಯ್ಯನವರು ಪರ್ತಿಸುಬ್ಬನೆಂಬ ಯಕ್ಷಗಾನ ಕಲಾವಿದನ ಜೀವನವನ್ನು ಬರೆದು ಮೂರು ರೂಪಾಯಿ ಬೆಲೆ ಇರಿಸಿದ್ದರಂತೆ. ಅವನ ಎಲ್ಲಾ ಯಕ್ಷಗಾನ ಪ್ರಸಂಗಗಳು, ಜೀವನ ಚರಿತ್ರೆಗಳಿಗಿಂತಲೂ ಹೆಚ್ಚು ಮೌಲಿಕ ಕೃತಿ, ಹೆಚ್ಚು ಸಂಗ್ರಹ ಯೋಗ್ಯವಾದ್ದು ಕೇವಲ ಎರಡೇ ರೂಪಾಯಿಗಳಿಗೆ ದೊರಕುತ್ತಿದ್ದವಂತೆ. ಎಲ್ಲರ ಕೈಲಿ ಪಾವಂಜೆಯವರ ಪುಸ್ತಕ ಶೋಭಿಸುತ್ತಿತ್ತೇ ಹೊರತು ಪರಿಚಿತರಾದ ಮುಳಿಯ ತಿಮ್ಮಪ್ಪಯ್ಯನವರ ವಿದ್ವತ್ಪೂರಿತ ಗ್ರಂಥ ಸ್ಪರ್ಧೆಯಲ್ಲಿ ಹಿಂದೆ ಬಿದ್ದಿತಂತೆ ! ಸುಮಾರು ಅವರತ್ತು ವರ್ಷಗಳ ಹಿಂದೆ ಅಚ್ಚಾದ ಶ್ರೀ ವಾದಿರಾಜರ ತೀರ್ಥಪ್ರಬಂಧವೆಂಬ ಗ್ರಂಥ ಕೇವಲ ೪ ಆಣೆ ಇರಿಸಿದ್ದರೂ, ದುರ್ದೈವದಿಂದ ಮಾರಾಟವಾಗದೆ, ಅದು ಇದ್ದಲ್ಲಿ ನುಸಿಹಿಟ್ಟು ಹಿಡಿದು, ಧೂಳುಧೂಳಾಗಿ ಹೋಯಿತಂತೆ ! ಇವುಗಳಲ್ಲೆಲ್ಲ ಕೆಲವು ಗ್ರಂಥಗಳ ಭಾಗ್ಯ ಹೆಚ್ಚಿನದು. ಸ್ತೋತ್ರಮಂಜರಿ, ಮನುಸ್ಮೃತಿ, ಪುರದಂರದಾಸರ ಕೃತಿಗಳು - ಇವು

ಇಲ್ಲದ ಮಾಧ್ವರಮನೆಗಳು ನಮ್ಮ ನಾಡಿನಲ್ಲಿ ಇರುವುದಿಲ್ಲ; ಈ ಗ್ರಂಥಗಳಿಗೆ ಎಂದೂ ಬೇಡಿಕೆ ಇದ್ದೇ ಇದೆ. ಇದರಂತೆ ಅವರು ಪ್ರಕಟಿಸಿದ ದೇವತಾರ್ಚನೆಯ ಪುಸ್ತಕ ಮತ್ತು ತ್ರಿಕಾಲ ಸಂಧ್ಯಾ ವಂದನೆಗಳ ಪುಸ್ತಕ ಒಂದು ಲಕ್ಷಕ್ಕಿಂತ ಹೆಚ್ಚಿನ ಪ್ರತಿಗಳು ಮಾರಾಟವಾಗಿದ್ದು, ಈಗಲೂ ಅವುಗಳಿಗೆ ತಪ್ಪದೆ ಬೇಡಿಕೆ ಇದೆ. ಈ ಗ್ರಂಥಗಳನ್ನು ಓದಿ ಆಚಾರವಂತರಾದವರು, ದೇವರ ಪೂಜೆ ಕಲಿತವರು, ಸಂಧ್ಯೋಪಾಸನೆ ಮಾಡಿದವರು ಅಸಂಖ್ಯಾತರಾಗಿದ್ದಾರೆ – ಇವರೆಲ್ಲರೂ ಪಾವಂಜೆ ಗುರುರಾಯರನ್ನು ತಮ್ಮ ಬಾಳಿಗೆ ಬೆಳಕನ್ನು ನೀಡಿದವರೆಂದು ಕೃತಜ್ಞತೆಯಿಂದ ಸ್ಮರಿಸುತ್ತಾ ಬಂದಿದ್ದಾರೆ. ಪಾವಂಜೆಯವರು ಪ್ರಕಾಂಡ ಪಂಡಿತರಾಗಿರಲಿಲ್ಲ; ಲೇಖನ ಬರೆಯಲಿಲ್ಲ; ಸಾಹಿತ್ಯ ನಿರ್ಮಿಸಲಿಲ್ಲ; ಭಾಷಣ ಬಿಗಿಯಲಿಲ್ಲ; ಸಮ್ಮೇಳನಗಳಲ್ಲಿ ಭಾಗವಹಿಸಲಿಲ್ಲ; ಆದರೇನು ಅವರ ಕೀರ್ತಿ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಅಜರಾಮರವಾಗಿ ಉಳಿದಿದೆ.

## ೧೦

ಗುರುರಾಯರು ಶ್ರೀಕೃಷ್ಣ ಮುದ್ರಣಾಲಯ ಆರಂಭ ಮಾಡಬೇಕಾಗಿ ಬಂದ ಸಂದರ್ಭವನ್ನು ಶ್ರೀಪತಿ ಆಚಾರ್ಯರು ತಮ್ಮ ಲೇಖನದಲ್ಲಿ ಹೀಗೆ ವರ್ಣಿಸಿದ್ದಾರೆ–

"ಅವರ ಔಷಧಾಲಯವು ನಾರು ಬೇರುಗಳನ್ನು ಮಾರುವ ಅಂಗಡಿಯಾಗಿ ಬೇರೆಯವರ ಕೈಸೇರಿತ್ತು. ಶ್ರೀರಾಯರು ಪುಸ್ತಕಗಳನ್ನು ಮಾರುವ ಕಾರ್ಯಕ್ಕೆ ಮುಳುವಾಗದೆ ಸ್ವತಃ ಪುಸ್ತಕಗಳನ್ನು ಅಚ್ಚು ಹಾಕಿಸುವ ಕಾರ್ಯಕ್ಕೂ ಪ್ರವೃತ್ತರಾದರು. ಆವರೆಗೂ ತೆಂಕುಪೇಟೆಯಲ್ಲಿ ಬೇಲೂರ ರಾಮರಾಯರು – ಉಡುಪಿಯ ಸುಪ್ರಸಿದ್ಧ ವಕೀಲರಾದ ಶ್ರೀಬೇಲೂರು ವಾಸುದೇವರಾಯರ ತಂದೆ – ಸ್ಥಾಪಿಸಿದ್ದ ಹಿಂದೂ ಪ್ರೆಸ್ಸಿನಲ್ಲಿ ಧಾರ್ಮಿಕ ವಿಧಿ ವಿಧಾನಗಳನ್ನೊಳಗೊಂಡ ಪುಸ್ತಕಗಳನ್ನು ಮುದ್ರಿಸಿ ಪ್ರಕಾಶ ಪಡಿಸುತ್ತಿದ್ದರು. ಮಂಗಳೂರಿನ ಶಾರದ ಪ್ರೆಸ್ಸಿನಲ್ಲೂ ಕೆಲವು ಪುಸ್ತಗಳು ಮುದ್ರಣಗೊಂಡವು. ಉಡುಪಿಯ ಪ್ರಭಾ ಪ್ರೆಸ್ಸಿನಲ್ಲಿ ಸಂಧ್ಯಾವಂದನೆ, ದೇವರಪೂಜೆ ಪದ್ಧತಿ ಮುಂತಾದ ಪುಸ್ತಕಗಳನ್ನು ಅಚ್ಚುಹಾಕಿಸಿ ಪ್ರಕಾಶ ಪಡಿಸಿದರು. ಗುರುರಾಯರು ಕೈಗೆತ್ತಿಕೊಂಡು ನಿರಾಬಾಧಕವಾಗಿ ನೆರವೇರಿಸಿಕೊಂಡು ಬಂದ ಧಾರ್ಮಿಕ ಪುಸ್ತಕ ಪ್ರಕಾಶನಕ್ಕೆ ಕನ್ನಡದ ಜನತೆ ಸಫಲವಾದ ಪ್ರತಿಕ್ರಿಯೆಯನ್ನು ತೋರಿಸಿತು. ನಾಡಿನ ನಾಲ್ಕು ನಿಟ್ಟಿನಿಂದ ಈ ಪುಸ್ತಕಗಳಿಗೆ ಬೇಡಿಕೆ ಬರ ತೊಡಗಿದಾಗ ಮತ್ತೆ ಮತ್ತೆ ಅಚ್ಚುಕೂಟವನ್ನು ಮುದ್ರಣಕ್ಕಾಗಿ ಶರಣು ಹೋಗುವ ಹವ್ಯಾಸವನ್ನು ತೊರೆದು ತಮ್ಮದೇ ಆದ ಅಚ್ಚು ಕೂಟವೊಂದನ್ನು ಸ್ಥಾಪಿಸುವ ಕನಸು ಕಂಡರು. ತನ್ನ ಕನಸು ನನಸಾಗುವಂತೆ ಪ್ರಯತ್ನಿಸಿ ಪೇಜಾವರ ಮಠದ ಬಳಿಯ ಓಣಿಯಲ್ಲಿರುವ ಶ್ರೀಪದ್ಮನಾಭ ಉಪಾಧ್ಯಾಯ ಎಂಬುವರ ಮನೆಯಲ್ಲಿ ಸ್ವಲ್ಪ ಜಾಗವನ್ನು ಪಡೆದು, ಮುದ್ರಾಯಂತ್ರಗಳನ್ನು ಸ್ಥಾಪಿಸಿ, ಪುಸ್ತಕ ಪ್ರಕಾಶಕರಾದ ಅವರು ಮುದ್ರಕರೂ ಆಗಿ ಪರಿವರ್ತನೆ ಪಡೆದರು. ಅನಂತರ ತಾವು ಕೈಗೊಂಡ ಕಾರ್ಯಗಳಲ್ಲಿ ಉಡುಪಿಯ ಅಧಿದೇವತೆಯಾದ ಶ್ರೀಕೃಷ್ಣನ ಕೃಪಾಕಟಾಕ್ಷವನ್ನರಿತ ಶ್ರೀರಾಯರು ಶ್ರೀಕೃಷ್ಣನ ಹೆಸರಿನಲ್ಲಿಯೇ ವ್ಯಾಪಕವಾದ ಅಚ್ಚುಕೂಟವೊಂದನ್ನು ಶ್ರೀಪಲಿಮಾರು ಮಠದ ಎರಡನೆಯ ಮಾಳಿಗೆಯಲ್ಲಿ ಶ್ರೀಕೃಷ್ಣ ಮುದ್ರಣಾಲಯ ಎಂಬ

ನಾಮಾಂಕಿತದಿಂದ ೧೯೧೭ರಲ್ಲಿ ಸ್ಥಾಪಿಸಿದರು. ಅದೇ ರೀತಿಯಾಗಿ ಶ್ರೀ ಪೇಜಾವರ ಮಠದ ಸಮೀಪದಲ್ಲಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯವೆಂಬ ಹೆಸರಿನಿಂದ ಪುಸ್ತಕಾಲಯವನ್ನು ಸ್ಥಾಪಿಸಿ ದೇಶ ದೇಶಗಳಿಂದ ಧಾರ್ಮಿಕ ಗ್ರಂಥಗಳನ್ನು ತರಿಸಿದುದಲ್ಲದೆ, ತಾವೇ ಸ್ವತಃ ಅಚ್ಚು ಗೊಳಿಸಿದ ಕಲ್ಪೋಕ್ತ ಪೂಜಾವಿಧಾನಗಳು, ವಿಷ್ಣು ಸಹಸ್ರನಾಮ, ಶಿವಸಹಸ್ರನಾಮ, ಅಷ್ಟೋತ್ತರಗಳು ಮುಂತಾದ ಸ್ತೋತ್ರ ಪಾಠಗಳ ಪುಸ್ತಕಗಳು, ಪುಣ್ಯಾಹ ವಾಚನವಿಧಿ, ಶ್ರಾದ್ಧ ಪ್ರಯೋಗ, ಮಹಾಲಯ - ಎಂದು ಮುಂತಾಗಿ ಶುಭಾ ಶುಭ ಕರ್ಮಗಳ ಆಚರಣೆಯ ಕ್ರಮಗಳ ಕುರಿತು ವಿದ್ಯುಕ್ತ ವಿಧಾನಗಳ ಪುಸ್ತಕಗಳು ಇವರಿಂದ ಪ್ರಕಾಶಗೊಂಡು ಕನ್ನಡ ಜನತೆಗೆ ಓಲೆಯ ಗರಿಯಲ್ಲಿ ಅಡಗಿದ್ದ ಅರ್ಥಂಬದ್ಧವಾಗಿ ಲೋಪದೋಷಗಳಿಂದ ಕೂಡಿದ ಈ ವಿಧಾನಗಳು ಶುದ್ಧವಾಗಿ ಮತ್ತು ಸ್ಪಷ್ಟವಾಗಿ, ನಿರ್ದುಷ್ಟವಾಗಿ ಈ ಪುಸ್ತಕ ಬಂಡಾರದಲ್ಲಿ ದೊರೆಯುವಂತಾದವು.

ಈಯೆಡೆಯಲ್ಲಿ ಮುದ್ರಾಯಂತ್ರೋಪಕರಣಗಳ ಬಾಹುಳ್ಯದಿಂದಲೂ, ಪ್ರಕೃತ ಕಟ್ಟಡದ ಅಭದ್ರತೆಯಿಂದಲೂ ಮುದ್ರಣಾಲಯವನ್ನು ಸ್ಥಳಾಂತರಿಸಬೇಕಾದ ಸಂದರ್ಭವೊದಗಿತು. ಅದಕ್ಕಾಗಿಯೇ ಪ್ರತ್ಯೇಕವಾದ ಕಾರ್ಯಗಾರವನ್ನು ನೂತನವಾಗಿ ನಿರ್ಮಿಸಬೇಕಾದ ಸನ್ನಿವೇಶ ಉಂಟಾಯಿತು. ಸಂಸ್ಕೃತ ಕಾಲೇಜಿನ ರಸ್ತೆಯ ಪಡುಬದಿಯಲ್ಲಿ ಪಾಲುಕೋಟೆಯೆಂಬಲ್ಲಿ ಶ್ರೀಕೃಷ್ಣಾಪುರದ ಮಠದ ಶ್ರೀಗಳಿಂದ ಸ್ಥಳವನ್ನು ಗೇಣಿಯ ಮೇಲೆ ಪಡೆದು ಶ್ರೀಕೃಷ್ಣ ಮುದ್ರಣಾಲಯಕ್ಕೆ ಸ್ವಂತ ಕಟ್ಟಡದ ಭವ್ಯಭವನ ನಿರ್ಮಾಣವಾಯಿತು."

ಹೀಗೆ ಗುರುರಾಯರು ಮೊದಲು ಗ್ರಂಥ ಪ್ರಕಾಶಕರಾಗಿ ಈ ಉದ್ಯಮಕ್ಕೆ ಕೈ ಹಾಕಿದವರು, ಸನ್ಯಾಸಿ ಸಂಸಾರದಂತೆ, ಅನಂತರ ಮುದ್ರಣಾಲಯವನ್ನೂ, ಪುಸ್ತಕದಂಗಡಿ ಯನ್ನೂ, ಮುದ್ರಿಸಿದ ಪುಸ್ತಕಗಳ ಸಲುವಾಗಿ ತೆರೆಯಬೇಕಾಗಿತ್ತು. ಹೀಗೆ ಲೇಖನಗಳನ್ನು ಸಿದ್ಧಗೊಳಿಸುವ, ಗ್ರಂಥ ಸಂಗ್ರಹಣಕಾರರಾಗಿ ಆರಂಭಿಸಿದ ರಾಯರು ಕಡೆಗೆ ವ್ಯವಸ್ಥಿತ ಪ್ರಕಾಶನ, ಮುದ್ರಣ ಮಾರಾಟದ ಸಂಚಾಲಕರೂ ಆದರು. ಇದರಿಂದ ಇವರ ಗ್ರಂಥಗಳು ಕ್ರಮಬದ್ಧವಾಗಿ ಮುದ್ರಣಗೊಳ್ಳಲು, ಪ್ರಕಟವಾಗಲು, ಮಾರಾಟವಾಗಲು, ಓದುಗರ ಕೈಗೆ ಸಿಕ್ಕಲು ಸಾಧ್ಯ ವಾಯಿತು. ಇದು ಗುರುರಾಯರ ವ್ಯವಹಾರ ಕೌಶಲ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಅಂದು ಅವರು ಆರಂಭಿಸಿದ ಈ ಪುಸ್ತಕದ ಉದ್ಯಮ– ಇಂದೂ, ಹತ್ತು ಶತಕಗಳ ನಂತರವೂ ಮುಂದುವರೆಯುತ್ತ ಬಂದಿರುವುದು ಅವರ ಅವಿಶ್ರಾಂತ ದುಡಿಮೆ, ಕಾರ್ಯನಿಷ್ಠೆ, ಕರ್ತವ್ಯ ಪ್ರಜ್ಞೆ ಮತ್ತು ವ್ಯವಹಾರ ಕುಶಲತೆಗಳ ದ್ಯೋತಕವಾಗಿದೆ. ಮೇಲಾಗಿ ಅವರ ತಪಸ್ಸು ಶ್ರೀಕೃಷ್ಣನ ಅನುಗ್ರಹ ವಿಶೇಷವೂ ಇದಕ್ಕೆ ಕಾರಣವಾಯಿತೆಂಬುದನ್ನು ಮರೆಯಬಾರದು.

ಮುದ್ರಣ ಯಂತ್ರವೇನೋ ಬಂದಿತು. ಈ ಉದ್ಯಮಕ್ಕೆ ಒಂದು ಸಾರಥಿ ಇಲ್ಲದೆ ಅದು ಮುಂದೆ ಸಾಗುವುದೆಂತು? ಮುದ್ರಣ ಉದ್ಯಮವೆಂದರೆ ಹಣವನ್ನು ಲೆಡ್ಡು, ಅಕ್ಷರ, ಕಬ್ಬಿಣ, ಕಾಗದ ಗಳಲ್ಲಿ ಹಾಕಿದಂತೆ. ಇದನ್ನು ಮತ್ತೆ ಹಣವಾಗಿ ಎತ್ತಬೇಕಾದರೆ ಅದಕ್ಕೊಬ್ಬ ಚತುರ ವ್ಯವಸ್ಥಾಪಕ ಬೇಕೆಂಬ ಸತ್ಯ ಸಂಗತಿ, ಬಹುಬೇಗ ಗುರುರಾಯರಿಗೆ ಅರಿವಾಯಿತು. ವ್ಯಾಪಾರ ಬೇರೆ, ವ್ಯವಹಾರ ಬೇರೆ, ಗ್ರಂಥರಚನೆ ಬೇರೆ, ಪ್ರಕಾಶನ ಬೇರೆ - ಎಂಬುದು ಅವರಿಗೆ ಅರಿವಿತ್ತು. ಅಂದೇ ಈ ಬಿಳಿ

ಆನೆಯನ್ನು ಸಾಕುವುದು ದುಸ್ಸಾಧ್ಯವೆಂದು ಅನಿಸಿದಾಗ ಗುರುರಾಯರು ಅದಕ್ಕಾಗಿ ಚತುರ ವ್ಯಕ್ತಿಯನ್ನು ವ್ಯವಸ್ಥಾಪಕನಾಗಿ ಕಾರ್ಯ ಮಾಡಲು ಹುಡುಕತೊಡಗಿದರು. ಅವರ ಪ್ರಯತ್ನ ಕಡೆಗೆ ಫಲಿಸಿ, ಮುದ್ರಣಾಲಯ ಸುಸೂತ್ರವಾಗಿ ನಡೆಯಲಾರಂಭಿಸಿತು.

ಈ ಬಗ್ಗೆ ಶ್ರೀಪತಿ ಆಚಾರ್ಯರು ಹೀಗೆ ಬರೆದಿದ್ದಾರೆ- "ಒಂದೆಡೆ ಪುಸ್ತಕಾಲಯದ ಏರುತ್ತಿರುವ ವ್ಯವಹಾರ, ಮತ್ತೊಂದೆಡೆ ವೃದ್ಧಿಂಗತವಾಗುವ ಮುದ್ರಣಾಲಯದ ಕಾರ್ಯ ರೂಪಗಳಿಂದಾಗಿ ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು -ಎಂಬ ಗಾದೆ ಮಾತಿನಂತೆ ಈ ಎರಡು ವ್ಯವಹಾರಗಳನ್ನು ಸರಿದೂಗಿಸುವುದು ಕಷ್ಟ ಸಾಧ್ಯವಾದಾಗ ಅವರು ಬಿ.ಎ. ಪದವೀಧರರಾದ ಬಿ. ರಾಮಕೃಷ್ಣಾಚಾರ್ಯರನ್ನು ೧೯೩೩ ರಲ್ಲಿ ಮುದ್ರಣಾಲಯದ ಕಾರ್ಯಾಧ್ಯಕ್ಷರನ್ನಾಗಿ ನೇಮಿಸಿಕೊಂಡರು. ಶ್ರೀ ಆಚಾರ್ಯರ ದ್ವಿಗುಣಿತವಾದ ಉತ್ಸಾಹದಿಂದ ಮುದ್ರಣಾಲಯದ ಕಾರ್ಯವು ಭರದಿಂದ ಸಾಗಿಬಂದುದನ್ನು ಮನಗಂಡ ರಾಯರು ಅವರೊಡನೆ ಮನಃಪೂರ್ವಕವಾಗಿ ಸಹಕರಿಸಿದರು." (೧೯೪೩) ಮುಂದೆ ಬಿ. ರಾಮಕೃಷ್ಣಾಚಾರ್ಯರು ತಮ್ಮದೇ ಆದ ಮುದ್ರಣಾಲಯವನ್ನು ಆರಂಭಿಸಿದರು. ಅವರು ಅನುಕೂಲಸ್ಥಿತಿಗೇರಿದ ಮೇಲೂ ತಮಗೆ ಜೀವನಕ್ಕೆ ಒಂದು ಮಾರ್ಗ ತೋರಿಸಿದ ಶ್ರೀ ಗುರುರಾಯರ ಪ್ರೀತಿ ವಿಶ್ವಾಸಗಳನ್ನೂ, ವ್ಯವಹಾರ ಕೌಶಲವನ್ನೂ, ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

ಪಾವಂಜೆ ಗುರುರಾಯರು ಸಾತ್ವಿಕರಾದರೂ, ವ್ಯವಹಾರ ಕುಶಲರು. ಅವರು ತಮ್ಮ ನಂತರ ಮಕ್ಕಳಲ್ಲಿ ವಿವಾದ ಹುಟ್ಟಬಾರದೆಂದು ಬದುಕಿದ್ದಾಗಲೇ ಒಂದು ವ್ಯವಸ್ಥೆ ಮಾಡಿದ್ದರು. ಮುದ್ರಣಾಲಯವನ್ನು ಒಬ್ಬ ಮಗ ಮಧ್ವಮುನಿರಾಯನಿಗೂ, ಪುಸ್ತಕದ ಪ್ರಕಾಶನ ಹಾಗೂ ಮಾರಾಟವನ್ನು ಇನ್ನೊಬ್ಬ ಮಗ ಸೇತುಮಾಧವರಾಯನಿಗೂ ಒಪ್ಪಿಸಿ, ತಾವು ಅಂದು ಆರಂಭಿಸಿದ ಈ ಉದ್ಯಮಗಳು ಮುಂದೂ ಲಾಭದಾಯಕವಾಗಿ ನಡೆದು ಬರುವಂತೆ ವ್ಯವಸ್ಥೆ ಮಾಡಿದ್ದರು. ಇದು ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ.

ಪಾವಂಜೆ ಗುರುರಾಯರು ಆರಂಭಿಸಿದ ಕನ್ನಡ ಲಿಪಿಯ ಸಂಸ್ಕೃತ ಪುಸ್ತಕಗಳು ವೈವಿಧ್ಯಮಯವಾದುದು. ಇವುಗಳನ್ನು ಸ್ಥೂಲವಾಗಿ ಪ್ರಾತಃಕಾಲ ಪಠನೀಯ ಸಾಹಿತ್ಯ ಪುಸ್ತಕಗಳು, ನಿತ್ಯ ಕರ್ಮೋಪಯೋಗಿ ಪುಸ್ತಕಗಳು, ಸರ್ವಮೂಲ ಗ್ರಂಥಗಳು, ದೇವಪೂಜಾ ಪುಸ್ತಕಗಳು, ಸ್ತೋತ್ರ ಪುಸ್ತಕಗಳು, ಪ್ರಯೋಗಗಳು, ಕಲ್ಪೋಕ್ತ ಪೂಜಾಕಥೆಗಳು, ಮಹಾತ್ಮ್ಯಗಳು -ಹೀಗೆ ವಿಭಾಗ ಮಾಡಬಹುದು. ಅಲ್ಲದೆ ಸಂಸ್ಕೃತ ಲಿಪಿಯ ಸಂಸ್ಕೃತ ಪುಸ್ತಕಗಳನ್ನು ಗ್ರಂಥರೂಪದಲ್ಲೂ, ಪತ್ರರೂಪದಲ್ಲೂ ಪ್ರಕಟಿಸಿದರು. ಸಂಪ್ರದಾಯ ರಾಘವೇಂದ್ರ ಸ್ತೋತ್ರ, ಲಕ್ಷ್ಮೀಹೃದಯ-ಮುಂತಾದವು ಹೀಗೆ ಪ್ರಕಟವಾದವು.

ಈ ಗ್ರಂಥಗಳ ಒಂದು ವೈಶಿಷ್ಟ್ಯವೆಂದರೆ ಈ ಗ್ರಂಥಗಳನ್ನು ಸ್ಮಾರ್ತ, ವೈಷ್ಣವರೆನ್ನದೆ ಇಡೀ ಬ್ರಾಹ್ಮಣ ಸಮಾಜವನ್ನು ದೃಷ್ಟಿಯಲ್ಲಿ ಇರಿಸಿಕೊಂಡು ಪ್ರಕಟಿಸಿದ, ಸರ್ವಜನ ಗ್ರಾಹ್ಯವಾದ ಗ್ರಂಥಗಳು. ಅಷ್ಟಮಠೀಯರಿಗೆ, ಮತತ್ರಯರಿಗೆ, ಸ್ವರಸಹಿತ, ಸ್ವರರಹಿತ, ಪ್ರತಿಪದಾರ್ಥ ತಾತ್ಪರ್ಯ ಪುನಶ್ಚರಣ ವಿಧಿಸಹಿತ, ಕಿತ್ತನಾರು ಬೈಂಡಿನಲ್ಲಿ, ಸಾಮಾನ್ಯ ಬೈಂಡಿನಲ್ಲಿ ಕನ್ನಡ ತಾತ್ಪರ್ಯ

ಸಹಿತ, ರಹಿತ, ಮರಾಠಿ ಲಿಪಿಯಲ್ಲಿ ಮೂಲ ಹಾಗೂ ವ್ಯಾಖ್ಯಾನಗಳ ಸಹಿತ, ನಾಮವಳಿ ಸಹಿತ ಕೆಲವು ಗ್ರಂಥಗಳನ್ನು, ಋಗ್ವಜುಸ್ಸಾಮಶಾಖೀಯ, ಋಷಿಚ್ಛಂದಸ್, ಪವಮಾನಬಲಿ, ಅನ್ವಾಧಾನ, ಹೋಮವಿಧಿ ಸಹಿತ, ಸಾರ್ಥಕಥಾ ಸಹಿತ, ಗೌಡಸಾರಸ್ವತ ಬ್ರಾಹ್ಮಣ ಸಮಾಜದವರಿಗೂ ಉಪಯುಕ್ತವಾದ ಜ್ಞಾನಭಂಡಾರವನ್ನು, ಚಿಕ್ಕ ಹಾಗೂ ದೊಡ್ಡ ಹೊತ್ತಿಗೆಗಳಲ್ಲಿ, ಕನ್ನಡ ಲಿಪಿಯಲ್ಲಿ, ಶುದ್ಧ ರೂಪದಲ್ಲಿ, ಆಕರ್ಷಕ ದಪ್ಪ ಅಕ್ಷರಗಳಲ್ಲಿ ಮುದ್ದಾಗಿ ಪ್ರಕಟಿಸಿ ಸಾಮಾನ್ಯನ ಕೈಗೂ ಎಟುಕುವಂಥ ಬೆಲೆಯನ್ನು ಇರಿಸಿರುವುದು. The price should be cheap but not the matter -ಎಂದು ಗುರುರಾಯರು ಆಗಾಗ್ಗೆ ಹೇಳುತ್ತಿದ್ದರು. ಅವರು ಮುಟ್ಟಿದ್ದು ಚೊಕ್ಕಬಂಗಾರ, ಕೊಟ್ಟಿದ್ದು ಚೊಕ್ಕಬಂಗಾರ, ಈ ಮಾತಿಗೆ ಕಾಲವು ತೀರ್ಪು ನೀಡಿದೆ.

ಇಂದು ಈ ಗ್ರಂಥಗಳಲ್ಲಿ ಅನೇಕ ಗ್ರಂಥಗಳು ದೊರಕುತ್ತಿಲ್ಲ. ಹಲವು ಗ್ರಂಥಗಳು ಹತ್ತಾರು ಮುದ್ರಣಗೊಂಡು ತೀರಿಹೋಗಿವೆ. ಇವುಗಳಲ್ಲಿ ಉದಾಹರಣೆಗೆ ಒಂದು ಗ್ರಂಥದ ಬಗೆಗೆ ಹೇಳುವುದಾದರೆ-ಗುರುರಾಯರು ಪ್ರಕಟಿಸಿದ ಸ್ತೋತ್ರಮಂಜರಿ. ಈ ಗ್ರಂಥವು ಪಾರಾಯಣಕ್ಕೆ ಅನುಕೂಲಿಸುವಂತೆ ಸುಂದರವಾಗಿ ಮುದ್ದಾಗಿ ಮುದ್ರಿತವಾಗಿರುವ ಒಂದು ಬೃಹತ್ ಗ್ರಂಥ. ಇದರಲ್ಲಿ ೨೬೦ ಸ್ತೋತ್ರಗಳಿವೆ ೬೫೦ ಪುಟಗಳಿವೆ ಅದು ೧೯೬೬ರಲ್ಲಿ ಕೊನೆಯ ಬಾರಿಗೆ ಮೂರನೆಯ ಮುದ್ರಣ ಕಂಡಿತು. ಅದರ ಬೆಲೆ ಅಂದು ಕೇವಲ ೩-೫೦ ರೂಪಾಯಿ. ಈಗ ಅದರ ಹತ್ತರಷ್ಟು ಬೆಲೆ ಕೊಟ್ಟರೂ ದೊರಕುವುದಿಲ್ಲ. ಅತ್ಯಂತ ಅಮೂಲ್ಯವಾದ ಈ ಸ್ತೋತ್ರಮಂಜರಿಯನ್ನು ಪಡೆದವರು, ಇದನ್ನು ಒಂದು ಅಮೂಲ್ಯ ನಿಧಿಯೆಂದು ಭಾವಿಸಿ, ಜತನದಿಂದ ಕಾಪಾಡಿಕೊಂಡು ಬಂದಿದ್ದಾರೆ.

೧೧

ಶ್ರೀ ಗುರುರಾಯರು ಕೈಗೊಂಡ ಸಿದ್ಧಿಪ್ರಸಿದ್ಧಿಗಳನ್ನು ಪಡೆದ ಇನ್ನೊಂದು ಪ್ರಕಾರದ ಸಾಹಿತ್ಯ-ಜನಪದ ಸಾಹಿತ್ಯ. ಇದರಲ್ಲಿ ಹೆಣ್ಣು ಮಕ್ಕಳ ಹಾಡುಗಳು, ಯಕ್ಷಗಾನ ಪ್ರಸಂಗಗಳು-ಎಂದು ಎರಡು ಭಾಗ ಮಾಡಬಹುದು. ಈ ಬಗೆಯ ಹಾಡುಗಳು, ಅವರ ಕಾಲದವರೆಗೂ ಶಿಷ್ಟರಿಂದ ಸಾಹಿತ್ಯವೆಂದು ಅನಿಸಿಯೇ ಇರಲಿಲ್ಲ. ಇವುಗಳನ್ನು ಶುದ್ಧ ಸಾಹಿತ್ಯ ವಿಮರ್ಶಕರು ಸಾಹಿತ್ಯವೆಂದು ಸ್ವೀಕರಿಸಿರಲಿಲ್ಲ. ಹೀಗಾಗಿ ಇವು ಕೇವಲ ಬಾಯಿ ಇಲ್ಲವೇ ಒಬ್ಬರಿಂದ ಒಬ್ಬರಿಗೆ ಪ್ರಚಾರದಲ್ಲಿ ಉಳಿದಿತ್ತು; ಯಕ್ಷಗಾನ ಹಾಡುಗಳ ಸಾಹಿತ್ಯವಾದರೂ ಭಾಗವತರ ಬಾಯಲ್ಲಿ ನೆಲೆಸಿತ್ತು; ಅರ್ಥಧಾರಿಗಳ ಸ್ಮರಣೆಯಲ್ಲಿ ಉಳಿದಿದ್ದವು. ಮುದ್ದಣನಂಥವನೂ ರತ್ನಾವಳಿ ಕಲ್ಯಾಣವೆಂಬ ಯಕ್ಷಗಾನವನ್ನು ರಚಿಸಿದ್ದ. ಅದನ್ನು ಪ್ರಕಟಿಸುವ ಸಾಹಸ ಧೈರ್ಯ ಗುರುರಾಯರ ಕಾಲದವರೆಗೆ ಯಾರಿಗೂ ಬಂದಿರಲಿಲ್ಲ. ಸಾಹಿತ್ಯವೇ ಅಲ್ಲವೆಂದು ಜರೆಯುತ್ತಿದ್ದವರಿಗೆ ಓದುಬರಹ ಬಾರದ ಹೆಣ್ಣು ಮಕ್ಕಳ ನಾಲಿಗೆಯಲ್ಲಿ ಮಾತ್ರ ಹಾಡಾಗಿ ಉಳಿಯುತ್ತಿದ್ದ ಮಾತುಗಳು ಗ್ರಂಥರೂಪ ನೋಡುವುದು ಮೂರ್ಖತನದ ಪರಮಾವಧಿ ಎಂದು ಅಂದಿನ ವಿದ್ಯಾವಂತ ಜನ ತಿಳಿದಿದ್ದರು. ಹಿಮಗಡ್ಡೆಯ ಈ ಕುರುಡು ನಂಬಿಕೆಯನ್ನು ಒಡೆದು ಅದರ ಅಡಿಯಲ್ಲಿದ್ದ ನಿರ್ಮಲ ಶೀತೋದಕವನ್ನು ಆಸ್ತಿಕರ ಹೃನ್ಮನಗಳಿಗೆ ಗಂಗಾಜಲ ಪೀಯೂಷವಾಗಿ ನೀಡಿದವರು ಪಾವಂಜೆ ಗುರುರಾಯರು.

ಈ ಬಗ್ಗೆ ಶ್ರೀಪತಿ ಆಚಾರ್ಯರು ಹೀಗೆ ಬರೆದಿದ್ದಾರೆ-

"ಗುರುರಾಯರು ಕನ್ನಡ ಜನತೆಗೆ ಅವರು ನಾಡಿಗರಿರಲಿ, ಹೊರ ನಾಡಿಗರಿರಲಿ, ಮಾಡಿದ ಮಹೋಪಕಾರವೆಂದರೆ ದುರ್ಲಭವಾದ ದಾಸರ ಕೀರ್ತನೆಗಳನ್ನೂ ಕಲೆಹಾಕಿ ಅಚ್ಚುಗೊಳಿಸಿ ಪ್ರಕಾಶಪಡಿಸಿದರು. (ಹರಿದಾಸ ಸಾಹಿತ್ಯಕ್ಕೆ ಹೇಳಿದ ಈ ಮಾತುಗಳು ಜನಪದ ಸಾಹಿತ್ಯದ ಇತರ ಹಾಡುಗಬ್ಬಗಳಿಗೂ ಅನ್ವಯಿಸುತ್ತದೆ) ಇದಕ್ಕಾಗಿ ಮಹತ್ತರಸಾಧನೆಯನ್ನು ಅವರು ಕೈಗೊಳ್ಳಬೇಕಾಯಿತು. ಉಡುಪಿಯ ಪರ್ಯಾಯ ಜಾತ್ರ ಮತ್ತಿತರ ಉತ್ಸವಗಳಿಗೆ ಯಾತ್ರೆ ಬರುವ ಕನ್ನಡತಿಯರನ್ನು ಮನೆಗೆ ಕರೆಯಿಸಿಕೊಂಡು ಅವರ ಊಟೋಪಚಾರಗಳ ಹೊಣೆ ಹೊತ್ತು ಅವರ ಬಾಯಿಂದ ಹೊಮ್ಮಿ ಬರುವ ಕೀರ್ತನೆಗಳನ್ನು ತಮ್ಮ ಮಕ್ಕಳಾದ ಮಂದಾಕಿನಿ ಮತ್ತು ಭಾರತಿ ಯವರಿಂದ ಬರೆಯಿಸುತ್ತಿದ್ದರು. ಅವುಗಳಲ್ಲಿ ಅನೇಕ ಪದಗಳು ಗತಚರಣಗಳು. ಕೆಲವು ಮುತ್ತಿನಷ್ಟು ಸ್ಪಷ್ಟಾಕ್ಷರದವುಗಳು. ಅವುಗಳನ್ನೆಲ್ಲ ಪರಿಶುದ್ಧಗೊಳಿಸಿ, ರಾಗತಾಳಗಳನ್ನು ಸಂಯೋಜಿಸಿಮುದ್ರಣಗೊಳಿಸಿಪ್ರಕಟಣೆಗಳಿಗೆಅಳವಡಿಸುತ್ತಿದ್ದರು. ಅಂಥ ಸಾವಿರಾರು ಪದಗಳನ್ನು ಸಂಗ್ರಹಿಸಿ ರಾಗ ತಾಳ ಸಂಯೋಜನೆಯಿಂದ ಪ್ರಕಾಶ ಪಡಿಸಿ ಕೀರ್ತಿಪಾತ್ರರಾದರು ಗುರುರಾಯರು."

ಗುರುರಾಯರು ಕೆಲವು ವಿಷಯಗಳಲ್ಲಿ ಗಂಡಿನ ಗುಂಡಿಗೆಯವರಾದರೂ, ಮತ್ತೆ ಕೆಲವು ವಿಷಯದಲ್ಲಿ ಹೆಣ್ಣಿನ ಮಾರ್ದವತೆಯುಳ್ಳವರು. ಅವರು ನೋಡಲು ಗಂಡಿನ ಗಂಭೀರತೆಯ ನಿಷ್ಠುರ ಮಾತಿನ ಮುಖವಾಡ ಹಾಕಿದ್ದರೂ, ಹೃದಯ ಮಾತ್ರ ಹೆಣ್ಣಿನದು. ಅವರ ಮನಸ್ಸು ಯಾವಾಗಲು ಮೆದು. ಕಷ್ಟದಲ್ಲಿರುವವರನ್ನು ಕಂಡರೆ ಕರಗಿ ಹೋಗುತ್ತಿತ್ತು. ನಮ್ಮ ಹೆಣ್ಣು ಮಕ್ಕಳು ವಿದ್ಯಾವತಿ ಯರಾಗಬೇಕೆಂದು ಹಂಬಲಿಸುತ್ತಿದ್ದರು. ಅವರು ಶಿಕ್ಷಣ ಪಡೆದರೆ ಇಡೀ ಕುಟುಂಬವೇ ಶಿಕ್ಷಣ ಪಡೆದಂತೆ ಎಂಬ ಗಾಂಧೀಜಿ ಮಾತು ಅವರಿಗೆ ಬಹಳ ಪ್ರಿಯ. ತಮ್ಮ ಮಕ್ಕಳನ್ನು ಗಾಂಧೀ ವಿಚಾರಧಾರೆಯಲ್ಲೇ ಬೆಳೆಸಿದ್ದರು; ಅವರಿಗೆ ಸ್ವಾತಂತ್ರ್ಯ, ಸಮಾನತೆ, ಆರ್ಥಿಕ ಸ್ವಾತಂತ್ರ್ಯಗಳನ್ನು ಕೊಟ್ಟಿದ್ದರು.

ಗುರುರಾಯರಿಗೆ ಮೊದಲ ಪತ್ನಿಯಿಂದ ಒಂದು ಗಂಡು ಸಂತಾನವಾಗಿದ್ದರೂ, ಅದು ತೀರಿಕೊಂಡಿತ್ತು. ಉಳಿದ ನಾಲ್ವರು ಮಕ್ಕಳೂ ಹುಡುಗಿಯರೇ. ಇವರನ್ನೇ ಗಂಡು ಮಕ್ಕಳಂತೆ ತಿಳಿದು ಪ್ರೀತಿಯಿಂದ ಬೆಳೆಸಿ, ಶಿಕ್ಷಣ ಕೊಟ್ಟಿದ್ದರು.

"ಸಂಸಾರದಲ್ಲಿ ಮೊದಲ ಪತ್ನಿಯಿಂದ ಗಂಡು ಸಂತಾನವನ್ನು ಪಡೆಯುವ ಭಾಗ್ಯ ವಿಲ್ಲದಿದ್ದರೂ, ಪಡೆದ ಹೆಣ್ಣು ಮಕ್ಕಳನ್ನು ಮಿಕ್ಕ ಸಂಸಾರಿಗಳಂತೆ ರಾಯರು ಕಡೆಗಣಿಸಲಿಲ್ಲ. ಹೆಣ್ಣು ಮಕ್ಕಳಾದರೋ ಕರೆಯಲು ತಮಗೊಬ್ಬ ಅಣ್ಣನಿಲ್ಲದಿದ್ದುದರಿಂದ ಹೆತ್ತ ತಂದೆಯೇ ಅಣ್ಣನ ಮಮತೆಯನ್ನು ತೋರಿದ್ದರಿಂದ ಅವರೆಲ್ಲರೂ ಅಪ್ಪನನ್ನು ಅಣ್ಣನೆಂದೇ ಕರೆಯುವುದು ರೂಢಿಯಾಗಿ ಬಂತು. ಅಷ್ಟರಲ್ಲಿ ಕೈಹಿಡಿದ ಮೊದಲ ಮಡದಿ ವಿಧಿವಶರಾದಾಗ ಸಂಸಾರದ ಹೊರೆ ಭಾರವಾಯಿತು. ತನ್ನ ಸಂಸಾರದ ನಿರ್ವಹಣೆಗಾಗಿ ಮತ್ತು ಪುತ್ರಸಂತಾನಾ ಪೇಕ್ಷೆಯಾಗಿ ರಮಾದೇವಿ ಎಂಬ ಸತಿಯನ್ನು ವಿವಾಹವಾದರು.

ಹಾಡು ಪಾಡುವ ರೂಢಿ ಹೆಣ್ಣುಮಕ್ಕಳದು. ಹಾಡಿನ ಒಲವಿನಿಂದ ಗೆಲವು ಪಡೆದ

ರಾಯರಿಗೆ ಮತ್ತೈದು ಹೆಣ್ಣು ಮಕ್ಕಳು ಹುಟ್ಟಿ ಬಂದವು. ಮೊತ್ತವಾಗಿ ನವಕನ್ನೆಯರನ್ನು ಪಡೆದು ನವವಿಧಾತರೆನಿಸಿದ ಅವರಿಗೆ ತಮ್ಮ ಇಳಿವಯಸ್ಸಿನಲ್ಲಿ ಹೊಸ ದೃಷ್ಟಿಯೆರಡನ್ನು ದಯಪಾಲಿಸಿದ ನೆಂಬಂತೆ ಎರಡು ಗಂಡು ಸಂತಾನವನ್ನು ಪಡೆಯುವ ಭಾಗ್ಯವನ್ನು ಶ್ರೀದೇವರು ಕರುಣೆ ತೋರಿದನು."

ಹೀಗೆ ಗುರುರಾಯರ ಮನೆತುಂಬಾ ಹೆಣ್ಣು ಮಕ್ಕಳೇ-ಅವರ ಮಕ್ಕಳು, ಮೊಮ್ಮಕ್ಕಳು ತುಂಬಿದ್ದರು. ಇವರಿಗೆ ಶಿಕ್ಷಣ ಕೊಡಲು ಮುಂದಾಗಿದ್ದ ರಾಯರು, ಸಂಪ್ರದಾಯದಲ್ಲಿ ದೊರಕು ತ್ತಿದ್ದ ರೀತಿಯ ಶಿಕ್ಷಣವನ್ನು ಕೊಟ್ಟುದಲ್ಲದೆ, ಬೇರೆ ಶಿಕ್ಷಣ ಅಂದರೆ ಅಕ್ಷರಜ್ಞಾನ, ವ್ಯವಹಾರ ಜ್ಞಾನವನ್ನು ದೊರಕಿಸಿಕೊಟ್ಟರು. ಪರಂಪರಾಗತ ಶಿಕ್ಷಣದಿಂದ ಅವರ ಶೀಲ, ಚಾರಿತ್ರ್ಯ, ಧರ್ಮ ಶ್ರದ್ಧೆಗಳು ಬೆಳೆದು ಉತ್ತಮ ಮಾತೆಯರೂ, ಸತಿಯರೂ, ಸೋದರಿಯರೂ ಆಗಿ ಸಮಾಜದ ಅಂತಃಸ್ತತ್ವವನ್ನು ಬೆಳೆಸುವ, ಪೋಷಿಸುವ ಸನಾತನ ಸಂಸ್ಕೃತಿಯು ಬೆಳೆದು, ಅರಳುವುದೆಂದು ಅವರು ದೃಢವಾಗಿ ನಂಬಿದ್ದರು. ಹೀಗಾಗಿ ಹೆಣ್ಣು ಮಕ್ಕಳ ಸಲುವಾಗಿ ನೂರಾರು-ಅಲ್ಲ ಸಹಸ್ರಾರು ಹಾಡುಗಳನ್ನು ಅವರು ಸಂಗ್ರಹಿಸಿ, ಪುಸ್ತಕಗಳಾಗಿ ಕ್ರಮದಿಂದ ಪ್ರಕಟಿಸಿದರು. ಈ ಹಾಡುಗಳಲ್ಲಿ ನೀತಿ ಇದೆ, ಕಥೆ ಇದೆ, ಜೀವನಾನುಭವವಿದೆ, ಸಂಸ್ಕೃತಿಯ ಪೋಷಕ ದ್ರವ್ಯಗಳಿವೆ. ಒಟ್ಟಾರೆ ಭಾರತೀಯ ಕುಲನಾರಿಗೆ ಇರಬೇಕಾದ ಎಲ್ಲ ಸುಲಕ್ಷಣಗಳನ್ನೂ ಹಾಡಿನಲ್ಲಿ ತುಂಬಿ, ಕಥೆಯಾಗಿ ಹೇಳಿ, ಹಾಡಿ, ಹಾಡಿಸಿ ಆನಂದಿಸಿದ್ದಾರೆ ಗುರುರಾಯರು.

ಇವುಗಳನ್ನು ಅಪರೋಕ್ಷಜ್ಞಾನಿಗಳಾದ ದಾಸರ ಕೀರ್ತನೆಗಳು, ಉದಯರಾಗಗಳು, ತತ್ವಬೋಧಕ ಪುಸ್ತಕಗಳು, ಕೀರ್ತನೆಗಳು, ಹರಿಕಥೋಪಯೋಗ ಪುಸ್ತಕಗಳು, ಭಜನೆಗಳು ವಿವಾಹದ ಹಾಡುಗಳು, ಕಲ್ಯಾಣಗಳು, ವ್ರತಕಥೆಗಳ ಹಾಡುಗಳು, ಇತರ ಹಾಡಿನ ಪುಸ್ತಕಗಳಾಗಿ ವಿಂಗಡಿಸಿ ಪ್ರಕಟಿಸಿದರು. ಇವುಗಳಲ್ಲಿ ಆನಂದಾದ್ರೀಶರ ವೆಂಕಟೇಶ ಪಾರಿಜಾತ, ದೇವೀದಾಸ ವಿರಚಿತ ವೆಂಕಟೇಶ ಮಹಾತ್ಮೆ, ಏರಿವೆಂಕಟಕೃತ ಶ್ರೀನಿವಾಸ ಕಲ್ಯಾಣ, ವಾದಿರಾಜ ಯತೀಕೃತ ಲಕ್ಷ್ಮೀಶೋಭನ ಹಾಡು, ವರಾಹ ತಿಮ್ಮಪ್ಪನ ಲಕ್ಷ್ಮೀಕಲ್ಯಾಣ ಹಾಡು, ಭೀಮೇಶ ಕೃಷ್ಣನ ರತೀ ಕಲ್ಯಾಣ, ಶುಕ್ರವಾರದ ಹಾಡುಗಳು, ಹೆಳವನಕಟ್ಟೆ ಗಿರಿಯಮ್ಮನ ಚಂದ್ರಹಾಸನ ಕಥೆ ಹಾಡು, ಪುರಂದರದಾಸರ ಸುಧಾಮಚರಿತ್ರೆ ಹಾಡು -ಹೀಗೆ ನೂರಾರು ಹಾಡುಗಬ್ಬಗಳು ಪ್ರಕಟವಾಗಿ, ನಾಡಿನ ಗೃಹಿಣಿಯರಿಗೆ ಅನರ್ಘ್ಯರತ್ನಗಳಾಗಿ ದೊರೆತವು.

ಪಾವಂಜೆ ಗುರುರಾಯರು ಪ್ರಕಟಿಸಿದ ಉದಯರಾಗವು ಹಲವು ಭಾಗಗಳಾಗಿ ಹೊರ ಬಂದು, ಲಕ್ಷಾಂತರ ಪ್ರತಿಗಳು ಮಾರಾಟವಾಗಿ, ನಾಡಿನ ಎಲ್ಲ ಮನೆಗಳನ್ನು ಅಲಂಕರಿಸಿದವು. ವ್ರತದ ಹಾಡುಗಳು ಹಬ್ಬ ಹರಿದಿನಗಳಲ್ಲಿ ನೆರವಿಗೆ ಬಂದು, ಅವುಗಳನ್ನು ಅರ್ಥಗರ್ಭಿತವಾಗಿ ಮಾಡಿದವು.

ಹೆಣ್ಣು ಮಕ್ಕಳ ಸಲುವಾಗಿ ಗುರುರಾಯರು ಮಾಡಿದ ಸೇವೆ-ಪ್ರಕಟಿಸಿದ ಕೃತಿಗಳ ಬಗ್ಗೆ ಬರೆಯುವುದಾದರೆ, ಅದೇ ಒಂದು ಪ್ರೌಢ ಪ್ರಬಂಧದ ವಸ್ತುವಾಗುತ್ತದೆ. ಅಂತೆಯೇ ಅವರು ಯಕ್ಷಗಾನ ಸಾಹಿತ್ಯ ಪ್ರಕಟಣಾ ಪ್ರಪಂಚಕ್ಕೆ ನೀಡಿದ ನೆರವು ಇನ್ನೊಂದು ಪ್ರೌಢ ಪ್ರಬಂಧ ವಸ್ತುವಾಗಬಲ್ಲದು. ಈ ಕಡೆ ನಮ್ಮ ವಿದ್ವಾಂಸರು ಏಕೋ ಕಣ್ಣು ಹಾಯಿಸಿಲ್ಲ ಅಷ್ಟೆ.

ಪಾವಂಜೆ ಗುರುರಾಯರಿಗೆ ಮೊದಲಿನಿಂದಲೂ ಯಕ್ಷಗಾನ, ಬಯಲಾಟಗಳನ್ನು ಕಂಡರೆ, ತಾಳಮದ್ದಲೆ ಪ್ರಸಂಗಗಳೆಂದರೆ ಇಷ್ಟ. ತುಳುನಾಡಿನ ಗ್ರಾಮೀಣ ಸಂಸ್ಕೃತಿ ಇದರಲ್ಲಿ ಅಡಗಿದೆ ಎಂದು ಹೇಳುತ್ತಿದ್ದರು. ದೇಶದಲ್ಲಿ ಶಾಲೆಗಳಿಲ್ಲದ ಕಾಲದಲ್ಲಿ, ಶಿಕ್ಷಣದ ಸೌಕರ್ಯಗಳಾವುವೂ, ಮುದ್ರಣ ಯಂತ್ರ, ಪುಸ್ತಕಗಳು, ವೃತ್ತಪತ್ರಿಕೆಗಳು ಇವು ಯಾವುವೂ ಇಲ್ಲದಿದ್ದ ಕಾಲದಲ್ಲಿ ನಿರಕ್ಷರಸ್ಥರಾದ ಸಾಮಾನ್ಯ ಜನತೆಯನ್ನು ಸುಸಂಸ್ಕೃತರನ್ನಾಗಿ ಮಾಡಿದ್ದು ಈ ಯಕ್ಷಗಾನ ಕಲೆ ಎಂದು ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಒಂದೆಡೆ ಶಿಕ್ಷಣ, ಇನ್ನೊಂದೆಡೆ ಮನರಂಜನೆ-ಮತ್ತೊಂದೆಡೆ ಸಾಹಿತ್ಯ ಸಂಗೀತಗಳ ರಕ್ಷಣೆ, ಪೋಷಣೆಗಳನ್ನು ಒದಗಿಸಿದ, ಈ ಜನಪದ ಕಲೆಯನ್ನು ಅಳಿಯದಂತೆ ಉಳಿಸಿಕೊಳ್ಳಲು ಗುರುರಾಯರು ಅಹರ್ನಿಶಿ ದುಡಿದರೆಂದರೆ, ಅತಿಶಯೋಕ್ತಿಯೇನಲ್ಲ, ಅವರ ಪ್ರಯತ್ನದ ಫಲವಾಗಿ ಇಂದು ನೂರಾರು ಯಕ್ಷಗಾನ ಪ್ರಸಂಗಗಳು, ಸಾಹಿತ್ಯ ಗ್ರಂಥಗಳು ನಷ್ಟವಾಗದೆ ಉಳಿಯುವಂತೆ ಆಯಿತು. ಅಂದಿನ ಕಾಲದಲ್ಲಿದ್ದ ವಿದ್ಯಾವಂತರ ಅನಾದರ, ಈ ಕಲೆಗಳಿಗೆ ಬಂದಿದ್ದ ದುಃಸ್ಥಿತಿಯನ್ನು ಕುರಿತು ಹುರಳಿ ಭೀಮರಾಯರು ತಮ್ಮ ಒಂದು ಲೇಖನದಲ್ಲಿ ಮಾರ್ಮಿಕವಾಗಿ ಬರೆದಿದ್ದಾರೆ.

ಆ ಕಾಲದಲ್ಲಿ ಸಂಸ್ಕೃತ ಜನತೆಗೆ ಮನರಂಜನೆ ಒದಗಿಸುತ್ತಿದ್ದ ನಾಟಕಗಳ ಬಗ್ಗೆ ಅವರು ಹೀಗೆ ಬರೆದಿದ್ದಾರೆ-

"ನಮ್ಮೂರಿಗೆ (ಉಡುಪಿಗೆ) ಪ್ರಪ್ರಥಮವಾಗಿ ನಾಟಕದ ಕ್ರಮ ಸ್ವಾರಸ್ಯಗಳನ್ನು ತೋರಿಸಿಕೊಟ್ಟವರು ಮಂಗಳೂರಿನ ಸುಪ್ರಸಿದ್ಧ ಕೀರ್ತನಕಾರ ದಿವಂಗತ ಶ್ರೀನಾರಾಯಣಭಟ್ಟರು. ಅವರು ಕಟ್ಟಿದ್ದು ಮರಾಠಿ ಸಂಸ್ಥೆ ; ಕೆಲವು ವರ್ಷಗಳ ಬಳಿಕ ಕುಮಟಾ ಪ್ರಾಂತ್ಯದ ಇನ್ನೊಂದು ಮರಾಠಿ ಸಂಸ್ಥೆಯೂ ಇತ್ತ ಬಂತಾದರೂ ಮರಾಠಿ ಅರಿಯದ ನಮ್ಮ ಜನರ ಮೇಲೆ ಅವರಿಂದ ಅಷ್ಟಾಗಿ ಪರಿಣಾಮವಾಗಲಿಲ್ಲ ; ಬಳಿಕ ೧೮೯೦ರ ಸುಮಾರಿಗೆ ಬಂತು ನಮ್ಮಲ್ಲಿಗೆ ಹಾಸನದಿಂದ ಒಂದು ನಾಟಕ ಮಂಡಲಿ. ಇದೇ ಇತ್ತ ಬಂದ ಪ್ರಥಮ ನಾಟಕ ಮಂಡಲಿ. ಎಲ್ಲಾ ವಿಷಯಗಳಲ್ಲಿಯೂ ಚೆನ್ನಾಗಿದ್ದು ಕನ್ನಡ ನಾಟಕಗಳನ್ನೂ ನೋಡಬೇಕೆಂಬ ಕುತೂಹಲವನ್ನು ಕೆರಳಿಸುತ್ತಿತ್ತು. ಇದರ ಬಳಿಕ ನಮ್ಮೂರು ಕಂಡ ಉತ್ತಮ ವರ್ಗದ ಎರಡು ನಾಟಕ ಸಂಸ್ಥೆ ಅಂದರೆ ನಮ್ಮ ನೆರೆಯ ಮೈಸೂರು ಸೀಮೆಯ ಮೇಗರವಳ್ಳಿಯ ಸಜ್ಜನಾಶ್ರಿತ ನಾಟಕ ಮಂಡಲಿ. ಇದರ ಪ್ರಯೋಗಗಳು ನಮ್ಮೂರಿನ ನಾಟಕಾಭಿಮಾನಿಗಳಲ್ಲಿ ಇದರ ಅನುಕರಣ ಸ್ಫೂರ್ತಿಯನ್ನು ತುಂಬಿದವು."

ಮುಂದೆ ಬಂದ ನಾಟಕ ಕಂಪನಿಗಳಲ್ಲಿ ಸಂಸ್ಕೃತ ವಿದ್ವಾಂಸರೂ, ಕೀರ್ತನಾಕಾರರೂ ಆಗಿದ್ದ ಶ್ರೀ ಕುಪ್ಪಣ್ಣಾಚಾರ್ಯರ ಕಂಪನಿ. ಉಪ್ಪರ ರಾಮಾಚಾರ್ಯರು ಪ್ರಧಾನ ಪಾತ್ರ ವಹಿಸುತ್ತಿದ್ದರು. ರಾಮಾಚಾರ್ಯರಂಥ ಪ್ರತಿಭಾಶಾಲಿಗಳಿಂದ ಗೌರವಿಸಲ್ಪಟ್ಟ ಕಲಾವಿದ ಇವರು. ಮಂಗಳೂರಿನ ಜನಾಬ್ ಸಾಹೇಬರು ಕನ್ನಡ ನಾಟಕಗಳಿಗೆ ಪ್ರಾಶಸ್ತ್ಯ ತಂದುಕೊಟ್ಟರು.

ನಮ್ಮೂರಿನ ನಾಟಕ ಸಂಸ್ಥೆಗಳು ಯಾವುದೇ ಇರಲಿ, ಎಷ್ಟೇ ಇರಲಿ ಹಿಂದೆ ಶ್ರೀ ಕಾರ್ಕಳ ನಾರಾಯಣ ಹೆಗ್ಗಡೆಯವರೊಡನೆಯೂ, ಬಳಿಕ ಇಲ್ಲಿಗೆ ಪರಿಚಿತರಾದ ಶ್ರೀ ನಾಗೇಶರಾಯರೊಡನೆಯೂ ಇದ್ದು ಮುಂದೆ ತಮ್ಮದೇ ನಾಟಕ ಸಂಸ್ಥೆ ಕಟ್ಟಿಕೊಂಡ ಶ್ರೀ ರಂಗನಾಥ ಭಟ್ಟರಿಗೆ,

ಅವರ ಸಂಸ್ಥೆಗೆ ಅಗ್ರ ತಾಂಬೂಲ ಸಲ್ಲಬೇಕು. ಅವರ ಸೇವೆ ಆ ರಂಗದಲ್ಲಿ ಬಹುದೊಡ್ಡದು."

*-(ಹುರಳಿ ಭೀಮರಾಯರು ; ರಾಷ್ಟ್ರಬಂಧು ೧೯೩೮)*

ಇನ್ನು ಜನ ಸಾಮಾನ್ಯರ ಮನರಂಜನೆಯನ್ನು ಕುರಿತು ಅವರು ಹೇಳಿರುವ ಮಾತು ಇದು-

"ಈ ಕಲೆ ಈಗೀಗ ಕ್ಷೀಣಿಸುತ್ತಿದೆ, ಕಲಾವಿದರ ಜೀವನ ಕಷ್ಟ ಜೀವನವಾಗಿ ಮಾರ್ಪಡುತ್ತಿದೆ. ಹಳೆಯ ಸಂಪ್ರದಾಯವನ್ನು ಒಂದೊಂದಾಗಿ ಕೈಬಿಡುತ್ತ ಬರುವ ಈ ಮನೋದೌರ್ಬಲ್ಯ ಅಧಿಕವಾಗುತ್ತಿದೆ. ಮನಸ್ಸಿಗೆ ಬಂದ್ದದ್ದೇ, ದುಡ್ಡಿಗೆ ಅನುಕೂಲವಾದ್ದೇ ಸುಧಾರಣೆ ಎನಿಸುತ್ತಿದೆ. ಕಲಾರಕ್ಷಣೆಯ ಗೊಡವೆ ಇಲ್ಲದೆ ಜನರಂಜನೆಯ ಮಾರ್ಗ ಮಾತ್ರ ಹುಡುಕಲಾಗುತ್ತಿದೆ. ಆಟದ ರಂಗಸ್ಥಳಗಳಲ್ಲಿ ಕೆಲವು ನಾಟಕದ ವೇಷ ಕುಣಿಯುತ್ತಿದೆ. ಡೇರೆ ಆಟಗಳಿಂದ ನರ್ತನ ಕಲೆ ಅಳಿಯುತ್ತ ಬಂದಿದೆ. ಭಾಷೆ ಮತ್ತು ಪುರಾಣ ಸಾಹಿತ್ಯಗಳ ಉಚಿತ ಪ್ರಚಾರ ಪ್ರದರ್ಶನ ಸಂಸ್ಥೆಗಳು ಕೆಲವು ಯಕ್ಷಗಾನದಂಥ ಪುರಾತನ ಕಲೆಯನ್ನು ಮಾರಿ ತಿನ್ನುವುದಕ್ಕೆ ಹಿಂಜರಿಯದೆ ಒಂದು ಸಂತೆಯ ರೂಪಕ್ಕೆ ತಿರುಗುತ್ತಿದೆ. ಪ್ರಸಂಗದ ಕಥೆಯ ಕಾಲ ಮತ್ತು ಕವಿಯ ಆಶಯವನ್ನು ನಿರ್ಲಕ್ಷಿಸಿ, ಪಾತ್ರಾಪಾತ್ರಗಳ ಇತಿಮಿತಿ ಮೀರಿ ಸೇಚ್ಛೆಯಿಂದ ಮಾತನಾಡುವ ಪದ್ಯದ ಅರ್ಥ ವಿವರಣೆ, ಸಭಾರಂಗವನ್ನು ವಾಗ್ಯುದ್ಧದ ಕಾಳಗವಾಗಿ ಮಾರ್ಪಡಿಸುವ, ವೈಯುಕ್ತಿಕ ಟೀಕಾಸ್ತ್ರಗಳನ್ನೆಸೆಯಲು ಹೇಸದ, ಸಂಬಂಧವಿಲ್ಲದೆ ರಾಜಕೀಯವನ್ನು ತಂದು ಹಾಕಿ ಗಂಟೆಗಟ್ಟಲೆ ಹರಟುವ ಈ ಹೇಯ ಪ್ರವೃತ್ತಿ ತಾಳಮದ್ದಲೆ ಕೂಟದ ಕೆಲವದರಲ್ಲಿ ಕಂಡು ಬಂದಿದೆ. ಯಕ್ಷಗಾನದ ಹೆಸರನ್ನಷ್ಟೇ ವ್ಯವಹಾರ ದೃಷ್ಟಿಯಿಂದ ನಿರ್ವಾಹವಿಲ್ಲದೆ ಉಪಯೋಗಿಸುತ್ತಿರುವಂತೆ ತೋರುತ್ತದೆ"- ಎಂದು ಭೀಮರಾಯರು ತಮ್ಮ ಕಾಲದ ಯಕ್ಷಗಾನ ಪ್ರಸಂಗಗಳನ್ನು ಕುರಿತು ಕಟುವಾಗಿ ಬರೆದಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಾವಂಜೆ ಗುರುರಾಯರ ತರೆಮಾರಿನವರು ಎಂಥೆಂಥ ಕಲಾವಿದರನ್ನು ಕಂಡಿದ್ದರು? ಈ ಜಿಲ್ಲೆಯಲ್ಲಿ ಎಂಥೆಂಥ ಕಲಾವಿದರು ಆಗಿಹೋಗಿದ್ದರು ; ಅದೊಂದು ಕಲೆಯ ಸುವರ್ಣ ಅಧ್ಯಾಯ. ಉಪ್ಪಳ್ಳಿ ಶೇಷಣ್ಣ ಅಭಿನಯ, ಗಣಪತಿ ಪ್ರಭುವಿನ ವೇಷಗಾರಿಕೆ, ವೀರಭದ್ರನಾಯಕನ ಕಲಾಭಿಜ್ಞತೆ, ತಾಳಮದ್ದಲೆಯಲ್ಲಿ ಅರ್ಥಗಾರನೆಂದು ಪ್ರಸಿದ್ಧಿ ಪಡೆದ ತೆಕ್ಕಟ್ಟೆ ಬಾಬಣ್ಣ ಶಾನುಭೋಗ, ಬಿರ್ತಿ ರಾಮಚಂದ್ರ ಶಾಸ್ತ್ರಿ, ಮಟ್ಪಾಡಿ ಕೃಷ್ಣಯ್ಯ ಶೆಟ್ಟಿ, ಶೇಷಗಿರಿ ಕಿಣಿ ಭಾಗವತ - ಹೀಗೆ ಹಲವಾರು ತಮ್ಮ ಪ್ರತಿಭೆಯಿಂದ, ಕಲಾ ತಪಸ್ಸಿನಿಂದ ಈ ಜಾನಪದ ಕಲೆಯನ್ನು ರಕ್ಷಿಸಿಕೊಂಡು ಬಂದಿದ್ದರು. ತಾವು ಬಾಲಕರಾಗಿದ್ದಾಗ ನೋಡಿದ್ದ ಈ ಯಕ್ಷಗಾನ ಕಲೆ, ಕೇರಳದಲ್ಲಿದ್ದಾಗ ಕಂಡು ಸಂತೋಷ ಪಟ್ಟ ಕಥಕ್ಕಳಿ, ಇದರಿಂದ ಸ್ಫೂರ್ತಿಗೊಂಡು, ಜನ ಸಾಮಾನ್ಯ ಉದ್ಧಾರಕ್ಕೆಂದೇ ಅದುವರೆಗೆ ಅಲಭ್ಯವಾಗಿದ್ದ ಎಲ್ಲ ಯಕ್ಷಗಾನ ಸಾಹಿತ್ಯವನ್ನು ಚಿಕ್ಕ ಚಿಕ್ಕ ಪುಸ್ತಕಗಳಾಗಿ ಪ್ರಕಟಿಸಿ ಉಪಕಾರ ಮಾಡಿದರು. ರಾಮಾಯಣ, ಮಹಾಭಾರತ, ಭಾಗವತ ಪುರಾಣಗಳಿಂದ ಆರಿಸಿಕೊಂಡು ಬರೆದ ಹಲವು ಪ್ರತಿಭಾವಂತ ಲೇಖಕರ ಗ್ರಂಥಗಳನ್ನು ಬೆಳಕಿಗೆ ತಂದರು. ಬಡಗುತಿಟ್ಟು, ತೆಂಕುತಿಟ್ಟು ಎಂದು ಭೇದಮಾಡದೆ, ಎಲ್ಲ ಶ್ರೇಷ್ಠ ಕೃತಿಗಳನ್ನೂ ಆಯ್ದು ಸುಲಭ ಬೆಲೆಯಲ್ಲಿ ದೊರಕುವಂತೆ ಮಾಡಿದರು. ಇವುಗಳ ಸಂಖ್ಯೆ ನೂರಕ್ಕೂ ಹೆಚ್ಚಾಗಿದ್ದು ಮುದ್ರಿತ ಪುಟಗಳು ಮೂರು ನಾಲ್ಕು ಸಹಸ್ರ ಪುಟಗಳಾಗಿವೆ ಎಂದರೆ ಅವರ ಕಾರ್ಯ ವ್ಯಾಪ್ತಿಯನ್ನು ನಾವು

ಊಹಿಸಬಹುದಾಗಿದೆ. ತಾವು ಕೃತಿಗಳನ್ನು ಬರೆಸಿ ಪ್ರಕಟಿಸುತ್ತಿದ್ದುದಲ್ಲದೆ, ಇತರರು ಪ್ರಕಟಿಸಿದ ಗ್ರಂಥಗಳನ್ನೂ ತಮ್ಮ ಅಂಗಡಿಯಲ್ಲಿ ಇಟ್ಟು ಮಾರಿ, ಕಲಾವಿದರಿಗೂ, ಲೇಖಕರಿಗೂ ಪ್ರೋತ್ಸಾಹ ನೀಡುತ್ತಿದ್ದರು. ಅವರು ಪ್ರಕಟಿಸಿದ ಹೆಚ್ಚು ಕೃತಿಗಳು ಈಗ ಅಲಭ್ಯವಾಗಿದ್ದರೂ, ಲವಕುಶರ ಕಾಳಗ, ವಿರಾಟಪರ್ವ, ಚಂದ್ರಹಾಸ ಚರಿತ್ರೆ, ಮೀನಾಕ್ಷಿ ಕಲ್ಯಾಣ, ಹರಿಶ್ಚಂದ್ರ ಚರಿತ್ರೆಗಳು ಜನಪ್ರಿಯವಾಗಿದ್ದು ಮತ್ತೆ ಮತ್ತೆ ಬೇಡಿಕೆ ಪಡೆಯುತ್ತಿದ್ದವು.

ಹೀಗೆ ಪಾವಂಜೆ ಗುರುರಾಯರು ಪಂಡಿತನಿಂದ ಪಾಮರನವರೆಗೆ, ವಿದ್ವಾಂಸನಿಂದ ನಿರಕ್ಷರಕುಕ್ಷಿಯ ತನಕ, ಸ್ತ್ರೀಪುರುಷ ಬಾಲವೃದ್ಧರೆನ್ನದೆ ಎಲ್ಲರಿಗೂ ಜ್ಞಾನ ದಾಹವನ್ನು ತಣಿಸುವ ಕೃತಿಗಳನ್ನು ಕನ್ನಡದಲ್ಲಿ ನೀಡಿದರು. ಶಾಸ್ತ್ರ ಗ್ರಂಥಗಳ ಸಾರವನ್ನು ಸ್ತೋತ್ರಗಳಾಗಿ, ಹಾಡುಗಳಾಗಿ, ಗುರುಮಂತ್ರ ಜಪಗಳಾಗಿ ಕೊಟ್ಟು ಅವರ ಜೀವನಕ್ಕೆ ಬೆಳಕನ್ನೂ, ಭರವಸೆಯನ್ನೂ, ಸಾರ್ಥಕತೆಯನ್ನೂ ತಂದು ಕೊಟ್ಟದ್ದಲ್ಲದೆ, ಅವರನ್ನು ಸನ್ಮಾರ್ಗಕ್ಕೆ ಹಚ್ಚಿ, ಆತ್ಮೋದ್ಧಾರ ಮಾಡಿಕೊಳ್ಳಲು ಕಾರಣರಾದರು. ಈ ದೃಷ್ಟಿಯಿಂದ ತಮ್ಮ ಕಾಲದ ಸ್ತ್ರೀ ಶಿಕ್ಷಣಕ್ಕೆ ಗುರುರಾಯರು ನೀಡಿದ ಕಾಣಿಕೆ, ಮಾಡಿದ ಸೇವೆ ಅತ್ಯಂತ ಅಮೋಘವಾದುದು ಎಂದು ಹೇಳಬಹುದು.

## ೧೨

ಇಂದು ಪಾವಂಜೆ ಗುರುರಾಯರ ಕೀರ್ತಿಯ ಕಳಶವಾಗಿ ನಿಂತಿರುವುದು ಅವರು ದಾಸ ಸಾಹಿತ್ಯಕ್ಕೆ ಮಾಡಿದ ಅನುಪಮ ಸೇವೆ. ಹರಿದಾಸ ಸಾಹಿತ್ಯವನ್ನು ಇತ್ಯೋಪತಿಶಯವಾಗಿ ಬೆಳೆಸಿದ, ಪ್ರಚಾರ ಮಾಡಿದ ಕೀರ್ತಿ ಅವರದು. ಪ್ರಾತಸ್ಮರಣೀಯರಲ್ಲಿ ಮೊದಲಿಗರು. ಹರಿದಾಸ ಸಾಹಿತ್ಯ ಪ್ರವರ್ತಕರಲ್ಲಿ ಒಬ್ಬರು. ಧ್ರುವತಾರೆಯಂತೆ ಕುಂದದ ತೇಜಸ್ಸಿನಿಂದ ಅವರು ಮಾಡಿದ ಕೆಲಸವು ಇಂದಿಗೂ ಹೊಳೆಯುತ್ತಿದೆ. ಮುಂದಿನ ಎಲ್ಲರಿಗೂ ದಾರಿದೀಪವಾಗಿ ಅವರ ಕೃತಿಗಳು ಮೊದಲಾಗಿತ್ತಿಯ ಲಾವಣ್ಯ, ಸೌಂದರ್ಯ, ಸುಭಗತೆ ಮತ್ತು ಮುಗ್ಧತೆಗಳಿಂದ ಮೆರೆಯುತ್ತಿದೆ. ಪಾವಂಜೆಯವರ ಕೃತಿಗಳ ಬಗ್ಗೆ ಬಂದ ಒಂದು ಆಕ್ಷೇಪಣೆಯನ್ನು ಈಗಲೇ ಹೇಳಿ ಮುಗಿಸಬಹುದು. ಅವರ ಕೃತಿಗಳು ಅಶುದ್ಧ ರೂಪದಲ್ಲಿವೆ, ಅಪೂರ್ವವಾಗಿದೆ, ಅಂಕಿತಗಳ ಮಿಶ್ರಣವಾಗಿದೆ. ಹಲವು ದಾಸರ ಕೃತಿಗಳಲ್ಲಿ ಅಂಕಿತ ಪಲ್ಲಟವಾಗಿದೆ ಎಂದೆಲ್ಲ ಹೇಳುವುದುಂಟು. ಆದರೆ ಪಾವಂಜೆ ಗುರುರಾಯರು ಈ ಸಾಹಿತ್ಯವನ್ನು ಸಂಗ್ರಹಿಸುವಾಗ ಇದ್ದ, ಅಡ್ಡಿ ತಡೆಗಳನ್ನು ಗಮನಿಸಬೇಕಾಗಿದ್ದು ಅಗತ್ಯ, ಆಗಿನ್ನೂ ಈ ದಾಸಸಾಹಿತ್ಯ ಕೃತಿಗಳು ಅಚ್ಚಿನ ಮುಖ ಕಂಡಿರಲಿಲ್ಲ, ಗ್ರಂಥಗೊಳಿಸಲ್ಪಟ್ಟಿರಲಿಲ್ಲ. ಕೇವಲ ಹೆಣ್ಣು ಮಕ್ಕಳ ನಾಲಿಗೆ ಮೇಲೆ, ಹರಿದಾಸರ ತುಟಿಗಳಲ್ಲಿ ಮಾತ್ರ ನಲಿಯುತ್ತಿದ್ದವು. ಬಾಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಸಂಪ್ರದಾಯ ಬದ್ಧವಾಗಿ ಹರಿದು ಬಂದಿದ್ದ ಹಾಡುಗಬ್ಬವಾಗಿತ್ತು. ದೇಶಕಾಲ ಸಂಪ್ರದಾಯಗಳಿಗೆ ಸಿಕ್ಕಿ ವಿರಪೂಗೊಂಡಿದ್ದವು, ಕುರೂಪಗೊಂಡಿದ್ದವು. ಇವುಗಳನ್ನು ಬರಹ ಕಾಣದಿದ್ದ ಈ ಸಾಹಿತ್ಯ ರಾಶಿಯನ್ನು ಪ್ರಥಮ ಬಾರಿಗೆ ಬರೆದುಕೊಂಡು, ತಾಳೆನೋಡಿ, ಶುದ್ಧ ಪಾಠ ನಿರ್ಣಯಿಸುವುದು ಕಷ್ಟ ಸಾಧ್ಯವಾಗಿತ್ತು. ಆ ಕಾಲದಲ್ಲಿ, ಶುದ್ಧರೂಪ ದೊರಕುವವರೆಗೆ ನೋಡುತ್ತಾ ಕುಳಿತಿದ್ದರೆ ಯಾವ ದಾಸರ ಯಾವ

ಕೃತಿಗಳೂ ಪ್ರಕಟವಾಗುತ್ತಿರಲಿಲ್ಲ. ಜನ ಸಾಮಾನ್ಯರ ಕೈಗೆ ಲಭ್ಯವಾಗುತ್ತಿರಲಿಲ್ಲ. ಇಂಥ ಪ್ರತಿಕೂಲ ಪರಿಸ್ಥಿತಿಯಲ್ಲಿ ಅವರು ಅಳಿದುಳಿದ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ, ಗ್ರಂಥಸ್ಥಗೊಳಿಸಿ ಉಳಿಸಲು ಸಂಕಲ್ಪಮಾಡಿದ್ದು ದೊಡ್ಡ ಸಾಹಸ. ಮೊದಲು ಕರಡು ಪ್ರತಿ, ಮೂಲ ಸಾಮಗ್ರಿ ಸಿದ್ಧವಾದರೆ, ಪರಿಷ್ಕೃತ ಸಿದ್ಧ ಪ್ರತಿಯನ್ನು, ರಸದಡಿಗೆಯನ್ನು ಯಾರಾದರೂ ತಯಾರಿಸಬಹುದೆಂದು ಮುಂದಾಲೋಚನೆಯಿಂದ ಗುರುರಾಯರು ತಮಗೆ ದಾಸರ ಕೃತಿಗಳು ದೊರೆತಂತೆಲ್ಲ, ಒಂದು ಎರಡು ಮೂರು - ಹೀಗೆ ಭಾಗಗಳಾಗಿ, ಪ್ರಥಮ ದ್ವಿತೀಯ ತೃತೀಯ ಮುದ್ರಣಗಳಲ್ಲಿ ಸೇರಿಸುತ್ತಾ, ಉತ್ತಮಪಡಿಸುತ್ತಾ ಬಂದರು. ಹೀಗಾಗಿ ಪುರಂದರದಾಸರ ಕೃತಿಗಳು ಐದುಸಹಸ್ರ ಪುಟಗಳಲ್ಲಿ ದೊರೆಯುವಂತಾಯಿತು. ಶ್ರೀಪಾದರಾಜ ರಿಂದ ಆರಂಭಿಸಿ, ಇತ್ತೀಚಿನ ಪ್ರಾಣೇಶದಾಸರವರೆಗೆ ಕರ್ನಾಟಕದ ಎಲ್ಲ ಹರಿದಾಸರ ಕೃತಿಗಳು ಒಂದೆಡೆ ಸಮಗ್ರವಾಗಿ ಸಜ್ಜನರಿಗೆ ದೊರಕುವಂತೆ ಆದುದು ಪಾವಂಜೆ ಗುರುರಾಯರ ಪ್ರಯತ್ನದಿಂದಲೇ ಎಂಬ ಮಾತನ್ನು ಯಾರೂ ಮರೆಯುವಂತಿಲ್ಲ.

ಈ ಎಲ್ಲ ಹರಿದಾಸ ಸಾಹಿತ್ಯವನ್ನು ಅವರು ಸಂಗ್ರಹಿಸಲು ಪಟ್ಟಪಾಡು ಅಷ್ಟಿಷ್ಟಲ್ಲ. ಅವರ ಅನುಭವಗಳನ್ನು ಈ ಹಿಂದೆ ನೋಡಿದರೆ ಈ ಕೃತಿಗಳ ಸಂಗ್ರಹಕ್ಕೆ ನೆರವಾದವರು ಒಬ್ಬಿಬ್ಬರಲ್ಲ; ನಾಡಿನ ಹಲವರು ಈ ಕೃತಿಕನ್ನಿಕೆಯ ದಿಬ್ಬಣಕ್ಕೆ, ಶೃಂಗಾರಕ್ಕೆ, ಒಪ್ಪು ತಪ್ಪುಗಳನ್ನು ತಿದ್ದುವುದಕ್ಕೆ ನೆರವಾದರು. ಅಂಥವರಲ್ಲಿ ಪಾವಂಜೆ ಗುರುರಾಯರು ಹಲವು ಮಹನೀಯರನ್ನು ತಮ್ಮ ದಾಸ ಸಾಹಿತ್ಯದ ಸಂಪುಟಗಳಲ್ಲಿ ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಕೆಲವು ಗ್ರಂಥಗಳನ್ನು ತಾವೇ ಪರಿಷ್ಕರಿಸಿ ಪ್ರಕಟಿಸಿದ್ದರೆ, ಮತ್ತೆ ಕೆಲವು ಕೃತಿಗಳ ಪರಿಷ್ಕರಣಕ್ಕೆ ನಾ.ಭೀಮರಾವ ಕಲಮದಾನಿಯವರ ಸಹಾಯವನ್ನು, ಶ್ರೀಪಾದದಾಸ ಹಂಡೆಯವರ ನೆರವನ್ನೂ ಪಡೆದಿದ್ದಾರೆ. ಅಲ್ಲದೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ತಮಗೆ ತಮ್ಮ ಸಂಗ್ರಹದಿಂದ ದಾಸರ ಕೃತಿಗಳನ್ನು ಬರೆದು ಕಳುಹಿಸಿದ ಎಲ್ಲ ಮಿತ್ರರ ಸಹಾಯ ಹಾಗೂ ಸಹಕಾರಗಳನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಹರಿಕಥಾಮೃತಸಾರವನ್ನು ಶ್ಯಾಮಸುಂದರ ವಿಠಲಾಂಕಿತ ಗುಂಡಾಚಾರ್ಯರಿಂದ ಪರಿಷ್ಕರಿಸಿದಂತೆ ತಿಳಿಯುತ್ತದೆ.

ಇವರು ಪ್ರಕಟಿಸಿದ ದಾಸಸಾಹಿತ್ಯದ ಒಂದು ಸಮೀಕ್ಷೆ ಮಾಡುವುದಾದರೆ ಕೆಲವು ಪ್ರಮುಖ ಅಂಶಗಳು ಹೊರಪಡುತ್ತದೆ.

೧) ಪುರಂದರ ದಾಸರ ಕೀರ್ತನೆಗಳು ; ಐದು ಸಂಪುಟಗಳಲ್ಲಿ ಪ್ರಕಟವಾಯಿತು. ಮೊದಲ ಸಂಪುಟ ಪ್ರಕಟವಾದದ್ದು ೧೯೧೭ರಲ್ಲಿ, ಎರಡನೆ ಮುದ್ರಣವಾದುದು ೧೯೩೯ರಲ್ಲಿ. ಈ ಅವಧಿಯಲ್ಲಿ ದೊರೆತ ಕೃತಿಗಳ ಸಂಖ್ಯೆ ೯೮೩ ; ಅಚ್ಚಾದ ಪುಟಗಳ ಸಂಖ್ಯೆ ೫೪೯.

೨) ವಾದಿರಾಜರು ; ಪ್ರಥಮ ಭಾಗ ೧೯೨೦ರಲ್ಲಿ ಪ್ರಕಟವಾಯಿತು. ಕೃತಿಗಳ ಸಂಖ್ಯೆ ೧೫೨, ಪ್ರಕಟಿತ ಪುಟಗಳು ೧೦೭.

೩) ಕನಕದಾಸರು ; ೧೯೧೮ರಲ್ಲಿ ಪ್ರಕಟವಾಯಿತು. ಪ್ರಥಮ ಭಾಗದ ಕೃತಿ ಸಂಖ್ಯೆ ೧೫೨, ಪುಟಗಳು, ೧೬೨.

೪) ವಿಜಯಾದಸರ ದೇವರನಾಮ ; ಎರಡು ಭಾಗಗಳಲ್ಲಿ ೧೯೧೮-೨೯ರಲ್ಲಿ ಪ್ರಕಟವಾಯಿತು. ಒಟ್ಟು ಕೃತಿಗಳು ೧೬೦, ಪುಟಗಳು ೧೯೯.

೫) ವಿಜಯದಾಸರ ಸುಳಾದಿಗಳು ; ಎರಡು ಭಾಗಗಳಲ್ಲಿ ೧೯೨೯ರಲ್ಲಿ ಪ್ರಕಟವಾದವು; ಕೃತಿಗಳ ಸಂಖ್ಯೆ ೩೧೬, ಪ್ರಕಟಿತ ಪುಟಗಳು ೧೨೯.

೬) ಗೋಪಾಲದಾಸರ ಕೃತಿಗಳು ; ಪ್ರಕಟಣೆ ೧೯೨೩; ಕೃತಿಗಳು ೧೦೦; ಪುಟಗಳು ೧೦೬.

೭) ಜಗನ್ನಾಥ ದಾಸರ ಕೃತಿಗಳು ; ಪ್ರಕಟಿತ ವರ್ಷ ೧೯೧೯, ಕೃತಿ ಸಂಖ್ಯೆ ೧೩೨; ಪುಟಗಳು ೧೫೮.

೮) ದಾಸರಪದಗಳ ಸಂಗ್ರಹ; ಮೂರು ಭಾಗಗಳಲ್ಲಿ ೧೯೨೬-೪೩ ರಲ್ಲಿ ಪ್ರಕಟವಾದವು; ಕೃತಿಗಳ ಸಂಖ್ಯೆ ೩೧೪; ಪುಟಗಳು ೫೬೨.

ಇವಲ್ಲದೆ ಪುರಂದರದಾಸರ ಸುಳಾದಿಗಳು, ಉಗಾಭೋಗಗಳು (ಎರಡು ಭಾಗ) ಮೋಹನದಾಸರ ಕೋಲುಹಾಡು, ವಾದಿರಾಜರ ಭ್ರಮರಗೀತೆ, ಗುಂಡಕ್ರಿಯೆ, ಸ್ವಪ್ನಪಾದ, ಕನಕದಾಸರ ಹರಿಭಕ್ತಿಸಾರಗಳೂ ಪ್ರಕಟವಾಗಿದೆ. ಅಲ್ಲದೆ ದಾಸರ ಪದಗಳು, ಮನೋರಂಜನ ಪದಗಳು, ತುಲಸೀ ಸಂಕೀರ್ತನೆ - ಹೀಗೆ ಹಲವು ರೀತಿಯ ಕೃತಿಗಳನ್ನು ಹರಿದಾಸ ಸಾಹಿತ್ಯ ವಿಭಾಗದಲ್ಲಿ ಪ್ರಕಟಿಸಿ ಗುರುರಾಯರು ನಾಡಿನ ಜನತೆಗೆ ಉಪಕಾರ ಮಾಡಿದ್ದಾರೆ.

ಪಾವಂಜೆ ಗುರುರಾಯರು ತಾವು ಪ್ರಕಟಿಸಿದ ಈ ಗ್ರಂಥಗಳಲ್ಲಿ ಕೆಲವಕ್ಕೆ ಹರಿದಾಸರ ಜೀವನ ಹಾಗೂ ಸಾಧನೆಗಳ ಪರಿಚಯಾತ್ಮಕ ಲೇಖನಗಳನ್ನೂ ಬರೆದು, ಬರೆಸಿ ಪ್ರಕಟಿಸಿದ್ದಾರೆ. ಇವುಗಳಲ್ಲಿನ ಲೇಖನಗಳಿಂದ ಪಾವಂಜೆ ಗುರುರಾಯರ ಗದ್ಯಶೈಲಿ, ಅವರ ಜೀವನ ಶ್ರದ್ಧೆ, ನಂಬಿಕೆಗಳು, ಈ ಕೃತಿಗಳ ಪ್ರಚಾರದ ಹಿಂದೆ ಇದ್ದ ಅವರ ಕಳಕಳಿ- ಇವೆಲ್ಲವೂ ಸೂಕ್ಷ್ಮವಾಗಿ ತಿಳಿದು ಬರುತ್ತದೆ. ಅವರ ಕೆಲವು ಗ್ರಂಥಗಳಿಗೆ ಬೇರೆಯವರಿಂದ ಪ್ರಸ್ತಾವನಾ ರೂಪವಾಗಿ ಬರೆಸಿದ್ದಾರೆ. ಇಂಥವರಲ್ಲಿ ಅವರ ಅಭಿಮಾನ ಗೌರವಗಳಿಗೆ ಪಾತ್ರರಾದ ಇಬ್ಬರು ಮಹನೀಯರೆಂದರೆ ಕಲಮದಾನಿ ಭೀಮರಾಯರು ಮತ್ತು ಹಂಡೆ ಶ್ರೀಪಾದದಾಸರು,

ಇವುಗಳಲ್ಲಿ ಪುರಂದರದಾಸರ ಕೀರ್ತನೆಗಳು, ಕನಕದಾಸರ ಕೀರ್ತನೆಗಳು ಮುಂತಾದವಕ್ಕೆ ಅವರು ಬರೆದಿರುವ ಉಪೋದ್ಘಾತದ ಮಾತುಗಳು ಈ ಕಾರ್ಯ ಕೈಗೊಂಡವರ ಮುಂದಿದ್ದ ಸಮಸ್ಯೆಗಳ ಮೇಲೆ ಬೆಳಕು ಬೀರುತ್ತವೆ. ಹೀಗಾಗಿ ಇಲ್ಲಿ ಅವುಗಳನ್ನು ಪರಿಶೀಲಿಸಲಾಗಿದೆ.

೧೩

ಇನ್ನು ಮುಂದೆ ದಾಸಸಾಹಿತ್ಯದ ಸಂಗ್ರಹ ಕಾರ್ಯದಲ್ಲಿ ತಮ್ಮ ಅನುಭವಗಳನ್ನು ಪಾವಂಜೆ ಗುರುರಾಯರ ಬಾಯಿಂದಲೇ, ಲೇಖಣಿಯಿಂದಲೇ ನೋಡೋಣ-

"ದಾಸಕೂಟಕ್ಕೆ ಆದಿಪುರುಷರೂ ಶ್ರೀನಾರದಾಂಶರೂ ಆದ ಶ್ರೀ ಪುರಂದರ ದಾಸವರ್ಯರು, ಶ್ರೀಮಧ್ವಶಾಸ್ತ್ರದ ಮುಖ್ಯ ಪ್ರಮೇಯವಾದ ಶ್ರೀ ಹರಿಸರ್ವೋತ್ತಮತ್ವವನ್ನು ಸುಲಭವಾಗಿ ಸ್ತ್ರೀಬಾಲಾದಿಯಾಗಿ ಅತಿಪಾಮರರೂ ಕೂಡ ಮನಮುಟ್ಟ ತಿಳಿದು, ಪರಮಾತ್ಮನನ್ನು ಭಕ್ತಿಯಿಂದ ಯಾವ ಕಷ್ಟವೂ ಇಲ್ಲದೆ ಕೀರ್ತನ ರೂಪದಿಂದಲಾದರೂ ಭಜಿಸಿ ಕೃತಾರ್ಥರಾಗಲೆಂದು ಅನೇಕ ಕೀರ್ತನೆಗಳನ್ನು ಮಾಡಿ ನಮ್ಮೆಲ್ಲರನ್ನೂ ಉದ್ಧರಿಸಿದ್ದಾರೆಂಬುದು ಸರ್ವರಿಗೂ ವೇದ್ಯ

ವಾದುದು. "ಸುಳಿದರೆ ಸುಳಾದಿ- ಎಂಬ ದಾಸಕೂಟದವರ ಗಾದೆಯಿಂದ ಶ್ರೀಹರಿಯು ಕಣ್ಣೆದುರು ಸುಳಿದಾಗ ರಚಿಸಿದ ಕೀರ್ತನೆಗಳೇ ಸುಳಾದಿಗಳೆಂದು ತಿಳಿದು ಬರುವುದರಿಂದ ಇವುಗಳಲ್ಲಿ ಅತಿ ಮಹತ್ವವಿದೆ "- ಎಂಬುದಾಗಿ ಸುಳಾದಿಗಳ ರಚನೆಯನ್ನು ಕುರಿತು ಪಾವಂಜೆ ಗುರುರಾಯರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಮಾತು ಮನನೀಯವಾಗಿದೆ.

"ಈ ಕನಕದಾಸರ ಕೀರ್ತನೆಗಳನ್ನು ಅತಿಕಷ್ಟದಿಂದ ಕೆಲವರು ಬಾಯಿಂದ ಹೇಳಿದುದನ್ನು, ಕೆಲವು ಜೀರ್ಣವಾಗಿರುವ ಗ್ರಂಥಗಳಿಂದಲೂ ಬರಕೊಂಡು ಹಾಗೂ ಹೀಗೂ ಸಂಗ್ರಹಿಸಿ ಹೊಸತಾಗಿ ಛಾಪಿಸಿರುವುದರಿಂದಲೂ ಈ ಪ್ರಥಮ, ದ್ವಿತಿಯ, ತೃತೀಯಾರ್ತಿಯ ಶೋಧನೆಯು ನಮ್ಮ ಮನಸ್ಸಿಗೆ ತೃಪ್ತಿಕರವಾಗಿಲ್ಲದಿದ್ದರಿಂದಲೂ , ಈ ಪದಗಳಲ್ಲಿ ತೋರುವ ದೋಷಭಾಗಗಳನ್ನು ನಮಗೆ ತಿಳಿಸಿದರೆ ಸರಿಪಡಿಸಿ ಬೇಗನೇ ಚತುರ್ಥಾವರ್ತಿ ಛಾಪಿಸಲಿಕ್ಕೆ ಸಿದ್ಧವಾಗಿದ್ದೇವೆ ಈ ಕಾರ್ಯದಲ್ಲಿ ಸಹಾಯ ಮಾಡಿದರೆ ಲೋಕೋಪಕಾರವೂ, ಪುಣ್ಯವೂ ಇರುವುದೆಂದು ಸವಿನಯ ಪ್ರಾರ್ಥನೆಯು"- ಕನಕದಾಸರ ಕೃತಿಗಳು, ಭಾಗ ಒಂದು ಮೂರನೆ ಮುದ್ರಣದಲ್ಲಿ ಸೂಚಿಸಿದ್ದಾರೆ.

"ಈ ಭರತ ಖಂಡದಲ್ಲಿ ಶಾಸ್ತ್ರವರಿಯದ ಅತ್ಯಂತ ಪಾಮರ ಜನರ ಹೃದಯದಲ್ಲೂ ಕೂಡಾ ಭಗವಂತನ ಪರಮದುನುಗ್ರಹಕ್ಕೆ ಮುಖ್ಯ ಕಾರಣವಾದ ಮಹಾತ್ಮ ಜ್ಞಾನ ಪೂರ್ವಕ ಸದೃಢ ಸ್ನೇಹರೂಪ ಭಕ್ತಿ ರಸವನ್ನು ಎರಕವಾಗಿ ನೆಲಗೊಳಿಸಲು ಅನೇಕ ಮಹಾತ್ಮರು ಪುರಂದರದಾಸರಾದಿ ರೂಪಗಳಿಂದ ಕಂಗೊಳಿಸಿ ಆಸಕ್ತರನ್ನೆಲ್ಲ ಉದ್ಧರಿಸಿದ್ದಾರೆ."

ಈ ದಾಸಕೂಟವೆಂಬ ರತ್ನಮಾಲೆಯಲ್ಲಿ ನಾಯಕಮಣಿಗಳಾದ ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಾದಿರಾಜರು, ಪುರಂದರದಾಸರು, ಕನಕದಾಸರು, ವಿಜಯದಾಸ, ಜಗನ್ನಾಥದಾಸರು -ಇತ್ಯಾದಿ ಮಹನೀಯರ ಪದ್ಧತಿಯನ್ನನುಸರಿಸಿ ಪ್ರಾಣೇಶದಾಸಾದಿಗಳೆಂಬ ರತ್ನಗಳೂ ತಮ್ಮ ಕೀರ್ತನಕೀರ್ತಿ ಕಿರಣಗಳಿಂದ ಪ್ರಪಂಚವನ್ನ ಬೆಳಗಿಸಿದ್ದಾರೆ. ಈ ದಾಸರೆಲ್ಲರೂ ರತ್ನಗಳಿದ್ದಂತೆ, ಅವರ ಕೀರ್ತನೆಗಳೂ ಉತ್ತಮ ರತ್ನಗಳಾಗಿ ಆಸ್ತಿಕರ ಕಂಠಾಭರಣಗಳೇ ಆಗಿದ್ದವೆಂಬುದರಲ್ಲಿ ಸಂಶಯವಿಲ್ಲ.

ಸುಮಾರು ೨೦೦ ವರ್ಷಗಳಿಂದ ಕರ್ನಾಟಕ ದೇಶ ಮಾತೆಯು ಈ ಕಂಠಾಭರಣದಿಂದ ಶೋಭಿಸುತ್ತಿದ್ದರೂ ಆಕೆಯ ಪುತ್ರರಾದ ನಮ್ಮೆಲ್ಲರ ಆಲಸ್ಯವೆಂಬ ಕೆಸರಿನಿಂದ ಆ ರತ್ನಗಳು ಮಲಿನವಾಗ ಹತ್ತಿ ಹೆಚ್ಚು ಜನರಿಗೆ ಆ ರತ್ನಮಾಲೆಯ ಗುರುತೇ ಇಲ್ಲದಂತಾಗಿದೆ.

ಇದನ್ನು ಕಂಡು ಅನೇಕ ಮಹನೀಯರ ಸೂಚನೆಯಿಂದ ಪುರಂದರದಾಸಾದಿಗಳ ಕೀರ್ತನೆ ಗಳನ್ನು ಪ್ರತ್ಯೇಕ ಪ್ರಕಟಸಿದ್ದಲ್ಲದೆ ಶ್ರೀದವಿಠಲಾದ್ಯನೇಕ ಮುದ್ರಿಕೆಗಳುಳ್ಳ ವಿವಿಧ ಕೀರ್ತನೆಗಳ ದಾಸಪದಸಂಗ್ರಹವು ಎಂಬ ೧ನೇ ಭಾಗದ ಪುಸ್ತಕವನ್ನು ಪ್ರಕಟಿಸಿ ಮತ್ತು ಪ್ರಾಣೇಶವಿಠಲಾದಿ ಅಂಕಿತಗಳುಳ್ಳ ಅನೇಕ ಹೊಸ ಕೀರ್ತನೆಗಳು ದೊರಕಿದ್ದರಿಂದ ದಾಸಪದಸಂಗ್ರಹ ೨ನೇ ಭಾಗವೆಂಬ ಈ ಪುಸ್ತಕವೂ ಆಸ್ತಿಕರ ಮನಸಂತೋಷಕ್ಕಾಗಿ ಪ್ರಕಟಿಸಲ್ಪಟ್ಟಿದೆ.

ಕೆಲವು ಕೀರ್ತನೆಗಳ ರಾಗಗಳು ಮೂಲ ಪ್ರತಿಯಲ್ಲಿಲ್ಲದ್ದಾದ್ದರಿಂದ ಇದ್ದಂತೆಯೇ ಛಾಪಿಸಲ್ಪಟ್ಟಿದೆ. ಪ್ರಾಯಶಃ ಮೂಲಕ್ಕನುಸರಿಸಿ ಮುದ್ರಿತಗಳಾದ ಈ ಕೀರ್ತನೆಗಳಲ್ಲಿ ಬಲ್ಲವರು

ದಯವಿಟ್ಟು ತಿದ್ದಿಕೊಳ್ಳುವುದು. ಇಲ್ಲಿಗೆ ಯಾತ್ರಿಕರಾಗಿ ಬಂದಿದ್ದ ಮಾನವಿ ಕ್ಷೇತ್ರದ ವೇಕುರ್ಡಿ ಗುಂಡಾಚಾರ್ಯ ಜೋಶಿ, ಇವರು ಇದರಲ್ಲಿ ಇರತಕ್ಕ ಅನೇಕ ಕೀರ್ತನೆಗಳನ್ನು ಶೋಧಿಸಿ ತಮ್ಮ ಸಂಗ್ರಹದಲ್ಲಿದ್ದ ಕೆಲವು ಕೀರ್ತನೆಗಳನ್ನು ಕೊಟ್ಟು ಸಹಾಯ ಮಾಡಿದ್ದಕ್ಕಾಗಿಯೂ, ಕೀರ್ತನ ಭೂಷಣ ಹಂಡೆ ಶ್ರೀಪಾದದಾಸರು ಅನೇಕ ಕೃತಿಗಳಿಗೆ ರಾಗತಾಳ ಹಾಕಿಕೊಟ್ಟು ಸಹಾಯ ಮಾಡಿದ್ದಕ್ಕಾಗಿಯೂ ಕೃತಜ್ಞತೆಯುಳ್ಳವನಾಗಿದ್ದೇನೆ - ಎಂದು ದಾಸರ ಪದಗಳ ಸಂಗ್ರಹದಲ್ಲಿ ಹೇಳಿದ್ದಾರೆ.

ವೆಂಕಟವಿಠಲ, ವೈಕುಂಠಕೇಶವ, ಅಚ್ಯುತವಿಠಲ, ವಾಸುದೇವವಿಠಲ, ಕಮಲೇಶವಿಠಲ, ಭೀಮೇಶವಿಠಲ, ಶ್ರೀರಂಗವಿಠಲ, ಜನಾರ್ಧನವಿಠಲ, ಶ್ರೀಪತಿವಿಠಲ, ರಘುನಾಥವಿಠಲ, ಶಿರಿ ಪುರಂದರವಿಠಲ, ಜಗನ್ನಾಥವಿಠಲ, ಪ್ರಾಣೇಶವಿಠಲ, ಶ್ರೀದವಿಠಲ, ಪ್ರಸನ್ನವೆಂಕಟಪತಿ, ಅನಂತಾದ್ರೀಶ, ಅಭಿನವಜನಾರ್ಧನವಿಠಲ, ಅಚಲಾನಂದವಿಠಲ, ವೆಂಕಟೇಶ್ವರ - ಇತ್ಯಾದಿ ಅಂಕಿತಗಳುಳ್ಳ ದಾಸರಪದ ಸಂಗ್ರಹ ಇದರ ಬಗ್ಗೆ ಬರೆಯುತ್ತಾ,

"ಈ ಸಂಗ್ರಹದಲ್ಲಿರುವ ಕೀರ್ತನೆಗಳನ್ನು ನಾನು ಈಚೆಗೆ ಶ್ರೀಪ್ರಸನ್ನ ಕೇಶವದೇವರ ದರ್ಶನದ ನಿಮಿತ್ತ ಬೇಲೂರಿಗೆ ಹೋದಾಗ, ಅಲ್ಲಿಯ ಸಂಸ್ಕೃತ ಪಾಠಶಾಲಾ ಅಧ್ಯಾಪಕರಾದ ಮ|| ರಾ|| ಸಂ|| ಭೀಮಾಚಾರ್ಯರು ತಮ್ಮಲ್ಲಿದ್ದ ಮೋಹನದಾಸರು, ವೈಕುಂಠದಾಸರೇ ಮೊದಲಾದ ಅಪರೋಕ್ಷಜ್ಞಾನಿ ದಾಸಶ್ರೇಷ್ಠರುಗಳ ಕೀರ್ತನೆಗಳ ಸಂಗ್ರಹಗಳನ್ನು ನನಗೆ ಅನುಗ್ರಹಿಸಿದರು. ಇಂಥ ಸತ್ಕಾರ್ಯಕ್ಕೆ ನೆರವಾದ ಶ್ರೀ ಭೀಮಾಚಾರ್ಯರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ"

ಇದಲ್ಲದೆ ಮಂಗಳೂರಿನ ಪ್ರಸಿದ್ಧ ತುಪಾಕಿ ಮನೆತನದ ವೈಕುಂಠವಾಸಿಗಳಾದ ವೆಂಕಟ ರಮಣಾಚಾರ್ಯರು, ಸುಬ್ಬಣಾಚಾರ್ಯರು ಮತ್ತು ರಾಮಾಚಾರ್ಯರಿಂದ ರಚಿತವಾದ ಉತ್ತಮ ದೇವರ ನಾಮಗಳಲ್ಲಿ ಕೆಲವು ಕೃತಿಗಳೂ ದೊರಕಿದುದರಿಂದ ಅದನ್ನು ಈ ಸಂಗ್ರಹದಲ್ಲಿ ಪ್ರಕಟಿಸಲಾಗಿದೆ. ಸಹೃದಯ ಭಕ್ತರು ಈ ದೇವರನಾಮಗಳ ಮಧುವನ್ನು ಪ್ರತ್ಯಕ್ಷೀಕರಿಸಿದರೆ ಅವುಗಳ ಕರ್ತೃಗಳ ಯೋಗ್ಯತೆಯು ಮನದಟ್ಟಾಗದೆ ಇರದು - ಎಂದು ಗುರುರಾಯರು ಹೇಳಿದ್ದಾರೆ.

"ಈ ಕೀರ್ತನೆಗಳನ್ನು ಬಹುಕಾಲದಿಂದ ಸಂಗ್ರಹಿಸುತ್ತಿದ್ದರೂ ಅವುಗಳನ್ನು ಛಾಪಿಸುವಷ್ಟು ಅವಕಾಶ ದೊರೆಯಲಿಲ್ಲವಾದರೂ ಈಗಲೇ ಮ.ರಾ.ರಾ. ತೀರ್ಥಹಳ್ಳಿ ಯಲವಟ್ಟಿ ರಾಮರಾಯರೂ, ಕೊಯಮತ್ತೂರು ಕೆ.ಶ್ರೀನಿವಾಸರಾಯರೂ, ಕೆ. ಗೋವಿಂದದಾಸರೂ -ಇವರೇ ಮೊದಲಾದ ಇನ್ನೂ ಯಾತ್ರಾರ್ಥವಾಗಿ ಇಲ್ಲಿಗೆ ಬಂದ ಮಹನೀಯರುಗಳ ಸಂಗ್ರಹದಿಂದಲೂ ಛಾಪಿಸುವ ಅವಸರವು ದೊರತುದಕ್ಕಾಗಿ ಸಂತೋಷಪಡುವುದಲ್ಲದೆ ನನಗೆ ಸಂಗ್ರಹದಲ್ಲಿ ಸಹಾಯ ಮಾಡಿದ ಹಿಂದೆ ಹೇಳಿದ ಮಹನೀಯರಿಗೆ ಯಾವಾಗಲೂ ಕೃತಜ್ಞ ನಾಗಿರುತ್ತೇನೆ "- ವಿಜಯದಾಸರ ಕೃತಿಗಳು ಎಂಬ ಪುಸ್ತಕದಿಂದ.

ಸಕಲ ಸಜ್ಜನರ ಉದ್ಧಾರಕ್ಕಾಗಿ ಭೃಗು ಮಹಾಮುನಿಗಳೇ ವಿಜಯವಿಠಲದಾಸರಾಗಿ ಅವತರಿಸಿ ಪುರಂದರದಾಸರ ಶಿಷ್ಯರಾಗಿ ವಿಜಯವಿಠಲ ಎಂಬ ಅಂಕಿತ ಪಡೆದು ಸಾವಿರಾರು ದೇವರ ನಾಮಗಳನ್ನೂ, ಸುಳಾದಿಗಳನ್ನೂ, ಉಗಾಭೋಗಗಳನ್ನೂ ರಚಿಸಿರುವುದು ಎಲ್ಲರಿಗೂ ತಿಳಿದ ವಿಷಯವಷ್ಟೆ. ದಯಾಳುಗಳಾದ ಮ.ರಾ.ರಾ. ಪೋಲಾರಿನ ಪೆನ್ಷನ್ ರಿಜಿಸ್ಟ್ರಾರ್ ಎಚ್.ರಂಗರಾವ್

ಮಹಾಶಯರು ತಮ್ಮ ಸಂಗ್ರಹದ ಅನೇಕ ಕೀರ್ತನೆಗಳನ್ನು ಬರೆಸಿ ಕಳುಹಿಸಿದುದರಿಂದ ಈ ವಿಜಯ ದಾಸರ ಕೀರ್ತನೆ ೨ನೇ ಭಾಗ ಪುಸ್ತಕವನ್ನು ಛಾಪಿಸಿ ಪ್ರಕಟಿಸುವುದಕ್ಕೆ ಅನುಕೂಲವಾಯಿತು - ಎಂದು ದ್ವಿತೀಯ ಭಾಗದ ಮುನ್ನುಡಿಯಲ್ಲಿ ಬರೆದಿದ್ದಾರೆ.

"ಈ ಪ್ರಪಂಚದಲ್ಲಿ ಜ್ಞಾನಶೂನ್ಯವಾಗಿ ಸಂಸಾರ ಸಮುದ್ರದ ದುಃಖ ಪರಂಪರೆಗಳೆಂಬ ದೊಡ್ಡ ದೊಡ್ಡ ಅಲೆಗಳಿಗೆ ಸಿಲುಕಿ ಪಾರಾಗಿ ಬಂದಿರುವ ಸಜ್ಜನರನ್ನು ಉದ್ಧರಿಸಲು, ಜ್ಞಾನವೆಂಬ ವಿಶಾಲ ನಾವೆಯನ್ನು ಪ್ರಕಾಶಗೊಳಿಸುತ್ತಾ ಸಂಸಾರ ಸಮುದ್ರವನ್ನು ದಾಟಿರುವ ಅನೇಕ ಜ್ಞಾನಿ ಶ್ರೇಷ್ಠರಾದ ನಾವಿಕರು ಈ ಮಹಾಸಮುದ್ರ ಮಧ್ಯದಲ್ಲಿ ಅನೇಕ ಕಡೆ ಕಣ್ಣಿಗೆ ಗೋಚರಿಸುವರು. ಇಂಥಹ ಮಹಾಮಹಿಮರು ವ್ಯಾಸಕೂಟಕ್ಕೆ ಅಥವಾ ದಾಸಕೂಟತಕ್ಕೆ ಉದ್ಧಾರಕರಾಗಿರುತ್ತಾರೆ. ಶ್ರೀಮಧ್ವಾಚಾರ್ಯರು, ತ್ರಿವಿಕ್ರಮ ಪಂಡಿತಾಚಾರ್ಯರು, ಟೀಕಾಚಾರ್ಯರು ಮೊದಲಾದವರು ಅನೇಕ ಸಚ್ಛಾಸ್ತ್ರ ಪ್ರವರ್ತಕರಾಗಿ ವ್ಯಾಸ ಕೂಟಾಲಂಕಾರರಾಗಿರುತ್ತಾರೆ. ಪುರಂದರದಾಸಾದಿಗಳು ದಾಸಭೂಷಣರಾಗಿ ಕನ್ನಡ ಭಾಷೆಯಿಂದ ಅನೇಕ ತತ್ವಗಳನ್ನು ಬೋಧಿಸಿ, ಶ್ರೀಹರಿವಾಯುಗಳಲ್ಲಿ ಭಕ್ತಿಯನ್ನು ದೃಢಗೊಳಿಸಿ ಸಜ್ಜನರನ್ನುದ್ಧರಿಸಿದರು. ಶ್ರೀ ಮುಖ್ಯಪ್ರಾಣಾಂಶ ಸಂಭೂತರಾದ ಶ್ರೀ ಮಧ್ವಾಚಾರ್ಯರ ಸತ್ಯಸಂಕಲ್ಪವನ್ನು ಪ್ರಪಂಚದಲ್ಲಿ ವಿಶೇಷವಾಗಿ ಸರ್ವಕಡೆಯಲ್ಲಿಯೂ ಹರಡ ಬೇಕೆಂದು ಬ್ರಹ್ಮಪದಕ್ಕೆ ಯೋಗ್ಯವಾದ ಋಜುಗುಣದಲ್ಲಿ ಪ್ರಧಾನರಾದವರೊಬ್ಬರು ತಾವು ಮುಂದಿನ ಮುಖ್ಯ ಪ್ರಾಣಪದಕ್ಕೆ ಅರ್ಹರಾದುದರಿಂದ ಜೀವೋತ್ತಮರಾದ ಶ್ರೀ ಮುಖ್ಯಪ್ರಾಣ ಸಾರ್ವಭೌಮರ ಸತ್ಕಾರ್ಯಕ್ಕೆ ಯುವರಾಜರಾದ ತಾವೂ ಯತ್ಕಿಂಚಿತ್ ಸಹಾಯ ಮಾಡಬೇಕೆಂಬ ಕುತೂಹಲದಿಂದ ಶ್ರೀರೂಪಪೀಠಪುರವೆಂದು ಪ್ರಸಿದ್ಧವಾದ ಉಡುಪಿ ಕ್ಷೇತ್ರದ ಉತ್ತರದಲ್ಲಿರುವ ಹೂವಿನಕೆರೆ ಗ್ರಾಮದಲ್ಲಿ ಅವತರಿಸಿ ಶ್ರೀ ಮಧ್ವಾಚಾರ್ಯರ ಸೋದರರಾದ ಶ್ರೀ ವಿಷ್ಣುತೀರ್ಥಾ ಚಾರ್ಯರ ಸಂಪ್ರದಾಯ ಪ್ರವರ್ತಕ ಶ್ರೀ ವಾಗೀಶತೀರ್ಥ ಯತಿರಾಜರಿಂದ ಸನ್ಯಾಸವನ್ನು ಸ್ವೀಕರಿಸಿ, ಶ್ರೀ ವಾದಿರಾಜತೀರ್ಥರೆಂಬ ನಾಮಾಂಕಿತರಾಗಿ, ಯುಕ್ತಿಮಲ್ಲಿಕಾದ್ಯನೇಕ ಸಚ್ಛಾಸ್ತ್ರ ನಿರ್ಮಾಣದಿಂದ ಪರವಾದಿಗಳ ಮುಖಮುದ್ರಣಮಾಡಿ, ಸಜ್ಜನರ ಜ್ಞಾನವನ್ನು ವೃದ್ಧಿಗೊಳಿಸಿ ಸಂಸ್ಕೃತ ತಿಳಿಯದ ಸಾಧುಗಳಿಗೂ, ಸ್ತ್ರೀಯರಿಗೂ ಶ್ರೀಹರಿವಾಯುಗಳಲ್ಲಿ ಭಕ್ತಿ ಜ್ಞಾನೋದಯ ವಾಗುವಂತೆ ಕನ್ನಡದಲ್ಲಿ ಪರಮ ಮಂಗಳದಾಯಕ ಭ್ರಮರಗೀತೆ, ವೈಕುಂಠವರ್ಣನೆ, ಲಕ್ಷ್ಮೀ ಶೋಭನಾದಿ ಹಾಡುಗಳನ್ನೂ, ಇನ್ನೂ ಅನೇಕ ಹರಿಕೀರ್ತನೆಗಳನ್ನೂ ರಚಿಸಿರುತ್ತಾರೆ. ಇವರು ಸ್ವಾದಿ ಕ್ಷೇತ್ರದಲ್ಲಿ ತ್ರಿವಿಕ್ರಮ ದೇವರನ್ನು ಪ್ರತಿಷ್ಠೆ ಮಾಡಿ, ತಾವು ಬೃಂದಾವನದಲ್ಲಿ ಸನ್ನಿಹಿತರಾಗಿದ್ದು ಸೇವಕರಿಗೆ ಸರ್ವಾಭೀಷ್ಟವನ್ನು ದಾನ ಮಾಡುತ್ತಿರುವುದು ಈಗಲೂ ಆ ಕ್ಷೇತ್ರ ದರ್ಶನ ಮಾಡಿದವರಿಗೆ ಪ್ರತ್ಯಕ್ಷವಾದ ವಿಷಯವು. ಈ ಮಹಾತ್ಮರು ವ್ಯಾಸಕೂಟ, ದಾಸಕೂಟ ಇವೆರಡಕ್ಕೂ ಶಿಖಾಮಣಿಗಳಿಗೆ ಜ್ಞಾನದಿಂದ ಸಜ್ಜನರನ್ನುದ್ಧರಿಸಿದುದಕ್ಕೆ ಸರ್ವರೂ ಋಣಿಗಳಾಗಿರತಕ್ಕದ್ದು. ಈ ಮಹಾತ್ಮರ ಚರಿತ್ರೆಯು ಬಹಳ ದೊಡ್ಡದಾಗಿರುವುದರಿಂದ ಅವರ ಚರಿತ್ರೆ ಪುಸ್ತಕವನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಯತ್ನಿಸುತ್ತಿದ್ದೇನೆ. ಈ ಯತಿವರರು ರಚಿಸಿದ ಹರಿಕೀರ್ತನೆ ಪುಸ್ತಕವನ್ನು ಅನೇಕರು ಅಪೇಕ್ಷಿ ಸುವುದರಿಂದ ಶ್ರಮಪಟ್ಟು ಸಂಗ್ರಹಿಸಿ, ಯಥಾಶಕ್ತಿ ಶೋಧನಮಾಡಿಸಿ, ಈ ವಾದಿರಾಜ ಕೀರ್ತನೆ

೧ನೇ ಭಾಗವನ್ನು ಛಾಪಿಸಿರುತ್ತೇವೆ. ಇತರ ಶೋಧವಾಗಿದ್ದರೆ ಮಹನೀಯರು ತಿಳುಹಿಸಬೇಕು. ದಾಸಕೂಟದಲ್ಲಿ ಇನ್ನೂ ವಾದಿರಾಜರ ಕೀರ್ತನೆ ಸಂಗ್ರಹಗಳಿದ್ದವರು ಕಳುಹಿಸಿದರೆ ಇದರ ೨ನೇ ಭಾಗವನ್ನು ಛಾಪಿಸಬೇಕೆಂದಿದ್ದೇವೆ "- ಎಂದು ವಾದಿರಾಜರ ಕೀರ್ತನೆಗಳು ಗ್ರಂಥದಲ್ಲಿ ಹೇಳಿ ಕೊಂಡಿದ್ದಾರೆ.

"ಶ್ರುತಿ ಸ್ಮೃತಿ ಉಪನಿಷತ್ ಪುರಾಣಗಳ ಅರ್ಥವನ್ನೂ ಪುರಂದರದಾಸರು ಮೊದಲಾದ ಮಹಾತ್ಮರು ಪಾಮರ ಜನರ ಉದ್ಧಾರಕ್ಕಾಗಿ ಕೀರ್ತನೆ, ಸುಳಾದಿ, ಉಗಾಭೋಗ, ಗದ್ಯ ಮೊದಲಾದ ರೂಪಗಳಿಂದ ಕರ್ನಾಟಕ ಭಾಷೆಯಲ್ಲಿ ರಚಿಸಿ ಭಾಷಾಭಿವೃದ್ಧಿ, ದಕ್ಷಿಣಾದಿ ಸಂಗೀತ ಪದ್ಧತಿ, ಭಕ್ತಿಮಾರ್ಗ ಜ್ಞಾನ -ಮುಂತಾದ ಹಲವು ಫಲಗಳನ್ನು ಪಡೆಯುವಂತೆ ಲೋಕೋಪಕಾರ ಮಾಡಿರುವುದು ಸರ್ವವಿದಿತವಾಗಿದೆ. ಸುಳಾದಿಗಳಲ್ಲಿ ಅನೇಕ ತತ್ವಗಳು ಅಡಗಿರುವುದರಿಂದ ಸುಲಭವಾಗಿ ಅವುಗಳ ಅರ್ಥ ತಿಳಿಯಲು ಕಷ್ಟವಾಗಿ ತೋರಿದರೂ ಭಕ್ತಿ ಶ್ರದ್ಧೆಯಿಂದ ಪಠನಾಭ್ಯಾಸ ಮಾಡುತ್ತ ಬಂದಲ್ಲಿ ಕ್ರಮದಿಂದ ಅದರ ಭಾವವು ಸ್ಫೂರ್ತಿಗೊಂಡು ಆನಂದವುಂಟಾಗುವು ದೆಂಬುದು ಅನುಭವವಿದ್ದವು."

"ಯಾವುದಾದರೊಂದು ಗ್ರಂಥವನ್ನು ಪಾರಾಯಣ ಮಾಡಬೇಕಾದರೆ, ಅದನ್ನು ಓದಿ ಕಲಿಯುಬೇಕಾದರೆ ಆ ಗ್ರಂಥಕರ್ತರ ಜೀವನ ಚರಿತ್ರೆಯನ್ನೂ, ಮಹಾತ್ಮರನ್ನು ಅವರು ಯಾರ ಯಾರ ಅಂಶದವರೆಂಬುದನ್ನೂ ಆಮೂಲಾಗ್ರವಾಗಿ ತಿಳಿದುಕೊಂಡರೆ ನಾವು ಪಠಿಸುವ ಗ್ರಂಥದಲ್ಲಿ ಶ್ರದ್ಧೆ ಭಕ್ತಿಯು ಹೆಚ್ಚುವುದೆಂಬುದು ತಿಳಿದ ವಿಷಯವೆ. ಆದರೆ ನಮ್ಮವರು ನಮ್ಮ ಪುರಾತನ ಗ್ರಂಥಕರ್ತರ ಕಾಲವನ್ನಾಗಲೀ, ಅವರ ಚರಿತ್ರೆಯನ್ನಾಗಲೀ ಇದ್ದದ್ದು ಇದ್ದಂತೆ ಬರೆದಿಡುವ ಪದ್ಧತಿಯನ್ನು ಇಟ್ಟುಕೊಂಡಂತೆ ತೋರುವುದಿಲ್ಲ. ಇದಕ್ಕೆ ಬೇಕಾದ ಕಾರಣವೂ ಇರಬಹುದು, ನಮಗೆ ಮಾತ್ರ ತಿಳಿಯದು. ಆದರೆ ಬೇರೆ ಹೆಸರುಗಳ ಚರಿತ್ರೆಯನ್ನು ಪ್ರಕಟಿಸಿದ್ದಂತೆ ಗ್ರಂಥಕರ್ತರಾದ ಶ್ರೀ ವಿಜಯದಾಸರ ಜೀವನ ಚರಿತ್ರೆಯನ್ನೂ, ಹರಿಕಥಾಭೂಷಣ ಶ್ರೀಮಾನ್ ಬೇಲೂರು ಕೇಶವದಾಸರು ಬಹಳ ಶ್ರಮ ಪಟ್ಟು ಸಂಗ್ರಹಿಸಿ ಕರ್ನಾಟಕ ಭಕ್ತವಿಜಯವೆಂಬ ಗ್ರಂಥವನ್ನು ಎರಡು ಭಾಗಗಳಾಗಿ ಪ್ರಕಟಿಸಿರುತ್ತಾರೆ. ಇದು ನಮ್ಮ ಕರ್ನಾಟಕಕ್ಕೆ ದೊಡ್ಡ ಉಪಕಾರವೇ ಸರಿ."

*ಈ ಸುಳಾದಿಕಾರರಾದ ಶ್ರೀ ವಿಜಯದಾಸರು ಭೃಗು ಮುನಿಗಳ ಅಂಶದವರೂ, ಶ್ರೀಪುರಂದರದಾಸರ ಶಿಷ್ಯರೂ, ಗೋಪಾಲದಾಸಾದಿಗಳ ಗುರುಗಳೂ, ಅಪರೋಕ್ಷ ಜ್ಞಾನಿಗಳೂ, ಜಗನ್ನಾಥದಾಸರನ್ನು ಉದ್ಧರಿಸಿದವರೂ, ಅಮಾನುಷ ಮಹಾತ್ಮ್ಯದಿಂದ ಲೋಕಪ್ರಖ್ಯಾತರೂ ಆಗಿದ್ದರೆಂದು ಆ ಭಕ್ತ ವಿಜಯದಿಂದ ತಿಳಿದು ಬರುವುದು.*

*ನಾವು ಶ್ರೀ ವಿಜಯದಾಸರ ಸುಳಾದಿಗಳ ಪ್ರಥಮ ಭಾಗವನ್ನು ೧೯೨೪ನೇ ಇಸವಿಯಲ್ಲಿ ಛಾಪಿಸಿ ಪ್ರಕಟಿಸಿದ ಮೇಲೆ ಕೆಲವು ಮಹನೀಯರು ತಮ್ಮ ಸಂಗ್ರಹದಿಂದ ಅನೇಕ ಸುಳಾದಿಗಳನ್ನು ಛಾಪಿಸಲು ನಮಗೆ ಕಳುಹಿಸಿ, ಸಹಕರಿಸುತ್ತಾರೆ. ಅವರಲ್ಲಿ ಮುಖ್ಯವಾಗಿ ನಾರ್ತ್ ಆರ್ಕಾಟ್ ಜಿಲ್ಲೆ ಪೋಲೂರ್ ಮಿರಾಸ್‌ದಾರ್ ಶ್ರೀಮಾನ್ ಎಚ್. ರಂಗಚಾರ್ಯರೂ, ಈಚೆಗೆ ವೈಕುಂಠವಾಸಿಗಳಾದ ಕೆ.ಗೋವಿಂದರಾಯರೂ ಮುಖ್ಯರಾದವರು. ಈ ಮಹನೀಯರ ಉಪಕಾರವು ಚಿರ*

ಸ್ಮರಣೀಯವು. ನಮಗೆ ಕಳುಹಿಸಿದ ಸುಳಾದಿಗಳಲ್ಲಿ ಕೆಲವನ್ನು ಮಾತ್ರ ಈ ಎರಡನೆಯ ಭಾಗದಲ್ಲಿ ಮುದ್ರಿಸಿರುತ್ತೇವೆ. ಹರಿಗುರುಗಳ ಚಿತ್ತಕ್ಕೆ ಬಂದು ಮಹಾಜನರು, ಪ್ರೋತ್ಸಾಹವಿತ್ತರೆ ೩-೪ನೇ ಭಾಗಗಳೂ ಕ್ರಮದಿಂದ ಮುದ್ರಿತವಾಗಬಹುದು - ಎಂದು ವಿಜಯಾದಸರ ಸುಳಾದಿಗಳು ಭಾಗ ೨ರಲ್ಲಿ ಬರೆದಿದ್ದಾರೆ.

"ಈಶ ಸಂಕಲ್ಪಾನುಸಾರವಾಗಿ ಲೋಕಾನುಗ್ರಹಾರ್ಥವಾಗಿ ಈ ಕರ್ನಾಟಕ ಪ್ರದೇಶದಲ್ಲಿ ಅವತರಿಸಿದ ಭಗವದ್ಭಕ್ತರಾದ ದೇವಾಂಶರುಗಳಾದ ದಾಸರುಗಳಲ್ಲಿ ಭಾಗಣ್ಣ ದಾಸರು ಒಬ್ಬರು. ಅವರ ಊರು ವೇಣೀಸೋಮಪುರ. ಇವರು ವಿಜಯದಾಸರ ಮುಖ್ಯಶಿಷ್ಯರು, ಗಣೇಶಾಂಶರು. ವಿಜಯರಾಯರಿಂದ ಗೋಪಾಲವಿಠಲ ಅಂಕಿತಪಡೆದು ನೂರಾರು ದೇವರ ನಾಮಗಳನ್ನೂ, ಅನೇಕ ಸುಳಾದಿಗಳನ್ನೂ ಮಾಡಿ ಲೋಕಾನುಗ್ರಹ ಮಾಡಿದರು. ಶ್ರೀ ಮಜ್ಜಗನ್ನಾಥದಾಸರಿಗೆ ಪ್ರಾಪ್ತವಾಗಿದ್ದ ಕ್ಷಯರೋಗವನ್ನು ಶ್ರೀಹರಿವಾಯುಗಳ ಅನುಗ್ರಹದಿಂದ ನಿವಾರಣೆ ಮಾಡಿ ತನ್ನ ಆಯುಷ್ಯದಿಂದ ನಲ್ವತ್ತು ವರ್ಷ ಆಯುಷ್ಯವನ್ನು ಅವರಿಗೆ ಕೊಟ್ಟು ಅನುಗ್ರಹ ಮಾಡಿದ ಪುಣ್ಯಾತ್ಮರು. ಇವರ ತಮ್ಮಂದಿರೆ ವರದ ಗೋಪಾಲವಿಠಲ ಎಂಬ ಅಂಕಿತದಿಂದ ಅನೇಕ ದೇವರ ನಾಮಗಳನ್ನು ಮಾಡಿದ ಸುಬ್ಬಣ್ಣದಾಸರು. ಹಾಗೆಯೇ ಗುರುಗೋಪಾಲವಿಠಲ ಮುದ್ರಿಕೆಯಿಂದ ಬಹಳ ದೇವರನಾಮಗಳನ್ನು ಮಾಡಿದ ಶೀನಪ್ಪನವರು ಇವರ ತಮ್ಮಂದಿರೇ. ಇವರಿಬ್ಬರೂ ವಿಜಯ ದಾಸರ ಶಿಷ್ಯರು. ವೇಣುಗೋಪಾಲವಿಠಲ ಮುದ್ರಿಕೆಯಿಂದ ರಸಭರಿತವಾದ ಅನೇಕ ದೇವರ ನಾಮಗಳನ್ನು ಮಾಡಿರುವವರು ಪಂಗನಾಮ ತಿಮ್ಮಣ್ಣದಾಸರು. ಇವರು ಸಾತ್ವಿಕರಾಗಿದ್ದು ದೊಡ್ಡ ಉದ್ಯೋಗವನ್ನು ಮಾಡಿ ವಿಜಯರಾಯರ ಶಿಷ್ಯರಾದವರು. ಈ ನಾಲ್ಕು ಮಂದಿ ದಾಸರುಗಳಿಂದ ದೊರತಷ್ಟು ದೇವರ ನಾಮಗಳನ್ನೂ, ಸುಳಾದಿಗಳನ್ನೂ ಇದರಲ್ಲಿ ಸಂಗ್ರಹಿಸಿದೆ. ಸಮಸ್ತ ಹರಿಕಥಾ ವಿದ್ವಾಂಸರಾದ ಹಂಡೆ ಶ್ರೀಪಾದದಾಸರವರೂ, ಸಮಪಾಸಕ್ರೆ ವೆಂಕಟಸುಬ್ಬಾಚಾರ್ಯರೂ ತಮ್ಮ ಸಂಗ್ರಹದಿಂದ ಈ ದೇವರನಾಮಗಳಲ್ಲಿ ಅನೇಕವನ್ನು ಕೊಟ್ಟು ಮುದ್ರಿಸುವುದಕ್ಕೆ ತುಂಬಾ ಸಹಾಯ ಮಾಡಿದರು"- ಎಂಬುದಾಗಿ ಗೋಪಾಲದಾಸರ ಕಾರ್ಯವನ್ನು ಕುರಿತು ಬರೆದಿದ್ದಾರೆ.

"ದಾಸಕೂಟ ಶಿಖಾಮಣಿಗಳೆನಿಸಿ ಹರಿಕೀರ್ತನಾಮೃತದಿಂದ ಸಂಸಾರ ತಾಪತ್ರಯ ಪೀಡಿತರಾದ ಅಜ್ಞಾನಿಗಳನ್ನು ಉದ್ಧರಿಸಿದ ಈ ಜಗನ್ನಾಥದಾಸರಾಯರ ಜನ್ಮ ಚರಿತ್ರೆಯು ಸಕಲ ದುರಿತ ಪರಿಹಾರಕವೆಂದು ಗ್ರಂಥಾದಿಯಲ್ಲಿ ವಾಚಕರ 'ರಿಜ್ಞಾನಾರ್ಥವಾಗಿ ಸಂಗ್ರಹಿಸಲ್ಪಡುತ್ತಿದೆ."

"ನೈಜಾಮ್ ಇಲಾಖಾ ಮಾನವೀ ಕ್ಷೇತ್ರಕ್ಕೆ ಸೇರಿದ ಬ್ಯಾಗವಟ್ಟಿ ಗ್ರಾಮದಲ್ಲಿ ನರ್ಸಪ್ಪ ಎಂಬ ವಿಪ್ರೋತ್ತಮರು ಗ್ರಾಮಕರ್ಣಿಕರಾಗಿದ್ದು ರಾಜದ್ರವ್ಯವನ್ನು ಕೊಡಲು ಅಶಕ್ತರಾಗಿರಲು, ಅಲ್ಲಿಯ ತುರುಕ ರಾಜನು ಕೋಪಿಸಿ ಪೆಟ್ಟು ಹೊಡಿಸಲು, ವಿರಕ್ತಿಯಿಂದ ಲಕ್ಷ್ಮಕ್ಕನೆಂಬ ಧರ್ಮಪತ್ನಿ ಯಿಂದೊಡಗೂಡಿ ಪಂಗನಾಮ ತಿಮ್ಮಣ್ಣನೆಂಬ ಹರಿದಾಸರನ್ನು ಸೇವಿಸಿ, ಅವರಿಂದ ನೃಸಿಂಹವಿಠಲ ವೆಂಬ ಅಂಕಿತವನ್ನು ಪಡೆದು ನೃಸಿಂಹದಾಸರೆಂದು ಪ್ರಖ್ಯಾತರಾದರು. ಆ ದಂಪತಿಗಳಿಗೆ ಕ್ರಿ.ಶ. ೧೭೪೯ನೇ ಕೀಲಕ ಸಂ. ದ ಶ್ರಾವಣ. ಶು. ೨ನೇ ದಿವಸ ಪ್ರಹ್ಲಾದರಾಯರ ಸೋದರ ಸಹ್ಲಾದ

ರಾಯರು ಹರಿಪ್ರೇರಣೆಯಿಂದ ಶ್ರೀನಿವಾಸಪ್ಪನೆಂಬ ನಾಮಾಂಕಿತರಾಗಿ ಅವತರಿಸಿದರು. ಕಾಲದಲ್ಲಿ ಉಪವೀತರಾಗಿ ಶ್ರೀವರದೇಂದ್ರ ಸ್ವಾಮಿಗಳವರಲ್ಲಿ (?) ವೇದಾಂತ ತರ್ಕಾದಿಗಳನ್ನು ಕಲಿತು ಅಸದೃಶ ಪಾಂಡಿತ್ಯದಿಂದ ಅಪರಿಮಿತ ಕೀರ್ತಿವಂತರಾಗಿದ್ದರು. ಇವರು ಭೃಗು ಮಹರ್ಷಿಗಳ ಅಂಶರಾದ ವಿಜಯದಾಸರನ್ನು ಹಿಯ್ಯಾಳಿಸಿದ ಪಾಪದಿಂದ ಕ್ಷಯರೋಗ ಪೀಡಿತರಾಗಿ ಮರಳಿ ಅವರನ್ನೇ ಮೊರೆಹೊಕ್ಕು ಅವರ ಅಪ್ಪಣೆಯಿಂದ ಅವರ ಶಿಷ್ಯ ಗೋಪಾಲದಾಸರೆಂದು ಪ್ರಖ್ಯಾತರಾದ ಭಾಗಣ್ಣದಾಸರನ್ನು ಸೇವಿಸಿದರು. ಗೋಪಾಲದಾಸರು ಎರಡು ಭಕ್ರಿಗಳನ್ನು ಮಂತ್ರಿಸಿ ಕೊಡಲು ಆ ರೋಗವು ಕೂಡಲೇ ಪರಿಹಾರವಾಯಿತು. ಗುರ್ವಂತರ್ಗತ ಹರಿಪ್ರೇರಣೆಯಿಂದ ತನ್ನ ಆಯಸ್ಸಿನಲ್ಲಿ ೪೦ ವರ್ಷ ಆಯುಸ್ಸನ್ನು ಗೋಪಾಲದಾಸರು ಇವರಿಗೆ ಕೊಟ್ಟರು. ಆಗ ಶ್ರೀನಿವಾಸಪ್ಪನವರು ಆಶ್ಚರ್ಯಭರಿತರಾಗಿ ಗೋಪಾಲದಾಸರನ್ನು ಮಂತ್ರೋಪದೇಶಕೊಟ್ಟು ಉದ್ಧರಿಸಬೇಕೆಂದು ಬೇಡಿದರು. ಅದಕ್ಕವರು ವಾದಬೀಜವಾದ ತರ್ಕಶಾಸ್ತ್ರವನ್ನು ಬಿಡಲು ಪ್ರತಿಜ್ಞೆ ಮಾಡಿಸಿ, ಮಂತ್ರವನ್ನುಪದೇಶಿಸಿ, ಫಂಡರಪುರವಿಠಲನನ್ನು ಧ್ಯಾನಿಸುತ್ತಾ ಚಂದ್ರಭಾಗ ನದಿಯಲ್ಲಿ ಸ್ನಾನಮಾಡುತ್ತಿರುವಾಗ, ತಲೆಯ ಮೇಲೆ ಶಿಲೆಯಲ್ಲಿ ಅಂಕಿತವು ನಮ್ಮ ಅನುಗ್ರಹದಿಂದ ಲಭಿಸುವುದೆಂದು ಅಜ್ಞಾಪಿಸಿದರು. ಹೀಗೆ ಶ್ರೀನಿವಾಸಪ್ಪನವರು ಅಲ್ಲಿ ಸ್ನಾನ ಮಾಡುತ್ತಿದ್ದಾಗ ಶ್ರೀ ಜಗನ್ನಾಥ ವಿಠಲನೆಂದು ಅಂಕಿತ ಪಡೆದು ಜಗನ್ನಾಥದಾಸರೆಂದು ಪ್ರಖ್ಯಾತರಾಗಿ ಅನೇಕ ಕೀರ್ತನೆಗಳನ್ನು ಮಾಡಿದರು."

""ಸೇವೆಯಲ್ಲಿ ವಾದಿರಾಜ ಪೂಜ್ಯ ಚರಣವನ್ನು ಸೇವಿಸಿ, ಸ್ವಪ್ನದಲ್ಲಿ ಅವರ ಅಪ್ಪಣೆಯನ್ನು ಪಡೆದು ಬಹುಪ್ರಮೇಯಗಳಿಂದ ಕೂಡಿದ ಹರಿಕಥಾಮೃತಸಾರವನ್ನೂ ಮಾಡಿದರು. ಅದಲ್ಲದೆ ವೇದಾಂತ ತತ್ವಗಳನ್ನು, ಧರ್ಮ ರಹಸ್ಯಗಳನ್ನು ಶ್ರೀ ಪರಮಾತ್ಮನ ಗುಣಾದಿಗಳನ್ನು ವರ್ಣಿಸುವ ಸಹಸ್ರಾರು ದೇವರನಾಮಗಳನ್ನು ರಚಿಸಿರುತ್ತಾರೆ. ಇವರು ೧೭೩೧ನೇ ಶುಕ್ಲ, ಸಂ.ದ ಭಾದ್ರ ಶನಿ ರವಿವಾರ ಮೂಲಾ ನಕ್ಷತ್ರ ರಾತ್ರಿ ಒಂದು ಝಾವಕ್ಕೆ ಪರಲೋಕವನ್ನೂ ಪಡೆದರು. ಇವರ ಜನ್ಮ ಭೂಮಿಯಲ್ಲಿಯೇ ಜಗನ್ನಾಥರಾಯರ ಕಟ್ಟೆಯೆಂಬುದು ಈಗಲೂ ಪ್ರಖ್ಯಾತವಾಗಿದೆ. ಅಲ್ಲಿ ತನ್ನ ಗ್ರಂಥಗಳನ್ನು ಸ್ಥಾಪಿಸಿದ್ದಾರೆಂದು ಹೇಳುತ್ತಾರೆ. ಅನೇಕರು ಇವರಲ್ಲಿ ಸೇವಿಸಿ ತಂತಮ್ಮ ಅಭೀಷ್ಟವನ್ನು ಪಡೆದಿದ್ದಾರೆ."

"ಇಂಥ ದಾಸೋತ್ತಮರ ಕೃತಿಗಳನ್ನು ಯಥಾ ಶಕ್ತಿ ಸಂಗ್ರಹಿಸಿ ೧೯೧೯ ಇಸವಿಯಲ್ಲಿ ಛಾಪಿಸಿದ ಪ್ರಥಮಾವೃತ್ತಿಯಲ್ಲಿ ಬಹಳ ತಪ್ಪುಗಳು ಇದ್ದದ್ದರಿಂದ ಮಹನೀಯರಾದ ಮಾ. ಶ್ರೀ ನಾರಾಯಣರಾವ್ ಕಲಮದಾನಿ ಹಾವೇರಿ ಇವರು ಆ ತಪ್ಪುಗಳನ್ನು ತಿದ್ದಿ ಸರಿಪಡಿಸಿಕೊಟ್ಟರು. ಕ್ರಮವಾಗಿ ದ್ವಿತೀಯ ಮುದ್ರಣವನ್ನು ಬಹಳ ಮಟ್ಟಿಗೆ ಶುದ್ಧವಾಗಿಯೇ ಮುದ್ರಿಸಿದಂತೆ ಈ ತೃತೀಯ ಮುದ್ರಣವು ಸಾಧಿಸಲ್ಪಟ್ಟದೆ. ಈ ಮೂರನೆ ಮುದ್ರಣದಲ್ಲಿ ಹೊಸದಾಗಿ ದೊರೆತ ಕೆಲವು ಕೀರ್ತನೆಗಳನ್ನು, ನದಿಗಳ ತಾರತಮ್ಯ, ನದಿಗಳ ಸ್ತೋತ್ರ, ಬೃಹತ್ತಾರತಮ್ಯ, ತಂತ್ರಸಾರ, ಇವರು ರಚಿಸಿರುವ ಮೂರು ಸುಳಾದಿಗಳನ್ನು ಸೇರಿಸಿದೆ"- ಎಂಬುದಾಗಿ ಜಗನ್ನಾಥದಾಸರ ಕೃತಿಗಳು ಭಾಗ ೧ರಲ್ಲಿ ಗುರುರಾಯರು ಬರೆದಿದ್ದಾರೆ.

## ೧೪

ಪಾವಂಜೆ ಗುರುರಾಯರು ತುಂಬು ಸಂಸಾರಿಗಳು. ಅವರು ಜೀವನದಲ್ಲಿ ಹಲವು ವೃತ್ತಿಗಳಿಗೆ ಕೈಹಾಕಿ ಪ್ರಯೋಗ ನಡೆಸಿ, ಕಡೆಗೆ ಗ್ರಂಥ ಪ್ರಕಟನೆ, ಮಾರಾಟದ ವ್ಯವಸಾಯದಲ್ಲಿ ಅಂದರೆ ಜ್ಞಾನಪ್ರಸಾರ ಕಾರ್ಯದಲ್ಲಿ ಸಾರ್ಥಕತೆಯನ್ನು ಕಂಡುಕೊಂಡರು. ಅವರು ಸರಳರು ಸಜ್ಜನರು. ಅವರ ಅಗತ್ಯಗಳು ಹೆಚ್ಚು ಇರಲಿಲ್ಲ. ಮಿತಾಹಾರ, ವಿಹಾರಗಳಲ್ಲಿ ಮೈಮನಸ್ಸು ಶುದ್ಧವೂ, ಸದೃಢವೂ ಆಗಿತ್ತು. ಉಪವಾಸ, ವ್ರತನಿಯಮ, ದೈನಂದಿನ ದೇವತಾ ಪೂಜೆ, ನಿತ್ಯಾನುಷ್ಠಾನ ಜಪತಪ – ಹೀಗೆ ಬಹುಮಟ್ಟಿಗೆ ಯಾಂತ್ರಿಕವಾಗಿ ಅವರ ಜೀವನ ಸಾಗುತ್ತಿದ್ದುದರಿಂದ ಅವರು ಸಂಸಾರ ಸಾಗರದ ಪ್ರಕ್ಷುಬ್ಧ ಅಲೆಗಳ ನಡುವೆ ಇದ್ದರೂ ಅದರ ಸೋಂಕಿನಿಂದ ದೂರವಿದ್ದ ಹೆಬ್ಬಂಡೆಯಂತೆ ಇದ್ದರು. ಈ ಹೆಬ್ಬಂಡೆಯ ಮೇಲೆ ಇದ್ದರೂ ಬಿರುಗಾಳಿಗೆ ಹೆದರದೆ ಅಲ್ಲೋಲ ಕಲ್ಲೋಲವಾದ ಹೆದ್ದರೆಗಳಿಗೆ ಅಂಜದೆ, ಸಮುದ್ರದ ಸುಳಿನೊರೆಗಳಿಂದ ವಿಚಲಿತರಾಗದೆ ಅಲ್ಲಿನ ಬೃಹತ್ ಪ್ರಾಣಿಗಳಿಗೆ ಹೆದರದೆ ತಮ್ಮ ಲೋಕ ಸಂಗ್ರಹವನ್ನು ಜಿತೇಂದ್ರಿಯರಾಗಿದ್ದು ಸಾಧಿಸಿದರು. ಅವರ ಪಾಲಿಗೆ ಸಂಸಾರಿಯ ಬದುಕು ಬೇರೆಯಲ್ಲ; ಗ್ರಂಥ ವ್ಯವಸಾಯ ಬೇರೆಯಲ್ಲ. ತಪಸ್ಸು ಬೇರೆಯಲ್ಲ, ಭಗವಂತನ ಪೂಜೆ ಬೇರೆಯಲ್ಲ. ಹೀಗೆ ಗೀತಾಚಾರ್ಯನ ಮಾತನ್ನು ಅಕ್ಷರಶಃ ನಡೆನುಡಿಯಲ್ಲೂ ತಂದುಕೊಂಡಿದ್ದರು. ಮಾತಾಡುವುದೆಲ್ಲ ಹರಿ ಸೇವೆ. ಇದು ಅವರ ಬಾಳಿನ ಮಂತ್ರವಾಗಿತ್ತು. ನಾಹಂ ಕರ್ತಾ, ಹರೇಕರ್ತಾ – ಎಂಬ ಆಚಾರ್ಯರ ವಾಣಿಯಲ್ಲಿ ಅವರ ಸಾಧನೆ ಅಡಗಿತ್ತು. ಮಾಡಿದವನು ಅವನು, ಮಾಡಿಸುವವನೂ ಅವನೇ, ಮಾಡಿ ಮಾಡಿಸಿ ಅವರ ಫಲಾಫಲಗಳನ್ನು ಜೀವನನಿಗೆ ಉಣಿಸುವವನು ಅವನೇ ಅವನು – ಬಿಂಬಮೂರ್ತಿ. ಜೀವರು ಪ್ರತಿಬಿಂಬರು. ಸ್ವಾಮಿ ಚಲಿಸಿದರೆ ದಾಸ ಚಲಿಸುತ್ತಾನೆ. ಅವನು ಜೀವ ಸ್ವರೂಪಕ್ಕೆ ತಕ್ಕಂತೆ ಸಾಧನೆ ಮಾಡುತ್ತಾನೆ ಎಂದ ಮೇಲೆ ತಾನು ಮಾಡುತ್ತೇನೆ, ತನ್ನಿಂದಾಯಿತು ಎಂಬ ಮಮಕಾರವಾದರೂ ಎಲ್ಲಿ? ಜೀವನು ಅಸ್ವತಂತ್ರ – ಸ್ವಾಮಿ ಸರ್ವತಂತ್ರ. ಅವನ ಇಚ್ಛೆಯಂತೆ ಲೋಕದ ವ್ಯಾಪಾರ ನಡೆಯುತ್ತದೆ. ಅಣು ರೇಣು ತೃಣಕಾಷ್ಠಗಳು ಅವನ ಇಚ್ಛೆ ಇಲ್ಲದೆ ಚಲಿಸುವುದಿಲ್ಲ. ಎಂದ ಮೇಲೆ ತಾನು ಸೇವೆ ಮಾಡಿದೆನೆಂಬುದು ಅಹಂಕಾರದ ಮಾತು. ಅದು ಅಜ್ಞಾನದ ಮಾತು. ಧ್ಯೇಯ ಪಾಲನೆಗಾಗಿ ಶ್ರೀ ಮಧ್ವಾಚಾರ್ಯರ ತತ್ತ್ವ ಜ್ಞಾನವನ್ನು ಓದಿಕೊಂಡು ಕಲಿಯುಗದ ವೈಕುಂಠ ವೆನಿಸಿದ ಉಡುಪಿಯನ್ನು ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡಿದ್ದರು. ಉಡುಪಿಯಲ್ಲಿದ್ದುಕೊಂಡು ಪ್ರತಿವರ್ಷ ಪರ್ವ ದಿನಗಳಲ್ಲಿ ಮಧ್ವಸರೋವರ ಸ್ನಾನ, ದಿವ್ಯಮಂಗಳ ಮೂರ್ತಿಯಾದ ಶ್ರೀಕೃಷ್ಣನ ದರ್ಶನ, ಅಷ್ಟಮಠ ಯತಿವರರಿಂದ ಜ್ಞಾನೋಪದೇಶ, ಸದಾಸತ್ಸಂಗ, ಸಾತ್ವಿಕರಾದ ಸಜ್ಜನರ ಒಡನಾಟ, ಸದ್ವಿಚಾರಗಳಲ್ಲಿ ಮನಸ್ಸು – ಹೀಗೆ ಪ್ರತಿ ದಿನವನ್ನು ಸಾರ್ಥಕವಾಗಿ, ಸಾಧನಾ ರೂಪವಾಗಿ ಕಳೆಯುತ್ತಿದ್ದ ಗುರುರಾಯರಿಗೆ ಜೀವನದಲ್ಲಿ ವಿಷಾದ ದುಃಖವೆಂಬುದು ಇರಲಿಲ್ಲವೆಂದಲ್ಲ. ಸುಖವಿದ್ದಂತೆ ದುಃಖವೂ ಇರುತ್ತದೆ. ಇದು ಜೀವನ ಸ್ವರೂಪ ಅದನ್ನು ಅನುಭವಿಸಿಯೇ ತೀರಬೇಕು. ಕಷ್ಟ, ದುಃಖ ಬಂದಾಗ ಕುಗ್ಗದೆ, ಸುಖ ಬಂದಾಗ ಹಿಗ್ಗದೆ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿ ಜೀವಿಸುವ ಒಂದು ರೀತಿಯ ನಿಷ್ಕರ್ಮ ಬುದ್ಧಿಯನ್ನು

ಅವರು ಬೆಳೆಸಿಕೊಂಡಿದ್ದರು. ಅವರು ಲೌಕಿಕ ಜೀವನದಲ್ಲೂ ಸಂಸಾರಿಯಾಗಿದ್ದುಕೊಂಡೇ ಸಮುದ್ರದಲ್ಲಿದ್ದ ಹೆಬ್ಬಂಡೆಯನ್ನು ಆಶ್ರಯಿಸಿ ನಿಂತ ದೀಪದ ಗೋಪುರದಂತೆ ಬೆಳೆದಿದ್ದರು. ಅವರು ತಮ್ಮ ಸಾಧನೆಯ ಫಲವಾಗಿ ದೇವರು ತಮ್ಮಿಂದ ಮಾಡಿಸಿದ ಸಾರಸ್ವತ ಸೇವೆಯನ್ನು ಜ್ಞಾನ ಪ್ರಸಾರಕ್ಕಾಗಿ ಅವನು ತಮ್ಮಿಂದ ಮಾಡಿಸಿದ ಪೂಜಾರೂಪಾದ ಕಾರ್ಯವೆಂದು ತಿಳಿದು ಸಂತೃಪ್ತಿಯಿಂದ ಬದುಕನ್ನು ಬಾಳಿದ್ದರು.

ಗುರುರಾಯರಿಗೆ ಸಂಸಾರ ಜೀವನದಲ್ಲಿ ಏರಿಳಿತಗಳು ಇರಲಿಲ್ಲವೆಂದಲ್ಲ. ಅವರು ತಮ್ಮ ಸುಮಾರು ಐವತ್ತರ ಪ್ರಾಯದಲ್ಲಿ ಪ್ರಥಮ ಪತ್ನಿಯನ್ನು ಕಳೆದುಕೊಂಡರು. ಮನೆಯಲ್ಲಿ ಎಲ್ಲರೂ ಹೆಣ್ಣುಮಕ್ಕಳು. ಎಲ್ಲರಿಗೂ ವಿವಾಹ ಮಾಡಿದ್ದರು. ಅವರು ತುಂಬಾ ಅಶೋತ್ತರ ಕಟ್ಟಿದ್ದ ಹಿರಿಯ ಮಗಳು ಮಂದಾಕಿನಿಬಾಯಿಯ ಜೀವನ ನೌಕೆ ನಡುಹರೆಯದಲ್ಲಿಯೇ ಬಂಡೆಗಲ್ಲಿಗೆ ಅಪ್ಪಳಿಸಿ ದಂತಾಗಿ ದಾಂಪತ್ಯ ಜೀವನ ಇಜ್ಜೋಡಾಗಿತ್ತು. ಆಕೆಯನ್ನು ಕಾಶಿಯ ಶಿರೋಮಣಿ ನಾರಾಯಣ ಚಾರ್ಯರಿಗೆ ವಿವಾಹ ಮಾಡಿಕೊಟ್ಟಿತ್ತು. ಮುಂದೆ ಅವರು ಪತಿಯಿಂದ ದೂರವಾಗಿ ಸ್ವತಂತ್ರ ಜೀವನ ನಡೆಸಬೇಕಾಗಿ ಬಂತು. ಆಕೆ ದಿಟ್ಟೆ. ತಂದೆಗೆ ತಕ್ಕ ಮಗಳು. ಧೈರ್ಯಗೆಡದೆ ಬದುಕನ್ನು ಸವಾಲಾಗಿ ಸ್ವೀಕರಿಸಿದಳು.

ಆಕೆಯು ಮತ್ತೆ ಸ್ಕೂಲು ಕಾಲೇಜು ಸೇರಿ ಓದಿದಳು. ಆ ಕಾಲದಲ್ಲೇ ಬಿ.ಎ. ಪದವೀಧರೆಯಾದಳು. ಮುಂದಕ್ಕೆ ಓದಿ ಹಿಂದಿ ಕನ್ನಡ ಭಾಷೆಯಲ್ಲಿ ಎಂ.ಎ.ಪದವಿ ಗಳಿಸಿ ಮದರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲಿ ಹಿಂದಿ ಅಧ್ಯಾಪಕಿಯಾಗಿ ಕೆಲಸಕ್ಕೆ ಸೇರಿ ಕೊನೆಗೆ ಪ್ರಾಧ್ಯಾಪಕಿಯಾಗಿ ನಿವೃತ್ತಳಾದಳು. ಈಕೆಯು ತಾನು ಗಳಿಸಿದ್ದ ವಿದ್ಯೆಯಿಂದ ಅನೇಕ ಹೆಣ್ಣುಮಕ್ಕಳ ಬದುಕಿಗೊಂದು ಭರವಸೆ ಸ್ವಾಂತನ ನೀಡಿದಳು. ನಿವೃತ್ತಳಾದ ಮೇಲೆ ತಾನು ಗಳಿಸಿದ ಹಣದಲ್ಲಿ ಐವತ್ತು ಸಹಸ್ರ ರೂಪಾಯಿ ಗಳನ್ನು ಮಾಧ್ವವಾಙ್ಮಯ ಪ್ರಸಾರಕ್ಕಾಗಿ ವಿದ್ಯಾರ್ಥಿಗಳಿಗೆ ನೆರವಾಗಲು ದತ್ತಿಯಾಗಿ ನೀಡಿದಳು. ತನ್ನ ತಂದೆಯವರ ಸ್ಮರಣಾರ್ಥವಾಗಿ ಎಂ.ಜಿ.ಎಂ. ಕಾಲೇಜಿಗೆ ೫೦೦೦ರೂಗಳನ್ನು ಠೇವಣಿ ಇಟ್ಟು ಅದರ ಬಡ್ಡಿಯಿಂದ ಹರಿದಾಸರ ಕೀರ್ತನೆಯ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನ ಕೊಡಲು ಏರ್ಪಡಿಸಿದಳು. ಅಲ್ಲದೆ ತಮ್ಮ ಅಕ್ಕತಂಗಿಯರು ಅವರ ಮಕ್ಕಳಿಗೆಲ್ಲ ಕೈಲಾದ ಸಹಾಯ ಮಾಡಿದಳು.

ಇನ್ನೊಬ್ಬ ಮಗಳು ಸರಸ್ವತೀಬಾಯಿ ಕೇರಳದ ಪದ್ಮನಾಭಶಾಸ್ತ್ರಿಯನ್ನು ಮದುವೆ ಯಾದಳು. ಅವಳ ಗಂಡ ಮುಂದೆ ಕ್ಷಯರೋಗದಿಂದ ತೀರಿಹೋದಾಗ, ಆಕೆಯು ಸ್ವಾಭಿಮಾನಿ ಯಾಗಿದ್ದುದರಿಂದ, ತವರಿಗೆ ಭಾರವಾಗದೆ, ತಮ್ಮ ಮಕ್ಕಳೊಡನೆ ತಿರುನಂತಪುರದಲ್ಲೇ ನಿಂತಳು. ಈ ಸಮಯದಲ್ಲೂ ಗುರುರಾಯರು ಆ ಸಂಸಾರಕ್ಕೆ ತಮ್ಮ ಕೈಲಾದಷ್ಟು ಸಹಾಯ ಮಾಡಿದರು. ತಮ್ಮ ಗ್ರಂಥಗಳು, ತಾವು ಮಾರುತ್ತಿದ್ದ ಪಂಚಾಗ ಮುಂತಾದವುಗಳನ್ನು ಅವರಿಗೆ ಒದಗಿಸಿ, ಅವುಗಳ ಮಾರಾಟದಿಂದ ಅವರಿಗೊಂದು ಹೊಸ ಜೀವನ ಕಲ್ಪಿಸಿದರು. ಆಕೆ ಮಗ-ಮೊಮ್ಮಗ ಶ್ರೀನಿವಾಸನಲ್ಲಿ ಗುರುರಾಯರಿಗೆ ತುಂಬ ಮಮತೆ, ಅವನಿಗೆ ದುಂದುವೆಚ್ಚ ಮಾಡದಂತೆ ಆಗ್ಗಾಗ್ಗೆ ಕಾಗದ ಬರೆಯುತ್ತಿದ್ದರು. ಲೆಖ್ಖಾಚಾರವೆಂದರೆ ಗುರುರಾಯರ ಲೆಖ್ಖಾಚಾರ. ಹಣವನ್ನು ಸಾಲವಾಗಿ ಕೊಟ್ಟದ್ದರೆ

ಹಿಂದಕ್ಕೆ ಬರುವವರೆಗೆ ಸುಮ್ಮನೆ ಕೂಡುತ್ತಿರಲಿಲ್ಲ. ಎಚ್ಚರಿಕೆ ಪತ್ರವನ್ನು ಬರೆಯುತ್ತಲೇ ಇದ್ದರು. ಇದು ಕೆಲವರಿಗೆ ಸರಿಹೋಗದೆ ಅವರನ್ನು ಜುಗ್ಗ, ಜಿಪುಣರೆಂದು ಆಡಿಕೊಳ್ಳುವಂತೆ ಮಾಡಿತ್ತು. ಅವರು ಮೊಮ್ಮಗನ ವಿವಾಹವಾದಾಗ, ಅವನಿಗೆ ಒಳ್ಳೆಯದಾಗಲೆಂದು ಶುಭಕೋರಿ ಪತ್ರ ಬರೆದಿದ್ದರು. ದಂಪತಿಗಳು ಬೆಜವಾಡದಲ್ಲಿ ನಿರಾತಂಕವಾಗಿ, ನಿವಿಘ್ನವಾಗಿ ಸುಖವಾಗಿ, ಸಾಂಗವಾಗಿ ಹನಿಮೂನ್ ನಡೆಸಿದ ಬಗ್ಗೆ ತಮ್ಮ ಸಂತೋಷ ವ್ಯಕ್ತಪಡಿಸಿದ್ದರು. (ಪತ್ರದ ದಿನಾಂಕ ೧೧-೫-೪೫). ಸರಸ್ವತಿಯ ಈ ಮಗನಿಗೆ ಮದರಾಸಿನ ಹಿಂದೀ ಪ್ರಚಾರ ಸಭೆಯಲ್ಲಿ ಕೆಲಸ ದೊರಕಿತು. ಅವನು ಒಂದು ನೆಲೆಗೆ ಬರುವುದನ್ನು ರಾಯರು ನೋಡಿದ್ದರು. ಇದು ಅವರಿಗೆ ತೃಪ್ತಿ ತಂದಿತ್ತು. ಭಾರತಿಯು ಪಣೆಯಾಡಿಯನ್ನು ವಿವಾಹವಾಗಿ ಗಾಂಧಿವಾದಿಯೂ, ಸಮಾಜ ಕಾರ್ಯಕರ್ತೆಯೂ ಆದಳು. ಅವರ ಮಕ್ಕಳು ವಾದಿರಾಜ, ಜವಹರ, ಹರಿಣಿ ಮದರಾಸಿನಲ್ಲಿ ಕಲಾವಿದರಾಗಿ ತಮ್ಮ ತಾತ ಗುರುರಾಯರು ತಮಗೆ ನೀಡಿದ ಪ್ರೋತ್ಸಾಹಕ್ಕಾಗಿ ಈಗಲೂ ಅವರನ್ನು ನೆನೆಯುತ್ತಾರೆ. ಜಾನಕಿಯು ಮಾತ್ರ ಚಿಕ್ಕಂದಿನಲ್ಲಿ ತೀರಿಕೊಂಡಿದ್ದಳು. ಅಂತೆಯೇ ಹುಟ್ಟಿದ ಒಬ್ಬ ಮಗ, ಪಿತೃ ಋಣ ತೀರಿಸದೆ ಅಗಲಿದ್ದ.

ಈ ದುಃಖದಲ್ಲಿದ್ದರೂ, ಪತ್ನಿ ಪದ್ಮಾವತೀಬಾಯಿ ಅವರ ಎಲ್ಲಾ ಸಾರಸ್ವತ ಜೀವನದಲ್ಲಿ, ಅತಿಥಿ ಅಭ್ಯಾಗತರ ಸೇವೆಯಲ್ಲಿ ಗಂಡನಿಗೆ ನೆರಳಿನಂತೆ ಅನುಸರಿಸಿದ್ದಳು. ಆಕೆ ತೀರಿಕೊಂಡ ಮೇಲೆ ಅವರು ಮತ್ತೆ ವಿವಾಹವಾಗಿ ಮನೆ ತುಂಬಿಸಿಕೊಂಡವಳು ರಮಾದೇವಿ. ಈಕೆಗೆ ಏಳು ಮಂದಿ ಮಕ್ಕಳಾಗಿದ್ದರು. ಕೊನೆಯವರೇ ಗಂಡುಮಕ್ಕಳು. ಹೆಣ್ಣು ಮಕ್ಕಳೆಲ್ಲ ಬುದ್ಧಿವಂತರಾದರೆ ಗಂಡು ಮಕ್ಕಳು ವಿದ್ಯೆಯಲ್ಲಿ ಮುಂದುವರೆಯಲಿಲ್ಲ. ಅಂಗಡಿ ಮತ್ತು ಪ್ರೆಸ್ಸು ನೋಡಿಕೊಳ್ಳಬೇಕಾಯಿತು. ಈ ಒಂದು ಸಂದರ್ಭದಲ್ಲಿ ಅವರ ತಾಯಿ ತಮಾಷೆಗೆ ತನ್ನ ಸವತಿ ಮಕ್ಕಳೊಡನೆ ಹೇಳಿದ್ದಳಂತೆ "ನಿಮ್ಮ ತಂದೆ ತಮ್ಮ ವಿದ್ಯೆ, ಬುದ್ಧಿಯನ್ನೆಲ್ಲಾ ತಮ್ಮ ಹೆಣ್ಣು ಮಕ್ಕಳಿಗೆ ಧಾರೆ ಎರೆದರು." ಈ ಮಾತಿನಲ್ಲಿ ನೋವಿಗಿಂತ ಹೆಣ್ಣು ಮಕ್ಕಳ ಪ್ರಶಂಸೆ ಇತ್ತು. ಈ ಸಾಧ್ವಿ ರಮಾದೇವಿ ಒಂದು ವಿಶೇಷ ಸ್ವಭಾವದ ಹೆಣ್ಣು ಮಗಳು.

ಗಂಡನಮನೆ ಸೇರಿದಾಗ, ತನಗಿಂತಲೂ ಹೆಚ್ಚು ವಯಸ್ಸಾಗಿದ್ದ ಮಲ ಮಕ್ಕಳೊಡನೆ ಸಂಸಾರ ಮಾಡಬೇಕಾದ ವಿಚಿತ್ರ ಸನ್ನಿವೇಶವಿತ್ತು. ಆಕೆ ಹಳ್ಳಿಯಲ್ಲಿ ಹುಟ್ಟಿ ಬೆಳೆದ ವಿದ್ಯಾಗಂಧವಿಲ್ಲದ ಗ್ರಾಮೀಣ ಮಹಿಳೆ. ಒಮ್ಮೆ ತನಗೆ ತವರಿನಿಂದ ಬಂದ ಪತ್ರ ಓದಲಾಗದೆ, ಮಲಮಗಳೊಬ್ಬಳ ಸಹಾಯ ಕೇಳಿದಳು. ಆಕೆ ಆಗ ತನಗೆ ಪುರಸತ್ತು ಇಲ್ಲ, ಆಮೇಲೆ ಓದುತ್ತೇನೆಂದು ಹೇಳಿದಳಂತೆ. ಬಹುಶಃ ಮಕ್ಕಳ ಕಾಟದಿಂದ ಹಾಗೆಂದಿರಬಹುದು. ಈ ಮಾತನ್ನು ಆಕೆ ಛಲವಾಗಿ ಸ್ವೀಕರಿಸಿ ಅಂದೇ ಗಂಡನಿಂದ ಅಕ್ಷರಾಭ್ಯಾಸಕ್ಕೆ ಮೊದಲು ಮಾಡಿದಳು. ಕಷ್ಟಪಟ್ಟು ಅಕ್ಷರ ಕಲಿತು, ಬಹು ಶೀಘ್ರವಾಗಿ ಓದು ಬರಹಗಳನ್ನು ಕರತಲ ಮಾಡಿಕೊಂಡಳು. ಮಾತ್ರವಲ್ಲ ತನ್ನವರ ಅಂಗಡಿಯಲ್ಲೂ, ಮನೆಯಲ್ಲಿನ ಪುಸ್ತಕ ಭಂಡಾರದಲ್ಲೂ ಲಭ್ಯವಾಗುತ್ತಿದ್ದ ಮೂಲಗ್ರಂಥಗಳು, ಕಥೆ ಕಾದಂಬರಿ, ಪುರಾಣ ಒಂದನ್ನು ಬಿಡದೆ, ಪುರಾಣ ನಾಮಚೂಡಾಮಣಿಯನ್ನು ಕಡೆಗೆ ಕಂಠಸ್ಥಗೊಳಿಸಿಕೊಂಡಳಂತೆ. ಸ್ವಯಂ ರಾಯರಿಗೆ ಈ ಬಗ್ಗೆ ಏನಾದರೂ ಸಂದೇಹ ಬಂದರೆ ಆಕೆ ತಟಕ್ಕನೆ ಸರಿಯಾದ ಉತ್ತರ ಹೇಳುತ್ತಿದ್ದಳಂತೆ. ಆಕೆ ತನ್ನ ಮಲ ಹೆಣ್ಣು ಮಕ್ಕಳನ್ನು ಕೊನೆತನಕ ತನ್ನ ಹೊಟ್ಟೆಯ

ಮಕ್ಕಳಂತೆಯೇ ನೋಡಿಕೊಂಡಳು. ಹೀಗೆ ದೊಡ್ಡ ಮನೆತನವನ್ನು ನಿರ್ವಹಿಸಿ, ಎಲ್ಲರ ಮೆಚ್ಚಿಗೆ ಪಡೆದಿದ್ದ ಸಾಧ್ವಿ ಮಣಿ ಗುರುರಾಯರ ಜತೆಗೆ ಬಾಳುವುದೆಂದರೆ ಅಷ್ಟು ಸುಲಭವೇನೂ ಆಗಿರಲಿಲ್ಲ. ಮನೆಯಲ್ಲಿ ಸದಾ ಜನರಿಂದ ಕಿಕ್ಕಿರಿಯುತ್ತಿತ್ತು. ಮದುವೆ ಮುಂಜಿ, ಬಾಣಂತನ, ಯಾತ್ರೆ ಖರ್ಚು ವೆಚ್ಚ, ಆಕೆ ಹೇಗೆ ಸವರಿಸುತ್ತಿದ್ದಳೋ ಎಲ್ಲರಿಗೂ ಆಶ್ಚರ್ಯ!

ಪಾವಂಜೆ ಗುರುರಾಯರು ಶಿಸ್ತಿನ ಮನುಷ್ಯರು. ಒಂದು ತತ್ವಕ್ಕೆ ಕಟ್ಟುಬಿದ್ದರೆ ಜಪ್ಪಯ್ಯ ಎಂದರೂ ಸೋಲುವವರಲ್ಲ. ಅವರು ಕಾಸು ಕಾಸಿಗೆ ಲೆಕ್ಕವಿಡುತ್ತಿದ್ದರಿಂದಲೇ ಅವರ ಅಂಗಡಿ ವ್ಯವಹಾರ-ಪ್ರಕಾಶನದ ಉದ್ದಿಮೆ ಅಷ್ಟು ಚೆನ್ನಾಗಿ ಬೆಳೆದಿದ್ದು. ಅವರಿಗೆ ಒಮ್ಮೆ ಬದರಿಯಾತ್ರೆ ಮಾಡಬೇಕೆನಿಸಿತು. ಆಗ ಅವರು ಎಲ್ಲಾ ವ್ಯವಸ್ಥೆಯನ್ನು ಮಾಡಿಕೊಂಡರಂತೆ. ತಾವು ಒಂದು ವೇಳೆ ಯಾತ್ರೆಯಲ್ಲೇ ಅಸುನೀಗಿದರೆ ಮುಂದೇನು ಮಾಡಬೇಕೆಂಬುದರ ಬಗ್ಗೆ ಮರಣ ಶಾಸನ (Will) ಬರೆಸಿ, ಮುದ್ರಣಾಲಯದ ರಾಮಕೃಷ್ಣಚಾರ್ಯರಿಗೆ ರಹಸ್ಯವಾಗಿ ಒಪ್ಪಿಸಿ ಹೋಗಿದ್ದರಂತೆ! ಅಷ್ಟು ಮುಂಜಾಗ್ರತೆ ಅವರದು.

ಮತ್ತೊಂದು ಪ್ರಸಂಗ ಅವರ ಶಿಸ್ತು ನಿಯಮ ಪಾಲನೆಯನ್ನು ತೋರಿಯುತ್ತದೆ.

ಗುರುರಾಯರಿಗೆ ಅನೇಕ ಸದ್ಗೃಹಸ್ಥ ಸ್ನೇಹಿತರಿದ್ದರು. ಇವರು ಉಡುಪಿಗೆ ಬಂದಾಗ, ಅವರ ಯೋಗಕ್ಷೇಮ ನೋಡಿಕೊಳ್ಳುವ ಭಾರ ಗುರುರಾಯರಿಗೆ ಬೀಳುತ್ತಿತ್ತು. ಅತಿಥಿಗಳಿಗೆ ಅವರ ವಾಸ್ತವ್ಯದಲ್ಲಿ ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಇಂಥವರಲ್ಲಿ ತಿರುಚನಾ ಪಳ್ಳಿ (ಕುಂಭಕೋಣ)ಯ ಪ್ರಸನ್ನ ವೆಂಕಟೇಶರಾವ್ ಅವರು ಒಬ್ಬರು. ಇವರಿಗೆ ಒಮ್ಮೆ ತಮ್ಮ ತಾಯಿಯ ಹೆಸರಿನಲ್ಲಿ ಸಹಸ್ರ ಬ್ರಾಹ್ಮಣ ಭೋಜನ ಮಾಡಿಸಬೇಕೆಂಬ ಮನಸ್ಸಾಯಿತು. ಅದಕ್ಕೆ ಉಡುಪಿಗಿಂತ ಬೇರೆ ಪುಣ್ಯಕ್ಷೇತ್ರ ಬೇಕೆ? ಈ ಕಾರ್ಯಕ್ಕೆ ಪಾವಂಜೆ ಗುರುರಾಯರನ್ನು ನೇಮಿಸಿ, ಅವರಿಗೆ ಈ ಸಹಸ್ರ ಬ್ರಾಹ್ಮಣ ಸಮಾರಾಧನೆಗೆ ಬೇಕಾದಷ್ಟು ಹಣಕೊಟ್ಟು ಹೋದರು. ಅವರು ಪ್ರತಿದಿನ ಇಷ್ಟು ಸಂಖ್ಯೆಯ ಬ್ರಾಹ್ಮಣರಿಗೆ ಮಠದಲ್ಲಿ ಊಟಕ್ಕೆ ಹೇಳಿ ಅವರಿಗೆ ದಕ್ಷಿಣೆ, ತಾಂಬೂಲ, ಪಂಚಪಾತ್ರೆ ಉದ್ಧರಣೆಯನ್ನು ಬಳುವಳಿಯಾಗಿ ನೀಡುತ್ತಿದ್ದರು. ಒಂದೊಂದು ದಿನ ಇಷ್ಟು ಮಂದಿ ಬ್ರಾಹ್ಮಣರಿಗೆಂದು ಗೊತ್ತಾಗಿರುತ್ತಿತ್ತು. ಅವರನ್ನು ಆರಿಸಿ ಆರಿಸಿ ಊಟಕ್ಕೆ ಹೇಳುತ್ತಿದ್ದರು. ಹೀಗಿರಲು ಒಂದು ದಿನ ಒಬ್ಬ ಅಡಿಗೆಯವನು ಬ್ರಾಹ್ಮಣಾರ್ಥಕ್ಕೆ ಕುಳಿತುಕೊಂಡ. ಅವನಿಗೆ ಗುರುರಾಯರು ಊಟಕ್ಕೆ ಹೇಳಿರಲಿಲ್ಲ. ಹೀಗಾಗಿ ಅವನನ್ನು ಪಾರುಪತ್ತೆಗಾರರು ಎಲೆಯಿಂದ ಎಬ್ಬಿಸಿ ಬೇರೆ ಸ್ಥಳ ತೋರಿಸಿದರು. ಇಷ್ಟಕ್ಕೆ ಅವನು ಕುಪಿತನಾಗಿ ಊಟಮಾಡದೆ ಹೊರಟುಹೋದ. ಅವರು ಮಠದ ಅಡಿಗೆಯವನಾಗಿದ್ದುದರಿಂದ ಇದರಿಂದ ತಮಗೆಲ್ಲ ಅಪಮಾನವಾಯಿತೆಂದು ಅಡಿಗೆಯವರೆಲ್ಲ ಗುರುರಾಜರಮನೆಗೆ ಶುಭಾಶುಭಕಾರ್ಯಕ್ಕೆ ಅಡಿಗೆಗೆ ಹೋಗಬಾರದೆಂದು ಹಠಹಿಡಿದು, ತಮ್ಮಲ್ಲೇ ಕಟ್ಟು ಮಾಡಿದರು. ಆಗ ಮಗನ ಮುಂಜಿಯೊಂದು ನಡೆಯಬೇಕಾಗಿ ಬಂದಿತು. ಅಡಿಗೆಯವರು ಬರಲು ಒಪ್ಪಲಿಲ್ಲ. ರಾಯರು ಪಟ್ಟುಬಿಡಲಿಲ್ಲ. ಕ್ಷಮೆ ಯಾಚಿಸಲೂ ಇಲ್ಲ. ಅವರು ಹೆಂಡತಿ ಮಗನೊಡನೆ ಮಂತ್ರಾಲಯಕ್ಕೆ ಹೋಗಿ ಮುಂಜಿ ಮಾಡಿಕೊಂಡು ಬಂದರು. ಮುಂದೆ ಪುತ್ತಿಗೆ ಮಠದ ಸ್ವಾಮಿಗಳು ಮಧ್ಯ ಪ್ರವೇಶಿಸಿ, ಅವರ ವೈಮನಸ್ಸನ್ನು ಬಗೆಹರಿಸಿದರಂತೆ!

ಪಾವಂಜೆ ಗುರುರಾಯರು ಭಾಷಣಕಾರರು ಆಗಿರಲಿಲ್ಲ. ಅವರಿಗೆ ಸಭೆ ಸಮಾರಂಭಗಳು ಒಗ್ಗುತ್ತಿರಲಿಲ್ಲ. ಹೀಗಾಗಿ ಅವರು ತಮ್ಮ ಜೀವಿತ ಕಾಲದಲ್ಲಿ ಒಂದು ಸಭೆಗೂ ಮುಖ್ಯ ಅತಿಥಿಯಾಗಿ ಹೋಗಿರಲಿಲ್ಲ. ಶ್ಲಾಘನೆಗಳು ಅವರಿಗೆ ಹಿಡಿಸುತ್ತಿರಲಿಲ್ಲ. ಒಮ್ಮೆ ಟಿ.ಎಂ.ಎ. ಪೈರವರು ಗುರುರಾಯರನ್ನು ತಮ್ಮ ವೈದ್ಯಕೀಯ ಮಿತ್ರರ ಜತೆಯಲ್ಲಿ ಸನ್ಮಾನಿಸಬೇಕೆಂದು ಪ್ರಯತ್ನಿಸಿದಾಗ, ಗುರುರಾಯರು ನಿಷ್ಠೂರವಾಗಿ ಒಲ್ಲೆ ಎಂದು ಬಿಟ್ಟರಂತೆ.

ಅವರಿಗಾದ ಸನ್ಮಾನವೆಂದರೆ, ಅವರು ತೀರಿಕೊಂಡ ಮೇಲೆ, ೧೯೬೫ರಲ್ಲಿ ಉಡುಪಿಯ ಶ್ರೀ ಕನಕದಾಸ ಚತುರ್ಥ ಶತಮಾನೋತ್ಸವ ಸಮಿತಿಯವರು, ಪಾವಂಜೆ ಗುರುರಾವ್ ಅಂಡ್ ಸನ್ ಅವರನ್ನು ಕರೆಸಿಕೊಂಡು ಅವರ ಮೂಲಕ ಗುರುರಾಯರ ಸೇವೆಗೆ ಮಾಡಿದ ಸನ್ಮಾನ. ಆ ಕಾಲದಲ್ಲಿ ಅರ್ಪಿಸಿದ ಅಭಿನಂದನಾ ಪತ್ರದಲ್ಲಿ ಪಾವಂಜೆಯವರ ಸೇವೆಯನ್ನು ಮುಕ್ತ ಕಂಠದಿಂದ ಸ್ಮರಿಸಿ ಕೊಳ್ಳಲಾಗಿದೆ.

ಈ ಅಭಿನಂದನಾ ಪತ್ರದಲ್ಲಿ ಈ ಮಾತುಗಳು ತುಂಬಿ ಬರೆದಿದೆ. "*ಪಾವಂಜೆ ಗುರುರಾಯರು ಕನ್ನಡ ಜನಕ್ಕೆ ಚಿರಪರಿಚಿವಾದ ಹೆಸರು. ಸುಮಾರು ೬೦ ವರ್ಷಗಳ ಕೆಳಗೆ ಅವರು ಉಡುಪಿಗೆ ಬಂದು ನೆಲೆಸಿ ಮೊತ್ತ ಮೊದಲ ಬಾರಿಗೆ ಪೂಜಾ ಮತ್ತು ಸಂಧ್ಯಾವಂದನ ವಿಧಿಗಳನ್ನು ಕನ್ನಡ ಲಿಪಿಯಲ್ಲಿ ಅಚ್ಚು ಮಾಡಿಸಿದರು. ಪಾವಂಜೆಯಲ್ಲಿ ಹುಟ್ಟಿ, ತಿರುವಾಂಕೂರಿನಲ್ಲಿ ಕಲಿತು, ಆಯುರ್ವೇದ ಪಂಡಿತರಾಗಿ ಉಡುಪಿಯನ್ನು ಪ್ರವೇಶಿಸಿದ ಅವರು ಕನ್ನಡದ ಕ್ರಾಂತಿಕಾರಿ ಪ್ರಕಾಶಕರಲ್ಲಿ ಅಗ್ರಗಣ್ಯರು. ಮಂತ್ರ ಗ್ರಂಥಗಳನ್ನು ಅಚ್ಚಿನ ಮನೆಗೊಯ್ಯುವುದೇ ಮಹಾಪರಾಧ ಎಂದು ಭಾವಿಸಿದ್ದ ಕಾಲದಲ್ಲಿ ಅವರು ಸಮಾಜದ ಎಲ್ಲ ಪ್ರತಿಕ್ರಿಯೆಗಳನ್ನು ದಿಟ್ಟತನದಿಂದ ಸ್ವಾಗತಿಸಿ ತನ್ನ ಪ್ರಕಾಶನವನ್ನು ಮುಂದುವರೆಸಿದರು. ಅದಕ್ಕಾಗಿ ಸ್ವಂತ ಮುದ್ರಣಾಲಯವನ್ನು ಸ್ಥಾಪಿಸಿದರು. ಇಂದು ಮಾಧ್ವಸಿದ್ಧಾಂತ ಗ್ರಂಥಾಲಯ ಎಂಬ ಹೆಸರನ್ನು ಕೇಳದ ಕನ್ನಡಿಗ ವಿರಳ, ಆದರೆ ಇಂಥ ಅಪೂರ್ವ ಮತ್ತು ಅಪೂರ್ವವಾದ ಪುಸ್ತಕಗಳನ್ನು ಪ್ರಕಾಶಿಸುತ್ತಿರುವ ಸಂಸ್ಥೆ ಕನ್ನಡದಲ್ಲಿ ಇದೊಂದೇ. ಆ ಕಾಲದಲ್ಲಿ ಇದೊಂದು ಪವಾಡವೆಂದರೂ ತಪ್ಪಲ್ಲ. ಶ್ರೀ ಗುರುರಾಯರ ಸಹಾಸದ ಫಲವಾಗಿಯೇ ಇಂದು ಅನೇಕ ವೇದಾಂತ ಗ್ರಂಥಗಳು ಕನ್ನಡದಲ್ಲಿ ಅನುವಾದಿಸಲ್ಪಟ್ಟು ಜನ ಸಾಮಾನ್ಯರನ್ನು ಮುಟ್ಟುವಂತಾಗಿದೆ. ನೂರಾರು ಯಕ್ಷಗಾನ ಪ್ರಸಂಗಗಳನ್ನು ಪ್ರಕಟಿಸಿ ಜಿಲ್ಲೆಯ ಕಲಾರಂಗಕ್ಕೆ ಇವರು ಅಪೂರ್ವವಾದ ಸೇವೆಯನ್ನು ಸಲ್ಲಿಸಿದರು.*

*ಶ್ರೀರಾಯರು ತುಳಿದ ದಾರಿಯನ್ನು ತುಳಿಯುವವರಲ್ಲ. ಏನನ್ನಾದರೂ ಹೊಸತನ್ನು ಸಮಾಜಕ್ಕೆ ಕೊಡಬೇಕು ಎಂದು ಪ್ರತಿಕ್ಷಣವೂ ಅವರು ಚಡಪಡಿಸುತ್ತಿದ್ದರು. ಅವರು ಸಾಧಿಸಿದ ಹೊಸತನವೂ ಕಮ್ಮಿಯದೇನೂ ಅಲ್ಲ. ಅವರ ಅದ್ಭುತ ಸಾಧನೆಗಳ ಅರಿವು ಹೆಚ್ಚಿನ ಜನಕ್ಕೆ ಇನ್ನೂ ಬಂದೇ ಇಲ್ಲ....*"

ಈ ಪತ್ರದಲ್ಲಿನ ಕೊನೆಯ ಮಾತು ಅಕ್ಷರಶಃ ಸತ್ಯವಾದುದು. ಪಾವಂಜೆ ಗುರುರಾಯರು ಹಿಂದೆ ಸೂಚಿಸಿದಂತೆ ಕ್ರಾಂತಿಕಾರರು. ಅವರೆಂದೂ ಸವೆದ ದಾರಿಯನ್ನು ಹಿಡಿಯಲೇ ಇಲ್ಲ, ಅವರೆಂದೂ ಒಂಟಿ ಸಲಗವಿದ್ದಂತೆ, ನಡೆದದ್ದೇ ಹೆದ್ದಾರಿಯಾಯಿತು. ಹೀಗೆ ನಡೆಯಲು ಅನೇಕರಿಗೆ

ಧೈರ್ಯವಿಲ್ಲದಿದ್ದ ಕಾಲದಲ್ಲಿ ಅವರು ಹೊಸ ಹೊಸ ಮಾರ್ಗಗಳನ್ನು, ದಿಗಂತಗಳನ್ನು ಪ್ರಕಟಣಾ ಜಗತ್ತಿನ ಆವಿಷ್ಕಾರಕ್ಕೆ ತಂದರು. ಇದು ಅವರ ವೈಶಿಷ್ಟ್ಯ.

೧೫

ಪಾವಂಜೆ ಗುರುರಾಯರು ಕರ್ಮಯೋಗಿಗಳಾಗಿದ್ದರು. ಮಾತನಾಡುತ್ತಿದ್ದುದು ಕಡಿಮೆ, ಆಡದೆ ಮಾಡುತ್ತಿದ್ದ ಕೆಲಸ ಅಪಾರ. ಅವರೇನು ಶುಷ್ಕ ವೇದಾಂತಿಯಾಗಿರಲಿಲ್ಲ. ಕಾಡುಹರಟೆ ಸೇರುತ್ತಿರಲಿಲ್ಲ. ಮುತ್ತಿನಂಥ ಒಂದು ಮಾತು ಆಗೊಮ್ಮೆ ಈಗೊಮ್ಮೆ ಗೆಳೆಯರ ಗೋಷ್ಠಿಯಲ್ಲಿ ಬರುತ್ತಿತ್ತು. ಅದು ಅಮೂಲ್ಯ ಸಲಹೆಯಾಗಿರುತ್ತಿತ್ತು. ಅವರಿಗೆ ಮಾತಿಗಿಂತ ಮೌನ ಪ್ರಿಯವಾಗಿತ್ತು. ಸೊಲ್ಲಿಗಿಂತ ಕೃತಿ ಸತ್ವಯುತವೆಂಬ ಅರಿವಿತ್ತು. ಅವರು ಸಮಾಜದಿಂದ ದೂರ ಸಿಡಿದವರಲ್ಲ. ಸರಸ ಸಜ್ಜನಿಕೆಯಿಂದ ಬಾಹಿರರಲ್ಲ. ವಿನೋದ ಪ್ರವೃತ್ತಿ ಇದ್ದರೂ ಗಂಭೀರ ಅವರ ಸಹಜ ಸ್ವಭಾವ. ಇಪ್ಪತ್ತು ವರ್ಷವಾದರೂ ಮಗ ತಂದೆಯ ಜತೆಯಲ್ಲಿ ಮಾತನಾಡಲು ಅಂಜುತ್ತಿದ್ದನಂತೆ! ಹೆಣ್ಣು ಮಕ್ಕಳಿಗೆ ಈ ಭಯವಿರಲಿಲ್ಲ. ಅವರಿಗೆ ಎಂದೂ ಸಲಿಗೆ! ಅಣ್ಣನಿಗೆ ಅಪೀಲ್ ಹೋಗಬೇಕಾದರೆ ಅಕ್ಕಂದಿರ ಮೂಲಕವೇ. ಹೆಣ್ಣು ಮಕ್ಕಳ ಮನಸ್ಸನ್ನು ರಾಯರು ಎಂದೂ ನೋಯಿಸಿದವರಲ್ಲ, ಹಾಗೆಂದು ಅವರನ್ನು ಸ್ವೇಚ್ಛೆಯಿಂದ ಬೆಳೆಸಲಿಲ್ಲ. ಎಲ್ಲದರಲ್ಲೂ ಹಿತ, ಮಿತ, ಅಚ್ಚುಕಟ್ಟು.

ಗುರುರಾಯರು ದೈವಭಕ್ತರು, ತಮ್ಮ ಪೂಜಾ ಉಪಕರಣಗಳನ್ನು ತಾವೇ ತೊಳೆದು ಸ್ವಚ್ಛ ಗೊಳಿಸಬೇಕು. ಬೆಳಿಗ್ಗೆ ನಾಲ್ಕು ಐದು ಗಂಟೆಗೆ ಏಳುತ್ತಿದ್ದರು. ತುಳಸಿ ಹೂಗಳ ಸಂಗ್ರಹ ಮುಗಿಸಿದ ಮೇಲೆ ಅವಕಾಶವಾದರೆ ಮಧ್ವ ಸರೋವರಕ್ಕೆ ಹೋಗಿ ಸ್ನಾನಮಾಡಿ, ಸ್ವಾಮಿ ದರ್ಶನ ಮಾಡಿ ಬರುತ್ತಿದ್ದರು. ಅನಂತರ ಮನೆಯಲ್ಲಿ ಪೂಜೆ. ಸರಿಯಾಗಿ ಎಂಟುಗಂಟೆಗೆ ಫಲಹಾರ ಮಾಡಿ ಅಂಗಡಿಗೆ ಬಂದರೆ ಹನ್ನೆರಡು ಗಂಟೆಗೆ ಅದನ್ನು ಮುಚ್ಚುತ್ತಿದ್ದರು. ಅನಂತರ ಊಟ, ವಿಶ್ರಾಂತಿ. ಮತ್ತೆ ಎರಡು ಗಂಟೆಗೆ ಅಂಗಡಿಗೆ ಹಾಜರು. ಸಂಜೆ ಗೆಳೆಯರೊಡನೆ ವ್ಯವಹಾರ ನೋಡಿ ಕೊಳ್ಳುತ್ತಲೇ ಸರಸಗೊಂಡು ರಾತ್ರಿ ಮನೆಗೆ ಹಿಂತಿರುಗಿದ ಮೇಲೆ ಮತ್ತೆ ಪೂಜೆ, ಫಲಹಾರ. ಅನಂತರ ರಾತ್ರಿ ಒಂದು ಗಂಟೆಯನತಕ ಬರವಣಿಗೆ, ಪ್ರೂಫು ನೋಡುವುದು, ಗ್ರಂಥಪಠಣ, ಪತ್ರವ್ಯವಹಾರ -ಇತ್ಯಾದಿ ಬಿಡುವಿಲ್ಲದ ಕಾರ್ಯಕ್ರಮ. ಕೇವಲ ಮೂರು ನಾಲ್ಕು ತಾಸುನಿದ್ರೆ ಮತ್ತೆ ಹೊಸದಿನ ಆರಂಭವಾಗುತ್ತಿತ್ತು. ಹೀಗೆ ರಾಯರ ಜೀವನ, ಕ್ಲುಪ್ತವಾಗಿ ಗಡಿಯಾರದ ಮುಳ್ಳನ್ನು ಅನುಸರಿಸಿ, ಕರಾರುವಕ್ಕಾಗಿ ನಡೆದಿತ್ತು.

ತಮ್ಮ ವ್ಯವಹಾರದಲ್ಲಿ ತ್ರಿಕರಣಪೂರ್ವಕವಾಗಿ ಮುಳುಗಿದ್ದು ಅದನ್ನೆ Duty is Worship ದುಡಿಮೆಯೇ ದೇವರ ಪೂಜೆ ಎಂಬಂತೆ ಆಚರಿಸುತ್ತಿದ್ದ ಅವರಿಗೆ ಸಭೆ ಸಮಾರಂಭ ಸಾರ್ವಜನಿಕ ಸಂಸ್ಥೆಗಳ ವ್ಯವಹಾರಗಳಿಂದ ದೂರವಿರುವ ಮನಸ್ಸು ಸಹಜವೇ. ಉಡುಪಿಯಲ್ಲಿ ಪ್ರಥಮಬಾರಿಗೆ ಅಷ್ಟಮಠದ ಪೀಠಪತಿಗಳೆಲ್ಲರೂ ಸೇರಿ ಸಂಸ್ಕೃತ ಕಾಲೇಜು, ವೇದ ಪಾಠಶಾಲೆ ರೂಪ ಗೊಂಡ ಸಮಯದಲ್ಲಿ ಆದಮಾರು ಮಠದ ವಿಭುದಪ್ರಿಯತೀರ್ಥರು, ಶ್ರೀಮನ್ಮಧ್ವ ಸಿದ್ಧಾಂತ

ಪ್ರಬೋಧಿನೀ ಸಭಾ - ಎಂಬ ಸಂಸ್ಥೆಯನ್ನು ಕಟ್ಟಿದರು. ಅದರ ನೇತೃತ್ವದಲ್ಲಿ ಈ ಸಂಸ್ಕೃತ ಕಾಲೇಜಿನ ಸ್ಥಾಪನೆಯಾಯಿತು. ಇಂಗ್ಲಿಷ್ ಬಲ್ಲ ಗುರುರಾಯರನ್ನು ಅವರು ಕಾಲೇಜಿಗೆ ಆಹ್ವಾನಿಸಿದರು. ಮೊದಲು ಅಲ್ಲಿನ ಇಂಗ್ಲೀಷ್ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದು ಕೆಲವು ವರುಷ ಗುರುರಾಯರು ಅಲ್ಲಿನ ವಿದ್ಯಾರ್ಥಿಗಳಿಗೆ ಅಧ್ಯಾಪಕರಾಗಿ ಬೋಧಿಸಿ, ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಅದರ ಸಂಬಂಧ ರಾಯರಿಗೆ ಕೊನೆಯವರೆಗೂ ಇತ್ತು.

ಪಾವಂಜೆ ಗುರುರಾಯರು ಸದೃಢರಾಗಿದ್ದರು. ಅವರೆಂದೂ ಕಾಹಿಲೆ ಮಲಗಿರಲೇ ಇಲ್ಲ. ಆಹಾರ ವಿಹಾರಗಳಲ್ಲಿ ಮಿತಿಯನ್ನು ಪಾಲಿಸಿದ್ದ ಅವರಿಗೆ ಅಧಿಕ ದೇಹಶ್ರಮದಿಂದಾಗಿ ಸಕ್ಕರೆ ರೋಗವಿತ್ತು. ಅದನ್ನು ಊಟ ತಿಂಡಿಗಳಿಂದ ನಿಯಂತ್ರಣಕ್ಕೆ ಒಳಪಡಿಸಿದ್ದರು. ಆಗಾಗ್ಗೆ ಇಸಬು ಅವರನ್ನು ಕಾಡುತ್ತಿತ್ತು. ಇಷ್ಟನ್ನು ಬಿಟ್ಟರೆ ಅವರಿಗೆ ರೋಗವೆಂಬುದೇನೆಂದು ಗೊತ್ತಿರಲಿಲ್ಲ.

ಅವರು ೧೯೪೪ನೇ ಸೆಪ್ಟೆಂಬರ್ ೨೨ನೇ ದಿನಾಂಕ ತಮ್ಮ ಮಗಳು ಮಂದಾಕಿನಿಬಾಯಿಯ ನೆನಪಾಗಿ, ಮದುರಾಸಿಗೆ ಒಂದು ಪತ್ರ ಬರೆದರು. ಕ್ಷೇಮ ಸಮಾಚಾರದ ವಿಷಯವನ್ನೆಲ್ಲ ತಿಳಿಸಿದ ಮೇಲೆ ಪೆನ್ನು ಮುಂದೆ ಲಿಖಿತಗೊಳ್ಳಲು ತಕರಾರು ಮಾಡಿತು. ಆಗ ರಾಯರು ಪೆನ್ನಿನಲ್ಲಿ ಇನ್ನೇನು ಮಸಿ ತೀರಿತು ಎಂದು ಪತ್ರವನ್ನು ಹಠಾತ್ತನೆ ನಿಲ್ಲಿಸಿದರು. ಅದೇ ಅವರು ಬರೆದ ಕೊನೆಯ ಪತ್ರ, ಅದೇ ಅವರ ಕೊನೆಯ ಲೇಖನ.

ಆಗ ಅವರಿಗೆ ಎಪ್ಪತ್ತೊಂಬತ್ತು ನಡೆಯುತ್ತಿತ್ತು. ಆದರೂ ಅವರಿಗೆ ದೇಹದಲ್ಲಿ ತಲೆದೋರಿದ್ದ ನಿಶ್ಶಕ್ತಿ ಹೊರತು, ಬೇರೆ ಕಾಹಿಲೆ ಇರಲಿಲ್ಲ. ಇಪ್ಪತ್ತೆರಡನೆಯ ತಾರೀಖು ಕಳೆಯುತ್ತಿದ್ದಂತೆ, ಮಗ ಮಧುಸೂದನರಾಯರನ್ನು ಎಬ್ಬಿಸಿ, ಬೇಗ ಕರೆಸಿದರು.

"ನೋಡು, ಏನೋ ನಿಶ್ಶಕ್ತಿಯಾಗುತ್ತಿದೆ. ನನ್ನನ್ನು ಹಾಸಿಗೆಯಿಂದ ಎತ್ತಿ, ಹಜಾರದಲ್ಲಿ ಚಾಪೆಯ ಮೇಲೆ ಮಲಗಿಸು" - ಎಂದರು.

ಅನಂತರ ರಾಮನಾಮ ಸ್ಮರಣೆಗೆ ಆರಂಭಿಸಿದರು. ಅಂದೆಲ್ಲ ಅವರಿಗೆ ಭಗವಂತನದೇ ಜಪವಾಯಿತು.

ಇಪ್ಪತ್ತೆರಡನೇ ದಿನಾಂಕ ಕಳೆದು ಇಪ್ಪತ್ತಮೂರನೆಯ ದಿನ ಆಗಮಿಸಿತ್ತು. ರಾಯರು ದಣಿದು ಶರತಲ್ಪದಲ್ಲಿ ಮಲಗಿದ ಭೀಷ್ಮರಂತೆ ನಿಸ್ತೇಜರಾಗಿ ಚಾಪೆಯ ಮೇಲೆ ಮಲಗಿದ್ದರು. ಮಲಗಿದ್ದವರು ಮೇಲೇಳಲಿಲ್ಲ. ಅವರು ಭೀಷ್ಮರಂತೆ ಇಚ್ಛಾ ಮರಣಿಗಳಾಗಿದ್ದಿರಬೇಕು. ಅವರ ವಿಶ್ರಾಂತಿ ಇಲ್ಲದ ದುಡಿಮೆ ಅವರ ದೇಹವನ್ನು ನಿತ್ರಾಣಗೊಳಿಸಿತ್ತು. ಅವರು ಶ್ರೀ ಕೃಷ್ಣನ ಸ್ಮರಣೆ ಮಾಡುತ್ತಲೇ ಆ ಸ್ವಾಮಿಯ ಪಾದ ಸೇರಿದ್ದರು.

ಪಾವಂಜೆ ಗುರುರಾಯರ ಜೀವನ ಯಾತ್ರೆಯ ಕೊನೆಯು ಅವರ ವ್ಯಕ್ತಿತ್ವಕ್ಕೆ ತಕ್ಕಂತೆ ಇತ್ತು. ಅವರು ಆಡಂಬರ ಇಲ್ಲದೆ ಬದುಕಿದ್ದರು. ಹಾಗೇ ಕಣ್ಣು ಮುಚ್ಚಿದರು. ಅವರು ತಾವು ಒಪ್ಪಿಕೊಂಡಿದ್ದ ಕಾರ್ಯಕ್ಕೆ ಗಂಧದ ಕೊರಡಿನಂತೆ ದೇಹವನ್ನು ತೇಯ್ದು ಸುತ್ತಲೂ ಪರಿಮಳ ಬೀರಿದ್ದರು.

ಅವರು ತೀರಿಕೊಂಡ ಮೇಲೆ ಅವರನ್ನು ಕಳೆದುಕೊಂಡವರು ತಮ್ಮ ನಷ್ಟವನ್ನು ಅನುಭವಿಸಿ

ಶೋಕವ್ಯಕ್ತಪಡಿಸಿದರು. ಸಂತಾಪ ಸೂಚಕ ಸಭೆಗಳು ನಡೆದವು. ಅವರಿಂದ ಉಪಕೃತರಾದರು ತಾವು ಅನಾಥರಾದಂತೆ ತಿಳಿದರು.

ಉಡುಪಿಯ ಶತಾಯುಷಿ ತಪಸ್ವಿಗಳೆಂದು ಕೀರ್ತಿ ಪಡೆದ ಸುಧೀಂದ್ರತೀರ್ಥರು-

"ಗುರುರಾಯರು ಸಮಾಜಕ್ಕೆ ಮಹತ್ತರವಾದ ಉಪಕಾರ ಮಾಡಿರುತ್ತಾರೆ. ಅವರು ನಿತ್ಯ ನೈಮಿತ್ತಿಕಾನುಷ್ಠಾನಗಳ ಕುರಿತಾದ ಪುಸ್ತಕಗಳನ್ನು ಪ್ರಕಟಿಸಿರುವುದರಿಂದ ಇಂದಿನ ಯುವ ಪೀಳಿಗೆಗೆ ಮಂತ್ರ ಜಪಗಳನ್ನು ಕಲಿಯಲು ಪ್ರೋತ್ಸಾಹ ಸಿಕ್ಕಿದಂತೆ ಆಗಿ ಅವರ ಧರ್ಮಾಚರಣೆಗೆ ಮಾರ್ಗದರ್ಶನ ಮಾಡಿಕೊಟ್ಟಿರುತ್ತಾರೆ. ಈ ಪುಸ್ತಕ ಪ್ರಕಾಶವಾಗದಿದ್ದಲ್ಲಿ ಜಪ, ಪೂಜಾಕ್ರಮ ವಿಧಿಗಳು ಮೂಲೆ ಪಾಲಾಗುತ್ತಿದ್ದವು"-ಎಂದು ರಾಯರ ಮಹತ್ಕಾರ್ಯವನ್ನು ಮುಕ್ತಕಂಠದಿಂದ ಸ್ಮರಿಸಿದರು.

ಹಳೆಯ ಮೈಸೂರಿನ ನಿಟ್ಟೂರು ಶ್ರೀನಿವಾಸರಾಯರು ಮುಂದೆ ಕರ್ನಾಟಕದ ಶ್ರೇಷ್ಠ ನ್ಯಾಯಾಧೀಶರೂ ಕೊಂಚಕಾಲ ರಾಜ್ಯಪಾಲರೂ ಆಗಿದ್ದರು. ಅವರು ಹೀಗೆ ಬರೆದರು-

"ಪಾವಂಜೆ ಗುರುರಾಯರು ನಮ್ಮ ಸಮಾಜದಲ್ಲಿ ಆದರ್ಶಪ್ರಾಯರಾಗಿ ಮೆರೆದವರು. ಅವರು ಮಾಡಿದಂಥ ಕಾರ್ಯಗಳು ಅಮೋಘವಾಗಿವೆ. ನನಗೆ ಅವರ ಮೇಲೆ ಸಂಪೂರ್ಣ ಪೂಜ್ಯ ಭಾವವಿದೆ. ಅವರು ನಮಗೆಲ್ಲ ಪ್ರಾತಃ ಸ್ಮರಣೀಯರು."

ಮಾಧ್ವವಾಙ್ಮಯ ತಪಸ್ವಿಗಳು ಗ್ರಂಥದಲ್ಲಿ ಪಾವಂಜೆ ಗುರುರಾಯರನ್ನು ಕುರಿತು-

*"ಇವರು ಮಾಡಿದ ಮಹಾಕಾರ್ಯವೆಂದರೆ ಪುರಂದರದಾಸ, ಕನಕದಾಸ ಮುಂತಾದವರ ಕೀರ್ತನೆಗಳನ್ನು ಕಷ್ಟಪಟ್ಟು ಸಂಗ್ರಹಿಸಿ, ಸಂಶೋಧಿಸಿ ಶುದ್ಧರೂಪದೊಂದಿಗೆ ಮುದ್ರಿಸಿ ಪ್ರಕಟಿಸಿದ್ದು, ಸಾವಿರಾರು ದಾಸರ ಪದಗಳನ್ನು ಭಾಗ ಭಾಗವಾಗಿ ಪ್ರಕಟಿಸಿ ಮಹೋಪಕಾರ ಮಾಡಿದ್ದಾರೆ"*-ಎಂದು ಬರೆದಿದ್ದಾರೆ. ಇಂಥ ಹರಿವಾಯುಗಳಿಗೆ ಅರ್ಪಿತವಾದ ಬದುಕು ಧನ್ಯವಲ್ಲದೆ ಮತ್ತೇನು ! ಅಂಥ ಧನ್ಯರು ಪಾವಂಜೆ ಗುರುರಾಯರು !



# ಪರಿಶಿಷ್ಟ

## ಪಾವಂಜೆ ಗುರುರಾಯರ ಪ್ರಕಟಿಸಿದ ಗ್ರಂಥಗಳು

### ಕನ್ನಡ ಲಿಪಿಯ ಪುಸ್ತಕಗಳು

**೧) ಪ್ರಾತಃಕಾಲ ಪಠನೀಯ ಸ್ತೋತ್ರ ಪುಸ್ತಕಗಳು -೫**

ಪ್ರಾತಃರಾಹ್ನೀಕ ಪದ್ಧತಿ (ಪ್ರಾತಸ್ಮರಣ, ಮಂಗಳಾಷ್ಟಕ, ರಮೇಶ ಸ್ತುತಿ, ದಧಿವಾಮನ ಸ್ತೋತ್ರ, ನದೀಸ್ತೋತ್ರ ವಗೈರೆ), ಗಜೇಂದ್ರ ಮೋಕ್ಷಣಮ್ (ಭಾಗವತೋಕ್ತ), ಪಾಂಡವ ಗೀತಾ (ಗೋಸಾವಿತ್ರೀ ಸ್ತೋತ್ರ) ಸಹಮಹಾಸಂಕಲ್ಪ, ಪ್ರಾತಃ ಸಂಕಲ್ಪ ಗದ್ಯಮ್.

**೨) ನಿತ್ಯಕರ್ಮೋಪಯೋಗಿ ಪುಸ್ತಕಗಳು - ೧೦**

ಋಗ್ವೇದ ತ್ರೈಕಾಲಿಕ ಸಂಧ್ಯಾವಂದನ (ಅಷ್ಟಮಠೀಯರಿಗೆ) ಯಜುರ್ವೇದ ತ್ರೈಕಾಲಿಕ ಸಂಧ್ಯಾವಂದನ, ಋಗ್ವೇದಿ ಅಶ್ವಲಾಯನ ಸಂಧ್ಯಾವಂದನ (ಮತತ್ರಯರಿಗೆ) ಯಜುರ್ವೇದಿ ಅಪಸ್ತಂಬ ಸಂಧ್ಯಾವಂದನ, ಋಗ್ವೇದಿ ಬ್ರಹ್ಮಯಜ್ಞ ವೈಶ್ವದೇವ ( ಔಪಾಸನ ಬಲಿಹರಣ) ಯಜುರ್ವೇದಿ ಬ್ರಹ್ಮಯಜ್ಞ, ನೈಶ್ವದೇವ, ಋಗ್ವೇದೀಯ ಸ್ಮಾರ್ತ ನಿತ್ಯಾಹ್ನಿವಿಧಿ (ಬ್ರಹ್ಮಯಜ್ಞ, ದೇವಪೂಜಾ ಸಹಿತ) ಸ್ತ್ರೀಜಪ ಕ್ರಮ (ಗುರುಮಂತ್ರಾದಿ) ಋಗ್ವೇದಿಯ ವೈಷ್ಣವ ಅಹ್ನಿಕಮಂಜರೀ, ಯಜುರ್ವೇದಿಯ ವೈಷ್ಣವ ಅಹ್ನಿಕಮಂಜರೀ.

**೩) ಸರ್ವಮೂಲ ಗ್ರಂಥಗಳು -೨**

ದ್ವಾದಶ ಸ್ತೋತ್ರಾಣಿ, ಕೃಷ್ಣಮೃತ ಮಹಾರ್ಣವ, ನಖಸ್ತುತಿ, ಯಮಕಭಾರತ, ಶ್ರೀಕೃಷ್ಣಪದ್ಯಂ (ಕನ್ನಡ ಅನುವಾದ ಸಹಿತ).

**೪) ದೇವಪೂಜಾ ಪದ್ಧತಿ ಪುಸ್ತಕಗಳು -೭**

ದೇವಪೂಜಾ ಪದ್ಧತಿ, ಋಗ್ವೇದೀಯ ಪಂಚಾಯತನ ಪೂಜಾ ಪದ್ಧತಿ, ಅಭಿಷೇಕ ಸೂಕ್ತಾನಿ, ಋಗ್ವೇದೀಯ ಶ್ರೀಸೂಕ್ತ, ಪುರುಷಸೂಕ್ತ (ಸ್ವರ ಸಮೇತ) ಯಜುರ್ವೇದೀಯ ಶ್ರೀಸೂಕ್ತ, ಪುರುಷಸೂಕ್ತ, ತತ್ತ್ವನ್ಯಾಸ, ಮಾತೃಕಾನ್ಯಾಸ, ರುದ್ರಾಧ್ಯಾಯ- ಚಮಕ-ಲಘುನ್ಯಾಸ (ಸ್ವರಸಹಿತ).

**೫) ಸ್ತೋತ್ರ ಪುಸ್ತಕಗಳು -೩೧**

ವಾಯುಸ್ತುತಿ (ನಖಸ್ತುತಿ ಸಹಿತ) ವಾಯುಸ್ತುತಿ (ಪ್ರತಿಪದಾರ್ಥ ತಾತ್ಪರ್ಯ ಪುನಶ್ಚರಣ ವಿಧಿ ಸಹಿತ) ನೃಸಿಂಹಸ್ತುತಿ (ನೃಸಿಂಹಕವಚ ಸಹಿತ) ಶಿವಸ್ತುತಿ (ಇಂದ್ರಾಕ್ಷೀ ಸ್ತೋತ್ರ ಸಹಿತ) ಶಿವಕವಚ, ರಾಮಸ್ತುತಿ, ಶಿವಸ್ತುತಿ (ಮರಾಠಿ) ಪುಂಡರೀಕಾಕ್ಷ ಸ್ತೋತ್ರ (ಜಿತಂತೇ ಸ್ತೋತ್ರ, ಶತಾಪರಾಧ ಸ್ತೋತ್ರ ಸಹ), (ಶ್ರೀ ಮಧ್ವವಿಜಯ ಕನ್ನಡ ಲಿಪಿ) ಸುಂದರಕಾಂಡ (ವಾಲ್ಮೀಕಿ ರಾಮಾಯಣ) ಮೂಲ, ಸುಂದರಕಾಂಡ ಕಥಾಸಂಗ್ರಹ (ತಾತ್ಪರ್ಯ ನಿರ್ಣಯ ೭ನೆಯ ಅಧ್ಯಾಯ) ವಾದಿರಾಜ ಸ್ತೋತ್ರ, ಕವಚ (ಅಣುವೃಂದಾವನಾಖ್ಯಾನ ಸಹ) ರಾಘವೇಂದ್ರಸ್ತೋತ್ರ (ಕವಚ ಸಹಿತ) ರಾಘವೇಂದ್ರ ಸ್ತೋತ್ರ (ಕನ್ನಡ ತಾತ್ಪರ್ಯ ಸಹಿತ) ರಾಘವೇಂದ್ರ ಸ್ತೋತ್ರ ರತ್ನ ಮಾಲಾ, ವೆಂಕಟೇಶ ಸುಪ್ರಭಾತಂ, ವೆಂಕಟೇಶ ಸ್ತೋತ್ರ (ಮರಾಠಿ) ಗೋಪೀ ಗೀತಂ, ಅಚ್ಯುತಾಷ್ಟಕಂ ಇತ್ಯಾದಿ.

ನವಗ್ರಹ ಸ್ತುತಿ (ಅಶ್ವತ್ಥ ಸ್ತೋತ್ರ, ಶನಿಸ್ತೋತ್ರ ಸಹಿತ) ಆದಿತ್ಯ ಹೃದಯ (ಸೂರ್ಯ ಮಂಡಲ ಸ್ತೋತ್ರ ಸಹಿತ) ಸ್ತೋತ್ರಮಂಜರೀ (೨೬೦ ಸ್ತೋತ್ರಗಳು) ದಶಾವತಾರ ಸ್ತುತಿ, ಕೃಷ್ಣಾಷ್ಟಕ ಇತ್ಯಾದಿ. ಸ್ತೋತ್ರ ರತ್ನಮಾಲಾ ಭಾಗ ೨, ಕೃಷ್ಣಸ್ತುತಿಗಳು, ಸ್ತೋತ್ರ ರತ್ನಮಾಲಾ ಭಾಗ ೩, ಪ್ರಕೀರ್ಣ ಸ್ತೋತ್ರಗಳು, ಭೋಜನ ಮಂತ್ರಗಳು, ಮಾಧವಸ್ತವ ರಾಜ, ಗಣಪತ್ಯಥರ್ವಶೀರ್ಷಂ, ಗಣೇಶ ಕವಚಂ, ಲಕ್ಷ್ಮೀಹೃದಯ (ನಾರಾಯಣ ಹೃದಯ - ವರ್ಮ ಸಹ) ರಾಮರಕ್ಷಾ ಸ್ತೋತ್ರ, ಮಣಿಮಂಜರೀ (ಮೂಲ) ಶ್ಯಾಮಲಾದಂಡಕಂ, (ಶ್ಯಾಮಲಾ ನವರತ್ನಮಾಲಿಕಾ) ಪುರಾಣಾನು ಕ್ರಮಣಿಕಾ (ಮತಪುರಾಣೋಕ್ತ).

### ೬) ಸಹಸ್ರನಾಮ ಸ್ತೋತ್ರಗಳು - ೧೨

ವಿಷ್ಣು ಸಹಸ್ರನಾಮ ಸ್ತೋತ್ರ, ಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರ, ವೆಂಕಟೇಶ ಸ್ತೋತ್ರ, ವಿಷ್ಣುವಿಜಯ ಸ್ತೋತ್ರ ಇತ್ಯಾದಿ. ವಿಷ್ಣು ಸಹಸ್ರನಾಮವಳಿ, ಕೃಷ್ಣಾಷ್ಟೋತ್ತರ ಶತ ನಾಮಾವಳಿ, ಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರ (ನಾಮಾವಳಿ ಸಹಿತ) ವೆಂಕಟೇಶ ಸಹಸ್ರ ನಾಮಾ ಸ್ತೋತ್ರ (ನಾಮಾವಳಿ ಸಹಿತ) ನೃಸಿಂಹ ಸಹಸ್ರನಾಮ ಸ್ತೋತ್ರ (ನಾಮಾವಳಿ ಸಹಿತ) ಲಕ್ಷ್ಮೀ ಸಹಸ್ರನಾಮ ಸ್ತೋತ್ರ (ನಾಮಾವಳಿ ಸಹಿತ) ಶಿವ ಸಹಸ್ರನಾಮಾವಳಿ ಸ್ತೋತ್ರ (ನಾಮಾವಳಿ ಸಹಿತ) ಗಣೇಶ ಸಹಸ್ರ ನಾಮ ಸ್ತೋತ್ರ (ಗಕಾರ ನಾಮಾವಳಿ ಸಹ) ಲಲಿತಾ ಸಹಸ್ರನಾಮ ಸ್ತೋತ್ರ (ನಾಮಾವಳಿ ಸಹಿತ) ಸುಬ್ರಹ್ಮಣ್ಯನಾಮ ಸ್ತೋತ್ರ (ನಾಮಾವಳಿ ಸಹಿತ) ರಾಘವೇಂದ್ರ ಸಹಸ್ರ ನಾಮಾವಳಿ.

### ೭) ಪ್ರಯೋಗಗಳು - ೧೩

ಋಗ್ವೇದೀಯ ಶ್ರಾದ್ಧ ಪ್ರಯೋಗ (ಅಷ್ಟಮಠೀಯರಿಗೆ), ಯಜುರ್ವೇದೀಯ ಬೋಧಾಯನ ಶ್ರಾದ್ಧ ದಪ್ರಯೋಗ, ಋಗ್ವೇದ ಅಶ್ವಲಾಯನ ಶ್ರಾದ್ಧ ಪ್ರಯೋಗ (ಮತತ್ರಯರಿಗೆ), ಯಜುರ್ವೇದೀಯ ಆಪಸ್ತಂಭ ಶಾಸ್ತ್ರ ವಿಧಿ (ಮತತ್ರಯರಿಗೆ), ಋಗ್ವೇದೀಯ ಸ್ಮಾರ್ತ ಶ್ರಾದ್ಧ ಪ್ರಯೋಗ, ಮಹಾಲಯ ವಿಧಿ (ಋಗ್ಯೆಜುಸ್ಸಾಮ ಶಾಖೀಯ), ಪವಮಾನ ಸೂಕ್ತಂ (ಋಷಿಚ್ಛಂದಸ್, ಪರಮಾನಖಿಲ, ಅನ್ವಾಧಾನ, ಹೋಮ ವಿಧಿ ಸಹಿತ) ಮಹಾಗಣಪತಿ ಹೋಮ ಪ್ರಯೋಗ (ಶೈವಾಂಗ ರಿತ್ಯಾ), ಋಗ್ವೇದೀಯ ಅನ್ನಸೂಕ್ತ, ಅಭಿಶ್ರಮಣ ಸೂಕ್ತ, ಋಗ್ವೇದೀಯ ಪುಣ್ಯಾಹವಾಚನ ವಿಧಿ (ಅಗ್ನಿಮುಖ ಸಹ) ಯಜುರ್ವೇದೀಯ ಪುಣ್ಯಾಹವಾಚನಾದಿ ಸಂಗ್ರಹ, ಋಗ್ವೇದಿಯ ಅಗ್ನಿಮುಖ ಪ್ರಯೋಗ, ಋಗ್ವೇದೀಯ ನವಗ್ರಹ ಪೂಜಾ (ಜಪಃ).

### ೮) ಕಲ್ಪೋಕ್ತ ಪೂಜಾ ಕಥೆಗಳು - ೧೫

ಗಣೇಶ ಪೂಜಾ ವಿಧಿ (ಸ್ಯಮಂತಕೋಪಾಖ್ಯಾನ ಸಹಿತ) ಸತ್ಯವಿನಾಯಕ ವ್ರತ ಪೂಜಾ ಕಥಾ (ಸ್ಮಾರ್ತ), ಪುಸ್ತಕ ಪೂಜಾ ವಿಧಿ (ವ್ಯಾಸ ಪೂಜಾ, ಸರಸ್ವತಿ ಪೂಜಾ ಸಹಿತ). ಸೋಮವತೀ ವ್ರತಕಲ್ಪ (ಅಶ್ವತ್ಥ ಪೂಜಾ ಸಹಿತ) ಮಂಗಲಗೌರೀ ವ್ರತ ಕಲ್ಪೋಕ್ತ ಪೂಜಾ ಕಥಾ, ಸ್ವರ್ಣಗೌರೀ ಪೂಜಾಕಥಾ, ಸತ್ಯನಾರಾಯಣವ್ರತ ಪೂಜಾ ಕಥಾ, ವರಮಹಾಲಕ್ಷ್ಮಿ ಪೂಜಾ ಕಥಾ, ಅನಂತ ವ್ರತ ಕಲ್ಪೋಕ್ತ ಪೂಜಾವಿಧಿ (ಸಾರ್ಥಕಥಾ), ಋಷಿ ಪಂಚಮೀ ಪೂಜಾಕಥಾ, ನವರಾತ್ರಿ ನವದುರ್ಗಾ ಕಲ್ಪೋಕ್ತ ಪೂಜಾವಿಧಿ, ಶ್ರೀಕೃಷ್ಣ ಜನ್ಮಾಷ್ಟಮೀ ವ್ರತ ಪೂಜಾಕಥಾ, ತುಲಸೀ ಕಲ್ಪೋಕ್ತ ಪೂಜಾವಿಧಿ, ಶನೇಶ್ವರ ಕಲ್ಪೋಕ್ತ ಪೂಜಾ (ಸಾರ್ಥಕಥಾ).

೯) ಮಹಾತ್ಮ್ಯಗಳು - ೫

ಸಪ್ತಶತೀದೇವೀ ಮಹಾತ್ಮ್ಯ, ವೇಂಕಟೇಶ ಮಹಾತ್ಮ್ಯ (ಭವಿಷ್ಯೋತ್ತರ ಪುರಾಣ-ಸಾರ್ಥ), ವೆಂಕಟೇಶ ಮಹಾತ್ಮ್ಯ (ಆದಿತ್ಯಪುರಾಣ), ಇಂದ್ರಾಣೀ ಕ್ಷೇತ್ರ ಮಹಾತ್ಮ್ಯ (ಸಾರ್ಥ), ಶ್ರೀ ಮನ್ಮಧ್ವಾಚಾರ್ಯರು (ಜೀವನ ಚರಿತ್ರೆ).

೧೦) ಸಂಸ್ಕೃತಾಭ್ಯಾಸಿಗಳಿಗೆ ಉಪಯುಕ್ತ ಪುಸ್ತಕಗಳು - ೩

ಸಂಸ್ಕೃತ ಕನ್ನಡ ಅಕ್ಷರ ಮಾಲಾ, ಅಮರ ಕೋಶ (ಪ್ರಥಮ ಕಾಂಡ ಮೂಲ ಮಾತ್ರ), ಶಬ್ದಮಂಜರೀ (ಸಮಾಸಮಂಜರೀ ಸಹಿತ).

೧೧) ಗೌಡಸಾರಸ್ವತ ಬ್ರಾಹ್ಮಣ ಸಮಾಜದವರಿಗೆ ಉಪಯುಕ್ತ ಗ್ರಂಥಗಳು :

ವೈಷ್ಣವ ಸಂಧ್ಯಾವಂದನ ( ಧರ್ಮಪ್ರಕಾಶ), ವೈಷ್ಣವ ಸಂಧ್ಯಾವಂದನೆ (ಪ್ರಭಾಕರ), ವೈಷ್ಣವ ದೇವಪೂಜಾ (ಪ್ರಭಾಕರ), ಕೃಷ್ಣಜನ್ಮಾಷ್ಟಮೀ ಪೂಜಾ (ಧರ್ಮಪ್ರಕಾಶ), ಕೃಷ್ಣ ಜನ್ಮಾಷ್ಟಮೀ ಪೂಜಾ (ಪ್ರಭಾಕರ), ಗೌರೀಗಣೇಶ ಪೂಜಾ (ಧರ್ಮಪ್ರಕಾಶ), ಶಿವರಾತ್ರಿ ಕಲ್ಪೋಕ್ತ ಪೂಜಾ, ಉತ್ಥಾನ ತುಲಸೀ ಪೂಜಾ.

## ಕನ್ನಡ ಪುಸ್ತಕಗಳು :

೧) ಅಪರೋಕ್ಷಜ್ಞಾನಿಗಳಾದ ದಾಸರ ಕೀರ್ತನೆಗಳು - ೧೪

ಪುರಂದರದಾಸರ ಕೀರ್ತನೆಗಳು (ಒಟ್ಟು ೫ ಭಾಗಗಳು), ಕನಕದಾಸರ ಕೀರ್ತನೆಗಳು, ದಾಸರ ಪದಗಳ ಸಂಗ್ರಹ (ಮೂರು ಭಾಗ), ಉಗಾಭೋಗಗಳು (೨ ಭಾಗ), ಕೋಲು ಹಾಡು (ಮೋಹನದಾಸರು), ವೈಕುಂಠ ವರ್ಣನೆ (ವಾದಿರಾಜರು), ಭ್ರಮರ ಗೀತ, (ಗುಂಡಕ್ರಿಯಾ).

೨) ಉದಯ ರಾಗಗಳು -೨

ಉದಯರಾಗ (ಭಾಗ ೧) ದ್ರೌಪದಿ ವಸ್ತ್ರಾಪಹರಣ (ಕೊಂಕಣಿ) ಗಜೇಂದ್ರ ಮೋಕ್ಷ.

೩) ತತ್ವಬೋಧಕ ಪುಸ್ತಕಗಳು - ೬

ಗೀತಾಮೃತಲಹರಿ (ಗೀತೆಯ ಕನ್ನಡ ಪದ್ಯಾನುವಾದ) ವಿಜಯದಾಸರ ಸುಳಾದಿಗಳು (ಭಾಗ ೨) ಪುರಂದರದಾಸರ ಸುಳಾದಿಗಳು, ಹರಿಭಕ್ತಿಸಾರ (ಕನಕದಾಸರು) ಸ್ವಪ್ನಪದ (ಗದ್ಯ) ಮತ್ತು ಮಾಧ್ವನಾಮ.

೪) ಕೀರ್ತನೆಗಳು -೩

ದಾಸರಪದಗಳು, ಮನೋರಂಜಕ ಪದಗಳು, ತುಳಸೀ ಸಂಕೀರ್ತನೆ.

೫) ಹರಿಕಥೋಪಯೋಗಿ ಪುಸ್ತಕಗಳು -೩

ವಿದ್ಯುನ್ಮತೀ ಕಲ್ಯಾಣ (ಹಂಡೆ ಶ್ರೀಪಾದದಾಸರು) ಅನಸೂಯಾ ಚರಿತ್ರೆ, ಭಾಗ್ಯ ನಗರದ ಕಥೆ (ಭಂಡೀ) ಹಾಡು ಇತ್ಯಾದಿ.

೬) ಭಜನೆ - ೮

ಭಜನ ರಾಮಾಯಣ, ಧ್ಯಾನ ರಾಮಾಯಣ. ಕೃಷ್ಣ ಭಜನ, ವಿಷ್ಣು ಭಜನ, ರಾಘವೇಂದ್ರ ಗುರು ಭಜನ, ಮೋಹಮದ್ಗರ (ಭಜಗೋವಿಂದಮ್) ಮಧ್ವಸುವ್ವಾಲಿ (ಅವತಾರತ್ರಯ ಸುವ್ವಾಲಿ) ವಾದಿರಾಜ ಗುರುಸಾರ್ವಭೌಮ ಗದ್ಯ.

೭) ವಿವಾಹದ ಹಾಡುಗಳು -೪

ಆರತಿ ಹಾಡು, ಬಾಗಿಲು ತೆಗೆಯುವ ಪದಗಳು, ಬೀಗರಹಾಡು (ರಾಮಚಂದ್ರ ಉಪಾಧ್ಯಾಯ ಕೃತಿ) ಶೋಭನಮಂಜರೀ (ಕೊಂಕಣಿ).

೮) ಕಲ್ಯಾಣಗಳು -೧೭

ವೆಂಕಟೇಶ ಪಾರಿಜಾತ (ಅನಂತಾದ್ರೀಶ ಮುದ್ರಿಕೆ) ವೆಂಕಟೇಶ ಮಹಾತ್ಮೆ (ದೇವೀ ದಾಸ ವಿರಚಿತ) ಶ್ರೀನಿವಾಸ ಕಲ್ಯಾಣ (ವರೀವೆಂಕಟ ಮುದ್ರಿಕೆ) ಲಕ್ಷ್ಮೀಶೋಭನ ಹಾಡು (ಶ್ರೀವಾದಿರಾಜರ ಕೃತಿ) ಲಕ್ಷ್ಮೀಕಲ್ಯಾಣ ಹಾಡು (ವರಾಹ ತಿಮ್ಮಪ್ಪ) ಸೀತಾ ಕಲ್ಯಾಣ ಹಾಡು, ರುಕ್ಮಿಣೀ ಸ್ವಯಂವರ ಹಾಡು, ಪದ್ಮಾವತೀ ಕಲ್ಯಾಣ ಹಾಡು. ರತಿಕಲ್ಯಾಣ ಹಾಡು, (ಭೀಮೇಶಕೃಷ್ಣ) ಗಿರಿಜಾ ಕಲ್ಯಾಣ ಹಾಡು, ರತ್ನಾವತಿ ಕಲ್ಯಾಣ ಹಾಡು, ಕನಕಾಂಗೀ ಕಲ್ಯಾಣ ಹಾಡು, ದ್ರೌಪದೀ ಸ್ವಯಂವರದ ಹಾಡು, ಪ್ರಮೀಳಾ ಸ್ವಯಂವರ ಹಾಡು, ಉಷಾಪರಿಣಯ ಹಾಡು, ಸ್ಯಮಂತ ಕೋಪಾಖ್ಯಾನ ಹಾಡು, ಸುಭದ್ರಾ ಕಲ್ಯಾಣ ಹಾಡು.

೯) ವ್ರತಕಥೆಗಳ ಹಾಡುಗಳು - ೧೩

ಅನಂತಚತುರ್ದಶೀ ಕತೆ ಹಾಡು, ಸತ್ಯನಾರಾಯಣ ಕತೆ ಹಾಡು, ಸಂಕ್ಷೇಪ ಕಥಾತ್ರಯ ಹಾಡು, ಸತ್ಯವಿನಾಯಕ ಕಥೆ ಹಾಡು, ಸತ್ಯವಿನಾಯಕ ಕಥೆ (ಸ್ಮಾರ್ತ), ಸೋಮವತೀ ಹಾಡು, ಮಂಗಳ ಗೌರೀ ಹಾಡು, ಋಷಿಪಂಚಮೀ ಕಥೆ ಹಾಡು, ವರಮಹಾಲಕ್ಷ್ಮೀ (೫ ಶುಕ್ರವಾರದ ಹಾಡು), ಶುಕ್ರವಾರದ ಹಾಡು (ಭೀಮೇಶ ಕೃಷ್ಣ) ಶನಿವಾರದ ಹಾಡು, ವಟ ಸಾವಿತ್ರೀ ಕಥೆ ಹಾಡು, ನವರಾತ್ರಿ ಹಾಡು ಮತ್ತು ಸಂಕ್ಷಿಪ್ತ ದೇವೀ ಮಹಾತ್ಮೆ ಹಾಡು, ದುರ್ಗಾದೇವಿಯ ಪ್ರಸಾದ ಬೇಡುವ ಹಾಡು.

೧೦) ಇತರ ಹಾಡಿನ ಪುಸ್ತಕಗಳು -೨೦

ಬ್ರಹ್ಮ ಕೊರವಂಜಿ ಹಾಡು, ಚಂದ್ರಹಾಸನ ಕಥೆ ಹಾಡು (ಹೆಳವನ ಕಟ್ಟೆ ಮುದ್ರಿಕೆ) ಸಂಕ್ಷೇಪ ಉತ್ತರಕಾಂಡ ರಾಮಾಯಣ, ಪ್ರಹ್ಲಾದ ಚರಿತ್ರೆ ಹಾಡು (ಅನಂತಾದ್ರೀಶ ಮುದ್ರಿಕೆ) ಸುಧಾಮ ಚರಿತ್ರೆ ಹಾಡು, (ಪುರಂದರದಾಸರು) ಶ್ರೀಕೃಷ್ಣ ಜನನ ಹಾಡು, ದತ್ತಾತ್ರೇಯ ಜನನ ಹಾಡು, ಮದಾಲಸೆ ಜೋಗುಳ ತೂಗಿದ ಹಾಡು, ಜೋಗುಳ ಹಾಡು, ಶ್ರೀಕೃಷ್ಣದಾನವ್ರತದ ಹಾಡು, (ಭೀಮೇಶ ಕೃಷ್ಣ) ಜಲಕ್ರೀಡೆ ಹಾಡು (ಸೀರೆ ಹಾಡು) ಗೊಲ್ಲತಿ ಹಾಡು, ಗೋಪೀ ಪ್ರಲಾಪ ಇತ್ಯಾದಿ. ಹೂವಿನ ಕಥೆ ಹಾಡು, ರಾಮಕೃಷ್ಣ ದೇವರ ಹಾಡು, ಶ್ರೀರಾಮನ ಹಾಡು, ಸೀತಾ ದುಃಖ ಹಾಡು, ಚೀಳಿನ ಹಾಡು, ವೆಂಕಟೇಶ ಕ್ಷಮಾಪನ ಹಾಡು, (ಜಗನ್ನಾಥ ದಾಸರು) ಸಖೂಬಾಯಿ ಹಾಡು, ಕೀಚಕ ಸಂಧಿ ಹಾಡು.

## ಕನ್ನಡ ಯಕ್ಷಗಾನ ಪ್ರಸಂಗಗಳು

೧) ರಾಮಾಯಣ

ಕೌಶಿಕ ಚರಿತ್ರ, ಕಾರ್ತವೀರ್ಯಾರ್ಜುನ ಕಾಳಗ, ಅಹಲ್ಯೋದ್ಧಾರ, ರಾಮ ಪಟ್ಟಾಭಿಷೇಕ (ಅಯೋಧ್ಯಾಕಾಂಡ) ಪಾದುಕಾ ಪಟ್ಟಾಭಿಷೇಕ, ಪಂಚವಟಿ ವಾಲಿ ಸುಗ್ರೀವರ ಕಾಳಗ (ಕಿಷ್ಕಿಂಧಾಕಾಂಡ) ಪಂಚವಟಿ ವಾಲಿ ಸುಗ್ರೀವರ ಕಾಳಗ (ಅರ್ಥಸಹಿತ) ಚೂಡಾಮಣಿ ಪ್ರಸಂಗ (ಸುಂದರಕಾಂಡ) ಚೂಡಾಮಣಿ ಪ್ರಸಂಗ (ಅರ್ಥಸಹಿತ) ಸೇತುಬಂಧನ, ಅಂಗುಸಂಧಾನ, ಅಂಗುಸಂಧಾನ (ಅರ್ಥಸಹಿತ) ಅತಿಕಾಯ ಕಾಳಗ, ವೀರಮಣಿ ಕಾಳಗ, ಇಂದ್ರಜಿತು ಕಾಳಗ, ತರಣಿ ಸೇನಕಾಳಗ, ಕುಂಭಕರ್ಣ ಕಾಳಗ,

ರಾವಣ ವಧೆ, ಶ್ರೀರಾಮ ನಿಜ ಪಟ್ಟಾಭಿಷೇಕ, ರಾಮಾಂಜನೇಯ ಕಾಳಗ (ಹನುಮಂತ ಪ್ರತಾಪ) ಸುಬಾಹು ಕಾಳಗ, ಲವಕುಶರ ಕಾಳಗ (ಪಶವ ಸಂಧಿ) ಕುಶಲವರ ಕಾಳಗ.

೨) ಮಹಾ ಭಾರತ -೩೨

ಬ್ರಹ್ಮಕಪಾಲ, ದೇವಯಾನಿ ಕಲ್ಯಾಣ, ನಳಚರಿತ್ರೆ (ದಮಯಂತಿ ಕಲ್ಯಾಣ) ಭೀಷ್ಮೋತ್ಪತ್ತಿ, ಸುಭದ್ರಾ ಕಲ್ಯಾಣ, ರಾಜಸೂಯ (ಬಡಗು) ರಾಜಸೂಯಾಧ್ವರ (ತೆಂಕು) ಅಕ್ಷಯಾಂಬರ ವಿಲಾಸ(ದ್ರೌಪದೀ ಮಸ್ತ್ರಾಪಹಾರ) ಚಿತ್ರಸೇನ ಕಾಳಗ, ಕೃಷ್ಣಾರ್ಜುನ ಕಾಳಗ(ಬಡಗು) ಕೃಷ್ಣಸಂಧಾನ (ಅರ್ಥಸಹಿತ) ಭೀಷ್ಮ ಪರ್ವ, ಭೀಷ್ಮಾರ್ಜುನ ಕಾಳಗ, ದ್ರೋಣಪರ್ವ ಅಭಿಮನ್ಯು ಕಾಳಗ(ಸೈಂಧವ ವಧೆ) ಕರ್ಣಾರ್ಜುನರ ಕಾಳಗ(ಬಡಗು) ಕರ್ಣಪರ್ವ (ತೆಂಕು) ರತ್ನಪ್ರಭಾಪರಿಣಯ, ಗದಾಪರ್ವ, ದ್ರೌಪದೀ ಪ್ರತಾಪ, ಸುಧನ್ವಕಾಳಗ, ಬಬ್ರುವಾಹನ ಕಾಳಗ, ತಾಮ್ರಧ್ವಜನ ಕಾಳಗ (ಬಡಗು) ಪಾಂಡವಾಶ್ವಮೇಧ (ತೆಂಕು) ಶ್ರೀಕೃಷ್ಣಗಾರುಡಿ.

೩) ಭಾಗವತ - ೧೭

ಸಮುದ್ರ ಮಥನ, ವೃತ್ರಾಸುರ ಕಾಳಗ, ಗಿರಿಜಾ ಕಲ್ಯಾಣ, ಪ್ರಹ್ಲಾದ ಚರಿತ್ರೆ, ರತ್ನಾವತೀ ಕಲ್ಯಾಣ(ದೃಢಧರ್ಮ ಕಾಳಗ) ಅಂಬರೀಷ ಚರಿತ್ರೆ, ಭಸ್ಮಾಸುರ ಮೋಹಿನಿ, ಶ್ರೀಕೃಷ್ಣ ಬಾಲಲೀಲೆ, ಬಿಲ್ಲಹಬ್ಬ (ಕಂಸವಧೆ) ಯಾದವಾಭ್ಯುದಯ, ಶ್ರೀಕೃಷ್ಣ ವಿವಾಹ, ರುಕ್ಮಿಣೀ ಸ್ವಯಂವರ, ಜಾಂಬವತೀ ಕಲ್ಯಾಣ( ಸತ್ಯಭಾಮ ವಿವಾಹ) ರತಿಕಲ್ಯಾಣ, ಮೇಧಾವಿ ಕಾಳಗ (ಶಶಿಪ್ರಭಾ ಪರಿಣಯ) ಚಂದ್ರಹಾಸ ಚರಿತ್ರೆ, ಬಾಣಾಸುರ ಕಾಳಗ (ಉಷಾಪರಿಣಯ).

೪) ಪುರಾಣಾದಿ ಪ್ರಸಂಗಗಳು -೧೫

ಕುಮುದ್ವತೀ ಕಲ್ಯಾಣ, ದೇವೀ ಮಹಾತ್ಮ್ಯ, ಕುಮಾರ ವಿಜಯ (ಶೂರ ಪದ್ಮಾಸುರ ಕಾಳಗ), ವಿಶ್ವಾಮಿತ್ರ ಪ್ರತಾಪ (ದುಷ್ಯಂತ ಚರಿತ್ರೆ), ಸಭಾಲಕ್ಷಣ (ಪ್ರಸಂಗ ಪೀಠಿಕೆ), ಹಾಸ್ಯ ಮಂಜರೀ, ಯೋಗಿನೀ ಕಲ್ಯಾಣ, ಮೀನಾಕ್ಷಿ ಕಲ್ಯಾಣ, ಅಂಧಕಾಸುರ ಕಾಳಗ, ಮಾರ್ಕಂಡೇಯ ಚರಿತ್ರೆ, ಪುಂಡರೀಕ ಚರಿತ್ರೆ, ಹರಿಶ್ಚಂದ್ರ ಚರಿತ್ರೆ, ಪಲಾಂಡು ಚರಿತ್ರೆ, ಜಲಂಧರ ಕಾಳಗ, ಬೈದ್ಯರ್ಕಳ ಪ್ರತಾಪ.

## ಸಂಸ್ಕೃತ ಲಿಪಿಯ ಸಂಸ್ಕೃತ ಪುಸ್ತಕಗಳು

ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ, ಕಾಲನಿರ್ಣಯ ಪ್ರಕರಣಂ, ಶತಶ್ಲೋಕೀ (ಅಶೌಚಪ್ರಕರಣಂ ಸಟೀಕಾ), ಪವಮಾನ ಪಂಚಸೂಕ್ತಂ (ಹೃಷೀಕೇಶ ತೀರ್ಥರ ವಿರಚಿತ), ರುಕ್ಮಿಣೀಶ ವಿಜಯ, ಶ್ರೀಕೃಷ್ಣಾವತಾರದಿಂದ ಮನ್ಮಥ ಪೌತ್ರ, ವಜ್ರೋತ್ಪತ್ತಿಯವರೆಗಿನ ಭಾಗವತ ಮಹಾಕಾವ್ಯ, ಸಂಪ್ರದಾಯ ಪದ್ಧತಿ (ಹೃಷೀಕೇಶತೀರ್ಥರ ವಿರಚಿತ), ಉಷಾಹರಣ ಮಹಾ ಕಾವ್ಯಂ (ಸಟೀಕಾ ೨ ಸರ್ಗಗಳು), ಸುಭದ್ರಾ ಕಲ್ಯಾಣ ಮಹಾಕಾವ್ಯಂ (ಸಟೀಕಾ), ರಾಮೋದಾತಂ ದ್ವಾದಶ ಸ್ತೋತ್ರ, ಶ್ರೀ ರಾಘವೇಂದ್ರ ಸ್ತೋತ್ರಂ, ರಾಮರಕ್ಷಾ ಸ್ತೋತ್ರಂ, ನೃಸಿಂಹ ಸ್ತುತಿಃ (ವಿಶ್ವಪತಿ ಟೀಕಾ), ವಾಯುಸ್ತುತಿಃ ಭಾವಪ್ರಕಾಶಿಕಾ (ಸುಮಧ್ವವಿಜಯಸ್ಯ ಸಂಕ್ಷೇಪ ಟೀಕಾ), ಶಿವಸ್ತುತಿಃ (ವಿಶ್ವಪತಿ ಟೀಕಾ), ಲಕ್ಷ್ಮೀಹೃದಯ ಮತ್ತು ನಾರಾಯಣ ಹೃದಯ, ಪುರಂದರದಾಸರ ಕೀರ್ತನೆ (ಕನ್ನಡ) - ಹೀಗೆ ೧೭ ಪುಸ್ತಕಗಳು, (ಒಟ್ಟು ಸುಮಾರು ೨೮೭ ಗ್ರಂಥಗಳು).

- ★ -

# ಗೋರೆಬಾಳು
# ಹನುಮಂತರಾಯರು

(ಕ್ರಿ.ಶ. ೧೮೯೩ - ೧೯೭೯)

# ಗೋರೆಬಾಳು ಹನುಮಂತರಾಯರು

## (ಕ್ರಿ.ಶ. ೧೮೯೩ - ೧೯೭೯)

### ೧

*ಹರಿ ನೀನೊಲಿವಂತೆ ಮಾಡು*
*ಒಲಿದರೆ ತಿರುವಂತೆ ಮಾಡು*
*ತಿರಿದರೆ ಆರೂ ನೀಡದಂತೆ ಮಾಡು*
*ನೀಡಿದರೆ ಹೊಟ್ಟೆ ತುಂಬದಂತೆ ಮಾಡು*
*ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು*
*ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು*
*ಇಂಬು ದೊರೆತರೆ ನಿನ್ನ ಪಾದಾರವಿಂದದಲ್ಲಿ ಇಂಬು*
*ತೋರೋ ಪುರಂದರ ವಿಠಲ*

**- ಪುರಂದರದಾಸರು**

*ನಿನ್ನ ದಾಸನೆನಿಸಬೇಕಾದರೆ*
*ಭಂಗಪಡಲುಬೇಕು ದಿನಪ್ರತಿದಿನದಲ್ಲಿ*
*ಅನ್ನ ವಸ್ತ್ರ ಕಿಲ್ಲದೆ ತಿರುಗಬೇಕು*
*ಬಿಡದರೋಗಂಗಳು ಬರಬೇಕು*
*ಪನ್ನಗಶಯನ ಶ್ರೀವಿಜಯ ವಿಠಲರೇಯ*
*ಎನ್ನ ನಿನ್ನ ಪರಿಯಲ್ಲಿ ಮಾಡಿದ ಬಗೆ ಏನು?*

**- ವಿಜಯದಾಸರು**

ದಿವಂಗತ ಗೋರೇಬಾಳು ಹನುಮಂತರಾಯರ ಜೀವನ ಮೇಲಿನ ಮಾತುಗಳಿಗೆ ವ್ಯಾಖ್ಯಾನ ರೂಪದಂತಿದೆ.

ಗೋರೆಬಾಳರು ಮತ್ತು ನನ್ನ ತಂದೆಯವರಾದ ಶ್ರೀ ಕೊರಟ ಶ್ರೀನಿವಾಸರಾಯರ ಭೇಟಿಯ ಪ್ರಸಂಗವನ್ನು ನಮ್ಮ ತಂದೆಯವರ ಹೇಳುತ್ತಿದ್ದ ಮಾತಿನಿಂದಲೇ ಕೇಳಿ :-

*"ಎತ್ತರವಾದ ನಿಲುವು, ಒಂದು ಕಾಲದಲ್ಲಿ ಸುಂದರವೂ ಸದೃಢವೂ ಆಗಿದ್ದ ದೇಹ. ಈಗ ಬಿಲ್ಲಿನಂತೆ ಕುಸುಬಾಗಿದೆ. ತುಂಬಿದ ಅಗಲವಾದ ಮುಖದಲ್ಲಿ ವೃದ್ಧಾಪ್ಯದ ಚಿನ್ಹೆಗಳು ಮೂಡಿವೆ. ಹಣೆಯಲ್ಲಿ ಎದ್ದು ಕಾಣುವ ಅಂಗಾರ ಅಕ್ಷತೆ- ಆವರ ವೈಷ್ಣವ ದೀಕ್ಷೆಗೆ ಲಾಂಛನದಂತೆ*

ಕಾಣುತ್ತಿದೆ. ತಲೆಗೆ ಸುತ್ತಿದ ಧಾರವಾಡದ ಕಡೆಯ ಕೊರೆ ರುಮಾಲು, ಕೋಟು; ಅದರ ಮೇಲ ಅಂಗವಸ್ತ್ರ, ಕಚ್ಚೆ ಪಂಚೆ, ಕಾಲಿಗೆ ಹಳೆಯ ಚಪ್ಪಲಿ, ಆ ವೃದ್ಧರ ಹೆಗಲಿನ ಮೇಲೆ ಭಾರವಾದ ಪುಸ್ತಕಗಳ ಒಂದು ಗಂಟು. ಅದನ್ನು ಹೊತ್ತು ಮನೆಗೆ ಬಂದವರು ತಮ್ಮ ಪರಿಚಯ ತಾವೇ ಮಾಡಿಕೊಟ್ಟರು.

"ನಾನು ಹನುಮಂತರಾವ್, ನನ್ನ ಪರಿಚಯ ನಿಮಗೆ ಇರಲಿಕ್ಕಿಲ್ಲ. ನನ್ನನ್ನು ಗೋರೆಬಾಳ ಹನುಮಂತರಾವ್ ಎಂದು ಕರೆಯುತ್ತಾರೆ. ಯಾರೋ ನಿಮ್ಮನ್ನು ನೋಡಲು ಹೇಳಿದರು. ಬಂದೆ"- ಎಂದು ಹೇಳಿ ನಾನು ತೋರಿಸಿದ ಕುರ್ಚಿಯ ಮೇಲೆ ಕುಳಿತು, ಗಂಟನ್ನು ನೆಲದ ಮೇಲಿಟ್ಟು, ಅಂಗವಸ್ತ್ರದಿಂದ ಮುಖ ಒರೆಸಿಕೊಂಡರು.

ನಾನು ಚಣಕಾಲ ಅವಾಕ್ಕಾಗಿ ನಿಂತೆ. ಗೋರೆಬಾಳ ಹನುಮಂತರಾಯರು! ಹೌದು ಹೆಸರು ಕೇಳಿದ್ದೆ. ಇವರು ಹರಿದಾಸ ಸಾಹಿತ್ಯವನ್ನು ಪ್ರಕಟಿಸಿ, ಪ್ರಚಾರಕ್ಕಾಗಿ ತಮ್ಮ ಬಾಳನ್ನೇ ಮೀಸಲಿಟ್ಟ ಮಹನೀಯರು. ರಾಯಚೂರು ಜಿಲ್ಲೆ ಲಿಂಗಸೂಗೂರಿನಲ್ಲಿ ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿಯನ್ನು ಸ್ಥಾಪಿಸಿ, ನೂರಾರು ಹರಿದಾಸರ ಕೃತಿಗಳನ್ನು ಪ್ರಕಟಿಸಿ, ಕನ್ನಡ ನಾಡು ನುಡಿಗಳಿಗೆ ವಿಶೇಷವಾದ ಸೇವೆ ಸಲ್ಲಿಸಿದವರು. ನಾನು ಅವರ ಹೆಸರು ಕೇಳಿದ್ದೆ, ಆದರೆ ನೋಡಿರಲಿಲ್ಲ. ಅವರನ್ನು ಇಲ್ಲಿ ನನ್ನ ಮನೆಯಲ್ಲಿ ನಾನು ನಿರೀಕ್ಷಿಸಿರಲಿಲ್ಲ.

ನಾನು ಅವರನ್ನು ಸಂತೋಷದಿಂದ ಸ್ವಾಗತಿಸಿದೆ. "ತಾವು ಈಗ ಬಂದದ್ದು? ನನ್ನಿಂದ ತಮಗೆ ಏನು ಆಗಬೇಕೆಂಬುದನ್ನು ತಿಳಿಸಿದರೆ, ಕೈಲಾದ ಮಟ್ಟಿಗೆ ಮಾಡಿ ಕೊಡುತ್ತೇನೆ"- ನಾನು ಹೇಳಿದೆ.

"ನಿಮ್ಮ ಕಾಲೇಜಿನ ಪುಸ್ತಕ ಭಂಡಾರಕ್ಕೆ ಪುಸ್ತಕಗಳನ್ನು ತೆಗೆದುಕೊಂಡು ನನ್ನ ಈ ಗಂಟಿನ ಭಾರವನ್ನು ಇಳಿಸಬೇಕು"- ಸಂಕೋಚದಿಂದ ಅವರು ಹೇಳಿದರು.

ಅಮೂಲ್ಯವಾದ ಸಾಹಿತ್ಯ ರಾಶಿಯನ್ನೇ ಮೂಟೆ ಕಟ್ಟಿಕೊಂಡು, ಅದನ್ನು ಯಾರಿಗೆ ಮಾರಲಿ ಎಂದು ಕಳವಳಗೊಂಡಿದ್ದ ಅವರ ನಿಸ್ಸಹಾಯಕ ಸ್ಥಿತಿಯನ್ನು ನೋಡಿ ಮನಸ್ಸಿಗೆ ಕಸಿವಿಸಿಯಾಯಿತು.

"ಆಗಲಿ ಸಾರ್, ಕೈಲಾದ ಸಹಾಯ ಮಾಡುತ್ತೇನೆ. ನಮ್ಮ ಕಾಲೇಜು ಹನ್ನೊಂದು ಗಂಟೆಗೆ ತೆರೆಯುತ್ತದೆ. ಆ ವೇಳೆಗೆ ತಾವು ಬಂದರೆ ಪ್ರಿನ್ಸಿಪಾಲರಿಗೆ ಪರಿಚಯಮಾಡಿ ಕೊಡುತ್ತೇನೆ. ಅವರೂ ನಿಮ್ಮ ಹಾಗೆ ಸಾತ್ವಿಕರು. ಹರಿದಾಸ ಸಾಹಿತ್ಯದಲ್ಲಿ ಆಸಕ್ತಿವುಳ್ಳವರು"- ಎಂದೆ. ಅವರ ಮುಖ ಅರಳಿತು.

ಆದರಂತೆ ಅವರು ನಾನು ಹೇಳಿದ್ದ ಸಮಯಕ್ಕೆ ಸರಿಯಾಗಿ ಕಾಲೇಜಿಗೆ ಬಂದರು. ನಾನು ಅವರನ್ನು ಕರೆದೊಯ್ದು ಪ್ರಿನ್ಸಿಪಾಲರಿಗೆ ಭೇಟಿ ಮಾಡಿಸಿದೆ. ಅವರು ಸಂತೋಷದಿಂದ ಗೋರೆಬಾಳ ಅವರ ಗ್ರಂಥಗಳನ್ನು ಕೊಳ್ಳಲು ಸಮ್ಮತಿಸಿದರು. ಆದರೆ ಒಂದು ಷರತ್ತು. ಹಣಕ್ಕೆ ಅವರು ಮೂರು ತಿಂಗಳು ಕಾಯಬಲ್ಲವರಾದರೆ ಅಷ್ಟೂ ಗ್ರಂಥಗಳನ್ನು ಕೊಳ್ಳಲು ಅಡ್ಡಿ ಇಲ್ಲ.

ಈ ಮಾತು ಗೋರೆಬಾಳ ಅವರಿಗೆ ತಿಳಿಸಿದೆ. ಅವರು ಚಣಕಾಲ ಆಲೋಚಿಸಿದರು. ನಗದು ಹಣ ನೀಡುವ ಗ್ರಂಥಗಳನ್ನು ಉದ್ದರಿ ಕೊಟ್ಟು ಹೋಗುವುದೆ? ನಾಳೆ ಹಣ ಬಾರದಿದ್ದರೆ... ಈ ಹಿಂದೆ ಅವರಿಗೆ ಅನೇಕರು ಹೀಗೆ ಮಾಡಿದ್ದುಂಟು.

"ನೀವೇನೂ ಯೋಚಿಸುವ ಕಾರಣವಿಲ್ಲ. ನನ್ನ ಸ್ವಂತ ಜವಾಬ್ದಾರಿಯ ಮೇಲೆ ಈ ಗ್ರಂಥಗಳನ್ನು ನೀವು ನಮ್ಮಲ್ಲಿ ಬಿಟ್ಟು ಹೋಗಬಹುದು. ನಿಮ್ಮ ಬಿಲ್ಲು ಕೊಡಿ. ಮೂರು ತಿಂಗಳ ಅವಧಿಯಲ್ಲಿ ಇದರ ಹಣದ ಪಾವತಿಗೆ ನಾನು ವ್ಯವಸ್ಥೆ ಮಾಡುತ್ತೇನೆ"- ಎಂದು ನಾನು ಆಶ್ವಾಸನೆ ಇತ್ತೆ.

"ಆಗಲಿ, ನಿಮ್ಮ ಭರವಸೆಯ ಮೇಲೆ ಈ ಗ್ರಂಥಗಳನ್ನು ಕೊಟ್ಟು ಹೋಗುತ್ತೇನೆ"-ಎಂದು ಅವರು ಹೇಳಿ ಭಾರವಾದ ಪುಸ್ತಕದ ಗಂಟನ್ನು ಬರಿದು ಮಾಡಿದರು; ಪ್ರಕಟಿತ ಗ್ರಂಥಗಳ ಒಂದೊಂದು ಪ್ರತಿಯನ್ನು ನಮ್ಮ ಕಾಲೇಜು ಲೈಬ್ರರಿಗೆ ಇತ್ತು ಹೋದರು.

ಅವರ ನಿರೀಕ್ಷೆಗೆ ಮೊದಲೇ ಅವರಿಗೆ ಹಣ ಕೈಸೇರಿತು. ನಮಗೆ ಪುಸ್ತಕ ಲಾಭವಾಯಿತು. ಎಂಥ ಲಾಭ? ಈ ಹೊತ್ತು ಗೋರೆಬಾಳ ಹನುಮಂತರಾಯರು ನಮ್ಮ ಜತೆಗೆ ಇಲ್ಲ. ಅವರು ಸಂಪಾದಿಸಿ ಪ್ರಕಟಿಸಿರುವ ಶ್ರೀ ಪುರಂದರದಾಸರು, ವಿಜಯದಾಸರು, ಜಗನ್ನಾಥದಾಸರು ಇತ್ಯಾದಿ ಹರಿದಾಸರ ಸಮಗ್ರ ಕೃತಿಗಳು ಯಾವುವೂ ಇಂದು ಮಾರುಕಟ್ಟೆಯಲ್ಲಿ ದೊರಕುತ್ತಿಲ್ಲ. ಹಣದಿಂದ ಆ ದಾಸ ಸಾಹಿತ್ಯವನ್ನು ಇಂದು ಬೆಲೆಕೊಳ್ಳಲು ಸಾಧ್ಯವಿಲ್ಲ. ಗ್ರಂಥಗಳ ತೂಕದಷ್ಟು ಹೊನ್ನು ಕೊಟ್ಟರೂ ಅವು ಇಂದು ದುರ್ಲಭವಾಗಿದೆ. ವಿವಿಧ ವ್ಯಾಖ್ಯಾನಗಳನ್ನು ಒಳಗೊಂಡ ಆರು ಸಂಪುಟಗಳ ಶ್ರೀಹರಿಕಥಾಮೃತಸಾರ ಸುಮಾರು ನಾಲ್ಕು ಸಹಸ್ರ ಪುಟಗಳ ಅಪೂರ್ವ ಗ್ರಂಥ ಇಂದು ಅಭಿಮಾನಿ ಓದುಗರಿಗೆ ದೊರಕುವುದಿಲ್ಲ. ಆದರೆ ಅಂದು ಗೋರೆಬಾಳರು ತಾವಾಗಿ ನಮ್ಮ ಮನೆಗ ಬಂದು ಈ ಗ್ರಂಥಗಳನ್ನು ನನಗೆ ಕಾಣಿಕೆಯಾಗಿ ನೀಡಿ ಹೋದರು. ಅವರ ಸೌಜನ್ಯ, ಉಪಕಾರ ಸ್ಮರಣೆ ನನ್ನ ನೆನಪಿನ ಆಳದಲ್ಲಿ ಈಗಲೂ ಅಚ್ಚಳಿಯದೆ ನಿಂತಿದೆ.

ಈಗ ನಮ್ಮ ಕಾಲೇಜಿನ ಪ್ರಿನ್ಸಿಪಾಲರೂ ಇಲ್ಲ. ಹನುಮಂತರಾಯರೂ ಇಲ್ಲ. ನಾನು ಕಾಲೇಜಿನಿಂದ ನಿವೃತ್ತನಾಗಿದ್ದೇನೆ. ಆದರೆ ಕಾಲೇಜಿನ ಪುಸ್ತಕ ಭಂಡಾರದಲ್ಲಿ ಗೋರೆಬಾಳ ಹನುಮಂತರಾಯರಿತ್ತ ಕೊಡುಗೆ ಮಾತ್ರ ಶಾಶ್ವತ ನಿಧಿಯಾಗಿ ಉಳಿದಿದೆ."

೨

ಹನುಮಂತರಾಯರು ೧೮೭೩ನೇ ವಿಜಯನಾಮ ಸಂವತ್ಸರ ಅಂದರೆ ಕ್ರಿ.ಶ.೧೮೯೩ರಲ್ಲಿ ರಾಯಚೂರು ಜಿಲ್ಲಾ, ಲಿಂಗಸೂಗೂರು ತಾಲ್ಲೂಕಿನ ಗೋರೆಬಾಳ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ವೆಂಕಣ್ಣನವರು ಕುಲಕರಣಿಯಾಗಿದ್ದರು. ಸುತ್ತಮುತ್ತಲಿನ ಊರಿನಲ್ಲಿ ಧರ್ಮಿಷ್ಠರೆಂದೂ, ಪರೋಪಕಾರಿ ಎಂದೂ ಹೆಸರಾಗಿದ್ದರು.

ಇವರದು ತೋರಿಕೆಗೆ ದರ್ಪಿಷ್ಟ ಸ್ವಭಾವವಾಗಿದ್ದರೂ, ಅಂತರಂಗದಲ್ಲಿ ಹಾಗಿರಲಿಲ್ಲ. ಆಡಳಿತವನ್ನು ಜಾಣ್ಮೆಯಿಂದ ನಿರ್ವಹಿಸುತ್ತ ದುಷ್ಟರ ಪಾಲಿಗೆ ನಿಷ್ಠುರರೂ, ಸಜ್ಜನರ ಪಾಲಿಗೆ ಪರಮ ದಯಾಳುಗಳೆನಿಸಿದ್ದರು. ಇವರು ಕೂಸಾಗಿದ್ದಾಗ ತೊಟ್ಟಿಲಿನ ಮೇಲೆ ಒಂದು ಸರ್ಪ ಹೆಡೆ ಎತ್ತಿ ಆಡುವುದನ್ನು ನೋಡಿ ಮನೆಯವರು ಕಳವಳಗೊಂಡಿದ್ದರಂತೆ. ಈ ಸಮಾಚಾರ ಕೇಳಿ ಹಿರಿಯರೊಬ್ಬರು ಈ ಕೂಸು ಮುಂದೆ ಪ್ರಸಿದ್ಧ ವ್ಯಕ್ತಿಯಾಗುವನೆಂದು ಭವಿಷ್ಯ ನುಡಿದಿದ್ದರು. ಈ ಮಾತು ಮುಂದೆ ಅಕ್ಷರಶಃ ಸತ್ಯವಾಯಿತು.

ಅವರದು ಶ್ರೀಮಂತ ಒಕ್ಕಲು ಕುಟುಂಬ. ಮನೆಯಲ್ಲಿ ನೂರಾರು ಆಕಳು, ಎಮ್ಮೆ, ಜೀತದಾಳುಗಳು. ಪ್ರತಿದಿನ ಅತಿಥಿ ಅಭ್ಯಾಗತರು. ದಾನ ಧರ್ಮ ಎಡಬಿಡದೆ ನಡೆದಿದ್ದವು. ಮನೆಯಲ್ಲಿ ಹೊತ್ತಿಗೆ ನೂರು ಎಲೆ ಊಟಕ್ಕೆ ಬೀಳುತ್ತಿದ್ದವು. ಅವರ ಮನೆಯಲ್ಲಿ ನಡೆಯುತ್ತಿದ್ದ ಅನ್ನದಾನ ಆ ಸೀಮೆಗೆ ಪ್ರಸಿದ್ಧಿಯಾಗಿತ್ತು. ಯಾವ ಸ್ವಾಮಿಗಳು, ಪಂಡಿತರು, ವಿದ್ವಾಂಸರು, ಕೀರ್ತನ ಕಾರರು ಬಂದರೂ ಅವರ ಮನೆಯಲ್ಲಿ ತಿಂಗಳು ಗಟ್ಟಲೆ ಬಿಡಾರ ಮಾಡುತ್ತಿದ್ದರು. ಹೀಗಾಗಿ ನಿತ್ಯ ಪುರಾಣ, ಹರಿಕಥೆ, ಭಜನೆ ಸಾಧುಸಜ್ಜನರ ಸಂತರ್ಪಣೆ ನಡೆದೇ ಇತ್ತು.

ಇಂಥ ಅತಿಥಿ ಸತ್ಕಾರ ಅವರಿಗೆ ಹಿರಿಯರಿಂದ ಬಂದಿದ್ದ ಆಸ್ತಿ. ಇದಕ್ಕೆ ಒಂದು ನಿದರ್ಶನ:

ಸುಮಾರು ನಾಲ್ಕು ನೂರು ವರ್ಷಗಳ ಹಿಂದಿನ ಮಾತು. ಹನುಮಂತರಾಯರ ವಂಶದಲ್ಲಿ ೬-೭ ತಲೆಮಾರುಗಳ ಹಿಂದೆ ಕುಪ್ಪಣ್ಣರಾಯರೆಂಬ ಕುಲಕರ್ಣಿ ಇದ್ದರು. ಅವರು ಶ್ರೀಮಂತರಾದರೂ ಅವಧೂತರಂತೆ ಇದ್ದರು. ಅವರ ಪತ್ನಿ ತುಳಸಮ್ಮ, ಪರಮ ಸಾಧ್ವಿ. ಇಬ್ಬರೂ ತಿರುಪತಿ ವೆಂಕಟೇಶನ ಭಕ್ತರು. ಏನು ತಪ್ಪಿದರೂ ಈ ದಂಪತಿಗಳ ತಿರುಪತಿ ಯಾತ್ರೆ ತಪ್ಪುತ್ತಿರಲಿಲ್ಲ. ಪ್ರತಿವರ್ಷ ಬ್ರಹ್ಮೋತ್ಸವಕ್ಕೆ ಹೋಗಿ ಲಕ್ಷ್ಮೀವೆಂಕಟೇಶ್ವರನಿಗೆ ಒಂದು ತೊಲ ಬಂಗಾರದ ತಾಳಿ ಮಾಡಿಸಿ ಅರ್ಪಿಸಿ ಬರುತ್ತಿದ್ದರು. ಹೀಗೆ ಆ ದಂಪತಿಗಳು ಐವತ್ತೊಂದು ಬಾರಿ ತಿರುಪತಿ ಯಾತ್ರೆ ಮಾಡಿದ್ದರಂತೆ.

ಹೀಗಿರಲು ಒಂದು ಬಾರಿ ಸೋದೆಯ ಶ್ರೀವಾದಿರಾಜ ಶ್ರೀಪಾದಗಳು ತೀರ್ಥಯಾತ್ರೆಗೆ ಹೊರಟಿದ್ದವರು ಗೋರೆಬಾಳ ಗ್ರಾಮಕ್ಕೆ ಬಂದರು. ಅಲ್ಲಿಂದ ಒಂದೂವರೆ ಮೈಲಿ ಕೃಷ್ಣಾತೀರ. ಅಲ್ಲಿಗೆ ಬಂದವರು "ಇಲ್ಲಿ ಬ್ರಾಹ್ಮಣರು ಯಾರಿದ್ದಾರೆ"- ಎಂದು ಶ್ರೀಗಳು ವಿಚಾರಿಸಿದರು. ಎಲ್ಲರೂ ಕುಪ್ಪಣ್ಣ ದಂಪತಿಗಳ ವಿಷಯ ತಿಳಿಸಿದರು. ಅವರಲ್ಲಿಯೇ ಅಂದಿನ ಪೂಜಾ ನೆರವೇರಿಸಲು ನಿಶ್ಚಯಿಸಿ, ಅವರನ್ನು ಕರೆಸಿಕೊಂಡರು.

*"ಈ ದಿನ ಶ್ರೀ ಹಯಗ್ರೀವ ಸ್ವಾಮಿಯ ಪೂಜಾ ನಿಮ್ಮಲ್ಲಿ ನಡೆಯಬೇಕೆಂದು ಹರಿ ವಾಯುಗಳ ಸಂಕಲ್ಪವಾಗಿದೆ"*- ಎಂದರು. ಅವರಿಗೆ ಬೇಕಾಗಿದ್ದುದೂ ಇದೇ. ಕುಪ್ಪಣ್ಣ, ಸ್ವಾಮಿಗಳ ಪೂಜಾ ಭೋಜನದ ವ್ಯವಸ್ಥೆ ಮಾಡಿ ನಿತ್ಯದಂತೆ ತಾವು ಹೋಗುತ್ತಿದ್ದ ಬೇಡರ ಮನೆಗೆ ಹೊರಟು ಹೋದರು. ಪೂಜೆ ಮುಗಿದು ನೈವೇದ್ಯ ಸಮರ್ಪಣೆಯಾಗುವ ಹೊತ್ತಿನಲ್ಲಿ ಅವರು ಬಂದರು. ವಾದಿರಾಜರ ಹೆಗಲ ಮೇಲೆ ಬಿಳಿಯ ಕುದುರೆಯೊಂದು ನಿಂತು ಕಡಲೆ ಹೂರಣವನ್ನು ಮೆಲ್ಲುತ್ತಿರುವುದನ್ನು ನೋಡಿದರು. ಕೂಡಲೇ ಅದನ್ನು ಹೊಡೆಯಲು ಅವರು ಕೋಲು ತರಲು ಆ ಕಡೆ ಹೋದರು. ಹಿಂತಿರುಗಿ ಬರುವುದರೊಳಗಾಗಿ ಕುದುರೆ ಮಾಯವಾಗಿತ್ತು. ಅದರ ಬಗ್ಗೆ ಶ್ರೀವಾದಿರಾಜ ಶ್ರೀಪಾದಂಗಳನ್ನು ವಿಚಾರಿಸಲು, ಅವರಿಗೆ ತಮ್ಮ ಆರಾಧ್ಯ ದೈವ ಶ್ರೀಹಯವದನ ಸ್ವಾಮಿಯೇ ದರ್ಶನ ನೀಡಿದನೆಂದು ತಿಳಿದು ಸಂತೋಷಾಶ್ಚರ್ಯವಾಯಿತು.

ಇದರಿಂದ ಸುಪ್ರೀತರಾದ ವಾದಿರಾಜರು ಕುಪ್ಪಣ್ಣನವರನ್ನು ಕುರಿತು *"ಅಪ್ಪಾ, ನೀನೇ ಪುಣ್ಯವಂತ. ನಮ್ಮ ಹಯಗ್ರೀವ ದೇವರು ನಿನಗೆ ದರ್ಶನ ಕೊಟ್ಟಿದ್ದಾರೆ. ನಿನಗೆ ಒಳ್ಳೆಯದಾಗುತ್ತದೆ"*- ಎಂದು ಆಶೀರ್ವಾದ ಮಾಡಿ ಒಂದು ಚಿಕ್ಕ ಹಯಗ್ರೀವ ಸಾಲಿಗ್ರಾಮವನ್ನೂ, ಒಂದು ಮಣಿಮಾಲೆಯನ್ನೂ ಇತ್ತು ಅವರನ್ನು ಅನುಗ್ರಹಿಸಿದರು.

ಇಂಥ ವಂಶದಲ್ಲಿ ಹುಟ್ಟಿದವರು ಕುಲಕರ್ಣಿ ವೆಂಕಣ್ಣ. ಗೋರೆಬಾಳ ವೆಂಕಣ್ಣನವರು ದೀನದಲಿತರ ಬಂಧುವಾಗಿದ್ದರು. ಒಮ್ಮೆ ಅವರ ಮಾತಿನ ಮೇಲೆ ನಂಬಿಕೆ ಇರಿಸದೆ ಒಬ್ಬ ಮಾರವಾಡಿಯು ಅವರ ರೈತನ ಸಾಲದ ಪತ್ರಕ್ಕೆ ವೆಂಕಣ್ಣನವರಿಂದ ಸಹಿ ಅಪೇಕ್ಷಿಸಿದನಂತೆ. ಆಗ ಕುಲಕರ್ಣಿ ಅವರು ಒಂದು ಪತ್ರ ಬರೆದು ಕೊಟ್ಟರಂತೆ. ಅದರಲ್ಲಿ "ದುಡ್ಡು ಸಂಗಡ ಬರೋದಿಲ್ಲ, ಬರುವುದು ಅಪಕೀರ್ತಿ ಮಾತ್ರ"- ಎಂದು ಬರೆದಿದ್ದರಂತೆ.

ಈ ಪ್ರಸಂಗದಿಂದ ಅವರು ಆ ಧನಿಕನಿಗೆ ಒಳ್ಳೇ ಪಾಠ ಕಲಿಸಿದರು.

ತಮ್ಮ ವೃತ್ತಿ ನಿಮಿತ್ತವಾಗಿ ವೆಂಕಣ್ಣನವರು ಲಿಂಗಸೂಗೂರಿಗೆ ಬರುತ್ತಿದ್ದರು. ಅಲ್ಲಿ ಅವರಿಗೆ ಪ್ರಿಯರಾಗಿದ್ದ ರಾಮದಾಸರೆಂಬ ಸಾತ್ವಿಕರು ಇದ್ದರು. ಇವರು ಗುರುಪ್ರಾಣೇಶ ದಾಸರ ಸೋದರಳಿಯ. ಮುಂದೆ ಗುರುಪ್ರಾಣೇಶದಾಸರಿಂದ ಶ್ರೀಶಪ್ರಾಣೇಶವಿಠಲ ಎಂಬ ಅಂಕಿತ ಪಡೆದು ಅನೇಕ ಪದ ಸುಳಾದಿಗಳನ್ನು ರಚಿಸಿದರು.

ಲಿಂಗಸೂಗೂರಿಗೆ ಬಂದಾಗಲೆಲ್ಲ ವೆಂಕಣ್ಣನವರು ಶ್ರೀಶಪ್ರಾಣೇಶ ದಾಸರೊಡನೆ ಏಕಾಂತವಾಗಿ ಕುಳಿತು ಆಧ್ಯಾತ್ಮಿಕ ವಿಷಯಗಳನ್ನು ಕುರಿತು ಚರ್ಚಿಸುತ್ತಿದ್ದರು. ಇದು ಅವರಲ್ಲಿ ವೈರಾಗ್ಯವನ್ನು ತೀವ್ರಗೊಳಿಸಿತು. ಅವರಿಂದ ವೆಂಕಣ್ಣನವರು ದಾಸದೀಕ್ಷೆ ಸ್ವೀಕರಿಸಿ ಗುರು ಶ್ರೀಶ ಪ್ರಾಣೇಶವಿಠಲ ಎಂಬ ಅಂಕಿತ ಪಡೆದು ತಾವೂ ಪದ ಸುಳಾದಿಗಳನ್ನು ರಚಿಸಿದರು.

ವೆಂಕಣ್ಣನವರಿಗೆ ನಾಲ್ವರು ಮಕ್ಕಳು. ಇವರಲ್ಲಿ ಇಬ್ಬರು ಗಂಡು ಮಕ್ಕಳು, ಎರಡು ಹೆಣ್ಣು ಮಕ್ಕಳು. ಹನುಮಂತರಾಯರೇ ಹಿರಿಯ ಮಗ. ಇವರಿಗೆ ಐದನೆ ವಯಸ್ಸಿನಲ್ಲಿ ಉಪನಯನ ವಾಯಿತು. ದಾಸರ ಪದಗಳು, ಸ್ತೋತ್ರ ಪಾಠಗಳಿಂದ ಇವರ ವಿದ್ಯಾಭ್ಯಾಸ ಆರಂಭವಾಯಿತು.

ಹನುಮಂತರಾಯರ ಅಕ್ಕನನ್ನು ಲಿಂಗಸೂಗೂರಿನ ಶ್ರೀಪ್ರಾಣೇಶದಾಸರ ಪ್ರಪೌತ್ರರಾದ ರಾಮಣ್ಣನೆಂಬ ಜಮೀನುದಾರರಿಗೆ ವಿವಾಹ ಮಾಡಿಕೊಟ್ಟಿದ್ದರು. ಅಕ್ಕ ತೀರಿಕೊಂಡ ಮೇಲೆ ಸೋದರತ್ತೆಯ ಮಗಳೊಡನೆ ಮತ್ತೆ ಅವರ ವಿವಾಹ ನಡೆದಿತ್ತು. ಹೀಗಾಗಿ ಇವರ ಮನೆಯಲ್ಲಿ ಇದ್ದುಕೊಂಡು ಹನುಮಂತರಾಯರೂ, ಅವರ ಸಹೋದರನೂ ತಮ್ಮ ಶಿಕ್ಷಣವನ್ನು ಮುಂದುವರೆಸಿದರು.

ಲಿಂಗಸೂಗೂರಿನ ಈ ಮನೆಯ ಒಂದು ಭಾಗದಲ್ಲಿ ಶ್ರೀ ಜಗನ್ನಾಥದಾಸರ ವಿದ್ಯಾ ಗುರುಗಳಾಗಿದ್ದ ಶ್ರೀವರದೇಂದ್ರತೀರ್ಥರ ವೃತ್ತಿಕಾ ಬೃಂದಾವನವಿತ್ತು. ಪ್ರಾಣೇಶದಾಸರು ಜಗನ್ನಾಥ ದಾಸರ ಶಿಷ್ಯರು. ಹೀಗಾಗಿ ಈ ಕ್ಷೇತ್ರವು ಹನುಮಂತರಾಯರ ಆಧ್ಯಾತ್ಮಿಕ ಹಾಗೂ ಲೌಕಿಕ ಜೀವನದ ಯಶಸ್ಸಿಗೂ, ಅವರು ಮುಂದೆ ಕೈಗೊಳ್ಳಲಿದ್ದ ಹರಿದಾಸಸಾಹಿತ್ಯ ಪ್ರಚಾರಕ್ಕೂ ಕಾರಣವಾಯಿತು.

ಅವರ ಮೇಲೆ ಪ್ರಭಾವ ಬೀರಿದ ಇನ್ನೊಂದು ವ್ಯಕ್ತಿ ಸ್ವಾಮಿರಾಯರು. ಇವರು ನೆರೆಯ ಗ್ರಾಮವಾದ ಸಂತಿಕೆಯವರು. ಇವರ ತಾಯಿ ಬಾಲ್ಯದಲ್ಲಿಯೇ ತೀರಿಕೊಂಡಿದ್ದುದರಿಂದ ಇವರೂ ರಾಮಣ್ಣನವರ ಮನೆಯಲ್ಲಿಯೇ ಇದ್ದುಕೊಂಡು ಓದಿ ಕನ್ನಡ, ಉರ್ದು, ಪಾರಸಿ, ಮರಾಠಿ ಭಾಷೆ ಗಳಲ್ಲಿ ಪಾರಂಗತರಾದರು. ವಕೀಲವೃತ್ತಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಲಿಂಗಸೂಗೂರಿನಲ್ಲಿ ವಕೀಲರಾಗಿದ್ದರು. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ, ಹನುಮಂತರಾಯರೂ ವಕೀಲ ಪರೀಕ್ಷೆ

ಪಾಸು ಮಾಡಿ, ಲಿಂಗಸೂಗೂರಿನಲ್ಲೇ ವಕೀಲರಾಗಿ ವೃತ್ತಿ ಕೈಗೊಂಡರು.

ಮನೆಯಲ್ಲಿ ಪುರಾಣ ಪ್ರವಚನಗಳು ಸದಾ ನಡೆದಿರುತ್ತಿತ್ತು. ಶ್ರೀವರದೇಂದ್ರ ಗುರುಗಳ ಬೃಂದಾವನದ ಸಾನ್ನಿಧ್ಯ ಬೇರೆ. ತಂದೆ ಹರಿದಾಸರು, ಇವರಿಗೆ ಎಲ್ಲ ರೀತಿಯಿಂದಲೂ ಆದರ್ಶ, ಅಣ್ಣನಂತಿದ್ದ ಸ್ವಾಮಿರಾಯರ ಮಾರ್ಗದರ್ಶನ. ಇವರು ಮುಂದೆ ರಘುಕಾಂತ ತೀರ್ಥರೆಂಬುವ ರಿಂದ ಉಪದೇಶ ಪಡೆದು, ಗುರುಜಗನ್ನಾಥ ವಿಠಲಾಂಕಿತ ಶ್ರೀಕೋಸಗೀ ಸ್ವಾಮಿರಾಯಾಚಾರ್ಯ ರಿಂದ ಅಂಕಿತ ಪಡೆದು ವರದೇಶ ವಿಠಲರಾದರು. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ ಹನುಮಂತ ರಾಯರೂ ವಕೀಲ ವೃತ್ತಿಯಲ್ಲಿ ಯಶಸ್ವಿಯಾಗಿ ಜನಪ್ರಿಯ ವಕೀಲರೆನಿಸಿದರೂ, ಅದೇ ಕೋಸಗಿ ಸ್ವಾಮಿರಾಯಾಚಾರ್ಯರಿಂದ ತಾವೂ ಸುಂದರವಿಠಲ ಎಂಬ ಅಂಕಿತ ಪಡೆದು ಹರಿದಾಸ ದೀಕ್ಷೆಯನ್ನು ಸ್ವೀಕರಿಸಿದರು.

ಹೀಗೆ ಮನೆತನದ ಹಿರಿಯರ ಯೋಗ್ಯ ಮೇಲ್ಪಂಕ್ತಿ, ಮಾರ್ಗದರ್ಶನ, ವರದೇಂದ್ರ ಸ್ವಾಮಿಗಳ ಆಧ್ಯಾತ್ಮಿಕ ಹಿನ್ನೆಲೆ, ದಾಸದೀಕ್ಷೆ, ಮನೆಯಲ್ಲಿ ಸದಾ ನಡೆಯುತ್ತಿದ್ದ ವ್ಯಾಸ-ಹರಿದಾಸ ಸಾಹಿತ್ಯಗಳ ಚರ್ಚೆ, ಪ್ರವಚನ, ಭಜನೆ, ಪದಸುಳಾದಿಗಳ ಪಠಣ- ಹೀಗೆ ಗೋರೆಬಾಳ ಹನುಮಂತ ರಾಯರಿಗೆ ಬಾಲ್ಯದಲ್ಲೆ ಮುಂದೆ ಕೈಗೊಳ್ಳಬೇಕಾಗಿದ್ದ ಮಾರ್ಗದ ಬಗ್ಗೆ ಸ್ಪಷ್ಟ ಕಲ್ಪನೆ ನೀಡಿತ್ತು. ಮೊದಲು ವಕೀಲರಾಗಿ ವೃತ್ತಿಯನ್ನೂ, ಆರಂಭಿಸಿದರೂ ಅವರ ಪ್ರವೃತ್ತಿ ಎಲ್ಲ ಹರಿದಾಸ ಸಾಹಿತ್ಯದ ಪ್ರಚಾರದ ಕಡೆಗೆ ಇದ್ದುದರಿಂದ ತಮ್ಮ ಬದುಕನ್ನು ಈ ಕಾರ್ಯಕ್ಕಾಗಿ ಮೀಸಲಿಟ್ಟರು. ಅದರಿಂದ ತಮ್ಮ ನೆಮ್ಮದಿಯ ಜೀವನಕ್ಕೆ ಅಡ್ಡಿ ಆತಂಕಗಳೆಂದು ತಿಳಿದಿದ್ದರೂ, ಲೌಕಿಕ ಸಿದ್ಧಿಗಿತಲೂ ಆಧ್ಯಾತ್ಮಿಕ ಸಾಧನೆಯ ಕಡೆ ಅವರ ಮನಸ್ಸು ಹರಿದಿತ್ತು. ಅವನ್ನೇ ತಮ್ಮ ಬಾಳಿನ ಗುರಿಯಾಗಿ ಸ್ವೀಕರಿಸಿದರು.

ಅವರಿಗೆ ಹರಿದಾಸ ಸಾಹಿತ್ಯವು ಅದಮ್ಯ ಆಕರ್ಷಣೆ ನೀಡಿತ್ತು. ನೀರಿಗೆ ಬೀಳುವುದು, ಜೀವಿಸುವುದು ಮೀನಿಗೆ ಹೇಗೆ ಸಹಜ ವ್ಯಾಪಾರವಾಗಿತ್ತೋ, ಹಾಗೇ ಹನುಮಂತರಾಯರಿಗೆ ದಾಸಸಾಹಿತ್ಯ ಅವರ ಉಸಿರಾಟದೊಂದಿಗೆ ಒಂದಾಗಿ ಬೆರೆತಿತ್ತು.

ಅವರಿದ್ದ ವಾತಾವರಣ ಅಂಥದು.

ಗುರುಕೃಪೆಯಿಂದಾಗಿ ಅವರಿಗೆ ದ್ವೈತ ಸಿದ್ಧಾಂತದ ಪ್ರಮೇಯಗಳು ಕೈಬೀಸಿ ಕರೆಯುತ್ತಿದ್ದವು. ಹರಿದಾಸ ಸಾಹಿತ್ಯದಲ್ಲಿ ಈ ಪ್ರಮೇಯಗಳು ರಸಮಯವಾಗಿ ಆಕರ್ಷಕವಾಗಿ ನಿರೂಪಿತವಾಗಿದ್ದವು. "ಮನೆಯಲ್ಲಿ ಪ್ರತಿದಿನ ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು- ಮುಂತಾದ ಎಲ್ಲ ಹರಿದಾಸರು ರಚಿಸಿದ ನವರಸಭರಿತವಾದ ಪದಸುಳಾದಿಗಳನ್ನೂ, ಕೀರ್ತನೆಗಳನ್ನೂ, ಹಾಡಿಪಾಡಿ, ಮನವುಬ್ಬಿ, ತನುವುಬ್ಬಿ ಬಾಷ್ಪಪೂರಿತವಾಗಿ ಗದ್ಗದ ಕಂಠರಾಗಿ ನಲಿದಿದ್ದರು, ನಲಿಯುತ್ತಿದ್ದರು. ಭಕ್ತಿಯಿಂದ ನಲಿದಂತೆಲ್ಲ ಪ್ರಮೇಯಾಂತರ್ಗತ ಅಪ್ರಮೇಯ ಪುರುಷನಲ್ಲಿ ಭಕ್ತಿಯು ಇನ್ನಷ್ಟು ದೃಢವಾಗುತ್ತ ಬಂತು"- ಎಂದು ಬರೆದಿದ್ದಾರೆ.

- *(ಎಲ್, ವಿಠಲರಾಯರು; ಗೋರೆಬಾಳ ಹನುಮಂತರಾಯರ ಜೀವನ ಚರಿತ್ರೆ, ಪು-೧೦)*

ಆಗ ತಮ್ಮ ಮನಸ್ಸಿನ ಮೇಲಾಗಿದ್ದ ಪರಿಣಾಮವನ್ನು ಕುರಿತು ಹನುಮಂತರಾಯರು ಒಂದೆಡೆ ಹೀಗೆ ಬಿಚ್ಚು ಮಾತಿನಿಂದ ವರ್ಣಿಸಿದ್ದಾರೆ.

"ವಾರ್ಧಿಕ ಷಟ್ಪದಿಯ ರೂಪವಾದ, ನವರಸ ಭರಿತವಾದ ಈ ಕಾವ್ಯವನ್ನು (ಕೃಷ್ಣಕಥೆ) ನೋಡುತ್ತ, ಉತ್ಪ್ರೇಕ್ಷಾಲಂಕಾರವನ್ನೂ, ಛಂದಸ್ಸಿಗೆ ಸರಿಯಾದ ಶಬ್ದ ಪ್ರಯೋಗವನ್ನೂ, ಭಕ್ತ್ಯಾತಿಶಯವನ್ನು ಹೆಚ್ಚಿಸಿ ಕಲ್ಲನ್ನು ಕರಗಿಸುವ ಮಧುರ ವಾಕ್ಯಗಳೆನಿಸುವ ಮನೋಹರವಾದ ಪದ್ಯಗಳನ್ನು ಓದುತ್ತ ಓದುತ್ತ ಐವತ್ತನೆಯ ಶ್ಲೋಕದಲ್ಲಿ ಗೋಪಿಯು ತನ್ನ ಮನದಣಿಯುವಂತೆ ವರ್ಣಿಸಿದ ಶ್ರೀಕೃಷ್ಣನ ಬಾಲಲೀಲೆಗಳನ್ನು ಬಾಯಿಂದ ಉಚ್ಚರಿಸುವುದೂ ಸಹ ಆಗಲಿಲ್ಲ. ವಾಗ್ದಗ್ಧದವು ಪ್ರಾರಂಭಿಸಿ ಆನಂದಾಶ್ರುಗಳು ಹೊರಸೂಸಿ ಭೋರೆಂದು ಅಳಲಾರಂಭಿಸುದಷ್ಟೆ ಎಚ್ಚರ. ಅಷ್ಟರಲ್ಲಿ ಮೈಮರೆತು ಒಂದು ತರಹದ ಆನಂದವೆನಿಸಿತು. ಅದನ್ನು ವ್ಯಕ್ತಡಿಸಲು ಸಾಧ್ಯವಿಲ್ಲ...."

"ನನ್ನಂಥ ನೀಚವೃತ್ತಿಯನ್ನವಲಂಭಿಸಿರುವ ಕಠಿಣ ಮನಸ್ಸು ಸಹ ಕೆಲ ಹೊತ್ತಿನವರೆಗೆ ಕರಗಿತು. ಎಂದ ಮೇಲೆ ಆರ್ತ ಭಕ್ತರುಗಳ ಹೃದಯ ದ್ರವಿಸುವುದು ಏನಾಶ್ಚರ್ಯ"

*- (ಶ್ರೀಕೃಷ್ಣನ ಏಂಟಿ ಕಥಾ ಗ್ರಂಥದ ಮುನ್ನುಡಿ)*

ಹನುಮಂತರಾಯರಿಗೆ ತಮ್ಮ ಜೀವಿತದ ಗುರಿ ಏನೆಂಬುದು ಆ ಕ್ಷಣದಲ್ಲಿ ಹೊಳೆಯಿತು. ಅವರು ಲೌಕಿಕ ಅಧಿಕಾರ ಪದವಿಗಳು ನೀಡುತ್ತಿದ್ದ ಸುಖ ಸಂಪತ್ತು ಭೋಗಭಾಗ್ಯಗಳನ್ನು ತಿರಸ್ಕರಿಸಿ, ಆಧ್ಯಾತ್ಮ ಜೀವನದ ಕಲ್ಲು ಮುಳ್ಳು ಹಳ್ಳಕೊಳ್ಳಗಳ ದುರ್ಭರ ಹಾದಿಯನ್ನೇ ಆರಿಸಿಕೊಂಡರು. ಹೀಗೆ ಅವರ ಹಿರಿಯರು ಮಾಡಿದ ಪುಣ್ಯದ ಫಲವಾಗಿ ಗೋರೆಬಾಳ ಹನುಮಂತರಾಯರು ಹರಿದಾಸ ಸಾಹಿತ್ಯ ಪ್ರಚಾರವನ್ನು ತಮ್ಮ ಸಾಧನ ಮಾರ್ಗವಾಗಿ ಸ್ವೀಕರಿಸಿದರು. ಇದು ತಮ್ಮ ನೆಮ್ಮದಿಯ ಬಾಳನ್ನು ಕಲಕಿ, ಬದುಕನ್ನು ಘೋರ ಬಾಳಾಗಿ ಮಾಡುವುದೆಂಬುದನ್ನು ತಿಳಿದೂ ತಿಳಿದೂ ಈ ಕಷ್ಟ ಕಾರ್ಪಣ್ಯದ ಹಾದಿಯನ್ನೇ ಆರಿಸಿಕೊಂಡರು. ಪರಮಾತ್ಮನ ಕೃಪೆಯನ್ನು ಪಡೆಯುವ ಸಲುವಾಗಿ ಹಿಂದೆ ಹರಿದಾಸರು ಆರಿಸಿಕೊಂಡಿದ್ದ ಈ ಕಷ್ಟದ ದಾರಿಯನ್ನೇ ಆರಿಸಿಕೊಂಡರು. ಅವರ ಈ ತ್ಯಾಗ ಜೀವನ ನಾಡಿನ ಭಾಗ್ಯವಾಯಿತು. ಅವರು ನುಸಿಹಿಡಿದು, ಹುಳ ಹುಪ್ಪಟೆಗಳಿಗೆ ಆಹಾರವಾಗಿ, ಅಜ್ಞಾತವಾಗಿ ಬಿದ್ದಿದ್ದ ಸಹಸ್ರಾರು ಹರಿದಾಸರ ಸಾಹಿತ್ಯ ಕೃತಿಗಳನ್ನು ಬೆಳಕನ್ನು ಕಾಣುವಂತೆ ಮಾಡಿದರು. ಭವಿಷ್ಯ ಜನಾಂಗಕ್ಕೆ ಈ ಅನರ್ಘ್ಯ ಸಂಪತ್ತು ಉಳಿಯಿತು.

೩

ಗೋರೆಬಾಳ ಹನುಮಂತರಾಯರು ಹರಿದಾಸ ಸಾಹಿತ್ಯದ ರಕ್ಷಣೆ, ಸಂಸ್ಕರಣ, ಸಂಪಾದನ, ಸಂಶೋಧನ ಮತ್ತು ಪ್ರಕಟಣೆ ಹಾಗೂ ಪ್ರಸಾರ ಕಾರ್ಯಕ್ಕೆ ತಮ್ಮ ಸರ್ವಸ್ವವನ್ನು ಮೀಸಲಿಟ್ಟು ದುಡಿಯಲು ಸಂಕಲ್ಪ ಮಾಡುವಂತೆ ಮಾಡಿದ ಗುಣ ಹರಿದಾಸ ವಾಙ್ಮಯದಲ್ಲಿ ಇರುವುದಾದರೂ ಏನು? ಹರಿದಾಸಸಾಹಿತ್ಯ ಪಾಮರರಸಾಹಿತ್ಯ, ಇದರಲ್ಲಿ ಅಂಥ ಗುಣ ವಿಶೇಷಣಗಳು ಏನಿದೆ? - ಎಂದು ಮೂಗು ಮುರಿಯುವರಿಗೆ ಹನುಮಂತರಾಯರು ಹೀಗೆ ಉತ್ತರಿಸಿದ್ದಾರೆ :

"ವೇದ ಉಪನಿಷತ್ತು, ಭಾರತ, ಪಂಚರಾತ್ರ, ಪುರಾಣ, ಬ್ರಹ್ಮಸೂತ್ರ- ಇವುಗಳ ಭಾಷ್ಯ ಟೀಕಾ ಸಂಸ್ಕೃತ ಭಾಷೆಯಲ್ಲಿದೆ. ಸಂಸ್ಕೃತ ಭಾಷಾ ತಜ್ಞರಾದ ಜ್ಞಾನಿಗಳು ವೇದ ವರ್ಣನೆಗಳಿಗೆ ಸರ್ವಭಾಷಾ ಅಭಿವ್ಯಂಜಕ ಶಕ್ತಿಯಿತ್ತ ಹರಿಯ ಅಜ್ಞಾನುಸಾರ, ಪ್ರಾಕೃತ ಭಾಷೆಯಲ್ಲೇ ರಚಿಸಿ

ಮೂಲ ಗ್ರಂಥಗಳ ಭಾವವನ್ನೇ ಪ್ರಕಟಿಸಿರುವ ಎಲ್ಲ ಹರಿದಾಸರುಗಳ ಸಾಹಿತ್ಯವು ಅತಿ ಉಚ್ಚ ಭಾವದಲ್ಲಿದ್ದು ಈ ಹರಿದಾಸ ಸಾಹಿತ್ಯದಲ್ಲಿ ವಿಶ್ವ ಸಾಹಿತ್ಯವೇ ತುಂಬಿ ತುಳುಕುತ್ತಿದೆ."

೧. ವೇದ ಉಪನಿಷದರ್ಥಗಳಾಗಿಯೂ ಅವುಗಳ ಭಾವವನ್ನು ಕ್ರಮ, ಘನ, ಜಟ, ಸ್ವರ, ಉದಾತ್ತ, ಅನುದಾತ್ತ, ಸರ್ಗ, ಉಪಚಯ, ಬಿಂದುನಾದ ಘೋಷ, ಶಾಂತಾತಿಶಯಗಳ ಭಾವವನ್ನು ತೋರಿಸುವ ದಾಸರ ಪದಸುಳಾದಿ, ಉಗಾಭೋಗ, ವೃತ್ತನಾಮದಿಗಳಲ್ಲಿ ತುಂಬಿ ತುಳುಕುತ್ತಿದೆ. ಸಾಮಗಾನವನ್ನು ಎಚ್ಚರಿಸುತ್ತಿದೆ.

೨. ಭಾರತಾದಿ ಸಕಲ ಪುರಾಣಾರ್ಥ ಹರಿದಾಸ ಸಾಹಿತ್ಯದಲ್ಲಿ ಅನೇಕ ಶಾಸ್ತ್ರಾರ್ಥಗಳು ಹೇರಳವಾಗಿ ಅಡಕವಾಗಿವೆ.

೩. ಹರಿದಾಸ ಸಾಹಿತ್ಯದಲ್ಲಿ ಹಿಂದಿನ ಹಳೆ ಕನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಯ ಬೆಡಗು,ಆದ್ಯರು, ಪುರಂದರ, ಶ್ರೀವಿಜಯದಾಸರು, ಶ್ರೀ ಜಗನ್ನಾಥದಾಸರ ಕಾಲಗಳಲ್ಲಿಯ ಭಾಷಾ ಪ್ರಭೇದ ಮತ್ತು ಅವುಗಳ ಪರಸ್ಪರ ವೈಲಕ್ಷಣಕ್ಕೆ ಕಾರಣ.

೪. ಇತರ ಸಾಹಿತ್ಯಕ್ಕೂ ದಾಸ ಸಾಹಿತ್ಯದಲ್ಲಿರುವ ಮಹಾ ಪ್ರಭೇದ ಇತರ ಸಾಹಿತ್ಯ ಗಳಿಗಿಂತಲೂ ದಾಸ ಸಾಹಿತ್ಯಕ್ಕೆ ಹೆಚ್ಚಿನ ಒಲುಮೆ ಕಾರಣ.

೫. ಹರಿದಾಸ ಸಾಹಿತ್ಯದಲ್ಲಿ ಜನಪದ ಶಬ್ದ ಲಾಲಿತ್ಯವು, ಭಾಷಾ ವಿವರಣೆ, ವಾಙ್ಮಯ, ಛಂದಸ್ಸು, ಅಂಲಕಾರ ನಾಟಕಾದಿ ಅನೇಕ ಕಲೆಗಳು, ಪ್ರಾಸಾನುಪ್ರಾಸಗಳು, ಕವಿತಾದಿ ಅನೇಕ ಕಲೆಗಳಿಂದ ಶೋಭಿಸುವುದು.

೬. ಹರಿದಾಸ ಸಾಹಿತ್ಯದಲ್ಲಿಯ ಭಾವರಸ ಗತಿಯು ದೇಶಕಾಲಾನುಗಣ್ಯವಾಗಿ ಸಂಗೀತ ಶಾಸ್ತ್ರಕ್ಕೂ ದಾಸ ಸಾಹಿತ್ಯಕ್ಕೂ ಇರುವ ನಿಕಟ ಸಂಬಂಧ, ಯಾವ ಪದ್ಧತಿಯಲ್ಲಿ ಯಾವ ರಾಗ,ಯಾವ ತಾಳ, ಯತಿಲಯಾದಿಗಳಲ್ಲಿ ಆ ವಾದ ರಸಗಳನ್ನು ವರ್ಣಿಸಿರುವರು. ಆ ರಾಗಗಳ ದೇವತೆಗಳನ್ನರಿತು ಪೇಳಿದರೆ ಫಲ ಕೊಡುವರು.

೭. ಹರಿದಾಸ ಸಾಹಿತ್ಯಕ್ಕೂ ಭರತ ಶಾಸ್ತ್ರಕ್ಕೂ ಇರುವ ಅತಿ ಸಾಮೀಪ್ಯ, ನಾಟ್ಯ, ತಾಳ, ಹಾವ, ಭಾವ, ವಿಲಾಸ, ತಾಂಡವ ನೃತ್ಯ ಪ್ರಭೇದ, ಕರಚರಣಾದಿ ವಿನ್ಯಾಸಗಳಿಂದ ಕೂಡಿದ ಸಾಂಕೇತಿಕ ಭಾವನೆಗಳನ್ನು ಪೂರೈಸುವ ಕಲೆ ವಿಶೇಷಗಳು ತುಂಬಿವೆ.

೮. ಮೃದಂಗಾದಿವಾದ್ಯ, ವೈಶಿಷ್ಟ, ಕಲೆಗಳಂತೂ ದಾಸ ಸಾಹಿತ್ಯದಲ್ಲಿ ಹರಿದು ಸೂಸುತ್ತಿವೆ

೯. ಹರಿದಾಸ ಸಾಹಿತ್ಯದಲ್ಲಿ ಗುಹ್ಯ, ಸಮಾಧಿ, ದರ್ಶನ ಭಾಷೆಗಳ ಅರ್ಥಾನುಸಂಧಾನ ಕ್ರಮ, ದಾಸರ ಗುಟ್ಟು, ದಾಸರ ಒಗಟು- ಮುಂತಾದವುಗಳು ಪರಿಶೋಭಿಸುತ್ತಲಿವೆ.

೧೦. ಹರಿದಾಸರಿಂದ ಭಾಷಾ ಸುಧಾರಣೆ, ದೇಶ ಸುಧಾರಣೆ, ಪುರುಷ ಸ್ತ್ರೀ ಮಾನವಪರ ಸಂಸಾರದ ಪರಿಶೀಲನೆ, ಮತ ಮತಾಂತರದ ಕಲಹ ನಿವಾರಣೆ, ಪರಸ್ಪರ ಪ್ರೀತಿ ಹುಟ್ಟಿಸಲು ಅವರು ಪೇಳಿದ ನೀತಿ ಧರ್ಮಗಳು.

೧೧. ಇವೆಲ್ಲ ಕಲೆಗಳಲ್ಲದೆ ಶ್ರೇಷ್ಠ ಜ್ಞಾನ ಭಕ್ತಿ ವೈರಾಗ್ಯದ ಬೆಡಗು ಸೂಸಿ, ಹೊರ ಚೆಲ್ಲಿ ಕಾಲ ಕಾಲಕ್ಕೆ ಪರಮಾತ್ಮನಲ್ಲಿ ಭಕ್ತ್ಯಾತಿಶಯವನ್ನು ಹೆಚ್ಚಿಸುವುದು.

೧೨. ವ್ಯಾಸ-ದಾಸ ವರ್ಗದಲ್ಲಿ ಕಿಂಚಿತ್ತಾದರೂ ಭೇದ ಭಾವವಿಲ್ಲವಾದರೂ ಮೂಲವನ್ನರಿಯದ ಉಭಯರಿಗೆ ಉಪದೇಶ ಕ್ರಮಗಳಾದರೂ ಧಾರಾಳವಾಗಿರುವುವು. ಇತರ ಒಂದು ಸಾಹಿತ್ಯದಲ್ಲಿ ಒಂದು ಕಲೆಯಿದ್ದರೆ ಇನ್ನೊಂದು ಕಲೆಯಿಲ್ಲ. ಹರಿದಾಸರ ಮೃದು ವಚನದಿ ವಿಶ್ವ ಸಾಹಿತ್ಯಗಳೆಲ್ಲ ತುಂಬಿವೆಯೆಂದು ತೋರಿಸಲು ಅರಿತ ತಜ್ಞರೂ, ದೇಶ ಕಾಲವೂ ದೊರಕಿಸಿ ಪ್ರಚುರಗೊಳಿಸಲು ದಾಸರೇ ಸಮರ್ಥರು.

*-(ವಿಜಯದಾಸರ ಸೃಷ್ಟಿ ಪ್ರಕರಣ ಸುಳಾದಿಗಳು-ಮುನ್ನುಡಿ, ಪು.7-9)*

"ಭಾರತ ಇತಿಹಾಸ ಪುರಾಣ, ಉಪಪುರಾಣ ಸಂಹಿತಾ, ಆಗಮಗಳ ಸಮಸ್ಯೆ ಬಹು ಸರಳವಾಗಿ ವಿವರಿಸಲ್ಪಟ್ಟಿದೆ. ಸೃಷ್ಟಿ ಕ್ರಮಾದಿ ವೈಜ್ಞಾನಿಕ ವಿಷಯಗಳು ಬಹು ವಿಧವಾಗಿ ಹೇಳಿದ್ದಾರೆ.

ಹರಿದಾಸ ಸಾಹಿತ್ಯದಲ್ಲಿಯ ವ್ಯಾಕರಣ ನಿಯಮವನ್ನು ಹಿರಿದಾಗಿ ಪಾಲಿಸಿದಂತೆ ಮತ್ತಾರೂ ಪಾಲಿಸಿಲ್ಲ. ಈಗಿನ ವ್ಯಾಕರಣವಷ್ಟೇ ಅಲ್ಲ. ಹಿಂದಿನ ಛಂದೋಮಯ ವ್ಯಾಕರಣದ ವಿವರಣೆಯ ನಿಯಮಾನುಸಾರ ದಾಸರ ಕನ್ನಡ ನುಡಿಯು ಆದರ್ಶವಾಗಿದೆ. ಶಬ್ದ ಸಮಾಸ, ಪ್ರಕೃತಿ ಪ್ರತ್ಯಯ ಸರ್ವನಾಮಾದಿಗಳು, ಲಿಂಗತ್ರಯ ವಿವೇಚನೆ, ಕರ್ತರಿಕರ್ಮ ಕ್ರಿಯೆಗಳ ಭಾವ ಸರಸವಾಗಿದೆ."

"ಜ್ಯೋತಿಶಾಸ್ತ್ರ, ಆರೋಗ್ಯಶಾಸ್ತ್ರ, ಅರ್ಥಶಾಸ್ತ್ರ, ಉದ್ಯೋಗಶಾಸ್ತ್ರ, ಭೂಗರ್ಭಶಾಸ್ತ್ರ, ಖಗೋಲಶಾಸ್ತ್ರ, ಮಾನಸಿಕಶಾಸ್ತ್ರ, ಜೀವಶಾಸ್ತ್ರ, ಪ್ರಾಣಿಸಸ್ಯಾದಿ ಅನೇಕ ಶಾಸ್ತ್ರಗಳ ವಿವೇಚನೆ ಆದರ ಮರ್ಯಾದೆ ಹರಿದಾಸರು ಕಾದಿಟ್ಟಿದ್ದಾರೆ."

"ಹರಿದಾಸರ ಚಿತ್ರಕಲೆ ವಿಚಿತ್ರವಾದುದು."

*-(ಶ್ರೀ ಗೋರೆಬಾಳ ಹನುಮಂತರಾಯರು; ದ್ವೈಮಾಸಿಕ ಸಂ, ೧, ಸಂ. ೧. ೧೯೫೭)*

ವೃತ್ತಿ ವಕೀಲನದು; ಪ್ರವೃತ್ತಿ ಹರಿದಾಸನದು. ಒಂದು ಲೌಕಿಕಕ್ಕೆ ಎಳೆದರೆ ಮತ್ತೊಂದು ಪಾರಮಾರ್ಥಿಕಕ್ಕೆ ಎಳೆಯುತ್ತಿತ್ತು. ಈ ತಾಕಲಾಟದಲ್ಲಿ ಏನು ಮಾಡಬೇಕೆಂದು ತಿಳಿಯದೆ ಹನುಮಂತ ರಾಯರು ಕೆಲವು ವರ್ಷ ದಿಙ್ಮೂಢರಾಗಿ ತೊಳಲಿದರು. ಅವರ ಹಿರಿಯರ ಪುಣ್ಯ ದೊಡ್ಡದು. ಹೀಗಾಗಿ ಹನುಮಂತರಾಯರು ವಕೀಲ ವೃತ್ತಿಯನ್ನು ತೊರೆದು ಹರಿದಾಸ ಸಾಹಿತ್ಯವನ್ನು ಪಟ್ಟಾಗಿ ಹಿಡಿದರು.

ಲೋಕೋತ್ತರ ಸಾಹಿತ್ಯ ನಿಧಿಯನ್ನು ಅಂಜನ ಹಚ್ಚಿ ಹುಡುಕಿ ತೆಗೆಯುವುದರಲ್ಲಿ ತಮ್ಮ ಜೀವಿತದ ಸಾರ್ಥಕ್ಯವನ್ನು ಕಂಡುಕೊಂಡರು ಗೋರೆಬಾಳ ಹನುಮಂತರಾಯರು. ಹಸ್ತ ಪ್ರತಿಗಳ ಸಂಶೋಧನೆ, ಸಂಪಾದನೆ, ಮುದ್ರಣಕ್ಕಾಗಿ ಅವುಗಳನ್ನು ಸಿದ್ಧಪಡಿಸುವುದು, ಅಚ್ಚಿನ ಮನೆಗೆ ಅಲೆದು ಅವುಗಳನ್ನು ಮುದ್ರಿಸುವುದು; ಮುದ್ರಣ ವೆಚ್ಚಕ್ಕಾಗಿ ಚಂದಾದಾರರ ಮನೆ ಬಾಗಿಲಿಗೆ, ಮರಾಟಗಾರರ ಅಂಗಡಿ ಕಟ್ಟೆಗಳಿಗೆ ಅಲೆಯುವುದು. ಸಾಲಮಾಡಿ ಹಣ ಒದಗಿಸುವುದು; ಅದಕ್ಕೆ ಬಡ್ಡಿ

ತೆರೆವುದು; ಅದು ಸಾಧ್ಯವಾಗದಾಗ ಹೊಸ ಮನೆ ಮಾರುವುದು - ಹೀಗೆ ಹರಿದಾಸ ಸಾಹಿತ್ಯದ ಜೀರ್ಣೋದ್ಧಾರ ಕಾರ್ಯ, ಪ್ರಚಾರಕ ಕಾರ್ಯಕ್ಕೆ ತಮ್ಮ ತನುಮನ ಧನಗಳನ್ನು ಮೀಸಲಿಟ್ಟರು. ಈ ಕಾರ್ಯದ ಮೂಲಕವಾಗಿ ದಾಸವರ್ಯರ ಹೃದಯಾಂತರ್ಗತನಾದ ಶ್ರೀಹರಿಯ ಸೇವೆ, ಪೂಜೆಗಳನ್ನು ಮಾಡಿದರು. ಅವರು ೧೯೧೮ರಿಂದ ೧೯೬೭ರವರೆಗೆ ಅಖಂಡವಾಗಿ ಐವತ್ತು ವರ್ಷಗಳ ಕಾಲ ತಪಸ್ಸಿನಂತೆ ಹರಿದಾಸರ ಸೇವೆ ಮಾಡಿದರು. ಇದನ್ನೇ ತಮ್ಮ ಸಾಧನೆಯೆಂದೂ ಭಾವಿಸಿದರು.

ಅವರು ಒಂದೆಡೆ ತಮ್ಮ ಸಾಧನೆಯನ್ನು ಕುರಿತು ಹೀಗೆ ಸ್ಪಷ್ಟ ಮಾತುಗಳಲ್ಲಿ ನಿವೇದಿಸಿದ್ದಾರೆ.

"ಸಾಧನವೆಂದರೇನು? ಸಾಧ್ಯತೇ ಅನೇನ ಸಾಧನಂ - ಯಾವುದಾದರೊಂದು ವಸ್ತುವನ್ನು ಪಡೆಯಲು ಪ್ರಯತ್ನ ಪಡೆಯುವಿಕೆ ಸಾಧನವೆನ್ನುವರು.

೧) ಭೂದ್ರವ್ಯಾರ್ಜನೆ
೨) ಗಮನಾಗಮನ
೩) ಅರ್ಥನಿಷ್ಪಾದನ ಹುಡುಕಿ ತೆಗೆಯೋಣ
೪) ಉಪಕರಣ, ಸಲಕರಣ
೫) ಹಿಂದಿನಿಂದ ಅನುಗಮನ
೬) ಉಪಾಯ ಹಂಚಿಕೆ
೭) ವಸ್ತು ನಿರ್ಣಯ
೮) ದ್ರವ್ಯ ಮುಂತಾದ್ದನ್ನು ಕೊಡೋಣ
೯) ಲಾಭ
೧೦) ಮೈತ್ರೇಯ
೧೧) ಗುರಿ ಮುಟ್ಟೋಣ
೧೨) ಪೀಡಾ, ಹೊಡೆಯೋಣ (Torture)
೧೩) ಅನ್ನಾದಿರುಚಿಕರಾಕ (Savar)
೧೪) ಕುರುಹು (Sign)
೧೫) ವಿಧೇಯತೆ (Subduing)
೧೬) ಪ್ರಭುತ್ವವಶೀಕರಣ (Mastering)
೧೭) ಲೇಖನ ಪರ್ಯಾಯರೀತಿ, ಧೈರ್ಯಂ ಸರ್ವತ್ರ ಸಾಧನ - ಇತ್ಯಾದಿ.
೧೮) ವ್ಯಾಕರಣ ರೀತ್ಯಾ ಲಿಂಗತ್ರಯ ನಿರ್ಣೈಸುವಿಕೆ
೧೯) ಕಷ್ಟ ನಿವಾರಣೆ (Over coming)
೨೦) ಕಾಯಾವಾಚಾಮನಸಾ ತ್ರಿಕರಣ ಸಾಧನೆ
೨೧) ಕಟ್ಟಳೆಗೈದು ನಿರ್ಬಂಧಗೈಸಿದ ನಿತ್ಯ ನೈಮಿತ್ತಿಕ ಕರ್ಮ (Ceremonial)
೨೨) ಮನಸ್ಸಿನ ನಿರ್ಬಂಧ ಕರ್ಮ (Moral duty)

೨೩)ಅಂತಃಶುದ್ಧಿ ಮಾರ್ಗ (Obtaining purity)

೨೪)ಮುಕ್ತಿ ಮಾರ್ಗ (Emancipation)

-ಇವೇ ಮೊದಲಾದ ಸಾಧನದ ಬಗೆಗಳನ್ನು ಹಿಂದಿನ ಕೆಲಕೋಶಕಾರರು ಅರ್ಥ ಮಾಡಿದಂತೆ ಪಾಶ್ಚಾತ್ಯರಾದ ಕಿಟಲರು ಸಹ ತಮ್ಮ ಕೋಶದಲ್ಲಿ ವಿವರಿಸಿರುವರು."

"ಮುಖ್ಯ ಸಾಧನವು ಮುಕ್ತಿ ಗೋಸುಗವೇ ಇದೆ. ಆದರೆ ಇಂಥ ಸಾಧನವಾದರೂ ಅದರ ಸ್ವರೂಪ ಮತ್ತು ಪ್ರಾಪ್ತಿ ಇವರೆಡರಲ್ಲಿಯೂ ಪರತಂತ್ರ ಮೂಲಕವೇ ಸಾಧನವಿದೆ. ಸಾಧನಾವಸ್ಥೆಯಲ್ಲಿಯೂ, ಸಿದ್ಧಾವಸ್ಥೆಯಲ್ಲಿಯೂ ಪಾರತಂತ್ರ್ಯತೆ, ದಾಸ್ಯಭಾವ ಇದ್ದೇ ಇದೆ. ಇದೇ ಪ್ರಪತ್ತಿಯೋಗ, ಶರಣಾಗತಿತತ್ವ."

"ಹರಿದಾಸರ ಸೇವೆ, ದಾಸ ಸಾಹಿತ್ಯ ಸೇವೆಗೈಯುವುದಕ್ಕಾಗಿಯೇ ಕೆಲ ಮಟ್ಟಿಗೆ ಆರೋಗ್ಯ ಮತ್ತು ಆಯುವಿತ್ತು, ಸುರಳಿತವಾಗಿ ಪ್ರಚಾರ ಕಾರ್ಯ ಸೇವೆ ತೆಗೆದುಕೊಳ್ಳುತ್ತಿರುವರು. ಇದೇ ನನ್ನ ಸಾಧನ."

"ಹೀಗೆ ನಾವು ದಾಸರಲ್ಲಿ ಭಕುತಿಯನ್ನಿಟ್ಟು ಅವರ ವಾಕ್ಯಗಳೇ ವೇದಾರ್ಥವೆಂದು ಚೆನ್ನಾಗಿ ತಿಳಿದು ಸಾಧನೆಗೈಯುವುದು ಮುಖ್ಯವಾದುದು. ದಾಸರಸ್ಮೃತಿ ಮಾತ್ರದಿಂದ ಆನಂದಾಶ್ರುಗಳಿಂದ ಪುಲುಕಾಂಕಿತ ನೇತ್ರಗಳು, ಬಿಗಿದ ಕಂಠ, ನಡಗುವ ಕರಗಳು, ಅವರ ಪದರತಿಯಲ್ಲೇ ಮುಳಗಿ ಮುಂದುಗಾಣದೆ ಶ್ರೀ ವಿಜಯದಾಸರೇ ಗತಿ ಎಂದು ಕೂಗುವುದೇ ಸಾಧನ ಸಂಪದ."

*- (ವಿಜಯದಾಸರ ಸಾಧನ ಸುಳಾದಿಗಳು, ಭಾಗ-೨, ಮುನ್ನುಡಿ)*

೪

ಗೋರೆಬಾಳ ಹನುಮಂತರಾಯರು ನೂರಕ್ಕೂ ಹೆಚ್ಚಿನ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರು ಪ್ರಕಟಿಸಿರುವ ಸಾಹಿತ್ಯ ಕೃತಿಗಳ ಪುಟ ಸಂಖ್ಯೆ ಹತ್ತು ಸಾವಿರ ಪುಟಗಳನ್ನು ಮೀರಿದೆ. ಪ್ರಾಣೇಶ ದಾಸರ ಕೃತಿಗಳ ಪ್ರಕಟಣೆಯಿಂದ ಆರಂಭಿಸಿ, ಪಂಚರತ್ನ ಟೀಕಾ ಸಮೇತವಾಗಿ ಹರಿಕಥಾಮೃತಸಾರ ಪ್ರಕಟಣೆಯವರೆಗೆ ಪ್ರಮುಖ ಹರಿದಾಸರ ಬಹು ಪಾಲು ಕೃತಿಗಳನ್ನು ಪ್ರಥಮ ಬಾರಿಗೆ ಬೆಳಕಿಗೆ ತಂದ ಕೀರ್ತಿ ಅವರದು. ಆರಂಭದಲ್ಲಿ ಅವರು ಪ್ರಕಟಿಸಿದ ಕೃತಿ ಸುಮಧ್ವವಿಜಯದ ಕನ್ನಡನುವಾದ. ಈ ಕಾವ್ಯವನ್ನು ಮಂದಬೋಧಿನಿ ಎಂಬ ಕನ್ನಡ ಅರ್ಥ ವ್ಯಾಖ್ಯಾನಗಳೊಂದಿಗೆ ಪ್ರಕಟಿಸಿದರು. ಇದು ೧೨೦೦ ಪುಟಗಳ ಹೆಬ್ಬೊತ್ತಿಗೆ. ೧೯೪೦ರಲ್ಲಿ ಆರಂಭವಾಗಿ ೧೯೪೬ರಲ್ಲಿ ಮುಗಿಯಿತು. ಪಂಚ ಟೀಕಾರತ್ನ ಸಹಿತವಾಗಿ ಹರಿಕಥಾಮೃತಸಾರವು ಆರು ಸಂಪುಟಗಳ ೩೫೦೦ ಪುಟಗಳ ಬೃಹತ್ ಗ್ರಂಥವಾಗಿ ೧೯೬೪ರಲ್ಲಿ ಪ್ರಕಟವಾಯಿತು. ಆಗ ಬಹು ಮಟ್ಟಿಗೆ ಅವರ ಜೀವಿತ ಕಾರ್ಯ ಮುಗಿದಂತೆ ಆಯಿತು.

ಈ ಅವಧಿಯಲ್ಲಿ ಅವರ ಲೇಖಣಿಯಿಂದ ಸಂಪಾದಿಸಲ್ಪಟ್ಟ ವಿವರಣಾತ್ಮಕ ಟೀಕೆ ಟಿಪ್ಪಣಿಗಳನ್ನು ಹೊಂದಿ ಪ್ರಕಟವಾದ ಗ್ರಂಥಗಳು ಹಲವು, ಅವುಗಳ ವಿಷಯ ವೈವಿಧ್ಯ ಎಂಥವರನ್ನೂ ಬೆರಗುಗೊಳಿಸುವಂಥದು. ೧೯೬೭ರ ಹೊತ್ತಿಗೆ ಅವರೇ ಒಂದೆಡೆ ಬರೆದಿರುವಂತೆ "ಈವರೆಗೆ ೯೫೦

ಸುಳಾದಿಗಳನ್ನು, ಐದೂವರೆ ಸಹಸ್ರ ಪದಗಳನ್ನು, ಹನ್ನೊಂದುನೂರು ಉಗಾಭೋಗಗಳನ್ನು ಇತರ ಕೆಲವು ಗದ್ಯ ಪದ್ಯಗಳನ್ನು ವಿಷಯನುಕ್ರಮಣಿಯಿಂದ ಒಗ್ಗೂಡಿಸಲಾಗಿದೆ." ಇಂಥ ವಿದ್ವಾಂಸರಿಗೆ ಉತ್ತರ ಹಿಂದೂಸ್ತಾನದ ಅಯೋಧ್ಯೆಯಲ್ಲಿರುವ ಸಂಸ್ಕೃತ ಕಾರ್ಯಾಲಯ ಸಂಘಟಕರೂ, ಸಂಸ್ಕೃತ ಪ್ರಾಣರೂ, ವಿದ್ಯಾರತ್ನ ಸುರಭಾರತೀಶೇಖರ-ಇತ್ಯಾದಿ ಬಿರುದಾಂಕಿತರೂ ಆಗಿದ್ದ ಪಂಡಿತ ಕಾಲೀ ಪ್ರಸಾದಶಾಸ್ತ್ರೀ, ಸಂಪಾದಕ, ಸಂಸ್ಕೃತ ಕಾರ್ಯಾಲಯದವರು ಅರ್ಪಿಸಿದ ಸಾಹಿತ್ಯ ಸೇವಾಲಂಕಾರ ಪ್ರಶಸ್ತಿ ಹಾಗೂ ರಾಯಚೂರಿನ ಕರ್ನಾಟಕ ಸಂಘವು ನೀಡಿದ ಸನ್ಮಾನ ಬಿಟ್ಟರೆ ಅವರಿಗೆ ವಿಶ್ವ ವಿದ್ಯಾನಿಲಯಗಳಾಗಲೀ, ಅಕಾಡಮಿ ಮುಂತಾದ ರಾಜ್ಯ ಮಟ್ಟದ ಸಂಸ್ಥೆಗಳಾಗಲಿ, ಕನ್ನಡ ಸಾಹಿತ್ಯ ಪರಿಷತ್ತಿನಂಥ ವಿದ್ವನ್ ಮಂಡಲಗಳಾಗಲೀ ಅವರಿಗೆ ಯಾವುದೇ ಪ್ರಶಸ್ತಿ ಗೌರವ ನೀಡದೆ ಹೋದುದು ನಾಡಿನ ದುರ್ದೈವ. ಅವರ ಶ್ರಮವನ್ನು ಗುರುತಿಸಿ, ಕಷ್ಟದಲ್ಲಿ ನೆರವಾಗಿ, ಪ್ರೋತ್ಸಾಹದ, ಕೃತಜ್ಞತೆಯ ನಾಲ್ಕು ಮಾತುಗಳನ್ನೂ ಹೇಳದೆ ಹೋದುದು ಕನ್ನಡಿಗರ ಅಭಿಮಾನ ಶೂನ್ಯತೆಗೆ ಸಾಕ್ಷಿ. ಗುಣಗ್ರಾಹಿತವಾದ ಅಭಾವಕ್ಕೆ ಜ್ವಲಂತ ನಿದರ್ಶನ.

ಆದರೆ ಗೋರೆಬಾಳು ಹನುಮಂತರಾಯರು ಇದಾವ ಲೌಕಿಕ ಲಾಭ, ಪ್ರಯೋಜನ ಗಳನ್ನು ಗಮನದಲ್ಲಿ ಇಟ್ಟುಕೊಂಡು ಕೆಲಸ ಮಾಡಿದವರಲ್ಲ. ಅವರ ರಕ್ತದ ಒಂದೊಂದು ಕಣ ಕಣಗಳು, ಉಸಿರಿನ ಒಂದೊಂದು ಉಚ್ಛ್ವಾಸ ನಿಶ್ವಾಸ ಕ್ರಿಯೆಗಳು ಹರಿದಾಸರದಾಗಿತ್ತು. ಅವರು ತಮ್ಮ ಪಾಲಿನ ಕರ್ತವ್ಯವನ್ನು ಈಶ್ವರಾರ್ಪಣ ಬುದ್ಧಿಯಿಂದ ಪೂಜಾರೂಪದಲ್ಲಿ ಮಾಡಿದ್ದರು. ಸಂತಶ್ರೇಷ್ಠರು. ಅವರಿಗೆ ಲಾಭಲಾಭ, ಜಯಾಪಜಯ, ಸುಖದುಃಖ, ಸೋಲುಗೆಲವು, ಸಂತೋಷ ನಿರಾಶೆಗಳು ಬಾಧಿಸಲಿಲ್ಲ ; ಕೈಗೊಂಡಿದ್ದ ಕಾರ್ಯದಿಂದ ಹಿಮ್ಮೆಟ್ಟಿಸಲಿಲ್ಲ. ಅವರು ಗೀತಾ ಚಾರ್ಯನ ಮಾತಿನಲ್ಲಿ ನಂಬಿಕೆ ಇಟ್ಟು ನಡೆದ ನಿಷ್ಕಾಮಕರ್ಮಿಗಳು; ಶ್ರೀಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಒಪ್ಪಿ ನಡೆದವರು. ಜೀವನ ಅಸ್ವತಂತ್ರ್ಯವನ್ನು ಒಪ್ಪಿದವರು. ನಾಹಂಕರ್ತ ಹರಿಃಕರ್ತಾ-ಎಂಬ ಮಾತನ್ನು ನಡೆಯಿಂದ ತೋರಿಸಿದ ಸಾತ್ವಿಕ ಜೀವರು.

ಈ ಮಾತು ಅವರು ಬರೆದು ಪ್ರಕಟಿಸಿದ ಕನ್ನಡ ಸುಮಧ್ವವಿಜಯದ ಪ್ರಕಾಶನ ಪರ್ಯಾಯಲೋಚನೆಯ ಭಾಗದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

*"ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।*
*ಕಾರ್ಯತೇಹ್ಯವಶಃ ಕರ್ಮ ಸರ್ವ ಪ್ರಕೃತಿಜೈರ್ಗುಣೈಃ" - ಭಗವದ್ಗೀತಾ.*

"ಎಂದಿಗೂ ಯಾವ ಸ್ಥಿತಿಯಲ್ಲಿಯಾದರೂ ಜೀವರು-ಜ್ಞಾನಿಗಳು ಅಜ್ಞಾನಿಗಳು ಒಂದುಕ್ಷಣವಾದರೂ ಕರ್ಮವನ್ನು ಮಾಡದೆ ಇರಲಾರರೆಂಬುದು ನಿಜ. ಯಾಕೆಂದರೆ ಜೀವರೆಲ್ಲರೂ ಸ್ವಾತಂತ್ರ್ಯವಿಲ್ಲದವರಾಗಿ ಶ್ರೀಹರಿಯ ವಶರಾಗಿರುವರು. ಪ್ರಕೃತಿ ಜನ್ಯ ಸತ್ವಾದಿ ಗುಣಗಳಿಂದ ಪ್ರೇರಿತರಾಗಿ ಒತ್ತಾಯದಿಂದ ಕೆಲಸದಲ್ಲಿ ತೊಡಗಿಸಲ್ಪಡುತ್ತಾರೆ - ಎಂಬುದು ಗೀತೋಕ್ತಿ. ಶ್ರೀಹರಿ ಯಾಜ್ಞೆಯನ್ನನುಸರಿಸಿ ನಿರುತ ಶ್ರೀಹರಿದಾಸರ ಸಾಹಿತ್ಯ ಸಂಗ್ರಹಕಾರ್ಯಕ್ಕೆ ಈ ಪಾಮರನನ್ನು ಮುಂದೆ ಮಾಡಿ ಸಕಲ ತತ್ತ್ವೇಶರನ್ನು ಪ್ರೇರೇಪಿಸಿದ್ದು ಮಹಾಭಾಗ್ಯವಲ್ಲವೆ?"- ಗೋರೆಬಾಳು ಹನುಮಂತಾರಾಯರು ಹೇಳಿದ ಮಾತು ಅವರ ದಾಸ ಲಕ್ಷಣದ ದ್ಯೋತಕವಾಗಿದೆ. ಆದರೆ ಇಂಥ

ಪರಮ ಸಾತ್ವಿಕರನ್ನು ಬದುಕಿದ್ದಾಗಲೂ, ಸತ್ತ ಮೇಲೂ ಅನಾದರ ಮಾಡಿರುವ ಕನ್ನಡಿಗರ ಅವಜ್ಞತೆ, ನಿರ್ಲಕ್ಷಗಳು ಎಂದಿಗೂ ಕ್ಷಮಾರ್ಹವಲ್ಲ.

"ಶ್ರೀ ಗೋರೆಬಾಳರು ಈ ಪ್ರಕಟನಾ ಕಾರ್ಯವನ್ನು ಆರಂಭಿಸಿದ ಮೊದಲನೆಯ ಉದ್ದೇಶ ಸ್ವಂತ ಆತ್ಮೋದ್ಧಾರ. ಎರಡನೆಯದಾಗಿ ಭಕ್ತನು ಇತರ ಭಕ್ತರಿಗೂ ಭಗವದ್ಗುಣವನ್ನು ಬೀರುವ ಸಹಜ ಪ್ರವೃತ್ತಿಗನುಸರಿಸಿ ಎಲ್ಲ ಭಕ್ತರಿಗೂ ಲಾಭವಾಗಲಿ"- ಎಂದು ವಿಠಲರಾಯರು ತಮ್ಮ ಬರಹದಲ್ಲಿ ಹೇಳಿದ್ದಾರೆ. ಈ ಮಾತು ಅಕ್ಷರಶಃ ಸತ್ಯ. ಗೋರೆಬಾಳರ ಸಾಹಿತ್ಯ ಸೇವೆಯನ್ನು ಸರಿಯಾಗಿ ಅರಿಯಬೇಕಾದರೆ ಈ ಮಾತನ್ನು ಮನಸ್ಸಿನಲ್ಲಿರಿಸಿಕೊಳ್ಳಬೇಕು.

"ಕನ್ನಡ ಸಾಹಿತ್ಯವಲ್ಲರಿಯನ್ನು ಚಿಗುರಿಸಿ, ಕನ್ನಡ ಸಂಸ್ಕೃತಿಯ ಸೌರಭವನ್ನು ಹೆಚ್ಚಿಸಿ, ಕರ್ನಾಟಕದ ಜನಜೀವನದ ದರ್ಶನೋಪಾದಿಯಲ್ಲಿ ಮೆರೆದು, ಬೆಳೆದು ಬಂದ, ಕರ್ನಾಟಕಕ್ಕಷ್ಟೇ ಅಲ್ಲ, ಇಡೀ ಮಾನವ ಕುಲಕ್ಕೇ ದಿವ್ಯ ಸಂಜೀವಿನಿಯನ್ನು ನೀಡಿದ ದಾಸ ಸಾಹಿತ್ಯವು ಕರ್ನಾಟಕ ಪ್ರಾಂತ್ಯದಲ್ಲಿ, ವಿಶೇಷವಾಗಿ ಹೈದರಾಬಾದ ಕರ್ನಾಟಕ ಭಾಗದಲ್ಲಿ, ಶತಶತಮಾನಗಳಿಂದ ಬೆಳೆದು ಬಂದಿದ್ದರೂ ಆ ಸಾಹಿತ್ಯ ಭಾಗದ ಸಂಗ್ರಹ ಮತ್ತು ಪ್ರಚಾರ ಸಾಕಷ್ಟು ಸಮಾಧಾನಕರವಾಗಿ ಆಗಿಲ್ಲ ಮತ್ತು ಆಗುತ್ತಿಲ್ಲವೆಂದು ಹೇಳಬಹುದು."- ಎಂದು ಮಧ್ವಾಚಾರ್ಯ ಜೋಶಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಈ ಹರಿದಾಸ ಸಾಹಿತ್ಯದ ಪ್ರಚಾರಕ್ಕೆ ಇದ್ದ ಪ್ರತಿಬಂಧಕ ಅಡ್ಡಿ ತಡೆಗಳನ್ನು ಅವರು ಹೀಗೆ ವಿಶದೀಕರಿಸಿದ್ದಾರೆ.

"ದಾಸ ಸಾಹಿತ್ಯವು ವಿಶೇಷವಾಗಿ ಪ್ರಚಾರಗೊಳ್ಳದಿರುವುದಕ್ಕೆ ಹಲವಾರು ಅಡ್ಡಿ ತಡೆಗಳು ಇಲ್ಲದಿಲ್ಲ. ಮುಖ್ಯ ಮತ್ತು ಮಹತ್ವದ ಅಂಶವೆಂದರೆ ನಮ್ಮಲ್ಲಿ ಪಂಡಿತ ವರ್ಗದಲ್ಲಿ ಇನ್ನೂ ಸಂಸ್ಕೃತದ ಮೋಹವೇ ಉಳಿದಿದ್ದು, ಕನ್ನಡದ ಕೃತಿಗಳ ಬಗ್ಗೆ ಆಗಾಗ ತೋರಿ ಬರುವ ಅನಾದರವು ಮುಖ್ಯ ಕಾರಣವಾಗಿದೆ. ಜೊತೆಗೆ ಲೌಕಿಕದಲ್ಲಿ ಮುಳುಗಿ ಪಾರಮಾರ್ಥದ ಅರಿವು ಇಲ್ಲದೆ ಹೊಟ್ಟೆಯ ಚಿಂತೆಯೇ ದೊಡ್ಡದಾಗಿ ಬೆಳೆದು ಬರುತ್ತಿರುವ ಇಂದಿನ ಯಾಂತ್ರಿಕ ಯುಗದಲ್ಲಿ ಜನರ ಅಭಿರುಚಿಯು ಸ್ವಾಭಾವಿಕವಾಗಿ ಆಧ್ಯಾತ್ಮಿಕ ಕಡೆಗೆ ಹರಿಯುತ್ತಿಲ್ಲ. ಹೀಗಾಗಿ ಅನೇಕ ಮಹಾನುಭಾವರು, ಅನುಭವಿಗಳು ಮಾಡಿದ ಅನೇಕ ದೇವರನಾಮಗಳು, ಪದಸುಳಾದಿಗಳು ಅವರವಂಶಜರ ಅರಿವಿನಲ್ಲಿಯೂ ಉಳಿಯದೆ, ಸಂಗ್ರಹ ಪ್ರವೃತ್ತಿಯ ಅಭಾವದಿಂದ ಅಸ್ತವ್ಯಸ್ತವಾಗಿ ಕಣ್ಮರೆಯಾಗುತ್ತಿದೆ. ಈ ಬಗ್ಗೆ ಕನ್ನಡ ಜನತೆ ಎಚ್ಚೆತ್ತು ಸರಿಯಾಗಿ ಉತ್ತಮ ಕೃತಿಗಳನ್ನು ಸಂಗ್ರಹಿಸಿಡುವುದು ಹಿತಕರ."

"ದಾಸ ಸಾಹಿತ್ಯದ ಸಂಗ್ರಹವನ್ನು ಮತ್ತು ಅದರ ಸರಿಯಾದ ಪ್ರಚಾರವನ್ನು ಕಂಡ ಕಂಡವರು ಮಾಡಲು ಸಾಧ್ಯವಿಲ್ಲ. ಇಂಥ ಸಾಹಿತ್ಯ ಸಂಶೋಧನೆಯ ಕಾರ್ಯಕ್ಕೆ ಸರಿಯಾದ ಭಾಷಾಜ್ಞಾನ, ವ್ಯಾಕರಣ, ಅಲಂಕಾರ, ಛಂದಸ್ಸುಗಳ ಅರಿವು, ಸಂಶೋಧಕ ಪ್ರವೃತ್ತಿ, ಜ್ಞಾನಪಿಪಾಸೆ, ಸರಿಯಾದ ಸಂಸ್ಕಾರ, ಹಿತಕರವಾದ ಆವರಣ, ಹೆಚ್ಚಾಗಿ ದಾಸ ಪರಂಪರೆಯ ಪರಿಚಯ ಇರಬೇಕಾದದ್ದು ಅವಶ್ಯ. ಇವೆಲ್ಲ ಲಕ್ಷಣಗಳನ್ನೊಳಗೊಂಡ ಜನ ದೊರೆಯುವುದು ದುರ್ಲಭ. ಅದಕ್ಕೆ ಭಗವದನುಗ್ರಹ ಮತ್ತು ಪೂರ್ವಾರ್ಜಿತ ಸುಕೃತಬೇಕು. ಶ್ರೀಮಾನ್ ಗೋರೆಬಾಳು ಹನುಮಂತ ರಾಯರು ಅಂಥ ಸುಕೃತವನ್ನು ಪಡೆದವರಲ್ಲಿ ಒಬ್ಬರು"- ಎಂದಿದ್ದಾರೆ ಅವರು.

*"ಸಪ್ರಶಂಸೀತ ನಿಂದ್ಯಾಂಸ್ತು ಪ್ರಶಂಸ್ಯಾನ್ನೈವ ನಿಂದಯೇತ್ ।
ಉಭಯಂ ಯಃ ಕರೋತ್ಯೇತದಸತ್ತ್ವಾತ್ ಸ ಪತತ್ಯಧಃ ॥
ಯಃ ಪ್ರಶಂಸ್ಯಾನ್ನ ಪ್ರಶಂಸೇತ ನಿಂದ್ಯೋ ಯೇನ ನ ನಿಂದ್ಯತೇ ।
ಸೋಽಪಿ ತದ್ವದಧೋ ಯತಿ ಯತೋರಿವದುಪಾಸಕ ॥"*

- (ಶ್ರೀಮಧ್ವಾಚಾರ್ಯರು: ಭಾಗವತ ತಾತ್ಪರ್ಯ ನಿರ್ಣಯ, ೧೧-೨೮-೧)

ಪ್ರಶಂಸನೆಗೆ ಪಾತ್ರರಾದವರನ್ನು ಯಾರು ಪ್ರಶಂಸಿಸುವುದಿಲ್ಲವೋ, ನಿಂದ್ಯರನ್ನು ಯಾರು ನಿಂದಿಸುವುದಿಲ್ಲವೋ ಅವರೂ ಧರ್ಮ ಶತ್ರುಗಳಾಗಿ ಅಧೋಗತಿಗೆ ಹೋಗವರು. ಈ ವಿಷಯದಲ್ಲಿ ಉದಾಸೀನರಾಗಿರುವವರು ಧರ್ಮ ಶತ್ರುಗಳಿದ್ದಂತೆಯೇ ಸರಿ.

ಶ್ರೀ ಗೋರೆಬಾಳು ಹನುಮಂತರಾಯರ ಕಾರ್ಯವನ್ನು ಪ್ರಶಂಸಿಸುವುದು, ಸಹಾಯ ಮಾಡುವುದು - ಈ ಮಾತು ಹಾಗಿರಲಿ, ಈ ಬಗ್ಗೆ ತಿರಸ್ಕಾರ ನಿಂದೆ, ಅಪಮಾನಗಳಿಗೂ ಈ ಜನ ಹೇಸಲಿಲ್ಲ.

"ನ್ಯಾಯವಾಗಿ ಧನವಂತರಾದ ಲೌಕಿಕರೂ, ಧರ್ಮಪೀಠಗಳಲ್ಲಿರುವ ಯತಿಗಳೂ ನಿಮಗೆ ಸರ್ವ ವಿಧದಿಂದಲೂ ಸಹಾಯ ಮಾಡಬೇಕಾದುದು ಕರ್ತವ್ಯ. ಆದರೆ ಇದು ಕಲಿಗಾಲ. ಆದುದರಿಂದ ನಿಮ್ಮ ತಪಸ್ಸಿನ ಫಲ ನಿಮ್ಮೊಬ್ಬರಿಗೇನೇ ಸೇರಬೇಕೆಂಬುದು ಶ್ರೀಹರಿ ಇಚ್ಛೆಯಿದ್ದಂತೆ ತೋರುತ್ತದೆ"

*- (ನಿವೃತ್ತ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಬಿ.ನಾಗೇಶರಾಯರು ತಮ್ಮ ಒಂದು ಪತ್ರದಲ್ಲಿ ಬರೆದಿದ್ದಾರೆ)*

ಹನುಮಂತರಾಯರು ಅನುಭವಿಸಿದ ಕಷ್ಟ ನಷ್ಟಗಳು, ಹರಿದಾಸ ಸಾಹಿತ್ಯ ಭಂಡಾರಕ್ಕೆ ಅವರು ಸಲ್ಲಿಸಿದ ಕಾಣಿಕೆ ಇದನ್ನು ಪುರಂದರದಾಸರಿಗೆ ಹೋಲಿಸಿದ್ದಾರೆ.

"ಗೋರೆಬಾಳು ಹನುಮಂತರಾಯರು ಬುದ್ಧಿ ಚಾತುರ್ಯ, ಕಾರ್ಯದಕ್ಷತೆ ಮತ್ತು ವ್ಯವಹಾರ ಕೌಶಲವುಳ್ಳವರು. ಶ್ರೀಯುತರು ಸುವೃತ್ತಿ ಎನಿಸಿದ ವಕೀಲ ವೃತ್ತಿಯಲ್ಲಿ ಚೆನ್ನಾಗಿಯೇ ಗಳಿಕೆಯನ್ನು ಕಾಣುತ್ತಿದ್ದರು. ಆದರೂ ಶ್ರೀಪುರಂದರದಾಸರು ನವಕೋಟಿ ನಾರಾಯಣರೆನಿಸಿ ಧನದ ರಾಶಿಯ ಮೇಲೆ ಕುಳಿತಿದ್ದರೂ ಕುಲ ವಿದ್ಯೆಯಾದ ಚಿನಿವಾರ ವೃತ್ತಿಯಲ್ಲಿ ಪರಿಣತಿಯನ್ನು ಪಡೆದಿದ್ದರೂ, ಭಗವದನುಗ್ರಹದಿಂದ ಸಕಾಲದಲ್ಲಿ ಎಲ್ಲ ಭೌತಿಕ ಸಂಪತ್ತನ್ನೂ ಧಾರೆಯೆರೆದು, ಭಗವದ್ಭಕ್ತಿಯೇ ಶ್ರೇಷ್ಠ ಸಂಪತ್ತೆಂದು ನಂಬಿ, ವೈರಾಗ್ಯ ನಿಧಿಗಳೆನಿಸಿ ಭಗವತ್ಪ್ರೀತಿಯನ್ನು ಸಂಪಾದಿಸಿ ಕೊಂಡಂತೆ- ಅದೇ ದಾಸ ಪರಂಪರೆಯಲ್ಲಿ ಹುಟ್ಟಿ, ಬೆಳೆದು ಬಂದ ಶ್ರೀಮಾನ್ ಗೋರೆಬಾಳು ಹನುಮಂತರಾಯರು ಕೂಡ ವಕೀಲ ವೃತ್ತಿಯಲ್ಲಿ ಚೆನ್ನಾಗಿ ಗಳಿಕೆ ಇದ್ದರೂ, ಮನಸ್ಸು ಅದರಲ್ಲಿ ನೆಡದೆ, ಮಹಾನುಭಾವರಾದ ದಾಸಶ್ರೇಷ್ಠರ ಕೃತಿಗಳನ್ನು ಸಂಗ್ರಹಿಸಿ ಬೆಳಕಿಗೆ ತರಬೇಕೆಂಬ ಹಂಬಲ ಬಲಿತು, ವಕೀಲ ವೃತ್ತಿಗೆ ಶರಣು ಹೊಡೆದರು . ಎಳೆತನದಲ್ಲಿಯೇ ದಾಸದೀಕ್ಷೆಯನ್ನು ಸ್ವೀಕರಿಸಿ, ಹರಿದಾಸ ಮಂಡಲಿಯನ್ನು ರಚಿಸಿಕೊಂಡು ಸ್ವತಃ ಏಕೈಕ ವೀರರಂತೆ ತಾವೊರ್ವರೇ ಅದರಲ್ಲಿ ಪರಿಶ್ರಮಿಸಿ, ಕಳೆದ ೩೫ ವರ್ಷಗಳಿಗೂ ಮೀರಿದ ಅವಧಿಯಿಂದ ದಾಸ ಸಾಹಿತ್ಯದ ಸಂಗ್ರಹ

ಮಾಡುತ್ತಾ, ಗ್ರಂಥ ರೂಪದಲ್ಲಿ ಪ್ರಚಾರಗೊಳಿಸುತ್ತಾ ಬಂದಿದ್ದಾರೆ."

-ಹೀಗೆ ಹನುಮಂತರಾಯರ ಬಾಳು ಬದುಕು ಒಂದು ತತ್ತ್ವಕ್ಕಾಗಿ ಮೀಸಲಾಗಿಟ್ಟುದಾಗಿತ್ತು. ಅವರು ಬಾಳುವೆಯನ್ನು ಒಂದು ಯಜ್ಞವಾಗಿ ಸ್ವೀಕರಿಸಿದ್ದರು. ತಮ್ಮ ಸಮಸ್ತವನ್ನೂ ಅದರಲ್ಲಿ ಆಜ್ಯವಾಗಿ ಅರ್ಪಿಸಿದ್ದರು.

ಽ

ಗೋರೆಬಾಳು ಹನುಮಂತರಾಯರಿಗೆ ಹರಿದಾಸ ಸಾಹಿತ್ಯ ಸಂಗ್ರಹ, ಸಂಪಾದನೆ, ಗ್ರಂಥ ಪ್ರಕಟನಾ ಕಾರ್ಯಗಳು ಆರಂಭದಲ್ಲಿ ಅನೇಕ ಸಮಸ್ಯೆಗಳನ್ನು ಒಡ್ಡಿದವು.

"ಕೈಗೊಂಡ ಈ ಕೆಲಸ ದೊಡ್ಡದು. ಅದನ್ನು ನೆರವೇರಿಸುವ ವಿಷಯದಲ್ಲಿ ನನ್ನ ಇತಿ ಮಿತಿಗಳನ್ನು ನನ್ನ ಗುರುಗಳಂತರ್ಯಾಮಿ ಹರಿಯು ಚೆನ್ನಾಗಿ ತಿಳಿಸಿದ್ದಾನೆ. ಈ ಮಹಾ ಕೆಲಸಕ್ಕೆ ಬೇಕಾಗುವ ವಿದ್ವತ್ತತೆ, ದ್ರವ್ಯಾನುಕೂಲತೆ ದೇಹ ದಾರ್ಢ್ಯಾದಿಗಳು ನನ್ನಲ್ಲಿಲ್ಲ. ಭಾಷಾ ಜ್ಞಾನಿಯಲ್ಲ, ಭಾಷಾ, ಅಲಂಕಾರ, ತತ್ತ್ವಜ್ಞಾನ ಈ ವಿಷಯಗಳಲ್ಲಿ ನಾನು ಕೇವಲ ವಿದ್ಯಾರ್ಥಿ. ಹೀಗಿದ್ದರೂ ದಾಸರು ತಾವೇ ನಿಂತು ಮಹಾತ್ಕಾರ್ಯವನ್ನು ಮಾಡಿಸುತ್ತಿರುವರು"- ಎಂದು ಅವರೇ ಒಂದೆಡೆ ಬರೆದಿದ್ದಾರೆ.

*- (ಸಂಧ್ಯೋಪಾಸನೆ ಗ್ರಂಥದ ೨ನೇ ಭಾಗದ ವಿಜ್ಞಾಪನೆ)*

ಹನುಮಂತರಾಯರು ಹರಿವಾಯುಗಳ ಸೇವಾರೂಪದ ಈ ಕಾರ್ಯವನ್ನು ಪೂಜಾ ಭಾವದಿಂದ ಸ್ವೀಕರಿಸಿದ್ದರು. ಅವರು ನಿರೀಕ್ಷಿಸಿದ್ದ ನೂರಾರು ಸಮಸ್ಯೆಗಳು ಸೆಡ್ಡು ಹೊಡೆದು ನಿಂತರೂ, ಅವುಗಳ ಸವಾಲನ್ನು ಧೀಮಂತ ವ್ಯಕ್ತಿಯಾಗಿ ಸ್ವೀಕರಿಸಿದರು. ಕರ್ತವ್ಯವಷ್ಟೆ ತನ್ನದು, ಕರ್ಮಫಲ ಭಗವಂತನದು, ಮಾಡಿ ಮಾಡಿಸಿ, ಕರ್ಮ ಫಲಗಳನ್ನು ಜೀವರಿಗೆ ಉಣ ಬಡಿಸುವವನು ಭಗವಂತನು ಮಾತ್ರ; ತಾನು ಒಂದು ನಿಮಿತ್ತ ಮಾತ್ರ ಎಂಬ ಹರಿದಾಸ ಭಾವ ಅವರಲ್ಲಿ ಜಾಗ್ರತವಾಗಿತ್ತು. ಹೀಗಾಗಿ ತಮ್ಮಲ್ಲಿದ್ದ ದೌರ್ಬಲ್ಯ ಕುಂದು ಕೊರತೆಗಳನ್ನು ಅವರು ಲೆಕ್ಕಕ್ಕೆ ತರಲಿಲ್ಲ. ಅಷ್ಟೇ ಅಲ್ಲ, ನಿಂದಕರ ವಿಷಯದಲ್ಲೂ ಅವರು ನಿಜವಾದ ಹರಿದಾಸ ಲಕ್ಷಣವನ್ನೇ ತೋರಿದರು. ಅವರಲ್ಲಿ ಅಹಂಕಾರ ಮಮಕಾರಗಳು ಇರಲಿಲ್ಲ. ಆದರೂ ಕ್ಷುದ್ರ ವ್ಯಕ್ತಿಗಳು ಅವರನ್ನು ಆಡಿಕೊಂಡು ತೆಗಳಿದ್ದುಂಟು.

"ಮಂಡಲದ ದ್ವಾರಾ ಕೆಲಸ ನಡೆಸಿದಾಗ್ಯೂ ಅನೇಕರು ಮನಬಂದಂತೆ, ಅನೇಕ ಉದ್ಗಾರಗಳನ್ನು ಹೊರಡಿಸಿರುವರು. ಇದೊಂದು ದಂಧೆ; ಉಪಜೀವನ ಮಾರ್ಗ ಮಾಡಿಕೊಂಡಿದ್ದಾನೆ. ಲಾಭವಿಲ್ಲದೆ ಯಾರೂ ಕೆಲಸ ಮಾಡಲಾರರೆಂದೂ, ವಕೀಲಿ ಕೆಲಸ ನಡೆಯದೆ ಇದ್ದುದಕ್ಕೆ ಇದೊಂದು ವೇಷವನ್ನು ಹಾಕಿರುವನು" - ಎಂದೆನ್ನುವರು.

"ಸಂತೋಷ, ಅಂದವರು ಬಂಧುಗಳು; ಆಡಿದವರು ಆಪ್ತರು"- ಎಂದು ಸಮಾಧಾನ ತಾಳಿದರು ಹನುಮಂತರಾಯರು.

"ದಾಸರು ಕೃಪೆಮಾಡಿ ಸಂಸಾರದಲ್ಲಿ ಅನೇಕ ತೊಂದರೆಗಳನ್ನು ತಂದು ವಿಷಯ ವೈರಾಗ್ಯ ವನ್ನಿತ್ತು ಕ್ರಮೇಣ ಲೌಕಿಕ ಬಿಡಿಸುವ ಉಪಾಯ ಕಲ್ಪಿಸಿದರು. ಕೆಲವು ಪುತ್ರಿಯರ ವಿಯೋಗ, ವರ್ಷ ಗಟ್ಟಲೆ ಬೇನೆಯಿಂದ ಬಳಲಿ ಹಾಸಿಗೆ ಹಿಡಿದದ್ದು, ವೃತ್ತಿಯಿಂದ ಬಿಡಿಸುವ ಉಪಾಯಗಳನ್ನೇ ಈ ನಾಲ್ಕು ವರ್ಷದಿಂದ ಎನ್ನ ಅನುಭವಕ್ಕೆ ತಂದಿತ್ತರು."

"ಮುಂದಣ ಆಗಮನವನ್ನರಿತ ದಾಸರು ಈ ಮಂದ ಭಾಗ್ಯನಲ್ಲಿ ಕೃಪೆಮಾಡಿ ತಿಳಿಸಿ, ಮಹತ್ಕಾರ್ಯಗಳಲ್ಲಿ ಬರುವ ಕಷ್ಟನಷ್ಟಗಳ ಸಹನ ಶೀಲತೆಯನ್ನು ಕೊಟ್ಟು, ಸುಳಾದಿಗಳ ಸಾರ ರಸವನ್ನು ಸವಿದುಣಿಸಿ ಪಾರಲೌಕಿಕ ಐಶ್ವರ್ಯ, ಅವ್ಯಯವಾದ ಜ್ಞಾನದ್ರವ್ಯವನ್ನು ಪಾಲಿಸಿದ ಕರುಣಾಳುಗಳನ್ನು ನಾನು ಮರೆಯೆ. ಇದೇ ಜೀವನೋಪಾಯದ ದಂಥೆ. ಆಧ್ಯಾತ್ಮ ಸಂಪತ್ತು" -ಎಂದು ಅದೇ ಗ್ರಂಥದಲ್ಲಿ ತಮ್ಮ ನಿಜವಾದ ಸಂಪತ್ತನ್ನು ಕುರಿತು ಹೇಳಿದ್ದಾರೆ.

ಬಾಲ್ಯದಿಂದಲೂ ಹನುಮಂತರಾಯರು ಜ್ಞಾನಪಿಪಾಸುಗಳಾಗಿದ್ದರು. ಹರಿದಾಸರ ಸಾಹಿತ್ಯದಿಂದ ದೊರೆತ ಆನಂದವು ಇತರರಿಗೂ ಮಾಡಿಕೊಡಬೇಕೆಂಬ ಏಕೈಕ ಉದ್ದಿಶ್ಯದಿಂದ ಅವರು ಹರಿದಾಸ ಪ್ರಚಾರಕ್ಕೆ ತೊಡಗಿದ್ದರು. ಸುಜೀವರೆಲ್ಲರಿಗೂ ಈ ರಸಪಾನ ಮಾಡಿಸಬೇಕೆಂಬ ಏಕೈಕ ಪ್ರೇರಣೆಯಿಂದ ದುಡಿದರು. ಮೊದಲಿಗೆ ತಮ್ಮ ಸಂಗ್ರಹದಲ್ಲಿದ್ದ ಪ್ರಾಣೇಶದಾಸರ ಕೃತಿಗಳನ್ನು ಪರಿಷ್ಕರಿಸಿ ಅಚ್ಚಿಗೆ ಸಿದ್ಧಪಡಿಸಿ, ಪ್ರಕಟಿಸಲು ಯೋಚಿಸಿದರು.

ಈ ಕಾರ್ಯ ಸುಗಮವಾಗಲಿಲ್ಲ. ಅವರ ಅಪ್ತೇಷ್ಟರು ಪ್ರಾಣೇಶದಾಸರ ವಂಶಿಕರು ಸಲ್ಲದ ಅಡ್ಡಿಗಳನ್ನು, ಅಕ್ಷೇಪಗಳನ್ನು ಒಡ್ಡಿದರು.

"ದಾಸರ ಪದಗಳನ್ನು ಕೀರ್ತನೆಗಳನ್ನು ಮುದ್ರಿಸಿ ಎಲ್ಲ ಕಡೆಗೂ ಪ್ರಸಾರ ಮಾಡಿಬಿಟ್ಟರೆ ಅವು ಬೀದಿಗೆ ಬಿದ್ದು, ಅದರಲ್ಲಿರುವ ಪವಿತ್ರ ಸಾನ್ನಿಧ್ಯವು ಹೊರಟು ಹೋಗುತ್ತದೆ. ಅಪಾತ್ರರ ಅಯೋಗ್ಯರ ಕೈಗೆ ಕೊಟ್ಟಂತಾಗುತ್ತದೆ. ಆದುದರಿಂದ ಆಸಕ್ತಿ ಇದ್ದವರು ಕೈಬರಹದಲ್ಲಿ ಬರೆದುಕೊಂಡು ಓದುಕೊಳ್ಳಲಿ"- ಎಂದು ಆಗ್ರಹಪಡಿಸಿದರು. ಹನುಮಂತರಾಯರು ಈ ಅಕ್ಷೇಪಗಳನ್ನು ಒಪ್ಪಲಿಲ್ಲ. ಹರಿದಾಸ ಸಾಹಿತ್ಯ ಒಂದು ರತ್ನಗಳ ಗಣಿ ಇದ್ದಂತೆ. ಅದರ ಬೆಲೆಯನ್ನು ಅರಿತವರು ಮಾತ್ರ ಅದನ್ನು ಸಂಗ್ರಹಿಸುತ್ತಾರೆ. ಉಳಿದವರಿಗೆ ರತ್ನಗಳನ್ನು ಕೊಟ್ಟರೂ ಅದನ್ನು ಕಲ್ಲೆಂದು ಬಗೆಯುತ್ತಾರೆ. ಸೂರ್ಯನನ್ನು ಕಳ್ಳರು ನಿಂದಿಸಿದರೆ ದಿನಕರನ ಪ್ರಕಾಶಕ್ಕೆ ಕುಂದು ಬರುವುದೇ? -ಎಂಬ ಜಗನ್ನಾಥದಾಸರ ವಾಣಿಯನ್ನು ನಂಬಿ, ಅಕ್ಷೇಪವೆತ್ತಿದವರನ್ನು ಸಮಾಧಾನ ಪಡಿಸಿ, ಕೈಗೊಂಡಿದ್ದ ಸಂಕಲ್ಪವನ್ನು ಕಾರ್ಯರೂಪಕ್ಕೆ ತಂದೇ ಬಿಟ್ಟರು.

ಹನುಮಂತರಾಯರ ಈ ಕಾರ್ಯಕ್ಕೆ ಸ್ಫೂರ್ತಿ ನೀಡಿದವರು ಮುಂಡೇವಾಡಿ ರಾಮದಾಸರೆಂಬುವರು. ಅವರೊಬ್ಬರು ತಪಸ್ವಿಗಳಾಗಿದ್ದರು.

ಇದೇ ಸಮಯದಲ್ಲಿ ಅವರ ಹಿರಿಯಣ್ಣನಂತೆ ಇದ್ದು, ಲೌಕಿಕ ಹಾಗೂ ಆಧ್ಯಾತ್ಮಿಕ ರಂಗಗಳಲ್ಲಿ ಮಾರ್ಗದರ್ಶನ ಮಾಡುತ್ತಿದ್ದ ಸ್ವಾಮಿರಾಯರು ವೈಕುಂಠವಾಸಿಗಳಾದರು. ಅದರ ಬೆನ್ನ ಹಿಂದೆ ರಾಮಣ್ಣನವರೂ ತೀರಿಕೊಂಡರು. ಗೋರೆಬಾಳದಲ್ಲಿ ನಿಂತು ಅವರ ಒಕ್ಕಲುತನದ ವಹಿವಾಟು ನೋಡಿಕೊಳ್ಳುತ್ತಿದ್ದ ಅವರ ತಮ್ಮ ಭೀಮರಾಯರು ಇನ್‌ಫ್ಲೂಯೆಂಜಾ ಬೇನೆಯಿಂದ

ಇಹಲೋಕವನ್ನು ತೊರೆದರು. ಸಂಸಾರದ ನಿರ್ವಹಣೆ ಭಾರ, ಮನೆತನದ ಒಕ್ಕಲುತನದ ಭಾರ, ವಕೀಲ ವೃತ್ತಿಯ ಜವಾಬ್ದಾರಿ, ದುಡಿಮೆ ಅವರ ಪಾಲಿಗೆ ಅಗ್ನಿ ಪರೀಕ್ಷೆಯನ್ನೇ ಒಡ್ಡಿದವು. ಆದರೆ ಹನುಮಂತರಾಯರು ಇದಾವುದಕ್ಕೂ ಜಗ್ಗಲಿಲ್ಲ. ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ.

ಅವರು ಪ್ರಾಣೇಶದಾಸರು ರಚಿಸಿದ ದೇವರ ನಾಮಗಳನ್ನು ಸಂಗ್ರಹಿಸಿ, ಚಿಕ್ಕ ಚಿಕ್ಕ ಹೊತ್ತಿಗೆಗಳಾಗಿ ವಿಂಗಡಿಸಿ, ಹನ್ನೆರಡು ಸಂಚಿಕೆಗಳನ್ನು ಅಚ್ಚು ಮಾಡಿಸಿ ಪ್ರಕಟಿಸಿದರು.

ಅದರ ಹಿಂದೆ ಶ್ರೀಮನೋಹರ ವಿಠಲಕೃತ ಮೂರು ಕೀರ್ತನೆಗಳನ್ನು ಪ್ರಕಟ ಮಾಡಿದರು. ಇದಕ್ಕೆ ದೊರೆತ ಪ್ರೋತ್ಸಾಹದಿಂದ ಉತ್ತೇಜಿತರಾಗಿ ಪ್ರಾಣೇಶದಾಸರ ೨೫೦ ಕೀರ್ತನೆಗಳನ್ನು, ಅನಂತರ ಗುರು ಪ್ರಾಣೇಶದಾಸರ ೧೦ ಕೀರ್ತನೆಗಳನ್ನು, ಶ್ರೀಶಪ್ರಾಣೇಶದಾಸರ ೧೪ ಕೀರ್ತನೆ ಗಳನ್ನು, ವರದೇಶ ವಿಠಲರ ಸ್ವಪ್ನ ವೃಂದಾವನಾಖ್ಯಾನವನ್ನು ಪ್ರಕಟ ಮಾಡಿ, ಕೇವಲ ಮೂರು ವರ್ಷಗಳ ಅವಧಿಯಲ್ಲಿ ಅಂದರೆ ೧೯೨೯ರ ವೇಳೆಗೆ ಪ್ರಕಟಣೆಯ ಒಂದು ಹಂತವನ್ನು ತಲುಪಿದರು.

ಹರಿದಾಸ ಸಾಹಿತ್ಯ ಪ್ರಚಾರ ಕಾರ್ಯದ ಪ್ರಥಮ ಹಂತ ಈಡೇರಿದ ಈ ಸಂದರ್ಭದಲ್ಲಿ ಕೃತಜ್ಞತೆಯ ಭಾವದಲ್ಲಿ ಅವರು ಭಾಮಿನಿ ಷಟ್ಪದಿಯಲ್ಲಿ ಪಂಚ ಶ್ಲೋಕಗಳನ್ನು ಬರೆದು ಅದನ್ನು ಸ್ವಾಮಿಗೆ ಅರ್ಪಿಸಿ ಮಂಗಳ ಮಾಡಿದರು. ಅದರಲ್ಲಿ "*ಅಮಲ ಮಾಲೆಯ ಗಂಧವನ್ನು ಸ್ವೀಕರಿಸಿ, ಕಂದನ ಬಂಧನವ ಬಿಡಿಸಿ, ಹಿಂದೆ ಇಂದು ಮುಂದೆ ನಿನ್ನಯ ಪೊಂದಿದವರೊಳಗಿರಿಸೊ ಶ್ರೀಪತಿ ಸುಂದರಾ ವಿಠಲನೆ ತವ ಪದ ಭಕುತಿ ಸಲ್ಲಿಸಲು, ವಿಷಯ ವಿರಕ್ತಿ ವೀಯಯ್ಯ*"-ಎಂದು ಪ್ರಾರ್ಥಿಸಿದ್ದರು.

ಪ್ರಾಣೇಶದಾಸರ ಕೀರ್ತನೆಗಳನ್ನು ಪ್ರಕಟಿಸಿದ ಮೇಲೆ ಪುರಂದರ ವಿಜಯದಾಸರೇ ಮುಂತಾಗಿ ಎಲ್ಲ ಹರಿದಾಸರ ಕೃತಿಗಳನ್ನು ಪ್ರಕಟಿಸುವ ಕೆಲಸ ಕೈಗೊಂಡರು. ಇದೇ ಸುಮಾರಿನಲ್ಲಿ ಬೆಂಗಳೂರಿನಲ್ಲಿ ಸುಬೋಧ ರಾಮರಾಯರೂ, ಉಡುಪಿಯಲ್ಲಿ ಪಾವಂಜೆ ಗುರುರಾಯರೂ, ತಮ್ಮ ಕಡೆ ಪ್ರಚಾರದಲ್ಲಿದ್ದ ಎಲ್ಲ ಹರಿದಾಸರ ಕೃತಿಗಳನ್ನು ಪರಿಶೋಧಿಸಿ, ಕ್ರಮವಾಗಿ ಪ್ರಕಟಿಸುವ ಕಾರ್ಯ ದಲ್ಲಿ ತೊಡಗಿದ್ದರು. ಇದರಿಂದ ಸಾಹಿತ್ಯಾಭ್ಯಾಸಿಗಳಲ್ಲಿ ನವೋತ್ಸಾಹವೂ, ನಾಡಿನಲ್ಲಿ ನವ ಚೈತನ್ಯವೂ, ಜಾಗೃತಿಯೂ ಉಂಟಾಗಿತ್ತು. ಇಂದರಿಂದ ಉತ್ಸಾಹಗೊಂಡ ಹನುಮಂತರಾಯರು ಸುಮಧ್ವ ವಿಜಯದ ಕನ್ನಡ ಪದ್ಯಾನುವಾದವನ್ನೂ, ಅದರ ವ್ಯಾಖ್ಯಾನರೂಪವಾಗಿ ಸರಳವಾದ ಮಂದರಿಗೂ ಅರ್ಥವಾಗುವ ವಿವರಣೆಯನ್ನೂ ಬರೆದು, ೧೯೪೭ರಲ್ಲಿ ಸಂಪೂರ್ಣವಾಗಿ ಪ್ರಕಟಿಸಿದರು. ಈ ಮಹತ್ವದ ಕೃತಿಯನ್ನು ಪ್ರಕಟಿಸುವುದರಲ್ಲಿ ಅವರು ದೈವದ ಕಾರುಣ್ಯದ ಹಸ್ತವನ್ನು ಗುರುತಿಸಿದರು. ಹರಿದಾಸರ ಸಾಹಿತ್ಯದ ಭಂಡಾರದ ಬೀಗಮುದ್ರೆ ದೊರೆಯಿತೆಂದು ಹಿಗ್ಗಿದರು. "ಜ್ಞಾನಧನವನ್ನು ರಕ್ಷಿಸುವಂಥ ಗುರುಮಹಿಮೆ"-ದೊರಕಿತೆಂದೂ, ಗುರುವನುಗ್ರಹದಿಂದ ತಮಗೆ ಪುಣ್ಯೋದಯದ ಕಾಲ ಆರಂಭವಾಯಿತೆಂದೂ ತಿಳಿದರು.

ಆ ವೇಳೆಗೆ ಹನುಮಂತರಾಯರು ಲಿಂಗಸೂಗೂರಿನಲ್ಲಿ ಜನಪ್ರಿಯ ವಕೀಲರೆಂದು ಹೆಸರು ಗಳಿಸಿದ್ದರು. ಸಂಪಾದನೆ ಚೆನ್ನಾಗಿತ್ತು. ಕೈಹಿಡಿದ ಕೆಲಸಗಳಲ್ಲಿ ಜಯ ಪಡೆದಿದ್ದರು. ಎಲ್ಲ ಅಧಿಕಾರಿಗಳೂ, ಸಹೋದ್ಯೋಗಿಗಳೂ ಅವರನ್ನು ಹಿರಿಯರೆಂದು ಗೌರವಿಸುತ್ತಿದ್ದರು. ಅವರು

ತಮ್ಮ ಸಂಪಾದನೆಯನ್ನು ದಾನ ಧರ್ಮಗಳಿಗೆ ವೆಚ್ಚ ಮಾಡುತ್ತಿದ್ದರು. ಇಂಥ ಲೌಕಿಕ ಅಭ್ಯುದಯದ ತುದಿಯಲ್ಲಿದ್ದಾಗಲೇ ಅವರಿಗೆ ಅಚ್ಯುತನ ಹುಚ್ಚು ಹಿಡಿಯಿತು. ವಕೀಲಿಯಲ್ಲಿ ಆಸಕ್ತಿ ಕಡಿಮೆಯಾಯಿತು. ೧೯೪೨ರ ವೇಳೆಗೆ ಅದು ನಿಂತೇ ಹೋಯಿತು. ಈಗ ಅವರ ಸಂಪೂರ್ಣ ಸಮಯ ಹರಿದಾಸ ಸಾಹಿತ್ಯಕ್ಕೆ ಮೀಸಲಾಯಿತು. ಮನಸ್ಸನ್ನು ವೈರಾಗ್ಯದ ಕಡೆಗೆ ತಿರುಗಿಸಲು ಒಂದಾದ ಮೇಲೆ ಒಂದರಂತೆ ಬಂದ ಸಾಂಸಾರಿಕ ದುಃಖ ವಿಯೋಗಗಳೂ ಕಾರಣವಾಯಿತು.

ಹನುಮಂತರಾಯರಿಗೆ ಸ್ವಾಮಿರಾಯರ ಬಂಧುಗಳಾದ ಕುಪ್ಪಣ್ಣ ಎಂಬುವರ ಮಗಳೊಡನೆ ವಿವಾಹವಾಗಿತ್ತು. ಅವರಿಗೆ ಗಂಡು ಸಂತತಿ ಇರಲಿಲ್ಲ. ಅವರು ತಮ್ಮ ಹಿರಿಯ ಮಗಳನ್ನು ಪ್ರಾಣೇಶದಾಸರ ವಂಶಸ್ಥರಾದ ಸುಳಾದಿ ಕುಪ್ಪೇರಾಯರಿಗೆ ವಿವಾಹ ಮಾಡಿಕೊಟ್ಟಿದ್ದರು. ಈಕೆಯು ಮೂವರು ಹೆಣ್ಣು ಮಕ್ಕಳಿಗೆ ಜನ್ಮಕೊಟ್ಟು ತೀರಿಕೊಂಡಳು. ಇನ್ನೊಬ್ಬ ಪುತ್ರಿಯೂ ವಿವಾಹಿತಳಾಗಿದ್ದು, ಅವಳೂ ಅಕಾಲ ಮರಣ ಹೊಂದಿದ್ದಳು. ಹೀಗೆ ಹನುಮಂತರಾಯರಿಗೆ ಅವರ ಹತ್ತಿರದ ಬಂಧುಗಳೆಲ್ಲರೂ ತೀರಿಕೊಂಡು, ಅವರಿಗೆ ಸಂಸಾರದಲ್ಲಿ ವೈರಾಗ್ಯವುಂಟಾಗಿತ್ತು. ಮೊದಲಿನಿಂದಲೂ ಮಹಾಮಹಿಮರಾದ ಶ್ರೀ ವರದೇಂದ್ರರಲ್ಲಿ ಅವರಿಗೆ ಅತ್ಯಂತ ಭಕ್ತಿಯಿತ್ತು. ವೇದಾಂತ ರಹಸ್ಯಗಳನ್ನು ಬಾಲ್ಯದಲ್ಲೇ ರಘುಕಾಂತತೀರ್ಥರಲ್ಲಿ ಶಾಂತಿಪಾಠ ಹಾಕಿ ಆರು ತಿಂಗಳ ಕಾಲ ಅಧ್ಯಯನ ಮಾಡಿದ್ದರು. ಪದ ಉಗಾಭೋಗಗಳ ಆಳವಾದ ಅಧ್ಯಯನ, ಚಿಂತನ ಮಂಥನಗಳಿಂದ ದ್ವೈತ ಸಿದ್ಧಾಂತದ ಪ್ರಮೇಯಗಳೆಲ್ಲವೂ ರಕ್ತಗತವಾಗಿ, ಜೀವನದ ಆಳಕ್ಕೆ ಇಳಿದಿದ್ದವು. ಅದನ್ನು ಕೃತಿ ರೂಪಕ್ಕೆ ತರಲು ಹೆಣಗಿದರು.

ಅವರು ತಮ್ಮ ಆರಾಧ್ಯ ದೈವ ಲಿಂಗಸೂಗೂರಿನ ಕುಪ್ಪಿ ಭೀಮಪ್ರಾಣದೇವರ ರಥೋತ್ಸವದ ನಿಮಿತ್ತ ೫೦೦೦ ರೂ. ಬಾಳುವ ತಮ್ಮ ಹೊಲವನ್ನು ದಾನ ಮಾಡಿದರು. ಮಾನ್ವಿಯ ಶ್ರೀ ಜಗನ್ನಾಥದಾಸರಿಗೆ ಸಹಸ್ರಾರು ರೂಪಾಯಿಗಳ ವೆಚ್ಚದಲ್ಲಿ ಒಂದು ಸುಂದರ ರಥ ಮಾಡಿಸಿ ಕೊಟ್ಟರು. ತಮ್ಮ ಹೊಲಗಳನ್ನು ಮಾರಿ ಬಂದ ಹಣವನ್ನು ಹರಿದಾಸರ ಕೃತಿಗಳ ಪ್ರಕಟಣೆಗೆ ಹಾಕಿದರು. ಈ ಕಾರ್ಯಕ್ಕೆಂದೇ ೧೯೪೪ರಲ್ಲಿ ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲವೆಂಬ ಹೆಸರಿನಲ್ಲಿ ಒಂದು ಸಂಸ್ಥೆಯನ್ನು ಆರಂಭಿಸಿದರು.

"ಮೋಕ್ಷ ಮಾರ್ಗ ಪ್ರದಿಪೀಕಾ"- ಎಂಬ ಶೀರ್ಷಿಕೆಯಲ್ಲಿ ವಿಜಯದಾಸರ ಅಲಭ್ಯವಾಗಿದ್ದ ಸಾಹಿತ್ಯವನ್ನೆಲ್ಲಾ ಸಂಗ್ರಹಿಸಿ ಒಂಭತ್ತು ಗ್ರಂಥಗಳಲ್ಲಿ ಪ್ರಕಟಿಸಿದರು.

ತಾರತಮ್ಯ ಭಾಗ, ಪ್ರಾರ್ಥನಾಭಾಗ, ಸೃಷ್ಟಿಪ್ರಕರಣ, ತೀರ್ಥಕ್ಷೇತ್ರ ಮಹಿಮೆ, ಸಾಧನ ಭಾಗ (ಎರಡು ಭಾಗ) ಪ್ರಮೇಯ ಭಾಗ, ಉಪಾಸನಾ ಭಾಗ, ಸ್ತೋತ್ರ ಭಾಗಗಳನ್ನೂ, ಮುಂದೆ ವಿಜಯದಾಸರ ಪದಗಳನ್ನೂ ಚಕ್ರಾಬ್ಜ ಮಂಡಲ ಸುಳಾದಿ ಹಾಗೂ ವಿಸ್ತೃತ ಜೀವನ ಚರಿತ್ರೆಗಳನ್ನೂ ಪ್ರಕಟಿಸಿದರು. ವಿಮರ್ಶಕರು "ವಿಜಯದಾಸರ ವಿವಿಧ ಕಲಾ ಕೃತಿಗಳನ್ನು ಒಟ್ಟುಗೂಡಿಸುವ ಶ್ರಮವನ್ನು ಕೈಗೊಂಡ ಈ ಗ್ರಂಥದ ಸಂಪಾದಕರು ದ್ವೈತ ವೇದಾಂತಕ್ಕೆ, ದಾಸ ವರ್ಗಕ್ಕೆ, ಕನ್ನಡ ನುಡಿಗೆ, ಕನ್ನಡ ಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿರುವರು"- ಎಂದು ಮುಕ್ತ ಕಂಠದಿಂದ ಹೊಗಳಿದರು.

"Sri Gorebal Hanumantha Rao of Lingsugur is as ardent soul who has devoted over thirty years of his life for bringing to light the hidden treasures of the Haridasa Literature. He has made an extensive collection of the scattered sources of this literature studied them carefully and published a series of books on the subject. The services he has thus renderd to this nobel cause is monumental. An indefatigable worker of exemplary zeal he has under taken to publish further books in this field. One of these is the life of Vijayadasa....- ಎಂದು ಡಾ. ಪಿ.ಬಿ.ದೇಸಾಯಿ ಅವರ ಬರೆದರು.

ಗೋರೆಬಾಳ ಹನುಮಂತರಾಯರ ಮಾರ್ಗದರ್ಶನದಲ್ಲಿ ವರದೇಂದ್ರ ಸಾಹಿತ್ಯ ಮಂಡಲವು ಸದಾಚಾರ, ಪಂಚಭೇದ, ಬ್ರಹ್ಮಚರ್ಯ, ಆಧ್ಯಾತ್ಮ ಮಾಲೆ, ಗದ್ಯ, ಚಕ್ರಾಬ್ಜಮಂಡಲ, ಹರಿಕಥಾಮೃತಸಾರ ಸಂಗ್ರಹ, ಗದ್ಯಾನುವಾದಗಳನ್ನು ಪ್ರಕಟಿಸಿದುದಲ್ಲದೆ, ಗೋಪಾಲದಾಸರ ಸಂಪೂರ್ಣ ಕೃತಿಗಳನ್ನು, ಮೊದಲಕಲ್ಲು ಶೇಷದಾಸರ ಕೃತಿಗಳನ್ನು, ಆಧ್ಯರ ಉಗಾಭೋಗಗಳನ್ನು ಶ್ರೀಪಾದರಾಜರು, ವಾದಿರಾಜರು, ರಾಘವೇಂದ್ರ ಸ್ವಾಮಿಗಳ ಮೇಲಿನ ಸ್ತೋತ್ರ ಸಾಹಿತ್ಯವನ್ನು, ವೆಂಕಟೇಶ ಮಹಾತ್ಮೆಯನ್ನು ಪ್ರಕಟಿಸಿದರು. ದಾಸ ಸಾಹಿತ್ಯ ಪ್ರಚಾರಕ್ಕಾಗಿಯೇ ದ್ವೈಮಾಸಿಕ ಪತ್ರಿಕೆಯನ್ನು ಎರಡು ವರ್ಷಗಳ ಕಾಲ ನಡೆಸಿದರು. ತಾರತಮ್ಯ ಭಾಗ ಸುಳಾದಿಗಳನ್ನು ಸಂಕಲ್ಪಿಸಿ ಪ್ರಕಟಿಸಿದರು. ಸೃಷ್ಟಿ ಪ್ರಕರಣ ಸುಳಾದಿಗೆ ವಿಸ್ತೃತವೂ, ವಿದ್ವತ್ಪೂರ್ಣವೂ ಆದ ವಿವರಣೆ ನೀಡಿದರು. ಹೀಗೆ ದಾಸ ಸಾಹಿತ್ಯದ ವಿವಿಧ ಮುಖಗಳ ಸಾಹಿತ್ಯದ ಸೊಗಸನ್ನು ಸಜ್ಜನರಿಗೆ ಒದಗಿಸಿ, ತಾವು ಗಳಿಸಿದ್ದ ಜ್ಞಾನ ಭಂಡಾರವನ್ನು ಹಂಚಿಕೊಂಡರು.

ಗೋರೆಬಾಳು ಹನುಮಂತರಾಯರ ಮೇರು ಕೃತಿ ಎಂದರೆ ಪಂಚಟೀಕಾರತ್ನಗಳೊಡೆ ಪ್ರಕಟಿಸಿದ ಜಗನ್ನಾಥದಾಸರ ಹರಿಕಥಾಮೃತ ಸಾರದ ಸಂಪುಟಗಳ ಪ್ರಕಟಣೆ, ಅಧಿಕ ಶ್ರಮ, ವೆಚ್ಚ, ಪಂಡಿತರ ನೆರವಿನಿಂದ ಪ್ರಕಟವಾಗಿರುವ ಹರಿಕಥಾಮೃತ ಸಾರವು ಈ ಶತಮಾನದ ಅಮೋಘವಾದ ಆಧ್ಯಾತ್ಮಿಕ ಕೃತಿ. ಈ ಕಾರ್ಯವನ್ನು ತಮ್ಮ ವೃದ್ಧಾಪ್ಯದಲ್ಲಿ ಹಲವು ರೋಗಗಳಿಂದ ಪೀಡಿತರಾಗಿ ಝರ್ಝರಿತರಾಗಿದ್ದರೂ, ಸಾಲ ಸೋಲಗಳಿಗೆ ಸಿಕ್ಕಿ ಹಣ್ಣಾಗಿದ್ದರೂ ದೇಹ ಶ್ರಮವನ್ನು, ಹಣದ ವೆಚ್ಚವನ್ನು ಗಮನಿಸದೆ ತಪಸ್ವಿನಂತೆ, ಈ ಕಾರ್ಯವನ್ನು ಕೈಗೊಂಡು ಅದನ್ನು ಪೂರ್ಣಗೊಳಿಸಿದರು.

ಹರಿಕಥಾಮೃತಸಾರವು ಶ್ರೀ ಜಗನ್ನಾಥದಾಸರ ಶ್ರೇಷ್ಠ ಕೃತಿ. ಇದರಲ್ಲಿ ದ್ವೈತಶಾಸ್ತ್ರದ ಪ್ರಮೇಯಗಳನ್ನೆಲ್ಲಾ ಲಲಿತವಾಗಿ ಸರಳ ಕನ್ನಡದಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಮೂವತ್ತೆರಡು ಸಂಧಿಗಳಲ್ಲಿ ೧೦೧೩ ಷಟ್ಪದಿಗಳಲ್ಲಿ ನೂರಾರು ಸಂಸ್ಕೃತ ಗ್ರಂಥಗಳ ಸಾರವನ್ನು ಭಟ್ಟಿ ಇಳಿಸಿ, ಮನೋಹರ ಕಾವ್ಯವಾಗಿ ಕೋದು, ಈ ಸುಂದರ ಪುಷ್ಪ ಮಾಲಿಕೆಯನ್ನು ಸಾರಸ್ವತ ಲೋಕಕ್ಕೆ ಅರ್ಪಿಸಿದ್ದಾರೆ. ದ್ವೈತಶಾಸ್ತ್ರದ ಸಮಸ್ತ ಪ್ರಮೇಯಗಳು ಇಲ್ಲಿ ಸುಂದರ ಕಾವ್ಯವಾಗಿ ಭಕ್ತಿಯ ಹೊನಲಾಗಿ, ಮಡುಗಟ್ಟಿ ನಿಂತಿದೆ.

ಅಪಾರ ವಯಸ್ಸಿನಲ್ಲಿ ಜಗನ್ನಾಥದಾಸರು ಈ ಗ್ರಂಥವನ್ನು ಬರೆದರಂತೆ. ತಮ್ಮ ಪಕ್ವ

ತತ್ತ್ವಜ್ಞಾನ, ದರ್ಶನಗಳನ್ನು ಸುಜೀವರ ಉದ್ಧಾರಕ್ಕಾಗಿ ನೀಡಿದರಂತೆ. ಗೋರೆಬಾಳ ಹನುಮಂತ ರಾಯರು ಕೈಲಿದ್ದ ಹಣವನ್ನೆಲ್ಲಾ ಈ ಕಾರ್ಯಕ್ಕೆ ವೆಚ್ಚ ಮಾಡಿ, ಹೊಲ ಮನೆಗಳನ್ನು ಮಾರಿ ಮುದ್ರಣ, ಕಾಗದಗಳ ವೆಚ್ಚಕ್ಕೆ ಹಣ ತುಂಬಿ, ಗ್ರಂಥಗಳನ್ನು ಸಿದ್ಧಪಡಿಸಿ, ತಾವೇ ಹೊತ್ತು ಸಜ್ಜನರ ಮನೆಗಳಿಗೆ ಮುಟ್ಟಿಸಿದ್ದಾರೆ.

ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವೆಂದರೆ ಕನ್ನಡದಲ್ಲಿ ಬರೆದ ಈ ಗ್ರಂಥಕ್ಕೆ ಸಂಸ್ಕೃತದಲ್ಲಿ ಹಲವು ವ್ಯಾಖ್ಯಾನಗಳಾದುದು. ಇದರಿಂದ ಗ್ರಂಥದ ಮಹಿಮೆ ತಿಳಿಯುತ್ತದೆ. ಹರಿಕಥಾಮೃತ ಸಾರಕ್ಕೆ ಕನ್ನಡದಲ್ಲಿ ೧)ಗುರುವಿಜಯ ವಿಠಲರ ಟೀಕಾ, ೨) ಗುರುಶ್ರೀವಿಠಲರ ಶಿಷ್ಯರ ಟೀಕಾ, ೩) ದ್ರೌಪದಿ ಶಪತಿ ವಿಠಲರ ಟೀಕಾ, ೪)ಜಂಬುಖಂಡೀ ವಾದಿರಾಜಾಚಾರ್ಯರ ಭಾವ ಸೂಚನ ಗ್ರಂಥಗಳು ಬಂದಿವೆ. ಸಂಸ್ಕೃತದಲ್ಲಿ ಶ್ರೀತಾಮ್ರಪರ್ಣಿ ಎಂಬ ಹೆಸರಿನ ಪದ ಪ್ರಕಾಶಿಕಾ ಟೀಕಾ ಮತ್ತು ವಾದಿರಾಜ ಚಾರ್ಯರ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ ಟೀಕಾಗಳೂ ರಚಿತವಾಗಿದೆ. ಇವುಗಳನ್ನೆಲ್ಲಾ ಅಮೂಲಾಗ್ರವಾಗಿ ಅಡಗಿಸಿಕೊಂಡ ಹರಿಕಥಾಮೃತಸಾರ ಟೀಕಾ-ಪಂಚರತ್ನ ಪ್ರಕಾಶಿಕಾ ಗ್ರಂಥ ವನ್ನು ಆರು ಸಂಪುಟಗಳಲ್ಲಿ ಪ್ರಕಟ ಪಡಿಸಿದ್ದು, ಗೋರೆಬಾಳು ಹನುಮಂತ ರಾಯರ ಜೀವಿತದ ಪರಮ ಸಾಧನೆ ಎನ್ನಬಹುದು.

ತಮ್ಮ ಬಹು ದಿನಗಳ ಈ ಕನಸು ನನಸಾದ ಸಮಯದಲ್ಲಿ ಪ್ರಥಮ ಸಂಪುಟಕ್ಕೆ ಬರೆದ ನಿವೇದನದಲ್ಲಿ ಹನುಮಂತರಾಯರು ಹೀಗೆ ಕೊನೆಯ ಪ್ರಾರ್ಥನೆ ಸಲ್ಲಿಸಿದ್ದಾರೆ ;

"ದಾಸರೇ, ನಾನು ಅಜ್ಞಾನಿಯೂ ಬಹು ಕಷ್ಟ ಕಾರ್ಯ ಹೇಗೆ ಆಗುವುದೆಂದು ಹಿಂಜರಿದರೆ, ಎನ್ನ ದುಷ್ಟಮರ್ಕನುಸರಿಸಿ ನಾನಾ-ರೋಗಗಳಿಂದ ಪೀಡಿತನನ್ನಾಗಿ ಮಾಡಿದಿರಿ. ಸ್ನಾನ ಆಹ್ನಿಕಗಳಿಗೂ ಆಸ್ಪದ ಕೊಡದಂತೆ ಅರ್ಧಾಂಗ ವಾತವಿಕಾರದಲ್ಲಿದ್ದಾಗ ಪುನಃ ಧೈರ್ಯವಿತ್ತು ಕಾರ್ಯೋನ್ಮುಖನನ್ನಾಗಿ ಮಾಡಿದ ದಾಸರೇ ತಾವು ಕರುಣೆಗಳು. ಇಳಿಯ ವಯಸ್ಸು, ಅನೇಕ ರೋಗೋಪದ್ರವಗಳ ಬಾಧೆ, ಇಂದ್ರಿಯಗಳ ಕ್ಷೀಣತೆ, ಮನೋ ಅಧೈರ್ಯ-ಇಂಥ ಸ್ಥಿತಿಯಲ್ಲಿ ತಾವೇ ನಿಂತು ಮಹತ್ಕಾರ್ಯವನ್ನು ಮಾಡಿಸುವಿರೆಂಬ ಸುಜ್ಞಾನ ದೃಢವಾಗಿರಲಿ. ದೇಶ ದೇಶ ತಿರುಗಿ ಪುಸ್ತಕ ಮತ್ತು ಹಣ ಸಂಗ್ರಹಿಸುವುದು ಬಹು ಕಷ್ಟ. ಸಕ್ರಮವಾಗಿ ಸಂಶೋಧಿಸುವುದು, ಪಂಡಿತರುಗಳ ಸಹಾಯದಿಂದ ಪರಿಶೋಧಿಸುವುದು, ಅಚ್ಚನಾಲಯದವರ ಬಾಗಿಲು ಕಾಯುವುದು ನಾನಾ ತರದ ಕಷ್ಟಗಳನ್ನು ಅನುಭವಿಸುವುದೂ ಸಾಧಾರಣವಾದರೂ, ದಾಸರೇ, ತಾವೇ ಧೈರ್ಯ ಸ್ಥೈರ್ಯವನ್ನಿತ್ತು ಕಾರ್ಯ ಸಾಗಿಸುತ್ತಿರುವಿರಿ. ನಿಜ, ನಿಜ, ನಿಜ. ಇದೇ ತಪಸ್ಸು ಇದೇ ಯೋಗ."

ಈ ಮಹತ್ಕಾರ್ಯವು ಮೇ.೨೬, ೧೯೩೪ರಲ್ಲಿ ಸಂಪೂರ್ಣಗೊಂಡಾಗ ಹನುಮಂತರಾಯರು ತಮ್ಮ ಜೀವನದ ಸಫಲತೆಯ ಅಮೃತ ಕ್ಷಣವನ್ನು ಧನ್ಯತೆಯನ್ನು ಅನುಭವಿಸಿದರು. ಕಷ್ಟ ಸಾಧ್ಯವಾದ ಈ ಯೋಜನೆ ನಿರ್ವಿಘ್ನವಾಗಿ ಈಡೇರಿದುದಕ್ಕಾಗಿ ಪರಮಾತ್ಮನಲ್ಲಿ ಕೃತಜ್ಞತೆಯನ್ನು ಅರ್ಪಿಸಿದರು.

*"ಸಕಲ ಭಕ್ತರಿಗೂ ದಾಸರಲ್ಲಿ ಮಹಾಭಕ್ತಿ, ದಾಸ ರಾಯರ ಗ್ರಂಥಗಳ ಪಠಣೆ, ಪಾರಾಯಣ, ಅರ್ಥ ವಿಚಾರ-ಇವುಗಳಲ್ಲಿ ಸದ್ಬುದ್ಧಿ ದಯಪಾಲಿಸಿ, ಮುಕ್ತಿಗೆ ಕಾರಕ ಮಾಡಿರೆಂದು ಪುನಃ ಪುನಃ ದಾಸರ ಅಡಿಗಳಲ್ಲಿ ಬಿಡದೆ ಶಿರವಿರಲಿ"*- ಎಂದು ಫಲ ಶ್ರುತಿ ಹಾಡಿದರು.

## ೬

ಗೋರೆಬಾಳ ಹನುಮಂತರಾಯರಿಗೆ ಶ್ರೀನಿವಾಸನ ಮೇಲಿದ್ದ ಭಕ್ತಿ ಅಸಾಧಾರಣ. ಅವರು ಶ್ರೀ ಆದಿತ್ಯ ಪುರಾಣೋಕ್ತ ಶ್ರೀ ವೆಂಕಟೇಶ ಮಹಾತ್ಮೆಯನ್ನು ಕನ್ನಡದಲ್ಲಿ ಸುಳಾದಿ ರೂಪದಲ್ಲಿ ಅನುವಾದಿಸಿದ್ದಾರೆ. ಈ ಗ್ರಂಥ ನಿರ್ಮಾಣದ್ದೇ ಒಂದು ಕಥೆ; ಇದು ಅವರ ದೈವ ಭಕ್ತಿಯ ದ್ಯೋತಕವಾಗಿದೆ. ಹೈದರಾಬಾದಿನ ಸ್ವಾತಂತ್ರ್ಯ ಸಮರದ ಇತಿಹಾಸದಲ್ಲಿ ರಜಾಕರ ದೌರ್ಜನ್ಯ, ಒಂದು ರಕ್ತ ರಂಜಿತ ಅಧ್ಯಾಯ. ಸಾತ್ವಿಕರಾದ ಗೋರೆಬಾಳರೂ ಈ ಪಿಡುಗಿಗೆ ತುತ್ತಾಗಿ ತೊಂದರೆ ಅನುಭವಿಸಬೇಕಾಗಿ ಬಂದಿತ್ತು. ಆದರೆ ಅದರಿಂದ ಅವರನ್ನು ಪಾರು ಮಾಡಿದವನು ಶ್ರೀನಿವಾಸನೆಂದೇ ಹನುಮಂತರಾಯರ ನಂಬಿಕೆಯಾಗಿತ್ತು. ಈ ನಂಬಿಕೆ ಶ್ರದ್ಧೆಗಳ ಫಲ ರೂಪವಾಗಿ ಈ ಗ್ರಂಥಾನುವಾದ ಪ್ರಕಟಗೊಂಡಿತು. ಅದರ ಮೊದಲ ಮಾತಿನಲ್ಲಿ - ದಾಸನ ಆಶೆಯನ್ನು ಅವರು ಹೀಗೆ ಬರೆದಿದ್ದಾರೆ.

"೧೯೪೮ರನೆ ಇಸ್ವಿ ಹೈದರಾಬಾದ್ ಪೋಲಿಸ್ ಆಕ್ಷನ್ ಸಮಯ. ಸೃಷ್ಟಿ ಪ್ರಕರಣ ಸುಳಾದಿಗಳ ಅಚ್ಚಿಗಾಗಿ ಮೂರು ತಿಂಗಳು ನಾನು ಮೈಸೂರಿನಲ್ಲಿ ಇರಬೇಕಾಯ್ತು. ಅಚ್ಚು ಮುಗಿಸುವ ಸಮಯದಲ್ಲಿ ಶ್ರೀಗುರು ಪ್ರಾಣೇಶದಾಸರ ಪುಣ್ಯತಿಥಿ ಬಂದಿತು. ಅದಕ್ಕಾಗಿ ಧಾವಿಸಿ ನಾನು ಲಿಂಗಸೂಗೂರಿಗೆ ಬರಬೇಕೆಂದು ಹೊರಡುವ ಸಮಯದಲ್ಲಿ ಶ್ರೀ ಅಟ್ವಾಜಿ ವೆಂಕಟರಾಯರ ಕುಟುಂಬ ಅಮ್ಮಯ್ಯನವರು ಹೋಗಬೇಡಪ್ಪ, ಗುರುಪ್ರಾಣೇಶರಾಯರ ಪುಣ್ಯ ದಿವಸವನ್ನು ಇಲ್ಲಿಯೆ ವಿಜೃಂಭಣೆಯಿಂದ ಮಾಡೋಣ"- ಎಂದು ಬಹು ಆತುರ ಪಟ್ಟರು. ಅವರ ಮಾತನ್ನು ಕೇಳದೆ ನಾನು ಲಿಂಗಸೂಗೂರಿಗೆ ಹೊರಟೆ. ಆಗಿನ ಕಾಲ ಹೈದ್ರಾಬಾದ್ ದೇಶದಲ್ಲಿ ಎಲ್ಲ ವರ್ತಮಾನ ಪತ್ರಿಕೆಗಳೂ ಬಂದಾಗಿದ್ದು ನನಗೆ ಗೊತ್ತಾಗಲಿಲ್ಲ.

ರೈಲ್ವೇ ಸ್ಟೇಷನಿನಲ್ಲಿ ಸಂಯುಕ್ತ ಕರ್ನಾಟಕ ಪೇಪರ್ ಮಾರಲಿಕ್ಕೆ ಬಂದಿತ್ತು. ನಾನು ಒಂದು ಪೇಪರನ್ನು ತೆಗೆದುಕೊಂಡು ಓದಿ ಹಾಗೆಯೇ ಕಿಸೆಯಲ್ಲಿ ಇಟ್ಟುಕೊಂಡೆ. ರೈಲ್ವೇ ಮಾರ್ಗವಾಗಿ ಗಿಣಿಗೇರಿಗೆ ಬಂದು ಇಳಿದೆ. ಸಂಗಡ ಹಳೆ ಪುಸ್ತಕಗಳ ದೊಡ್ಡ ದೊಡ್ಡ ಮೂರು ಗಂಟುಗಳು ಇದ್ದುವು. ಪೋಲೀಸರು ಎಲ್ಲ ತಪಾಸು ಮಾಡಿದರು. ನನ್ನ ಕಿಸೆಯಲ್ಲಿರುವ ಸಂಯುಕ್ತ ಕರ್ನಾಟಕ ಪೇಪರ್ ನೋಡಿ ಅದನ್ನು ಕೊಂಡು ಕೊಂಡುದಕ್ಕೆ ನಿನ್ನ ಮೇಲೆ ಕೇಸು ಹಾಕುತ್ತೇವೆ ಎಂದು ಟ್ರಕ್ಕಿನಲ್ಲಿ ಬಿಸಿಲಿನಲ್ಲಿಯೇ ಕೊಪ್ಪಳದ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಹತ್ತಿರ ಕರೆ ದೊಯ್ದರು. ಮರುದಿನ ಗುರುಪ್ರಾಣೇಶದಾಸರಾಯರ ಪುಣ್ಯ ದಿವಸ, ಒಂದು ಹಗಲು ರಾತ್ರಿ ಪೋಲೀಸರು ನನಗೆ ಬಹು ಶ್ರಮಕೊಟ್ಟರು. ರಾತ್ರಿ ನನ್ನಲ್ಲಿರುವ ಎಲ್ಲ ವಸ್ತುಗಳನ್ನು ಹರಣ ಮಾಡಬೇಕೆಂದು ಪ್ರಯತ್ನ ಪಟ್ಟರು. ಅವರಿಂದ ಸಾಧ್ಯವಾಗಲಿಲ್ಲ. ಮಾಘವರಿ ಅಮಾವಾಸ್ಯೆ ಅಂದೇ ಪುಣ್ಯದಿವಸ. ಬೆಳಿಗ್ಗೆ ಇಬ್ಬರು ಮೂರು ಜನ ದೊಡ್ಡ ಮನುಷ್ಯರು "ಈ ಹೊತ್ತು ಇವರಿಗೆ ಊಟ ಮಾಡಿಸಿ ಕಳುಹಿಸುತ್ತೇವೆ ಅಪ್ಪಣೆ ಕೊಡಿರಿ" -ಎಂದು ಸಬ್ ಇನ್ಸ್‌ಪೆಕ್ಟರನ್ನು ಕೇಳಿಕೊಂಡರು

ಇನ್ಸ್‌ಪೆಕ್ಟರು ಅವರಿಗೆ ಕೆಟ್ಟ ಮಾತುಗಳನ್ನಾಡಿ ಕಳುಹಿಸಿದರು. ನನಗೂ ಊಟಕ್ಕೆ ಅಪ್ಪಣೆ ಕೊಡಲಿಲ್ಲ. ಆ ಸದ್ಗೃಹಸ್ಥರು ತಮ್ಮ ಮನೆಗೆ ಹೋಗಿ ನಮ್ಮ ಸ್ನೇಹಿತರ ದೌಹಿತ್ರರಾದ ಇಟಗಿ

ಅನಂತಾಚಾರ್ಯರ ಸಂಗಡ ನನಗೆ ಸ್ನಾನ ಮಾಡಿಸಿ ಫಲಹಾರ ಕೊಡಲು ಬಾಳೆಹಣ್ಣು ಮತ್ತು ಹಾಲನ್ನು ಕಳುಹಿಸಿದರು. ಪೋಲೀಸರು ನನಗೆ ಬಾವಿಗೆ ಹೋಗಿ ಸ್ನಾನ ಮಾಡಲು ಅಪ್ಪಣೆ ಕೊಡಲಿಲ್ಲ. ಶ್ರೀ ಅನಂತಾಚಾರ್ಯರು ಬಾವಿಯಿಂದ ಮಡಿಯಿಂದ ನೀರನ್ನು ತಂದು ನನಗೆ ಸ್ನಾನ ಮಾಡಿಸುವಷ್ಟರಲ್ಲಿ ಹನ್ನೆರಡು ಗಂಟೆ ಮೀರಿತ್ತು.

ಆಗ ಅವರ ಸೋದರ ಮಾವಂದಿರಾದ ಆಚಾರ್ಯ ಮಧ್ವಾಚಾರ್ಯರು ಕುಷ್ಟಗಿ, ಇವರ ಮಕ್ಕಳು ಬಂದು ದರ್ಶನ ಕೊಟ್ಟರು.

"ಹನುಮಂತರಾಯರೆ, ನಿಮಗೆ ಕಷ್ಟ ಬಂದದ್ದು ಕೇಳಿ ನೊಂದೆ. ಮತ್ತು ನಮ್ಮ ಅಪ್ಪ ಅವರ ಹೇಳಿಕೆಯಂತೆ ನಾನು ಇಂದು ತಮ್ಮ ಕಷ್ಟ ಪರಿಹಾರವಾಗುವ ಸಲುವಾಗಿ ಶ್ರೀ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮ್ಯೆಯನ್ನು ಪಾರಾಯಣ ಮಾಡಿ ನಿಮಗೆ ಬಂದ ಕಷ್ಟ ಪರಿಹಾರ ಮಾಡೆಂದು ಶ್ರೀ ವೆಂಕಟೇಶನನ್ನು ಪ್ರಾರ್ಥಿಸಿದ್ದೇನೆ. ನಿಮಗೇನೂ ಭಯವಿಲ್ಲ"- ಎಂದು ಹೇಳಿ ಊರಿಗೆ ಹೋಗಿ ಬಿಟ್ಟರು.

ಮುಂದೆ ಪೋಲೀಸರು ಮೂರು ಮೂರೂವರೆ ಗಂಟೆಯವರೆಗೆ ನನ್ನನ್ನು ಕೋರ್ಟಿಗೆ ಕಳುಹಿಸಲೇ ಇಲ್ಲ. ಅಂದು ಕೋರ್ಟು ಮುಗಿದ ಮೇಲೆ ಕಳುಹಿಸಿದರು. ನನ್ನನ್ನು ಜೈಲಿನಲ್ಲಿ ರಿಮಾಂಡ್ ಮಾಡಿಸಬೇಕೆಂದು ಅವರ ಇಚ್ಛೆ. ನಾಲ್ಕು ಗಂಟೆಗೆ ಸುಮಾರಿಗೆ ನನಗೆ ಒಂದು ಟಾಂಗಾ ಸಹ ಸಿಗದಂತೆ ಮಾಡಿ ಒಂದು ಮೈಲು ದೂರದಲ್ಲಿರುವ ಕೋರ್ಟಿಗೆ ನನ್ನನ್ನು ಕಳುಹಿಸಿದರು.

ಈ ಮೊದಲೇ ನನ್ನ ಮೇಲೆ ಖಟ್ಲೆ ಹಾಕುವರೆಂದು ಮುನ್ಸೀಫರಿಗೆ ಕೆಲವು ವಕೀಲರು ತಿಳಿಸಿದ್ದರು. ಅವರು ಕೋರ್ಟಿನಲ್ಲಿಯೇ ಇದ್ದರು. ನನ್ನ ಸ್ನೇಹಿತರಾದ ನಾಲ್ಕಾರು ಮಂದಿ ಪ್ರಸಿದ್ಧ ವಕೀಲರು, ಡಾಕ್ಟರು, ಜಹಗೀರದಾರರು ನನ್ನ ಮಾರ್ಗ ನೋಡುತ್ತ ಕುಳಿತೇ ಬಿಟ್ಟರು. ನಾನು ಹೋದ ಕೂಡಲೇ ಮುನ್ಸೀಫರಿಗೆ ಕೋರ್ಟಿನ ಪದ್ಧತಿಯಂತೆ ಸಲಾಮ್ ಮಾಡಿ ನಿಂತುಕೊಂಡೆ. ಇದು ರಜಾಕಾರರ ಹಾವಳಿ ವೇಳೆ. ಮುನ್ಸೀಫರು ಮುಸಲ್ಮಾನ ಅಧಿಕಾರಿಗಳಾದರೂ ಶ್ರೀ ವೆಂಕಟೇಶನ ದಯದಿಂದ ಅವರು ಕರುಣೆಗೊಂಡರು. "ನೀವು ಹೆದರಬೇಡಿ. ನಿಮ್ಮ ಬಯಕೆ ಏನಿದೆ ಎಂಬುದನ್ನು ಅರ್ಜಿಯಲ್ಲಿ ಬರೆದು ಕೊಡಿ"- ಎಂದು ತಾವೇ ಒಂದು ಕಾಗದ ಕೊಟ್ಟರು. ಆಗ ನಾನು ಅರ್ಜಿ ಬರೆಯಲು ಪ್ರಾರಂಭಿಸಿದೆ. ಮುನ್ಸೀಫರು ಅಲ್ಲಿದ್ದ ವಕೀಲರಿಗೆ ನಿಮ್ಮ ಒಬ್ಬ ವಕೀಲರು ಬಂದಿದ್ದಾರೆ ನೀವು ಅವರಿಗೆ ಯೋಗ್ಯ ವಿಚಾರ ಹೇಳಿರಿ ಎಂದರು. ಆಗ ಪೋಲೀಸರ ಎಲ್ಲ ಅತ್ಯಾಚಾರವನ್ನು ಬರೆದು ನನ್ನನ್ನು ಜಾಮೀನಿನ ಮೇಲೆ ಬಿಡಬೇಕೆಂದು ಬರೆದುಕೊಟ್ಟು, ಅರ್ಜಿ ಕೊಟ್ಟ ತಕ್ಷಣವೇ ಮುನ್ಸೀಫರು ಎರಡು ಸಾವಿರ ರೂಪಾಯಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದರು. ಕೂಡಲೇ ವಕೀಲರಾದ ಒಬ್ಬ ಪ್ರಸಿದ್ಧ ಗೌಡರು ಜಾಮೀನಾಗಿ ನನ್ನನ್ನು ಬಿಡಿಸಿದರು. ಆಗ ಮುನ್ಸೀಫರು "ನೀವು ಭಯಪಡಬೇಡಿರಿ"- ಎಂದು ಹೇಳಿ ನನ್ನನ್ನು ಮನೆಗೆ ಮುಟ್ಟಿಸಲು ಒಬ್ಬ ಪೋಲೀಸ್ ಜವಾನನನ್ನು ಮತ್ತು ಒಬ್ಬ ಸಿವಿಲ್ ಕೋರ್ಟಿನ ಜವಾನನ ಸಂಗಡ ಶ್ರೀಮುಧೋಳ ಕಿಶನ್ನರಾಯರ ಮನೆಗೆ ಕಳುಹಿಸಿಕೊಟ್ಟರು.

ದಾರಿಯಲ್ಲಿ ರಜಾಕಾರರ ಹಾವಳಿ ಬಹಳವಿತ್ತು. "ಈ ಹೊತ್ತು ಒಬ್ಬ ಬ್ರಾಹ್ಮಣ

ವಕೀಲನನ್ನು ಸೆರೆ ಹಿಡಿದು ಜೈಲಿಗೆ ಕಳುಹಿಸಲಾಯ್ತು"- ಎಂದು ಕೂಗುತ್ತಾ ನಡೆದಿದ್ದರು. ಆಗ ಸುರಕ್ಷಿತವಾಗಿ ಮನೆ ಸೇರಿದೆ. ಮುಧೋಳ ಕಿಶನ್ನರಾಯರು ಎಂಟು ಹತ್ತು ಜನ ಬ್ರಾಹ್ಮಣರಿಗೆ ಸುಖಭೋಜನ ಮಾಡಿಸಿದ್ದರು. ಬ್ರಾಹ್ಮಣ ಭೋಜನ ಮುಗಿದಿತ್ತು. ಆಗ ನಾನು ಎಲ್ಲ ಬ್ರಾಹ್ಮಣರ ಪಾದಗಳಿಗೆರಗಿ ಯೋಗ್ಯ ದಕ್ಷಿಣೆಯನ್ನು ಕೊಟ್ಟು ಬ್ರಾಹ್ಮಣರಿಂದ ಆಶೀರ್ವಾದ ತೆಗೆದುಕೊಂಡೆ. ಮನೆಯವರೂ, ನಾನೂ ಶ್ರೀ ಗುರುಪ್ರಾಣೇಶದಾಸರ ಪ್ರಸಾದವನ್ನು ತೆಗೆದುಕೊಂಡು ಆನಂದ ದಿಂದ ಇದ್ದೆವು. ಅಂದು ರಾತ್ರಿಯೇ ಶ್ರೀ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆಯ ಪುಸ್ತಕವನ್ನು ತರಿಸಿ ಪಾರಾಯಣ ಪ್ರಾರಂಭ ಮಾಡಿದೆ, ರಾತ್ರಿ ಪೋಲೀಸರ ಮೇಲಧಿಕಾರಿಗಳಿಗೆ ಮತ್ತು ಕೋರ್ಟಿನ ಮೇಲಧಿಕಾರಿಗಳಿಗೆ ಅತ್ಯಾಚಾರ ಮಾಡಿದ ಸಂಗತಿಯನ್ನು ಬರೆದೆ. ಅಲ್ಲಿಯವರು ಕೊಪ್ಪಾ ಮೊಕ್ಕಾಂನಲ್ಲಿ ರಿಜಿಸ್ಟರ್ ಮಾಡಬೇಡಿ ಎನ್ನಲು ಮರುದಿನ ಮುಂಜಾನೆ ಬಸ್ಸಿನಲ್ಲಿ ಲಿಂಗಸೂಗೂರಿಗೆ ಬಂದು ಉತ್ತರಾರಾಧನೆ ಮುಗಿಸಿಕೊಂಡು ದಾಸರನ್ನು ಪ್ರಾರ್ಥಿಸಿದೆ. ಮುಂದೆ ನನ್ನ ಮೇಲೆ ಖಟ್ಲೆ ಹಾಕಲು ಮೂರು ನಾಲ್ಕು ತಿಂಗಳ ಅವಧಿ ಮಾಡಿ ನಾಲ್ಕೈದು ಸಲ ತಿರುಗಾಡಿಸಿದರು.

ಅಷ್ಟರಲ್ಲಿ ನನ್ನ ಮೈಯಲ್ಲಿ ಆಲಸ್ಯವಾಯ್ತು. ಈ ಅವಧಿಯಲ್ಲಿ ಪೋಲೀಸ್ ಅಧಿಕಾರಿ ಗಳು ಸಬ್ ಇನ್ಸ್‌ಪೆಕ್ಟರ್‌ರವರಿಗೆ ಡಿಗ್ರೇಡ್ ಮಾಡಿ ವರ್ಗ ಮಾಡಿದರು. ಎರಡನೆಯ ಕಡೆ ಆತನ ಮೇಲೆ ದೊಡ್ಡ ಖಟ್ಲೆ ಹಾಕಿದರು. ಆರು ತಿಂಗಳ ಮೇಲೆ ನನ್ನ ಮೇಲೆ ಹಾಕಿದ ಖಟ್ಲೆ ಐ.ಜಿ.ಜಿ.ಅಪ್ಪಣೆ ಯಂತೆ ವಾಪಸು ತೆಗೆದುಕೊಂಡರು. ನನಗೆ ತಿರುಗಾಡುವುದರಿಂದ ಬಹುಧನ ಖರ್ಚಾಯ್ತು. ಮೈಯಲ್ಲಿ ನಿತ್ರಾಣವಾಗಿ ಬೆವರು ರೋಗ ಪ್ರಾರಂಭವಾಯ್ತು. ಆದರೂ ವೆಂಕಟೇಶನ ಮಹಾತ್ಮೆ ಪಾರಾಯಣ ಮಾಡುತ್ತಲೇ ಇದ್ದೆ.

ಹೀಗೆ ಒಂದು ವರ್ಷ ಕಳೆಯಲು ಒಂದು ದಿನ ರಾತ್ರಿ ಲಿಂಗಸೂಗೂರಿನ ಮನೆಯಲ್ಲಿ ಮಲಗಿದಾಗ ಬೆಳಗಿನ ಝಾವದ ಸಮಯ ಒಂದು ವಿಶೇಷ ಸ್ವಪ್ನವಾಯಿತು. ಶ್ರೀ ವೆಂಕಟೇಶನು ಒಬ್ಬ ಸುಂದರ ಸ್ತ್ರೀವೇಶವನ್ನು ಧರಿಸಿ ನನ್ನ ಮೇಲೇರಿ ಬಂದು ಮೈಮುಟ್ಟಿ ರಮಣ ಮಾಡಿದನು. ಅನಂತರ ಐದು ಮುದ್ದಾದ ಕೂಸಿನ ರೂಪವುಳ್ಳ ಐದು ಭಗವದ್ರೂಪಗಳು ಆ ಸ್ತ್ರೀನಾರಿಯ ಮೇಲೆ ಕಾಣಿಸಿಕೊಂಡವು. ಆಗ ನನಗೆ ತರುಣನಿಗಾಗುವ ಯಾವ ವಿಕಾರವೂ ಆಗಲಿಲ್ಲ. ಐದು ಚಿಕ್ಕ ಬಾಲಕರ ವೇಶವನ್ನು ಧರಿಸಿದ ಶ್ರೀ ಅನಿರುದ್ಧಾದಿ ಭದವದ್ರೂಪದ ಕಿರೀಟಕರ್ಣ ಕುಂಡಲಾದಿ ಧರಿಸಿದ ಐದು ಶಿಶುಗಳನ್ನು ನನ್ನ ಕೈಗೆ ಕೊಟ್ಟು ಈ ಐದು ಕೂಸುಗಳೇ ನಿನಗೆ ಪುತ್ರರು. ಇವರೇ ನಿನ್ನನ್ನು ರಕ್ಷಣ ಮಾಡುವವರೆಂದು ಹೇಳಿ ಹೊರಟೇ ಬಿಟ್ಟರು. ಸ್ವಪ್ನದಿಂದ ಎಚ್ಚರವಾಯ್ತು. ಮುಖ ಪ್ರಕ್ಷಾಳನೆ ಮಾಡಿಕೊಂಡೆನು. ಧ್ಯಾನೋಪಾಸನೆ ಮಾಡಿ ಸ್ವಲ್ಪ ಮಲಗಿದೆ. ಪುನಃ ಅದೇ ಐದು ಶಿಶುಗಳು ಬಂದು ಬೆನ್ನು ಚಪ್ಪರಿಸಿ "ಏಳಪ್ಪ ಏಳು"- ಎಂದು ಎಚ್ಚರಗೊಳಿಸಿದವು. ಆಗ ನನ್ನ ತಲೆ ಬದಿಯಲ್ಲಿ ಇದ್ದ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮೆ ಪುಸ್ತಕವನ್ನು ತೆಗೆದು ನೋಡಲಿಕ್ಕೆ ಪ್ರಾರಂಭ ಮಾಡಿದೆ. ಮದ್ವೇಶನಾದ ವೆಂಕಟೇಶನು ಸುಳಾದಿಗಳನ್ನು ಬರೆಯಿಸಲಿಕ್ಕೆ ಪ್ರಾರಂಭಿಸಿದನು. ಒಂದು ಗಂಟೆಯೊಳಗಾಗಿ ಒಂದು ಸುಳಾದಿ ಪೂರ್ತಿ ಮಾಡಿದನು. ಇದರಂತೆ ಬೆಳಗಿನ ಜಾವದಲ್ಲಿ ಎಚ್ಚರವಿತ್ತು ಅನೇಕ ಗ್ರಂಥ ಉಪನಿಷತ್ತುಗಳ ವಾಕ್ಯಗಳನ್ನು ನೆನಪಿಗೆ ತಂದುಕೊಟ್ಟನು. ಎಲ್ಲ ದಾಸರಾಯರ ಅನುಗ್ರಹ.

ಚಿತ್ರಭಾನು ಸಂವತ್ಸರದ ಪುಷ್ಪನದಿ ಸಪ್ತಾಮೀ ನರಹರಿತೀರ್ಥರ ಪುಣ್ಯ ದಿನದಲ್ಲಿ ಸುಳಾದಿಗಳನ್ನು ಮುಗಿಸಿದರು. ಇದನ್ನು ಮಧ್ವೇಶನಿಗೆ ಅರ್ಪಣ ಮಾಡಿಸಿದರು. ಇದೇ ನನ್ನ ಭಾಗ್ಯ.

- (ಶ್ರೀ ಆದಿತ್ಯಪುರಾಣೋಕ್ತ ಶ್ರೀ ವೆಂಕಟೇಶ ಮಹಾತ್ಮೆ ಮ್- ಪು. ೭-೧೧)

೭

ಶ್ರೀನಿವಾಸನ ಪರಮ ಭಕ್ತರಾಗಿದ್ದ ಹನುಮಂತರಾಯರು ಹರಿದಾಸ ಭಾವವನ್ನು ಮೈಗೂಡಿಸಿಕೊಂಡು, ನಿಜವಾದ ಅರ್ಥದಲ್ಲಿ ಹರಿಶರಣರಾಗಿದ್ದರು. ಅವರು ತಮ್ಮ ಜೀವಿತ ಕಾರ್ಯವಾದ ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ತಮ್ಮದೆನ್ನುವ ಸಮಸ್ತವನ್ನು ದಾಸರ ಸೇವೆಗೆ ಮುಡುಪಾಗಿಟ್ಟು ಕೃಷ್ಣಾರ್ಪಣ ಬುದ್ಧಿಯಿಂದ ಈಶನಿಗೆ ಅರ್ಪಿಸಿ ಬಿಟ್ಟರು. ಈ ಕಾರ್ಯದಲ್ಲಿ ತಮ್ಮಿಂದಾದ ಅಲ್ಪ ಸೇವೆಯನ್ನು ಕುರಿತು ಅವರು ತಾವು ಹೊರಡಿಸುತ್ತಿದ್ದ ದ್ವೈಮಾಸಿಕ ಸಂಚಿಕೆಯಲ್ಲಿ ಹೀಗೆ ಹೇಳಿದ್ದಾರೆ.

"ಹರಿದಾಸ ಸಾಹಿತ್ಯವು ಬಹು ಪ್ರಾಚೀನವಾದುದು. ಹರಿದಾಸರು ಕನ್ನಡ ಮಾತೆಯ ಸೇವೆಗೈದು ಸಜ್ಜನರಾದ ಕರ್ಣಾಟಕದವರನ್ನು ಸನ್ಮಾರ್ಗಕ್ಕೆ ಹಚ್ಚಿದರು.ಈಗ ೬೦-೭೦ ವರ್ಷದ ಹಿಂದೆ ಹರಿದಾಸರ ಪದಗಳು, ಸುಳಾದಿಗಳು, ಅನೇಕ ಪವಾಡಗಳು ಸ್ತ್ರೀಪುರುಷರ ಮುಖೋದ್ಗತವಾಗಿದ್ದವು. ಬರೆದ ವಹಿಗಳೆಷ್ಟೋ ಇದ್ದವು, ಎಲ್ಲವೂ ಕಣ್ಮರೆಯಾದವು. ಲಿಂಗಸೂಗೂರು ದಾಸರ ಮನೆಯಲ್ಲಿ ಮೂರು ಮನೆತನದ ದಾಸ ಶಿಷ್ಯರ ಸಂಗ್ರಹಿತವಾದ ೬೦-೭೦ ಪುಸ್ತಕ ಗಂಟು ಇದ್ದವು. ಅದರಲ್ಲಿಯ ಸುಳಾದಿ ಪದ ನೋಡಿ ಪಾರಾಯಣ ಮಾಡಿದರೂ , ಒಂದರಲ್ಲಿ ಇದ್ದದ್ದು ಇನ್ನೊಂದರಲ್ಲಿ ಇರವವು - ನೆನಪು ಉಳಿಯಲಿಲ್ಲ. ಸುಮಾರು ೨ ಸಾವಿರ ಸುಳಾದಿ ನಮ್ಮಲ್ಲಿ ವೆಂಬ ಭಾವನೆ ಶ್ರೀ ಜಗನ್ನಾಥದಾಸರ ರಥವಾದ ಎರಡನೇ ವರುಷ ( ಪ್ರಮೋದೂತಸಂ) ಉಂಟಾಗಿತ್ತು. ಈಗ ೨೮ ವರ್ಷದ ಹಿಂದೆ ಒಬ್ಬ ತತ್ತ್ವಜ್ಞರಾದ ವಾಯಿ ಆಚಾರ್ಯರು ದಯಪಾಲಿಸಿ ನಮ್ಮಲ್ಲೆ ೪ ತಿಂಗಳು ಇದ್ದಾಗ್ಗೆ ಅವರ ಸೂಚನೆಯಿಂದ ಸುಳಾದಿಗಳ ವಿಮರ್ಶೆ ಪ್ರಾರಂಭವಾಗಿ, ೬೦-೭೦ ಗಂಟುಗಳಿದ್ದ ಪುಸ್ತಕಗಳಲ್ಲಿ ಬರೆದ ಪದ ಸುಳಾದಿ ಅಕ್ಷರಾನುಕ್ರಮಣಿಕೆ ಒಂದು ವರ್ಷ ನಡೆಯಿತು. ಸುಮಾರು ೪೫೦ ಸುಳಾದಿಗಳು, ಒಂದೂವರೆ ಸಾವಿರ ಪದಗಳು ನಮ್ಮಲ್ಲಿ ದೊರೆತವು. ಅದೇ ವರ್ಷ ಶ್ರೀ ಪುರಂದರದಾಸರ ಆರಾಧನೋತ್ಸವ ಕಾಲದಲ್ಲಿ ಎಲ್ಲವನ್ನು ಸಂಗ್ರಹಿಸಿ ಬರೆಯಬೇಕೆಂದು ನಿರ್ಧರಿಸಿ ಉತ್ಸವದಲ್ಲಿ ಪೂಜಾದಿಗಳನ್ನು ಮಾಡಿ ಬರೆಯಲು ಉಪಕ್ರಮಿಸುವ ವೇಳೆಗೆ ಒಬ್ಬ ಭಕ್ತನು ತಾನೇ ಬಂದು ಬರೆಯಲು ಸಹಾಯ ಮಾಡಿದನು. ಆತನಿಗೆ ವಿಶೇಷ ಕಾಯಿಲೆ. ಮೈಮೇಲೆ ಎಚ್ಚರಿಕೆ ಇಲ್ಲ. ಶ್ರೀ ವರದೇಂದ್ರರ ಪಾದೋಕದದಿಂದ ಜ್ವರಹರನಾರಸಿಂಹನು ಆ ಭಕ್ತನಿಗೆ ಆರೋಗ್ಯ ಭಾಗ್ಯವನ್ನಿತ್ತನು. ಹೀಗೆ ದೈವೀ ಸಹಾಯ ದೊರೆಯಿತು. ಮುಂದೆ ಒಂದು ತಿಂಗಳು ಉಭಯರೂ ಕೂಡಿ ಬರೆದು ಮುಗಿಸಿದೆವು."

ನಂತರ ಸಂಶೋಧನಕ್ಕಾಗಿ ಚಿಪ್ಪಗಿರಿ, ಮೈಸೂರು ಮುಂತಾದೆಡೆಗೆ ಹೋಗಿ ಕೆಲ ಪುಸ್ತಕ ಸಂಗ್ರಹಿಸಿ ಬರೆಯಲಾಯಿತು. ಶ್ರೀ ಗೋಪಾಲದಾಸರ ವಂಶಜರಲ್ಲಿಯ ಕೆಲವು ವಹಿಗಳು, ಇತರ

ಸ್ಥಳದಿಂದ ಕೆಲವು ವಹಿಗಳು ತಂದು ಬರೆದುಕೊಳ್ಳಲಾಯಿತು. ದೇಶ ದೇಶ ಹೊಕ್ಕು ಸಂಗ್ರಹಿಸಲು ಐದು ವರ್ಷ ಅವಧಿಯಾಯಿತು. ೪-೫ ಸಹಸ್ರ ರೂಪಾಯಿಗಳು ಬಾಳುವ, ಪಿತ್ರಾರ್ಜಿತ ೨ ಒಳ್ಳೆ ಹೊಲಗಳು, ಈ ಸತ್ಕಾರ್ಯದಲ್ಲಿ ವಿನಿಯೋಗವಾದವು. ಹಿರಿಯರ ಪುಣ್ಯ.

ಎಲ್ಲ ಪದಗಳು (೪೫೦೦) ಸುಳಾದಿ ೧೦೦೦, ಉಗಾಭೋಗ ೭೦೦, ಇತರ ಗದ್ಯ ಪದ್ಯ ಗ್ರಂಥಗಳು ಬೇರೆ ಕಾಗದದಲ್ಲಿ ಬರೆದು ವಿಷಯ ವಿಭಜನೆ ಮಾಡಲಾಯಿತು. ೧೨೦೦ ರಿಂದ ೧೫೦೦ ಪುಟದವರೆಗೆ ಇರುವ ಈ ಸುಮಾರು (ಸಾಹಿತ್ಯವು) ೩೨ ಪುಸ್ತಕಗಳಲ್ಲಿ ಒಗ್ಗೂಡಿಸಿ ಬೈಂಡ್ ಮಾಡಿಸಿ ಇಡಲಾಯಿತು. ಇಷ್ಟರಲ್ಲಿ ೧೫-೨೦ ಸಂಸ್ಕೃತದಲ್ಲಿರುವ ಒಳ್ಳೇ ಪುಸ್ತಕಗಳು ಸಂಗ್ರಹಿಸಲಾಯಿತು.

ಸುಮಧ್ವವಿಜಯ ೪ನೇ ಭಾಗ ಅಚ್ಚಿನ ಕೆಲಸ ಮುಗಿಯಿತು. ಕಾಗದದ ತೊಂದರೆಯಿಂದ ಪೂರ್ತಿಯಾಗಲಿಲ್ಲ. ೧೮೭೭ ಶಾ॥ ಶಕದಲ್ಲಿ ಕೆಲ ಭಕ್ತರಿಗೆ ಪ್ರೇರಿಸಿ, ಶ್ರೀ ವರದೇಂದ್ರ ಸಾಹಿತ್ಯ ಮಂಡಲವೆಂದು ದಾಸರು ಸ್ಥಾಪಿಸಿದರು. ನನ್ನನ್ನು ಸಂಚಾಲಕನೆಂದು ನಿಯಮಿಸಿದರು. ನಾನು ಹಿಂದೆ ೨೨ ಗ್ರಂಥಗಳು ಸ್ವಂತವಾಗಿ ಏಳೂವರೆ ಸಾವಿರ ರೂಪಾಯಿ ವೆಚ್ಚ ಮಾಡಿ ಪ್ರಕಟಿಸಿದ್ದಾಗಿತ್ತು. ಅದರಲ್ಲಿ ಉಳಿದ ೨೫೦೦ ಸಾವಿರ ಬೆಲೆಬಾಳುವ ಗ್ರಂಥಗಳೆಲ್ಲವೂ ಮಂಡಲಿಗೆ ಅರ್ಪಿತವಾದವು. ಹೀಗೆ ಸ್ವಂತವಾಗಿ ಹಿಂದೆ ೨೨ ಮಂಡಲದಿಂದ ಪ್ರಕಟನೆಗಳು, ವಿಷಯ ವಿಭಜನೆ ಮಾಡಿಟ್ಟ ಸುಳಾದಿಗಳು, ಕೆಲವು ಪದಗಳು, ಕೆಲವು ಗದ್ಯ ಗ್ರಂಥಗಳು ಈವರೆಗೆ ೩೨ ಗ್ರಂಥಗಳು ಅಚ್ಚಾಗಿದೆ. (೧೯೫೭) ಅಂದರೆ ಒಟ್ಟಿಗೆ ೫೪ ಗ್ರಂಥಗಳು ಹೊರಟವೆ. ಶ್ರೀ ವಿಜಯದಾಸರ ಈ ದೊರೆತ ಕೃತಿಗಳು ೫೨೬ ಸುಳಾದಿ, ೫೫೦ ಪದಗಳು, ೭೨ ಊಗಾಭೋಗಗಳು ಶ್ರೀ ವಿಜಯದಾಸರ ಸವಿಸ್ತಾರ ಚರಿತ್ರೆ ಪ್ರಕಟಿಸಿದೆ. ಶ್ರೀ ವಿಜಯದಾಸರ ೪ ಜನ ಶಿಷ್ಯ ಗೋಪಾಲದಾಸರರಾದಿಗಳ ಸುಳಾದಿಗಳು, ಶ್ರೀ ಗುರು ವಿಜಯವಿಠಲರವು, ಶ್ರೀ ಐ.ಜಿ.ಸ್ವಾಮಿಗಳ ವಾಸುದೇವ ವಿಠಲರ ಕೃತಿಗಳು, ಚರಿತ್ರೆ, ಶುದ್ಧವಾದ ಹರಿಕಥಾಮೃತಸಾರ ೧೦-೧೨ ಗದ್ಯ ಗ್ರಂಥಗಳು ಪ್ರಕಟಿಸಿದೆ. ಇದು ದಾಸರ ದಯ. ಹಿಂದೆ ಸ್ವಂತವಾಗಿ ೨೨ ಪುಸ್ತಕದಲ್ಲಿ ೭-೮ ಸಹಸ್ರ ರೂಪಾಯಿ, ಈಗ ಸುಮಾರು ೨೫ ಸಹಸ್ರ ರೂಪಾಯಿ. ಸುಮಾರು ೩೨ ಸಹಸ್ರ ರೂಪಾಯಿ ವೆಚ್ಚವಾಗಿ ೨೫ ಸಾವಿರ ರೂ ಬೆಲೆಬಾಳುವ ಪುಸ್ತಕಗಳು ಉಳಿದಿದೆ. ಇದೇ ಮಂಡಲದ ಮೂಲಧನ. ಇನ್ನು ಮುಂದೆ ೩೦೦ ಸುಳಾದಿಗಳು ಮೂರುವರೆ ನಾಲ್ಕು ಸಾವಿರ ಅಚ್ಚಾಗದಿದ್ದ ಪದಗಳು, ೬೫೦ ಉಗಾಭೋಗಗಳು, ೧೫ ಕಾವ್ಯ ಗ್ರಂಥಗಳು, ಎಷ್ಟೋ ಗದ್ಯ ಗ್ರಂಥಗಳು ಪ್ರಕಟವಾಗುವುವು ಇವೆ."

*-(ಶ್ರೀ ವರದೇಂದ್ರ ಕರ್ನಾಟಕ ಹರಿದಾಸ ಸಾಹಿತ್ಯ, ಸಂ. ೧. ಸಂ. ೨. ಪುಟ, ೮-೧೦)*

## ೮

ಗೋರೆಬಾಳ ಹನುಮಂತರಾಯರ ಜೀವನ ಹೋರಾಟದ ಬದುಕಾಗಿತ್ತು. ಅವರು ಜೀವನದಲ್ಲಿ ಒಂದು ನಿಶ್ಚಿತ ಧ್ಯೇಯವನ್ನು ಇರಿಸಿಕೊಂಡು, ಈ ಧ್ಯೇಯವನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನದಲ್ಲಿ ಜೀವನವನ್ನು ಧಾರೆ ಎರೆದ ಒಬ್ಬ ಹುತಾತ್ಮ. ಅವರಲ್ಲಿ ಮಹಾ ಪುರುಷನ ಲಕ್ಷಣಗಳಿದ್ದವು. ಕಾರ್ಯ ಸಾಧನೆಯಲ್ಲಿ ಸಿದ್ಧಿಯನ್ನು ಕುರಿತು ಅವರೆಂದೂ ಯೋಚಿಸುತ್ತಿರಲಿಲ್ಲ.

ತಮ್ಮನ್ನು ಭಗವಂತನು ಒಂದು ಮಹಾಕಾರ್ಯಕ್ಕೆ ಸಾಧನ ಮಾಡಿಕೊಂಡಿರುವನೆಂದೂ, ತಾವು ಈ ಭಗವತ್ಕಾರ್ಯ ಸಾಧಕರಾಗುವುದರಲ್ಲಿ ತಮ್ಮ ಜೀವಿತದ ಸಿದ್ಧಿಯು ಇರುವುದೆಂದೂ ತಿಳಿದಿದ್ದರು. ಹೀಗಾಗಿ ಹನುಮಂತರಾಯರು ಹರಿದಾಸ ಸಾಹಿತ್ಯದ ಸಂಗ್ರಹಣೆ, ಪ್ರಕಟಣೆ ಮತ್ತು ಪ್ರಚಾರ ಕಾರ್ಯಕ್ಕೆ ತಮ್ಮನ್ನು ತೆತ್ತುಕೊಂಡು, ಜೀವನವನ್ನು ಸಾರ್ಥಕಗೊಳಿಸಿಕೊಂಡರು.

ಈ ಕಾರ್ಯಕ್ಕಾಗಿ ಅವರು ಮಾಡಿದ ತ್ಯಾಗ ಅಲ್ಪವೇನಲ್ಲ. ಅತ್ಯಂತ ಲಾಭದಾಯಕ ವಾಗಿದ್ದ ತಮ್ಮ ವಕೀಲಿಯನ್ನು ಬಿಟ್ಟು ಕೊಡಬೇಕಾಯಿತು. ಸಂಪದ್ಭರಿತವಾಗಿದ್ದ ಭೂಮಿಗಳನ್ನು - ಹೊಲಗಳನ್ನು ಮಾರಬೇಕಾಗಿ ಬಂದಿತ್ತು. ಕೈಲಿದ್ದ ಹಣ ವೆಚ್ಚವಾಗಿ, ಗ್ರಂಥ ಪ್ರಕಟಣೆಗಾಗಿ ಸಾಲಗಾರರಾಗಬೇಕಾಯಿತು. ಎಲ್ಲ ಕೈಬಿಟ್ಟ ಮೇಲೆ ಅವರು ಸುಧಾಮರಾದರು; ಅನೇಕ ವ್ಯಾಧಿಗಳು ಅವರ ಜೀವವನ್ನು ದಣಿಸಿ, ಸೊರಗಿಸಿದವು. ಕೊನೆಯ ದಿನಗಳಲ್ಲಿ ಅವರನ್ನು ಪಾರ್ಶ್ವಘಾತ (ಪೆರೆಲಿಸಸ್) ಭೀಷ್ಮರಂತಿದ್ದ ಅವರನ್ನು ಶರಶಯ್ಯೆಗೆ ನೂಕಿತು. ಅದನ್ನು ಧೈರ್ಯವಾಗಿ ಎದುರಿಸಿದರು. ತಮ್ಮ ಹೋರಾಟವನ್ನು ಹಾಸಿಗೆಯ ಮೇಲಿಂದಲೇ ನಡೆಸಿದರು. ಕಡೆಗಾಲದಲ್ಲಿ ಸಾಯುವ ಮೊದಲು ಎರಡು ವರ್ಷಗಳು - ಅವರ ಧರ್ಮಪತ್ನಿಯೂ ತೀರಿಕೊಂಡಳು. ಇದ್ದ ಒಂದು ಅವಲಂಬನವೂ ಅವರಿಗೆ ತಪ್ಪಿದಂತಾಯಿತು. ಇಂಥ ಸ್ಥಿತಿಯಲ್ಲೂ ಹನುಮಂತರಾಯರು ತಮ್ಮ ಪಾಲಿಗೆ ಭಗವಂತನು ನೀಡಿದ್ದ ಕರ್ತವ್ಯ-ಹರಿದಾಸ ಸಾಹಿತ್ಯದ ಪ್ರಚಾರ ಕಾರ್ಯವನ್ನು ಮಾತ್ರ ಮರೆಯದೆ, ದಾಸರಾಯರ ಚಿಂತನೆಯಲ್ಲೇ ಕಣ್ಮುಚ್ಚಿಕೊಂಡರು. ಶ್ರೀಹರಿಗೆ ತಮ್ಮ ಬಾಳಪುಷ್ಪವನ್ನು ನಿಷ್ಕಾಮ ಸೇವೆಯಲ್ಲಿ ಅರ್ಪಿಸಿದ ಮಹಾ ಸಾಧಕವರೇಣ್ಯರು. ಅವರು ಅಕ್ಷರಶಃ ಹರಿದಾಸರಾಗಿದ್ದರು. ಹರಿದಾಸ ಮನೆತನದಲ್ಲಿ ಹುಟ್ಟಿ, ಹರಿದಾಸರಂತೆ ನಿಷ್ಕಾಂಚನ ಯೋಗಿಯಾಗಿ, ಭಗವತ್ಕಾರ್ಯ ಸಾಧಕರಾಗಿ ಬಾಳಿದವರು ಗೋರೆಬಾಳು ಹನುಮಂತರಾಯರು.

ಹನುಮಂತರಾಯರು ತಾವು ಲಾಭದಾಯಕವಾದ ವಕೀಲಿವೃತ್ತಿ ಬಿಡಲು ಕಾರಣವಾದ ಒಂದು ಸಂದರ್ಭವನ್ನು ಶ್ರೀ ಕಂಠೀರಾಯರು ತಮ್ಮ ಒಂದು ಲೇಖನದಲ್ಲಿ ಸ್ಮರಿಸಿಕೊಂಡಿದ್ದಾರೆ.

ಹನುಮಂತರಾಯರಿಗೆ ಸ್ವಾಮೀರಾಯರು ಎಲ್ಲ ರೀತಿಯಿಂದ ಗುರುಗಳಾಗಿದ್ದರು. ಪ್ರಾಣೇಶದಾಸರ ದೌಹಿತ್ರ ಸಂತತಿಗೆ ಸೇರಿದ್ದು, ಮಹಾ ಮೇಧಾವಿಗಳೆನಿಸಿದ್ದ ವಕೀಲರಾಗಿದ್ದರು. ಅವರಿಗೆ ಕನ್ನಡ, ಉರ್ದು, ಪಾರಸಿ ಮತ್ತು ಮರಾಠಿ, ಇಂಗ್ಲೀಷ್ ಭಾಷೆಗಳು ಚೆನ್ನಾಗಿ ಬರುತ್ತಿದ್ದವು. ಅವರು ಕೋಸಗಿ ಸ್ವಾಮಿರಾಯಾಚಾರ್ಯರಿಂದ ಅಂಕಿತ ಪಡೆದು ವರದೇಶ ವಿಠಲದಾಸರಾದ ಮೇಲೆ, ಅವರ ಮೇಲ್ಪಂಕ್ತಿಯಲ್ಲೇ ಗೋರೆಬಾಳರು ನಡೆದರು.

ಸ್ವಾಮಿರಾಯರು ಹನುಮಂತರರಾಯರನ್ನು ಓದಿಸಿ, ಅನಂತರ ತಮ್ಮ ಬಳಿ ಇರಿಸಿಕೊಂಡು ವಕೀಲ ಅಭ್ಯಾಸ ಮಾಡಿಸಿದ್ದರು. ಅತ್ಯಲ್ಪ ಕಾಲದಲ್ಲಿ ಕ್ರಿಮಿನಲ್ ವಕೀಲರೆಂದು ಹನುಮಂತರಾಯರು ಹಣವನ್ನೂ, ಕೀರ್ತಿಯನ್ನೂ ಗಳಿಸಿ, ಆದ್ಯ ವಕೀಲರ ಸಾಲಿಗೆ ಸೇರಿದರು. ವೃತ್ತಿಯಲ್ಲಿ ದೊಡ್ಡ ಹೆಸರುಗಳಿಸಿ, ಲಿಂಗಸೂಗೂರಿನಲ್ಲಿ ತಮ್ಮ ಸ್ವರೂಪೋದ್ಧಾರಕರಾದ ಶ್ರೀ ವರದೇಂದ್ರತೀರ್ಥರ ಸನ್ನಿಧಿಯಲ್ಲೇ ಭವ್ಯವಾದ, ಅಚ್ಚುಕಟ್ಟಾದ ಮನೆಯನ್ನು ಕಟ್ಟಿಸಿದರು. ಅವರು ನ್ಯಾಯಾಲಯದಲ್ಲಿ ಪಾರಸಿ ಮತ್ತು ಉರ್ದುಗಳಲ್ಲಿ ವಾಕಾಲತ್ತು ಮಾಡುವ ವೈಖರಿಯನ್ನು ನೋಡಿ,

ಮುಸಲ್ಮಾನ ಮುಲ್ಲಾಗಳೂ, ನ್ಯಾಯಧೀಶರೂ, ಹಿರಿಯ ಅಧಿಕಾರಿಗಳೂ ಬೆರಗಾಗಿ ಕೇಳುತ್ತಿದ್ದರಂತೆ. ಅವರು ಹನುಮಂತರಾಯರನ್ನು ಬ್ರಾಹ್ಮಣ-ಮುಸ್ಲಿಮರೆಂದು ಗೌರವದಿಂದ ಕರೆಯುತ್ತಿದ್ದರಂತೆ. ಕೈತುಂಬ ಸಂಪಾದನೆ, ವೃತ್ತಿಯಲ್ಲಿ ಗೌರವ, ಅಧಿಕಾರಿಗಳಿಂದ ಮನ್ನಣೆ, ಆಶ್ರಿತರಿಂದ ಪೂಜೆ- ಸನ್ಮಾನಗಳು ಇದ್ದ ಆಸ್ಥಿತಿಯಲ್ಲಿ ಹನುಮಂತರಾಯರು ತಮ್ಮ ಲಾಭದಾಯಕ ವಕೀಲಿ ವೃತ್ತಿಯನ್ನು ತೊರೆದು ಹರಿದಾಸರ ನಿಷ್ಕಾಂಚನ ವೃತ್ತಿಯನ್ನು ಹಿಡಿದರು. ಈ ಘಟನೆ ಕಾರಣವಾದ ಸಂಗತಿಯನ್ನು ಮನಮುಟ್ಟುವಂತೆ ಭಾಷಾಂತರ ಇಲಾಖೆ ನಿವೃತ್ತ ನಿರ್ದೇಶಕರಾದ ಕಂಠೀರಾಯರು ಮಾರ್ಮಿಕವಾಗಿ ಬರೆದಿದ್ದಾರೆ.

"೧೯೪೨ರ ಸುಮಾರಿನಲ್ಲಿ ಭಾವಣೆ ಲಿಂಗಸೂಗೂರು ಮಾಧ್ಯಮಿಕ ಶಾಲೆಯಲ್ಲಿ ನಾನು ವಿದ್ಯಾರ್ಥಿಯಾಗಿದ್ದೆ. ಕೋರ್ಟಿನ ಮುಂದೆ ಹನುಮಂತರಾಯರ ಹಸಿರು ಬಣ್ಣದ ಜಟಕ ಗಾಡಿ ಕಂಡೊಡನೆಯೆ ಕಸಬಾ ಲಿಂಗಸೂಗೂರಿನಿಂದ ಎರಡು ಮೈಲು ದೂರವಿರುವ ಭಾವಣೆ ಲಿಂಗ ಸೂಗೂರಿಗೆ ಶಾಲೆಗೆ ಬರುತ್ತಿದ್ದ ನಾವೆಲ್ಲ ಓಡೋಡಿ ಅವರ ಗಾಡಿ ಸೇರಿಕೊಳ್ಳುತ್ತಿದ್ದೆವು. ತಮ್ಮ ಬಂಧು ವರ್ಗಕ್ಕೆ ಸೇರಿದ ಪ್ರೀತಿಯ ಮಕ್ಕಳಾದ ನಮ್ಮನ್ನೆಲ್ಲಾ ಅಕ್ಕರೆಯಿಂದ ಗಾಡಿಯಲ್ಲಿ ಸೇರಿಸಿ ಕೊಂಡು ಗ್ರಾಮಕ್ಕೆ ಕರೆದೊಯ್ಯುತ್ತಿದ್ದರು."

ಒಂದು ದಿನ ಹೀಗೆ ಹೋಗುತ್ತಿದ್ದಾಗ ಅವರು ಮಾತನಾಡುತ್ತಿದ್ದ ಧಾಟಿಯು ವಿಚಿತ್ರವಾಗಿತ್ತು.

"ನನ್ನ ಪಕ್ಷದ ಒಬ್ಬ ಕಕ್ಷಿದಾರನು ವಿರುದ್ಧ ಪಕ್ಷಕ್ಕೆ ಸೇರಿ ಸುಳ್ಳು ಸಾಕ್ಷಿ ನುಡಿದಿದ್ದಾನೆ. ಇದು ನಿಜವಾಗಿಯೂ ಹೇಯದ ಕೆಲಸ, ಮೋಸದ ಕೆಲಸ. ಇದರಿಂದ ನನಗೆ ಜುಗುಪ್ಸೆಯಾಗಿದೆ. ನಾನಿನ್ನು ಈ ವೃತ್ತಿಯನ್ನು ಬಿಟ್ಟು ಬಿಡುತ್ತೇನೆ "- ಎಂದು ಮುಂತಾಗಿ ಅವರು ಪಕ್ಕದಲ್ಲಿದ್ದ ಮತ್ತೊಬ್ಬ ವಕೀಲ ಸ್ನೇಹಿತರಿಗೆ ಹೇಳುತ್ತಿದ್ದರು. ಅವರು ನುಡಿದಂತೆ ನಡೆದರೆಂದೇ ಕಾಣುತ್ತದೆ. ಅವರ ವಕೀಲಿ ವೃತ್ತಿ ಕ್ರಮೇಣ ಕಡಿಮೆಯಾಗುತ್ತ ಬಂದಿತು.

ಅಲ್ಲಿಂದಾಚೆಗೆ ಅವರು ದ್ವೈತ ಸಿದ್ಧಾಂತಗಳ ಅವಲೋಕನ, ಪ್ರಮೇಯಗಳ ಅಧ್ಯಯನ, ದಾಸ ಸಾಹಿತ್ಯದ ಸಂಶೋಧನ ಮತ್ತು ಪ್ರಕಟಣೆ ಇವುಗಳಲ್ಲಿಯೇ ತಮ್ಮ ಕಾಲ ಕಳೆಯ ಹತ್ತಿದರು.

ಹೀಗೆ ಭಗವಂತನು ಹನುಮಂತರಾಯರನ್ನು ಭೋಗ ಜೀವನದಿಂದ ವೈರಾಗ್ಯ ಜೀವನದ ಕಡೆಗೆ ತಿರುಗಿಸಿದ್ದನು. ಅಷ್ಟು ಮಾತ್ರವಲ್ಲ, ಈ ಹಿಂದೆ ಆರಂಭದಲ್ಲಿ ನೋಡಿದ ಹರಿದಾಸರನ್ನು ಹಲವು ಪರಿಯಲ್ಲಿ ಭಂಗಪಡಿಸಿ ಕಾಡಿದಂತೆ ಹನುಮಂತರಾಯರನ್ನೂ ಕಾಡಿ ಕಡೆಗೆ ತನ್ನವನನ್ನಾಗಿ ಮಾಡಿಕೊಂಡಿದ್ದನು.

ಹನುಮಂತರಾಯರು ಹರಿದಾಸ ಸಾಹಿತ್ಯಕ್ಕೆ, ದಾಸರ ಸೇವೆಗೆ ತಮ್ಮನ್ನು ತಾವು ತೆತ್ತುಕೊಂಡ ಮೇಲೆ ಅವರ ಜೀವನ ವಿಧಾನವೇ ಬದಲಾವಣೆಯಾಯಿತು. ಅವರು ವ್ಯಾಸ ಹರಿದಾಸ ಸಾಹಿತ್ಯಗಳ ಅಧ್ಯಯನ ಚಿಂತನ ಮಂಥನಗಳಲ್ಲಿ ಆಳವಾಗಿ ಮುಳುಗಿ, ಸುಂದರ ವಿಠಲಾಂಕಿತ ಹರಿದಾಸರಾಗಿ ಮಾರ್ಪಟ್ಟರು. ಈ ಘಟನೆಗೆ ಸರಿಸಾಟಿಯಾದ ಇನ್ನೊಂದು ಘಟನೆ ಎಂದರೆ ಶ್ರೀನಿವಾಸ ನಾಯಕರಾಗಿದ್ದವರು ಪುರಂದರದಾಸರಾಗಿ ಮಾರ್ಪಟ್ಟದ್ದು. ಇಬ್ಬರಿಗೂ ಅದೆಷ್ಟು ಸಾಮ್ಯ?

ಹನುಮಂತರಾಯರು ವೈರಾಗ್ಯ ಹೊಂದಿದರೂ, ಜಗತ್ತನ್ನು ಭ್ರಮೆ ಎಂದು ತಿಳಿದು ಅದ್ವೈತಿಗಳಂತೆ ಪಲಾಯನ ವಾದಿಗಳಾಗಲಿಲ್ಲ. ದಾಸರಾಯರ ಸೂತ್ರ ವಾಕ್ಯದಂತೆ ಬದುಕಿನಲ್ಲಿ ಈಜಿದರು; ಇದ್ದು ಜಯಿಸಿದರು. ಸತ್ಯವಾದ ಜಗತ್ತಿನ ಸವಾಲುಗಳನ್ನು ಧೈರ್ಯದಿಂದ ಎದುರಿಸಿ, ಹೋರಾಡಿದರು; ಹೋರಾಡುತ್ತಲೇ, ತಮ್ಮ ಪಾಲಿನ ಕರ್ತವ್ಯ ಸಾಧನೆಯಲ್ಲಿ ಹಿಮ್ಮೆಟ್ಟದೆ ಕಡೆ ಉಸಿರನ್ನು ಬಿಟ್ಟರು.

ಹರಿದಾಸ ದೀಕ್ಷೆಯನ್ನು ಹಿಡಿದ ಮಾತ್ರಕ್ಕೆ ಹನುಮಂತರಾಯರು ಲೌಕಿಕ ಜೀವನದಿಂದ ಪರಾಙ್ಮುಖರಾಗಲಿಲ್ಲ. ದೇಶದ ಪರಿಸ್ಥಿತಿ, ಒತ್ತಡಗಳಿಂದ ದೂರವಾಗಿ ಉಳಿಯಲಿಲ್ಲ. ಅವರು ರಾಷ್ಟ್ರ ಜೀವನದ ಪ್ರವಾಹದೊಂದಿಗೇ ಈಜಿ ಸಾಗಿದರು. ಅವರು ಲೌಕಿಕ ವ್ಯಾಪಾರಗಳಲ್ಲಿ ತೊಡಗಿಯೂ ಸಂತರಾಗಿದ್ದರು; ಜನತಾ ಸೇವೆಯಲ್ಲಿ ಜನಾರ್ಧನನನ್ನು ಕಂಡಿದ್ದರು. ಅಂತಲೇ ಅವರು ತಮ್ಮ ಸಮಕಾಲೀನ ಜನರಂತೆ ಭಾರತದಲ್ಲಿ ಇತರ ಕಡೆ ನಡೆದಿದ್ದ ಸ್ವಾತಂತ್ರ್ಯದ ಹೋರಾಟದ ಕಣಕ್ಕೆ ಇಳಿದಿದ್ದರು. ಅವರು ಲಿಂಗಸೂಗೂರಿನಲ್ಲಿ ಇದ್ದುಕೊಂಡೇ ಗಾಂಧಿ ಚಳುವಳಿ-ಅಸಹಕಾರ ಚಳುವಳಿ, ಸತ್ಯಾಗ್ರಹಗಳಲ್ಲಿ ಸಕ್ರಿಯವಾಗಿ ಪಾತ್ರವಹಿಸಿದ್ದರು. ಲಿಂಗಸೂಗೂರಿನಲ್ಲಿ ಹಿರಿಯ ಜನಪ್ರಿಯ ನಾಯಕ ವೆಂಕಟರಾಯರ ಜತೆಗೆ ನಿಂತು ಊರಿನಲ್ಲಿ ಹರಿಜನ ಬಾಲಕರ ಸಲುವಾಗಿ ಒಂದು ಶಾಲೆಯನ್ನು ನಡೆಸಿದರು. ಈ ಗಾಂಧಿ ವೆಂಕಟರಾಯರ ಜತೆಯಲ್ಲಿ ಖಾದೀ ಪ್ರಚಾರ ಕಾರ್ಯ, ಮದ್ಯಪಾನ ನಿಷೇಧ ಚಳುವಳಿಗಳಲ್ಲಿ ಪಾಲುಗೊಂಡು ದುಡಿದರು. ಸ್ವತಃ ಹನುಮಂತರಾಯರು ಖಾದಿ ಪ್ರೇಮಿಗಳು ; ಅವರು ಖಾದಿ ಧಾರಿಗಳಾಗಿದ್ದರು. ಹೀಗೆ ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮಿಂದಾದ ರೀತಿಯಲ್ಲಿ ದುಡಿದವರು ಅವರು.

ಹನುಮಂತರಾಯರಿಗೆ ಏಳು ಗ್ರಾಮಗಳ ಕುಲಕರಣಿಕೆ ಮತ್ತು ನೂರಾರು ಎಕರೆಗಳಷ್ಟು ಹೊಲಗಳು ಇದ್ದವು. ಇವನ್ನೆಲ್ಲ ಅವರು ತಮ್ಮ ಜೀವಿತದ ಕಾರ್ಯವಾದ ಹರಿದಾಸ ಸಾಹಿತ್ಯದ ಪ್ರವರ್ತನೆಗಾಗಿ ಕೃಷ್ಣಾರ್ಪಣ ಮಾಡಿದರು. ಅವರಿಗೆ ತಪಸ್ಸು ಬೇರೆಯಲ್ಲ; ಶ್ರೀಹರಿಯನ್ನು ಒಲಿಸಿ ಕೊಳ್ಳಲು ಮಾಡುವ ದಾಸ ಸಾಹಿತ್ಯದ ಪ್ರಚಾರ ಕಾರ್ಯ ಬೇರೆಯಲ್ಲ. ಅವರ ಜೀವನವೇ ಒಂದು ತಪಸ್ಸು-ವಾಙ್ಮಯ ತಪಸ್ಸಾಗಿತ್ತು.

ಕನ್ನಡ ಸಾಹಿತ್ಯದಲ್ಲಿ ಹನುಮಂತರಾಯರಿಗೆ ಅಪಾರವಾದ ಒಲವು, ಆಸಕ್ತಿಗಳಿದ್ದವು. ಅವರಿಗೆ ಮೈಸೂರು ವಿಶ್ವವಿದ್ಯಾನಿಲಯ, ಕನ್ನಡ ಸಾಹಿತ್ಯ ಪರಿಷತ್ತು ಮುಂತಾದ ವಿದ್ವನ್ಮಂಡಲಗಳ ವಿದ್ವಾಂಸರು, ಸಾಹಿತಿಗಳ ಪರಿಚಯವಿತ್ತು ; ಸಂಪರ್ಕವಿತ್ತು. ಅಲ್ಲಿಂದ ಹೊರಬೀಳುತ್ತಿದ್ದ ಸಾಹಿತ್ಯ ಗ್ರಂಥಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತಿದ್ದರು. ಒಮ್ಮೆ ಹೊಸಗನ್ನಡ ಆಚಾರ್ಯ ಪುರುಷರಾದ ಬಿ.ಎಂ.ಶ್ರೀಕಂಠಯ್ಯನವರು ಲಿಂಗಸೂಗೂರು ಮಾರ್ಗವಾಗಿ ಹೋಗುತ್ತಿದ್ದ ಸಂಗತಿಯನ್ನು ಪೂರ್ವಭಾವಿಯಾಗಿ ತಿಳಿದು ಅವರನ್ನು ನಗರದ ಗಣ್ಯರ ಒಂದು ಸಭೆ ಏರ್ಪಡಿಸಿ ಸ್ವಾಗತಿಸಿ, ಗೌರವಿಸಿದರಂತೆ. ಈ ಸಮಯದಲ್ಲಿ ಒಂದು ಸ್ವಾಗತ ಪದ್ಯವನ್ನು ಹನುಮಂತರಾಯರೇ ರಚಿಸಿ, ಅರ್ಪಿಸಿದರಂತೆ. ಪದ್ಯದ ಪ್ರತಿಯೊಂದು ಸಾಲಿನ ಎರಡನೆಯ ಅಕ್ಷರ ಪ್ರಾಸಾಕ್ಷರ-ಓದಿದರೆ, "ಬಿ.ಎಂ.ಶ್ರೀ. ಅವರಿಗೆ ನಮನಗಳು"- ಎಂದು ಆಗುತ್ತಿತ್ತು !

ಹನುಮಂತರಾಯರು ಒಂಟಿ ಸಲಗನಂತೆ ಸಂಕಲ್ಪಿಸಿದ ಕಾರ್ಯವನ್ನು ಮಾಡಿ ಮುಗಿಸು ತ್ತಿದ್ದರು. ಅವರಿಗೆ ತಮ್ಮ ಕಾರ್ಯದಲ್ಲಿ ಹನುಗುಂದದ ಜೋಶಿ ಹನುಮಂತಾಚಾರ್ಯ, ಉಸ್ಮಾನಿಯಾ ವಿಶ್ವ ವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾದ ಡಿ.ಕೆ.ಭೀಮಸೇನರಾಯರು, ಪ್ರಖ್ಯಾತ ಸಾಹಿತಿ ಮಾನ್ವಿ ನರಸಿಂಹರಾಯರು ಮಿತ್ರರಾಗಿದ್ದು, ಅವರ ಸಲಹೆ ಸಮಾಲೋಚನೆ ದೊರಕುತ್ತಿತ್ತು.

ಹನುಮಂತರಾಯರಿಂದ ಲಿಂಗಸೂಗೂರಿನ ಹನುಮ ಭೀಮ ಮಧ್ವಾವತಾರದ ಅಪೂರ್ವ ದೇವ ಮಂದಿರದಲ್ಲಿನ ಆರಾಧ್ಯಮೂರ್ತಿ ಕುಪ್ಪೀ ಮಾರುತಿಯ ಸೇವೆಗೆ ಸೇರಿದ ಕಾಣಿಕೆ ಹಿರಿಯದು. ಅವರು ಸಹಸ್ರಾರು ರೂಪಾಯಿಗಳು ವೆಚ್ಚ ಮಾಡಿ, ತಂತ್ರಸಾರೋಕ್ತ ಶಿಲ್ಪ ಆಕೃತಿಗಳನ್ನು ಮರದಲ್ಲಿ ಕೆತ್ತಿಸಿ ಭವ್ಯವೂ ಸುಂದರವೂ ಆದ ಒಂದು ರಥವನ್ನು ಮಾಡಿಸಿಕೊಟ್ಟರು. ಇದರಂತೆ ಮಾನ್ವಿಯ ಶ್ರೀ ಜಗನ್ನಾಥದಾಸರ ದೇವಾಲಯಕ್ಕೂ ಪುಟ್ಟದಾದ ಒಂದು ಸುಂದರ ರಥವನ್ನು ತಂತ್ರಸಾರೋಕ್ತವಾಗಿ ಮಾಡಿಸಿಕೊಟ್ಟರು. ಈ ಸಂದರ್ಭದಲ್ಲಿ ದೇಹವೆಂಬ ರಥಕ್ಕೆ ಅಭಿಮಾನಿಯಾದ ಮಹಾ ರುದ್ರದೇವರನ್ನು ಸಾರಥಿ ಮಾಡಿದ್ದಕ್ಕೆ ಅನ್ಯಮತೀಯರು ವಿವಾದ ಹುಟ್ಟಿಸಿ ಅವರ ವಿರುದ್ಧ ಕೋರ್ಟಿನಲ್ಲಿ ಕಟ್ಲೆ ನಡೆಸಿದರು. ಅದನ್ನು ಹೈಕೋರ್ಟಿನವರೆಗೆ ಒಯ್ದು, ನ್ಯಾಯ ಪಡೆಯುವುದರಲ್ಲಿ ಹನುಮಂತ ರಾಯರು ಯಶಸ್ವಿಯಾದರು. ಇದೊಂದು ಅವರ ಲೌಕಿಕ ಸಾಧನೆ ಎನ್ನಬಹುದು.

ಈ ದೇವತಾ ಕಾರ್ಯಗಳ, ರಥೋತ್ಸವಗಳ ಸಂದರ್ಭದಲ್ಲಿ ಹನುಮಂತರಾಯರು ನಾಡಿನ ಬೇರೆ ಬೇರೆ ಭಾಗಗಳಿಂದ ಸಾಹಿತ್ಯ, ಸಂಗೀತ, ನಾಟ್ಯ ನೃತ್ಯ, ಜನಪದ ಮನರಂಜನಾ ಕಲೆಗಳಲ್ಲಿ ನಿಷ್ಣಾತರಾದ ಕಲಾವಿದರನ್ನು ಕರೆಸಿಕೊಂಡು ಅವರನ್ನು ಆದರಿಸಿ ಸತ್ಕರಿಸುತ್ತಿದ್ದರು. ಅವರ ಕಲೆಯನ್ನು ತಮ್ಮ ಊರಿನ ಕಲಾಭಿಮಾನಿಗಳಿಗೆ ಪರಿಚಯ ಮಾಡಿಕೊಡುತ್ತಿದ್ದರು. ಆ ಸಮಯದಲ್ಲಿ ಹನುಮಂತ ರಾಯರು ಅವರ ಸೇವೆ, ಊಟ ಉಪಚಾರಗಳಿಗೆ ಟೊಂಕಕಟ್ಟಿ ನಿಲ್ಲುತ್ತಿದ್ದರು. ಇದು ಅವರ ಹಿರಿಮೆ.

ಹನುಮಂತರಾಯರಿಗೆ ಮಕ್ಕಳ ಮುಗ್ಧ ಆಸಕ್ತಿ ಇತ್ತು. ಹೀಗಾಗಿ ಅವರು ವಯಸ್ಸಾಗಿದ್ದರೂ ಈ ಮುಗ್ಧತೆಯನ್ನೂ, ಕುತೂಹಲವನ್ನೂ ಉಳಿಸಿಕೊಂಡು ಬಂದಿದ್ದರು. ಅವರಿಗೆ ಸಾಹಿತ್ಯ ಕಲೆ, ತತ್ತ್ವಜ್ಞಾನ, ಹರಿಕೀರ್ತನೆ, ಭಜನೆಗಳಲ್ಲಿ ಆಸಕ್ತಿ ಇದ್ದ ಮಾತು ಹಾಗಿರಲಿ, ಜನಪದ ಕಲೆಗಳಲ್ಲಿ ಅಷ್ಟೇ ಆಸಕ್ತಿ ಇತ್ತು.

ಊರಿಗೆ ಉತ್ತಮ ತಂತ್ರಜ್ಞಾನ, ಕಲಾಭಿಜ್ಞಾತೆಯ ಒಬ್ಬ ಜಾದುಗಾರ ಬರಲಿ, ಒಳ್ಳೆ ಹಾವಾಡಿಗ ಬರಲಿ, ನಾಟಕದವರು ಬರಲಿ-ಅವರನ್ನು ತಮ್ಮ ಅತಿಥಿಯಾಗಿ ಆಹ್ವಾನಿಸಿ, ಮನೆ ಮಂದಿ ಮಕ್ಕಳಿಗೆಲ್ಲ ಅವರ ಕಲೆಯನ್ನು ಪ್ರದರ್ಶಿಸಿ, ತಾವೂ ಆನಂದ ಪಡುತ್ತಿದ್ದರು. ದಕ್ಷಿಣಾದಿ, ಉತ್ತರಾದಿ ಸಂಗೀತಗಳೆಂದು ಭೇದವೆಣಿಸದೆ, ಎಲ್ಲ ಸಂಗೀತಗಾರರಿಗೆ ಉತ್ಸವಗಳಲ್ಲಿ ಅವಕಾಶ ಕಲ್ಪಿಸಿಕೊಟ್ಟು ಪ್ರೋತ್ಸಾಹಿಸುತ್ತಿದ್ದರು.

ಅವರು ಅಪಾರ ಧನವ್ಯಯ, ಕಷ್ಟ, ಸಹಿಷ್ಣತೆಗಳಿಂದ ಅಪೂರ್ವವಾದ ಹರಿದಾಸ ಸಾಹಿತ್ಯದ ಹಸ್ತ ಪ್ರತಿಗಳನ್ನು ಮೂಲೆ ಮೂಲೆಗಳಿಂದ ಸಂಗ್ರಹಿಸಿ, ಹಸ್ತ ಪ್ರತಿಗಳನ್ನು ಸಂಸ್ಕರಿಸಿ, ಶುದ್ಧಪ್ರತಿ ಮಾಡಿಸಿ ಇಡುತ್ತಿದ್ದರು. ಅಷ್ಟು ಮಾತ್ರವಲ್ಲ, ಗೋಪಾಲದಾಸರು, ಮುಂತಾದ

ಸುಪ್ರಸಿದ್ಧ ಹರಿದಾಸ ಕೃತಿ ಚಿತ್ರಗಳನ್ನು ಸಂಪಾದಿಸಿ, ಅವುಗಳ ಪ್ರತಿ ಮಾಡಿಸಿ, ಮುಂದಿನ ಜನಾಂಗಕ್ಕೆ ಕಾಯ್ದಿಟ್ಟರು. ಈ ಕಾರ್ಯದಲ್ಲಿ ಚಿತ್ರಕಲೆಯಲ್ಲಿ ಆಸಕ್ತಿ ಇದ್ದ ಕಂಠೀರಾಯರ ನೆರವನ್ನು ಪಡೆದರು. ಅವರು ತರುಣರಿಗೆ ತರುಣರಾಗಿದ್ದರು. ಯುವಕರನ್ನು ಪ್ರೋತ್ಸಾಹಿಸುವುದು ಅವರಿಗೆ ಚಟವಾಗಿ ಬೆಳೆದಿತ್ತು. ಇದಕ್ಕೆ ಜಾತಿ ಮತಗಳ ಕೃತಕ ಎಲ್ಲೆಗಳಿರಲಿಲ್ಲ. ಪ್ರತಿಭಾವಂತರು ಯಾರಿದ್ದರೂ ಸರಿ, ಎಲ್ಲಿದ್ದರೂ ಸರಿ ಅವರನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದ್ದರು. ಒಮ್ಮೆ ಇವರಿಂದ ಪ್ರೋತ್ಸಾಹ ಪಡೆದಿದ್ದ ಸಿದ್ಧಯ್ಯ ಪುರಾಣಿಕರ ಭೇಟಿಗೆ ಹನುಮಂತರಾಯರು ಕಂಠೀರಾಯರೊಡನೆ ಅವರ ವಿಧಾನಸಭಾ ಕಟ್ಟಡದ ಕಚೇರಿಗೆ ಹೋಗಿದ್ದಾಗ ಅವರು ಪೀಠದಿಂದ ಎದ್ದು ಬಂದು ಹನುಮಂತರಾಯರಿಗೆ ನಮಸ್ಕಾರ ಮಾಡಿ ಹೀಗೆಂದು ಹೇಳಿದರಂತೆ.

"ತಾವು ತಪಸ್ವಿಗಳು, ಋಷಿಗಳು, ಈ ವಯಸ್ಸಿನಲ್ಲಿ ತಾವೇಕೆ ಇಲ್ಲಿಯವರೆಗೆ ಬರುವ ಶ್ರಮ ವಹಿಸಿದಿರಿ. ತಿಳಿಸಿದ್ದರೆ ತಾವು ಇರುವಲ್ಲಿಗೆ ನಾವೇ ಬರುತ್ತಿದ್ದೆವಲ್ಲವೆ?"

ಹಿಂದೊಮ್ಮೆ ಅವರು ಲಿಂಗಸೂಗೂರಿಗೆ ಬಂದು ಕನ್ನಡದ ಉಪನ್ಯಾಸ ಮಾಡಿದಾಗ, ತಮ್ಮನ್ನು ಹನುಮಂತರಾಯರು ಆಶೀರ್ವದಿಸಿ, ಪ್ರೋತ್ಸಾಹ ನೀಡಿದ ಪ್ರಸಂಗವನ್ನು ಸ್ಮರಿಸಿ ಕೊಂಡರಂತೆ.

ಹನುಮಂತರಾಯರ ಜೀವನದಲ್ಲಿ ಕಾರ್ಯರೂಪಕ್ಕೆ ಬಾರದೆ ಹೋಗಿದ್ದ ಒಂದೇ ಕನಸೆಂದರೆ, ರಾಜ್ಯ ಮಟ್ಟದಲ್ಲಿ, ರಾಷ್ಟ್ರ ಮಟ್ಟದಲ್ಲಿ ಒಂದು ವ್ಯಾಸಹರಿದಾಸ ಸಮ್ಮೇಳನವನ್ನು ನಡೆಸಬೇಕೆಂಬುದು. ಇದಕ್ಕಾಗಿ ಅವರು ಪ್ರಯತ್ನ ನಡೆಸಿದ್ದರು. ಒಮ್ಮೆ ಸ್ವತಂತ್ರ್ಯ ಪೂರ್ವಕ ನೈಜಾಂ ಸರಕಾರದ ಅನುಮತಿಯನ್ನು ಈ ಕಾರ್ಯಕ್ಕಾಗಿ ದೊರಕಿಸಿಕೊಂಡು ಬಂದಿದ್ದರು. ಶ್ರೀ ಮಂತ್ರಾಲಯದ ಶ್ರೀಪಾದಂಗಳಾಗಿದ್ದ ಶ್ರೀ ಸುಯಮೀಂದ್ರತೀರ್ಥರೂ ಬರಲು ಒಪ್ಪಿಕೊಂಡರು. ಮಣೆದಾಳ ದೇಸಾಯಿ ಅವರಿಂದ ಶ್ರೀರಾಘವೇಂದ್ರ ಸ್ವಾಮಿಗಳು ಬೃಂದಾವನ ಸ್ಥಾಪನೆಯ ಕಾಲದಲ್ಲಿ ಈ ಸಮ್ಮೇಳನ ನಡೆಯಲು ಎಲ್ಲವೂ ವ್ಯವಸ್ಥೆಯಾಗಿತ್ತು. ಆದರೆ ಹರಿವಾಯುಗಳ ಮನಸ್ಸಿಗೆ ಈ ಕಾರ್ಯ ಬಾರಲಿಲ್ಲವೆಂದೇ, ಸಮ್ಮೇಳನ ಕಾರಣಾಂತರಗಳಿಂದ ನಡೆಯಲಿಲ್ಲ. ಇದೊಂದು ಕೊನೆಯ ಕಾಲದವರೆಗೆ ಹನುಮಂತರಾಯರಿಗೆ ಹಂಬಲವಾಗಿ ಉಳಿದಿತ್ತು. ಇಂಥ ಕಾರ್ಯದ ಒಂದು ಪ್ರಯತ್ನವಾಗಿ ಕ್ರಿ.ಶ. ೧೯೮೮ರಲ್ಲಿ ರಾಯಚೂರಿನಲ್ಲಿ ಒಂದು ದಾಸ ಸಾಹಿತ್ಯ ಸಮ್ಮೇಳನವೇನೋ ವೈಭವದಿಂದ ನಡೆಯಿತು. ಆದರೆ ಅದನ್ನು ನೋಡಿ ಆನಂದಿಸಲು ಗೋರೆಬಾಳ ಹನುಮಂತ ರಾಯರು ಜೀವಿಸಿರಲಿಲ್ಲ !

ಹೀಗೆ ಹನುಮಂತರಾಯರು ಕನಸು ಕಾಣುತ್ತಲೇ ಬದುಕಿದರು. ನನಸು ಮಾಡುವುದನ್ನು ಮುಂದಿನ ಪೀಳಿಗೆಗೆ ಬಿಟ್ಟರು. ಹೀಗೆ ಅವರು ಹೋರಾಟದ ಬದುಕಿನಲ್ಲಿ ಹುತಾತ್ಮರಾಗಿಯೇ ಉಳಿದರು.

೯

ಗೋರೆಬಾಳ ಹನುಮಂತರಾಯರದು ವಿಚಿತ್ರ ವ್ಯಕ್ತಿತ್ವ. ಅವರಲ್ಲಿ ಜೀವದ್ವಯಾವೇಶ ವಿತ್ತೆಂದು ಅವರನ್ನು ನಿಕಟವಾಗಿ, ಹತ್ತಿರದಿಂದ ಬಲ್ಲವರೆಲ್ಲರೂ ಒಪ್ಪುತ್ತಾರೆ. ಜೀವದ್ವಯಾವೇಶ ವೆಂದರೆ ಒಂದ್ದು ದೇಹದಲ್ಲಿ ಎರಡು ಇಲ್ಲವೇ ಅದಕ್ಕಿಂತಲೂ ಹೆಚ್ಚಿನ ಜೀವರು ಆಶ್ರಯ ಪಡೆದು, ತನ್ನ ಆಶ್ರಯಕ್ಕೆ ಕಾರಣವಾದ ದೇಹವನ್ನು ತನ್ನ ಇಚ್ಛೆ ಅಗತ್ಯಗಳಿಗೆ ತಕ್ಕಂತೆ, ಒಳ್ಳೆಯ ಕಾರ್ಯ ಗಳಿಗೋ, ಕೆಟ್ಟ ಕಾರ್ಯಗಳಿಗೋ ಬಳಸಿಕೊಳ್ಳುವುದು. ಇದಕ್ಕೆ ಭಾರತ ಭಾಗವತಗಳಲ್ಲಿ ಅನೇಕ ದೃಷ್ಟಾಂತರಗಳನ್ನು ನೋಡಬಹುದಾಗಿದೆ.

ಇದಕ್ಕೆ ಉತ್ತಮ ಉದಾಹರಣೆ ದ್ರೌಪದಿ. ಅಗ್ನಿ ಪುತ್ರಿಯಾದ ಆಕೆಯ ದೇಹದಲ್ಲಿ ಭಾರತಿ, ಶಚಿ, ಶ್ಯಾಮಲ, ಅಶ್ವಿನೀ ದೇವತೆಗಳ ಪತ್ನಿಯಾದ ಉಷಾ ಮತ್ತು ಪಾರ್ವತಿ ದೇವಿಯರು ಶಾಪಗ್ರಸ್ಥರಾಗಿ ಇದ್ದರೆಂದೂ, ಅವರ ಆವೇಶಕ್ಕೆ ಅನುಗುಣವಾಗಿ, ಪಾಂಡವರು ಆಕೆಯ ದೇಹದ ಸಂಪರ್ಕ ಪಡೆದಿದ್ದರೆಂದೂ, ಇವರಲ್ಲಿ ಪಾರ್ವತಿಯು ಮಾತ್ರ ಸಾಕ್ಷಿ ಎಂಬಂತೆ ನಿರ್ಲಿಪ್ತಳಾಗಿದ್ದು ದಾಗಿಯೂ, ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀ ಮಧ್ವಾಚಾರ್ಯರು ಹೇಳಿದ್ದಾರೆ. ಇದರಂತೆ ಪರಶುರಾಮರ ದೇಹದಲ್ಲಿ ಅತುಲನೆಂಬ ದೈತ್ಯನು ಆಶ್ರಯ ಪಡೆದಿದ್ದು, ಅವನ ಸಂಹಾರದ ಸಲುವಾಗಿಯೇ ಭಾರ್ಗವರಾಮ ಮತ್ತು ದಾಶರಥಿ ರಾಮರಲ್ಲಿ ಯುದ್ಧ ನಡೆದಂತೆ ನಟನೆ ಯಾಯಿತೆಂದೂ ಅವರು ತಿಳಿಸುತ್ತಾರೆ.

ಸಾತ್ವಿಕ ಚೇತನರ ವ್ಯಾಪಾರಕ್ಕೆ ದ್ರೌಪದಿ ದೇವಿಯರೂ ಅಸುರಾವೇಶಕ್ಕೆ ಪರಶುರಾಮರು ಶ್ರೀರಾಮನನ್ನು ಎದುರಿಸಿದುದೂ ಒಂದು ನಿದರ್ಶನ, (ಭಗವಂತನ ಅವತಾರಗಳಲ್ಲಿ ಭೇದವಿಲ್ಲ ದಿದ್ದರೂ, ಅಸುರ ಜನ ಸಮ್ಮೋಹನಾರ್ಥಕವಾಗಿ ಈ ನಾಟಕ ನಡೆಯಿತೆಂಬುದನ್ನು ನಾವು ಇಲ್ಲಿ ಮರೆಯಬಾರದು.)

ಸಾತ್ವಿಕ ಚೇತನರಾದ ಗೋರೆಬಾಳ ಹನುಮಂತರಾಯರ ವ್ಯಕ್ತಿತ್ವದಲ್ಲಿ ಇಂಥದೇ ಒಂದು ವಿರೋಧಾಭಾಸವಿತ್ತೆಂದು ಹೇಳುತ್ತಾರೆ. ಅವರು ಸದಾಚಾರ ಸಂಪನ್ನರು, ಗೋ ಬ್ರಾಹ್ಮಣರ ಪೂಜೆಯನ್ನು ಮಾಡುತ್ತಿದ್ದರು. ಹರಿದಿನ, ವ್ರತಾಚರಣೆಗಳನ್ನು ಶ್ರದ್ಧಾಭಕ್ತಿಗಳಿಂದ ಆಚರಿ ಸುತ್ತಿದ್ದರು. ಮನೆಯಲ್ಲಿ ಸದಾ ಅತಿಥಿ ಸತ್ಕಾರ ನಡೆಯುತ್ತಿತ್ತು. ದೇವರ ಪೂಜೆ, ತೀರ್ಥವಿಲ್ಲದೆ ಆಹಾರವನ್ನು ಸೇವಿಸುತ್ತಿರಲಿಲ್ಲ. ಇವರಿಗೆ ಅತಿಥಿ ಅಭ್ಯಾಗತರನ್ನು ಕಂಡರೆ ದೇವರನ್ನು ಕಂಡಷ್ಟು ಸಂತೋಷವಾಗುತ್ತಿತ್ತು. ಅವರ ಸೇವೆಯನ್ನು ಮಾಡುವುದು ತಮ್ಮ ಪಾಲಿನ ಭಾಗ್ಯ ವಿಶೇಷವೆಂದು ತಿಳಿದಿದ್ದರು. ಇಂಥವರು ಒಮ್ಮೊಮ್ಮೆ ಅತಿಥಿಗಳ ಮೇಲೆ, ಪುರಾಣ ಹೇಳುತ್ತಿದ್ದ ಆಚಾರ್ಯರ ಮೇಲೆ, ಮೈಮೇಲೆ ಎಚ್ಚರ ತಪ್ಪಿ ಹರಿಹಾಯುತ್ತಿದ್ದ ಪ್ರಸಂಗಗಳು ನಡೆದು ಹೋಗುತ್ತಿತ್ತು. ಇಂಥ ಒಂದೆರಡು ಪ್ರಸಂಗಗಳನ್ನು ಅವರನ್ನು ಚೆನ್ನಾಗಿ ಬಲ್ಲ ಲಿಂಗಸೂಗೂರಿನ ಭೋಗೇಶರಾಯರೂ, ಸೇತುರಾಮಾಚಾರ್ಯರೂ ಉಲ್ಲೇಖಿಸಿದ್ದಾರೆ.

ಒಮ್ಮೆ ಒಬ್ಬ ಸದ್ಬ್ರಾಹ್ಮಣರು ಲಿಂಗಸೂಗೂರಿಗೆ ಬಂದಿದ್ದರು. ಗೋರೆಬಾಳ ಹನುಮಂತ

ರಾಯರ ಅತಿಥಿಗಳಾಗಿ ಕೆಲವು ದಿನಗಳು ಇದ್ದು ರಾಯರ ಜತೆಯಲ್ಲಿ ವಿಚಾರ ವಿನಿಮಯ ನಡೆಸಿದ್ದರು. ಅವರು ಪಂಡಿತರೂ, ಸದಾಚಾರನಿಷ್ಠರೂ ಆಗಿದ್ದರು. ಇಂತವರು ಒಮ್ಮೆ ಬಾಯಾರಿಕೆಯಾಗಿ, ಜಗಲಿಯ ಮೇಲೆ ಕುಳಿತುಕೊಂಡಿದ್ದರು. ಗೃಹಿಣಿ ತಂದಿತ್ತ ಹಾಲಿನ ಪಾತ್ರೆಯನ್ನು ತುಟಿಗೆ ತಾಕಿಸದೆ ಎತ್ತಿ ಕುಡಿಯುತ್ತಿದ್ದರು. ಹೊರಗೆ ಹೋಗಿದ್ದ ಹನುಮಂತರಾಯರು ಮನೆಗೆ ಹಿಂದಿರುಗುತ್ತಿದ್ದಾಗ, ಬ್ರಾಹ್ಮಣರ ಈ ಅನಾಚಾರ ದೃಶ್ಯ ಕಣ್ಣಿಗೆ ಬಿತ್ತು. ಅವರಿಗೆ ಅದೇನೆನಿಸಿತೋ, ಬೀದಿಯಲ್ಲಿ ಹಾಲವನ್ನು ಕುಡಿಯುತ್ತಿರುವುದು ಅನಾಚಾರವಾಗಿ ಕಾಣಿಸಿತು. ಬಂದವರೇ ಬ್ರಾಹ್ಮಣರ ಕೈಲಿದ್ದ ಬೆಳ್ಳಿ ಲೋಟವನ್ನು ಕಿತ್ತುಕೊಂಡು ದೂರ ಬಿಸಾಡಿದರು; ಅನಂತರ ಅವರನ್ನು ಆ ಕೂಡಲೇ ತಮ್ಮ ಮನೆಯಿಂದ ತಮ್ಮ ಗಂಟುಮೂಟೆ ತೆಗೆದುಕೊಂಡು, ನಿಂತ ಹೆಜ್ಜೆಯಲ್ಲಿ ಹೋಗಲು ಗರ್ಜಿಸಿದರು. ಪಾಪ, ಆ ಬ್ರಾಹ್ಮಣ ತಾನು ಮಾಡಿದ ಅಪರಾಧವೇನೆಂದು ತಿಳಿಯದಿದ್ದರೂ, ಚರ್ಚೆಗೆ ನಿಲ್ಲದೆ, ಅವರ ಉಗ್ರ ಭೈರವನ ರೂಪ ನೋಡಿ, ಮನೆಯನ್ನು ಬಿಟ್ಟು ಗುರುತಿನವರ ಮನೆಗೆ ಹೊರಟು ಹೋದರು. ಶಾಂತರಾದ ಮೇಲೆ ಗೋರೆಬಾಳ ಹನುಮಂತ ರಾಯರೇ ಅವರಲ್ಲಿಗೆ ಹೋಗಿ, ತಮ್ಮ ಅಕೃತ್ಯಕ್ಕಾಗಿ ಪಶ್ಚಾತ್ತಾಪ ವ್ಯಕ್ತಪಡಿಸಿ, ತಪ್ಪಾಯಿತೆಂದು ಕಾಲಿಗೆ ಬಿದ್ದು ಮನೆಗೆ ಕರೆದುಕೊಂಡು ಬಂದು ಸತ್ಕರಿಸಿ, ಕ್ಷಮೆ ಕೇಳಿದರಂತೆ.

ಎಷ್ಟೋ ಬಾರಿ ಹನುಮಂತರಾಯರ ಈ ದೈತ್ಯಾವೇಶ, ಶೀಘ್ರಕೋಪಗಳಿಗೆ ಪರಮ ಸಾಧ್ವೀಮಣಿಯಾದ ಅವರ ಪತ್ನಿಯು ಬಲಿಯಾಗಬೇಕಾಗುತ್ತಿತ್ತು. ರಾಯರು ಒಮ್ಮೆ ದೇವರ ಪೂಜೆ ಮಾಡುತ್ತಿದ್ದರು. ಧೂಪಾರತಿಗೆ ಕೆಂಡ ತರಲು ಅವರು ಹೇಳಿದರು. ಪತ್ನಿ ತರುವುದು ಒಂದು ಕ್ಷಣ ತಡವಾಯಿತು. ಪಕ್ಕದಲ್ಲಿ ಸಾಣೆಯ ಕಲ್ಲಿನ ಮೇಲಿದ್ದ ಗಂಧದ ಕೊರಡನ್ನೇ ಆಕೆಗೆ ಗುರಿ ಇಟ್ಟು ಎಸೆದು ಬಿಟ್ಟರು. ಈ ಪ್ರಹಾರದಿಂದ ಆಕೆಯು ಸಾಯುವವರೆಗೂ ಸೊಂಟ ಹಿಡಿದು ನರಳ ಬೇಕಾಯಿತಂತೆ. ಆಮೇಲೆ ರಾಯರು ಈ ಅಕೃತ್ಯಕ್ಕಾಗಿ ಪರಿತಪಿಸಿ, ಮಗುವಿನಂತೆ ಅತ್ತರು. ಆದರೇನು ಅವರಲ್ಲಿದ್ದ ಅಸುರಾವೇಶ ಈ ಹೀನ ಕೃತ್ಯವನ್ನು ಅವರಿಂದ ಮಾಡಿ ಮುಗಿಸಿತ್ತು.

ಇಂಥ ಇನ್ನೊಂದು ಅಸುರಾವೇಶದಲ್ಲಿ ಬ್ರಾಹ್ಮಣರೊಬ್ಬರಿಗೆ ಅವರು ಮಾಡಿದ ಅಪಚಾರದಿಂದ ಅವರೂ ದೂರ್ವಾಸರಂತೆ ಕೋಪಿಸಿಕೊಂಡು, "ನಿಮಗೆ ಪುತ್ರ ಸಂತಾನವಿಲ್ಲದೆ ಹೋಗಲಿ" – ಎಂದು ಶಪಿಸಿಬಿಟ್ಟು ಹೊರಟು ಹೋಗಿದ್ದರಂತೆ. ಅವರು ಶಾಪಾನುಗ್ರಹ ಸಂಪನ್ನರು ಹೌದೋ, ಅಲ್ಲವೋ ಈ ಮಾತು ಬೇರೆ. ಗೋರೆಬಾಳ ಹನುಮಂತರಾಯರಿಗೆ ಮಾತ್ರ ಗಂಡು ಸಂತಾನವಿರಲಿಲ್ಲ. ಈ ಮಾತು ಮಾತ್ರ ಸತ್ಯ.

ಇನ್ನೊಮ್ಮೆ ರಾಯರು ತಮ್ಮ ಮನೆಯಲ್ಲಿ ಆದ್ಯ ಸೇತೂರಾಮಾಚಾರ್ಯರಂಥ ಸಾತ್ವಿಕರಿಂದ ಭಾಗವತ ಪುರಾಣ ತಿಂಗಳ ಕಾಲ ಕೇಳಿಸಿದ್ದರು. ಮಂಗಳವೂ ವೈಭವದಿಂದ ನಡೆದು, ಕೈತುಂಬಾ ಸಂಭಾವನೆ ಇತ್ತು ಆಚಾರ್ಯರನ್ನು ಸತ್ಕರಿಸಿದ್ದೂ ಮುಗಿಯಿತು. ಆದರೆ ಯಾವುದೋ ಶಾಸ್ತ್ರಾರ್ಥದಲ್ಲಿ ಆಚಾರ್ಯರ ಅಭಿಪ್ರಾಯ ಅವರಿಗೆ ಹಿಡಿಸದೆ, ಉಗ್ರವಾಗಿ ಜಗಳಕ್ಕೆ ನಿಂತು, ಹೀನ ರೀತಿಯಲ್ಲಿ ನಡೆಸಿಕೊಂಡು ಆಚಾರ್ಯರನ್ನು ಬೀಳ್ಕೊಟ್ಟಿದ್ದರು. ಆದರೇನು ಯಥಾ ಪ್ರಕಾರ, ಈ ಘಟನೆ ನಡೆದ ಮೇಲೆ ಮಗುವಿನಂತೆ ದುಃಖಿಸಿ ಪ್ರಲಾಪ ಮಾಡಿದರು. ಬೆಂಗಳೂರಿಗೆ ಹೋಗಿ

ಆಚಾರ್ಯರ ಕಾಲು ಹಿಡಿದು ಕ್ಷಮಿಸಿ ಎಂದು ಪ್ರಾರ್ಥಿಸಿದರು. ಆಚಾರ್ಯರು ರಾಯರ ಜೀವದ್ವಯಾವೇಶವನ್ನು ಬಲ್ಲವರಾಗಿದ್ದುದರಿಂದ ಅವರನ್ನು ಕ್ಷಮಿಸಿದುದು ಮಾತ್ರವಲ್ಲ; ಬೆಂಗಳೂರಿಗೆ ಬಂದಾಗಲೆಲ್ಲ ರಾಯರನ್ನು ತಮ್ಮ ಮನೆಯಲ್ಲಿ ಗೌರವಾನ್ವಿತ ಅತಿಥಿಯಾಗಿ ನಡೆಸಿಕೊಂಡು ಸತ್ಕರಿಸಿದ್ದರು.

ಇಂಥ ಘಟನೆಗಳು ರಾಯರ ಜೀವನದಲ್ಲಿ ಅದೆಷ್ಟೋ ನಡೆದಿದ್ದವು. ಸ್ವಯಂ ಭೋಗೇಶ ರಾಯರಿಗೂ ರಾಯರ ಈ ವೈಚಿತ್ರ ತಿಳಿದಿತ್ತು. ಹಾಗಾಗಿ ಅವರು ರಾಯರೊಂದಿಗೆ ಘರ್ಷಣೆ ಒದಗದಂತೆ ನಡೆದುಕೊಂಡು, ಕೊನೆಯವರೆಗೆ ರಾಯರ ಸನ್ಮಿತ್ರರೂ, ಅವರ ನಂಬಿಕೆಗೆ ಪಾತ್ರರೂ ಆಗಿ ಉಳಿದಿದ್ದರು. ಹೀಗಾಗಿ ರಾಯರು ತಾವು ತೀರಿಕೊಳ್ಳುವ ಮೊದಲು ವರದೇಂದ್ರ ಸಾಹಿತ್ಯ ಮಂಡಲದ ಅಧ್ಯಕ್ಷರಾದ ಅವರಿಗೆ ತಾವು ಸಂಗ್ರಹಿಸಿದ್ದ ಅಮೂಲ್ಯ ಹಸ್ತ ಪ್ರತಿಗಳನ್ನು ಒಪ್ಪಿಸಿ, ಕೈತೊಳೆದುಕೊಂಡಿದ್ದರು.

## ೧೦

ಗೋರೆಬಾಳು ಹನುಮಂತರಾಯರು ಗ್ರಂಥಕರ್ತರು, ಪ್ರಕಾಶಕರು ಆಗಿದ್ದಂತೆ ಉನ್ನತ ಆದರ್ಶ ಹೊಂದಿದ್ದ ಶ್ರೇಷ್ಠ ಪತ್ರಿಕೋದ್ಯೋಗಿಯೂ ಆಗಿದ್ದರು. ಅವರು ವರದೇಂದ್ರ ಸಾಹಿತ್ಯ ಮಂಡಲದ ಮುಖಾಂತರ ತಮ್ಮ ಹರಿದಾಸ ಸಾಹಿತ್ಯವನ್ನು ಪ್ರಕಟಿಸಲು ತೊಡಗಿದ ಮೇಲೆ ಜನ ಸಾಮಾನ್ಯರ ಜತೆಗೆ ಸಂಪರ್ಕ ಬೆಳೆಸುವ ಏಕೈಕ ಸಾಮೂಹಿಕ ಮಾಧ್ಯಮವಾಗಿದ್ದ ಪತ್ರಿಕೆಯೊಂದನ್ನು ಈ ಉದ್ದೇಶಕ್ಕಾಗಿಯೇ ನಡೆಸುವ ವಿಚಾರ ಮಾಡಿದರು. ಹನುಮಂತರಾಯರ ಸ್ವಭಾವ - ಅವರು ಸಂಕಲ್ಪಿಸಿದ ಕಾರ್ಯ ಕೂಡಲೇ ನಡೆದು ತೀರಬೇಕು. ಅವರು ಎಂದೂ ಮೀನಾಮೇಷ ಎಣಿಸಿದವರಲ್ಲ. ಎಂಥ ಮಹಾ ಯೋಜನೆಯಾಗಲೀ, ಪೂರ್ವ ಯೋಜನೆ ಸಿದ್ಧಪಡಿಸಿ, ಪೂರ್ವಾಪರ ಆಲೋಚಿಸಿ, ಸಾಧಕ-ಬಾಧಕಗಳನ್ನು ಆಲೋಚಿಸಿ, ಅವರು ವ್ಯವಸ್ಥಿತ ರೂಪದಲ್ಲಿ ಕೈಗೊಳ್ಳುತ್ತಿರಲಿಲ್ಲ. ಅವರು ವಾಣಿಜ್ಯೋದ್ಯೋಮಿಗಳಾಗಿರಲಿಲ್ಲ ; ವ್ಯವಹಾರ ಚತುರರಲ್ಲ. ಮನಸ್ಸಿಗೆ ಹೊಳೆದದ್ದು ಕೃತಿ ರೂಪಕ್ಕಿಳಿಸುವ ಆತುರದಲ್ಲಿ ಅನೇಕ ಕಷ್ಟನಿಷ್ಠುರಗಳನ್ನು ಎದುರಿಸಬೇಕಾಗಿತ್ತು. ಆದರೆ ಒಮ್ಮೆ ಕೈಗೊಂಡ ಕಾರ್ಯವನ್ನು ಅದೆಷ್ಟೇ ಸಾಹಸದ್ದಾಗಿರಲಿ, ಅದನ್ನು ಮಾಡಿಯೇ ತೀರಿಸುತ್ತಿದ್ದರು. ಒಮ್ಮೆ ಆರಂಭಿಸಿದ ಕಾರ್ಯವನ್ನು ಕೊನೆ ಮುಟ್ಟಿಸದೆ ಬಿಡುತ್ತಿರಲಿಲ್ಲ.

ಪತ್ರಿಕಾ ಪ್ರಪಂಚ ರಾಯರಿಗೆ ಹೊಸದು. ಹಿಂದೆ ಕನ್ನಡ ನಾಡಿನಲ್ಲಿ ಹಲವು ಧಾರ್ಮಿಕ ಪತ್ರಿಕೆಗಳು ಹುಟ್ಟಿದ್ದವು. ಹಾಗೆ ಹೇಳ ಹೆಸರಿಲ್ಲದೆ ಮಡಿದಿದ್ದವು. ಕೆಲವು ಪತ್ರಿಕೆಗಳು ತನ್ನ ಸಾಹಿತ್ಯದಿಂದಾಗಿ, ಮನರಂಜನೆ ಸಾಮಗ್ರಿಗಳ ಕಾರಣದಿಂದಾಗಿ ಉಳಿದುಕೊಂಡಿದ್ದವು. ಇಂಥವಲ್ಲಿ ಉತ್ತರ ಕರ್ನಾಟಕದಲ್ಲಿ ಅಗಡಿಯ ಆನಂದವನದಲ್ಲಿ ಶ್ರೀ ಶೇಷಾಚಲ ಸದ್ಗುರುಗಳು, ಶ್ರೀಗಳಗನಾಥರ ನೆರವಿನಿಂದ ಆರಂಭಿಸಿದ ಸದ್ಬೋಧ ಚಂದ್ರಿಕೆಯು ೧೯೦೮ರ ಯುಗಾದಿಯಂದು ಪ್ರಕಟವಾಗಿ ಇಂದಿಗೂ ಅದು ನಡೆದುಕೊಂಡು ಬಂದಿದೆ. ಇದೊಂದು ಅಪವಾದವೆನ್ನಬಹುದು. ಇದರಲ್ಲಿ

ಅದ್ವೈತ ಮತದ ಬಗ್ಗೆ ಲೇಖನಗಳು ಪ್ರಕಟವಾಗುತ್ತಿದ್ದುದರಿಂದ ಇದನ್ನು ಅವಧೂತ ಮಾರ್ಗದ ಮುಖ ಪತ್ರಿಕೆ ಎನ್ನಬಹುದು.

ಮುಂದಿನ ವರ್ಷಗಳಲ್ಲಿ ಹುಬ್ಬಳ್ಳಿಯಿಂದ ತತ್ತ್ವವಾದವೂ, ಬೆಂಗಳೂರಿನಿಂದ ಶ್ರೀಸುಧಾ ಪತ್ರಿಕೆಯೂ, ನಂಜಗೂಡಿನಿಂದ ಪರಿಮಳ ಪತ್ರಿಕೆಯೂ, ಮಂತ್ರಾಲಯದಿಂದ ಗುರು ಸಾರ್ವಭೌಮ ಪತ್ರಿಕೆಗಳೂ ಪ್ರಕಟವಾಗಿ, ದ್ವೈತ ಮತದ ವಿಚಾರ ಮತ್ತು ಲೇಖನಗಳಿಗೆ ಒಂದು ವೇದಿಕೆಯನ್ನು ನಿರ್ಮಿಸಿ ದ್ವೈತ ಸಿದ್ಧಾಂತ ಪ್ರಚಾರಕ್ಕೆ ಟೊಂಕಕಟ್ಟಿ ದುಡಿಯುತ್ತ ಬಂದಿವೆ. ಇಂಥ ಕಾರ್ಯ ಮಾಡಿದ ಬೆಂಗಳೂರಿನ ಸುಬೋಧ ಮತ್ತು ಹರಿದಾಸ ಭಾರತಿ ಪತ್ರಿಕೆಗಳು ನಿಂತವು.

ಗೋರೆಬಾಳು ಹನುಮಂತರಾಯರು ದಾಸ ಸಾಹಿತ್ಯ ಪ್ರಚಾರಕ್ಕಾಗಿ ಯಾವ ಪತ್ರಿಕೆಯೂ ಇಲ್ಲದುದನ್ನು ಮನಗೊಂಡು ಕರ್ಣಾಟಕ ಹರಿದಾಸ ಸಾಹಿತ್ಯವೆಂಬ ಹೆಸರಿನಲ್ಲಿ ಒಂದು ದ್ವೈಮಾಸಿಕ ಪತ್ರಿಕೆಯನ್ನು ಕ್ರಿ.ಶ. ೧೯೫೭ರ ಫೆಬ್ರವರಿ ತಿಂಗಳಿನಲ್ಲಿ ಶ್ರೀಪುರಂದರದಾಸರ ಆರಾಧನೆಯಂದು ಹೊರಡಿಸಿಯೇ ಬಿಟ್ಟರು. ಇದು ಎರಡು ತಿಂಗಳಿಗೊಮ್ಮೆ ಹೊರಬೀಳುವ, ಕ್ರೌನ್ ಅಷ್ಟದಳಾಕೃತಿಯ ಸುಮಾರು ೩೨-೪೦ ಪುಟಗಳ ಸಂಚಿಕೆಗಳಾಗಿ ಪ್ರಕಟವಾಯಿತು. ದಾಸರ ಅಮೃತವಾಣಿ, ಸಂಪಾದಕೀಯ, ದಾಸ ಸಾಹಿತ್ಯವನ್ನು ಕುರಿತ ವಿದ್ವಾಂಸರರಿಂದ ಲೇಖನಗಳು, ಬಾಯಿಪಾಠಕ್ಕಾಗಿ ಶಾಸ್ತ್ರ - ವಿಚಾರ. ಮೊದಲ ಸಂಚಿಕೆಯಲ್ಲಿ ದೇವತಾ ತಾರತಮ್ಯ ಕೊಡಲಾಗಿತ್ತು - ಹರಿದಾಸರ ಚರಿತ್ರೆಗಳು ಅಪ್ರಕಟಿತ ಹರಿದಾಸ ಸಾಹಿತ್ಯ - ಹೀಗೆ ಪ್ರಕಟವಾಗತೊಡಗಿತು. ಮುಂದಿನ ಸಂಚಿಕೆಗಳಲ್ಲಿ ಹರಿದಾಸರ ಹಾಗೂ ಆಚಾರ್ಯರ, ಗುರುಗಳ ಪುಣ್ಯ ತಿಥಿಗಳು, ಇದಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ನೀಡಿದವು. ಇವನ್ನೆಲ್ಲ ಮುಂದೆ ಕ್ರಮವಾಗಿ ಬೈಂಡು ಮಾಡಿಸಿ, ಆಧ್ಯಾತ್ಮಿಕ ವಿವಿಧ ನಿಬಂಧಗಳು- ಎಂಬ ಹೆಸರಿನಲ್ಲಿ ಹಲವು ಸಂಪುಟಗಳಾಗಿ ಪ್ರಕಟಿಸಿದರು. ಈ ಸಂಚಿಕೆಗಳಿಗೆ ಬಹುಪಾಲು ಲೇಖನಗಳನ್ನು ಸಂಪಾದಕರಾದ ಗೋರೆಬಾಳರೇ ಬರೆಯುತ್ತಿದ್ದರು. ಅವರು ಬರೆಯುತ್ತಿದ್ದ ಸಂಪಾದಕೀಯ ಬರಹಗಳಲ್ಲಿ ತಮ್ಮ ಪ್ರಕಟಣೆಯ ತಾಪತ್ರಯ ಹೇಳಿಕೊಳ್ಳುತ್ತಿದ್ದರೂ, ಬಿಡಿ ಲೇಖನಗಳಲ್ಲಿ ಅವರ ಅನುಭವದ ಸಾರಭಟ್ಟಿ ಇಳಿಸುತ್ತಿದ್ದರು.

ಇಷ್ಟಾದರೂ ಈ ಪತ್ರಿಕೆ ದೀರ್ಘಕಾಲ ಬಾಳಲಿಲ್ಲ. ಇದಕ್ಕೆ ಕಾರಣಗಳು ಹಲವಾರು. ಮುಖ್ಯ ಕಾರಣ ಚಂದಾದಾರರ ಕೊರತೆ ; ಜಾಹಿರಾತು ಇಲ್ಲದೆ ಪತ್ರಿಕೆ ನಡೆಸಲು ಕಷ್ಟ ಎಂದು ಅವರಿಗೆ ತಿಳಿಯದೆ ಹೋದದ್ದು; ಲೆಕ್ಕ ಪತ್ರ -ಲಾಭ ನಷ್ಟಗಳ ಈ ವ್ಯಾಪಾರಿ ಮನೋಭಾವ, ವ್ಯವಹಾರ ಕುಶಲತೆ ಹನುಮಂತರಾಯರ ವ್ಯಕ್ತಿತ್ವದಲ್ಲಿ ಸ್ಥಾನ ದೊರೆಯದೆ ಹೋದದ್ದು. ಇವೆಲ್ಲದರ ಪರಿಣಾಮ ಅವರು ಅದನ್ನು ಹೇಗೆ ಆರಂಭಿಸಿದರೋ ಹಾಗೇ ನಿಲ್ಲಿಸಿಬಿಡಬೇಕಾಯಿತು.

ಆದರೂ "ತಾವು ಇಡೀ ಮಧ್ವ ಸಮಾಜಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿರುವಿರಿ. ನಿಮ್ಮ ಸಾಹಸಕ್ಕೆ ಕೇಡಿಲ್ಲ. ಪತ್ರಿಕೆ ಅಂದವಾಗಿದೆ. ವಿಷಯಗಳು ಸುಬೋಧವಾಗಿದೆ. ನಿಮ್ಮಿಂದ ಹರಿವಾಯುಗಳು ಹೆಚ್ಚಿನ ಸೇವೆ ತೆಗೆದುಕೊಳ್ಳಲಿ" - ಎಂಬ ಶ್ಲಾಘನೆ ಓದುಗರಿಂದ ದೊರೆತರೂ, ಇದರಿಂದ ಹಸಿದ ಹೊಟ್ಟೆ ತುಂಬುವುದಿಲ್ಲವಷ್ಟೇ. ಕಡೆಗೆ ರಾಯರು ತಮ್ಮ ಪತ್ರಿಕಾವೃತ್ತಿಗೆ ಮಂಗಳ ಹಾಡಿದರು.

ಇಲ್ಲಿ ಉದಾಹರಣೆಗಾಗಿ ಗೋರೆಬಾಳರು ಬರೆದ ಎರಡು ವಿಚಾರಪೂರ್ಣ ಲೇಖನಗಳನ್ನು ನೋಡಬಹುದು. ಒಂದು ಲೇಖನದಲ್ಲಿ ಆತ್ಮ ಪರೀಕ್ಷೆ. ಇನ್ನೊಂದರಲ್ಲಿ ಏಕಾಂತ ಭಕ್ತನ ಲಕ್ಷಣಗಳನ್ನು ಕುರಿತು ಮನೋಜ್ಞವಾಗಿ ಬರೆದಿದ್ದಾರೆ.

ಅವರು ಪರರ ತಪ್ಪುಗಳನ್ನು ಎಣಿಸಬಾರದೆಂದು ಹೀಗೆ ಎಚ್ಚರಿಸಿದ್ದಾರೆ-

೧) ಸಂಸಾರದಲ್ಲಿ ಯಾವನೂ ದೋಷವಿಲ್ಲದವನು, ನಿರ್ದೋಷಿಯೂ ಇಲ್ಲ. ಅಥವಾ ಯಾವನಿಂದಲೂ ಒಂದು ವೇಳೆಯಾದರೂ ತಪ್ಪು ಮಾಡದೆ ಇರದವನೂ ಸಹ ಇಲ್ಲ. ಕಾರಣ ಎರಡನೆಯವರ ತಪ್ಪುಗಳನ್ನು ನೋಡಿ ಅವನು ದೋಷಿ ಎಂದು ಮನದಲ್ಲಿ ತಾಪ ಪಡಬೇಡಿರಿ, ಮತ್ತು ಅವನು ಕೆಟ್ಟವನು, ಕೆಟ್ಟದಾಗಲೆಂದು ಬಯಸಬೇಡಿರಿ.

೨) ನೀವು ನಿಮ್ಮ ಸ್ವತಃ ತಪ್ಪುಗಳನ್ನು ನೋಡಿರಿ ಮತ್ತು ಸಂತತವಾಗಿ ಆ ತಪ್ಪುಗಳನ್ನು ಸುಧಾರಿಸುವ ಪ್ರಯತ್ನ ಮಾಡಿರಿ. ನಿಮ್ಮ ತಪ್ಪುಗಳನ್ನು ತಿದ್ದಿ ನಡೆದರೆ, ಎರಡನೆಯವರ ಗುಣದೋಷ ಎಣಿಸುವುದಾದರೆ ಆ ಎರಡನೆಯವರ ಪರಿಸ್ಥಿತಿ, ಅವರ ದೃಷ್ಟಿಕೋನದಿಂದ ಅವರ ಪರಿಸ್ಥಿತಿಗೆ ಮುಟ್ಟಿ ನೋಡಿರಿ. ಅಂದರೆ ಪುನಃ ತಪ್ಪುಗಳು ಅಷ್ಟು ಅಲ್ಲವೆಂಬುದು ನಿಮಗೆ ಕಾಣಿಸದು ಎಂಬುದು ನೆನಪಿನಲ್ಲಿಡಿ.

೩) ನಾವು ಎರಡನೇದವರ ಸುಧಾರಣೆಗೋಸುಗವಾಗಿ ಜೀವಿಸಿದ್ದೇವೆ ಎಂದು ಯಾವಾಗಲೂ ಎಂದಿಗೂ ವಿಚಾರ ಮಾಡಬಾರದು. ಮೊದಲಿಗೆ ನಾವು ನಮ್ಮೊಳಗೆ ವಿಚಾರಿಸಿ ನಮ್ಮ ಸುಧಾರಣೆಯನ್ನು ಮಾಡುವುದು ಆದ್ಯ ಕರ್ತವ್ಯ. ನಮ್ಮ ಸುಧಾರಣೆಯಾದರೆ ಜಗತ್ತಿನ ಒಂದು ಅಂಗವು ತನ್ನಷ್ಟಕ್ಕೆ ತಾನೇ ಸುಧಾರಿಸುತ್ತದೆಂಬುದು ಮರೆಯಬೇಡಿರಿ. ಯಾವಾಗ್ಗೆ ಹೀಗೆ ಎಲ್ಲರೂ ಸ್ವತಃ ತಮ್ಮ ತಮ್ಮ ಸುಧಾರಣೆ ಕೈಕೊಂಡರೆ ಸಕಲ ಜಗತ್ತು ಸುಧಾರಿಸುವುದೆಂಬುದು ಮರೆಯದೇ ನೆನಪಿನಲ್ಲಿಟ್ಟು ಮೊದಲು ನಮ್ಮನ್ನು ನಾವು ಸುಧಾರಿಸಿಕೊಳ್ಳಬೇಕು.

೪) ಎರಡನೇದವರು ಏನು ಕಲಿಸುತ್ತಾರೆಂಬುದು ಕಲಿಯಬೇಡಿರಿ, ನಮ್ಮ ತಿಳುವಳಿಕೆ ಮನಸ್ಸಿನ ಉತ್ತಮ ಶಿಕ್ಷಣ ಅನುಸಾರವಾಗಿ ನಡೆಯುವುದೆಂಬುದು ಕಲಿಯಿರಿ. ಮತ್ತು ಅದರಂತೆ ನಡೆಯಿರಿ. ಯಾರು ಎರಡನೇದವರಿಗೆ ಕಲಿಸುವೆವೆಂಬ ನೆಪದಿಂದ ಸ್ವತಃ ಕಲಿಯುವುದಿಲ್ಲವೊ, ಮತ್ತು ಕಲಿತವರು ಆ ಶಿಕ್ಷಣದಂತೆ ನಡೆಯುವುದಿಲ್ಲವೋ ಅವರು ತಮ್ಮಷ್ಟಕ್ಕೆ ತಾವು ಮತ್ತು ಎಲ್ಲ ಜಗತ್ತಿಗೂ ಮೋಸ ಮಾಡುತ್ತಾರೆಂಬುದು ಮರೆಯಬೇಡಿರಿ.

## ಪರರ ಸದ್ಗುಣಗಳನ್ನೆಣಿಸಿ ಗುಣವಂತರಾಗಿರಿ

೫) ಉತ್ತಮೋತ್ತಮ ಸದ್ಗುಣಗಳ ಸಂಗ್ರಹವೇ ನಿಜವಾದ ಗಳಿಕೆ. ಸಂಸಾರದಲ್ಲಿರುವ ಪ್ರಾಣಿಗಳು ಯಾವುದಾದರೊಂದು ಸದ್ಗುಣ ಸಂಪನ್ನರಾಗಿಯೇ ಇರುವರು. ಅವರ ಸದ್ಗುಣಗಳನ್ನೆಣಿಸಿ ಸಮದೃಷ್ಟಿಯಲ್ಲಿ ನೋಡಿದರೆ ಸದ್ಗುಣಗಳನ್ನು ಹೊಂದುವಿರಿ. ಅವರ ದೋಷಗಳನ್ನೇ ನೋಡಿದರೆ ದೋಷವೇ ಸಿಕ್ಕುವುದು. ಜಗತ್ತಿನ ಎಲ್ಲ ಪ್ರಾಣಿಗಳಲ್ಲಿ ದೋಷ , ಮಹದೋಷ ಗಳನ್ನು ನೋಡಿ ದೋಷಗಳನ್ನೆಣಿಸುವವನು ದೋಷಯುಕ್ತವಾದ ಸಮುದ್ರನೇ ಆಗುವನು.

೬) ಯಾವ ಜೀವನವು ಬಹು ಸುಂದರವೂ ಶುಭವಾಗಿದೆಯೋ ಆತನೇ ವಾಸ್ತವ್ಯವಾಗಿ ನಿಜವಾಗಿಯೂ ಸುಂದರನೂ, ಸುಗುಣಿಯೂ ಇರುವನು. ಆದರೆ ಯಾವನು ಕೇವಲ ಮಾತಿನ ಮಲ್ಲಣ್ಣನಾಗಿ ಮಾತು ಮಾತ್ರ ಸುಂದರ (ಮುದ್ದು) ಇದ್ದು ಅವನ ಜೀವನವು ಬಹು ಕಲುಷಿತ, ಕುಚ್ಛಿತ ಇರುವುದೋ ಅವನು ಪೂರ್ತಿಯಾಗಿ ಕಲಂಕವುಳ್ಳ ದೋಷಿಯು, ಅವನು ಮೇಲಾಡಿ ತೋರ್ವ ಮುದ್ದಿನ ಮಾತು ವಿಷಪೂರಿತ ಗಡಿಗೆಯ ಮೇಲಿರುವ ಹಾಲಿನಂತೆ ಅಥವಾ ಮಲದಿಂದ ತುಂಬಿದ ಹೊಳೆಯುವ ತಂಬಿಗೆಯಂತೆ ಇರುವುದು. ಕಾರಣ ಕಲುಷಿತ ಮನ ಶುದ್ಧಿ ಮಾಡುವುದು ನೆನಪಿನಲ್ಲಿಡಿ, ಮರೆಯಬೇಡಿರಿ.

೭) ಪ್ರತಿಕ್ಷಣದಲ್ಲಿ ನಿಮ್ಮ ನಡಾವಳಿ ಆಚರಣೆಯನ್ನು ನೀವೆ ವಿಶಾಲ ಮನದಿಂದ ನೋಡುತ್ತ ಇರಬೇಕು. ಸ್ವಲ್ಪಾವಾದರೂ ದೋಷ ಮನಸ್ಸಿನಲ್ಲಿ ಕಂಡು ಬಂದರೆ ಆ ದೋಷವನ್ನು ದೂರಮಾಡಿ ಮನಃ ಪ್ರಶಾಂತವಾಗುವ ಪ್ರಯತ್ನ ಮಾಡುವುದು ನಿಮ್ಮ ಕರ್ತವ್ಯ. ನಿರವಕಾಶವಾಗಿ ಎಡಬಿಡದೆ ನಾವೇ ನಮ್ಮನ್ನು ಸುಧಾರಿಸಿಕೊಳ್ಳಬೇಕು. ಸ್ವಲ್ಪಾದರೂ ಅವಕಾಶ ಕೊಡಬಾರದು.

೮) ಯಾವಾಗ್ಗೆ ನೀವು ನಿಜವಾಗಿಯೂ, ಸುಧಾರಿಸಿದಿರೋ ಆಗ್ಗೆ ನಿಮ್ಮ ಹೇಳಿಕೆ ಇಲ್ಲದೆ ನಿಮ್ಮ ಜೀವನವೂ, ಆಚರಣೆಯೂ ಜಗತ್ತಿಗೆ ಶಿಕ್ಷಕವೂ ಆದರ್ಶವಾಗಿ ತೋರುವುದು. ನೀವು ಈ ಸುಧಾರಕ ಪರಿಸ್ಥಿತಿಯಲ್ಲಿ ಏಕಾಂತದೊಳಗಿದ್ದರಾದರೂ ನಿಮ್ಮೊಳಗಿರುವ ಸದ್ಗುಣಗಳೆಂಬ ಹೂಗಳ ಸುವಾಸನೆಯು ಪಸರಿಸಿ, ಜಗತ್ತಿಗೆ ಸುಖ, ಶಾಂತಿ ಕಲ್ಯಾಣಕರವಾಗುವುದೆಂಬುದು ಮರೆಯದೆ ನೆನಪಿನಲ್ಲಿಡಿ.

೯) ನೀವು ಎರಡನೇದವರಿಂದ ಸ್ವಂತ ನಿಮಗಾಗಿ ಹೇಗೆ ಬಯಸುವಿರೋ ಅದರಂತೆಯೇ ಎರಡನೇದವರ ಸಂಗಡ ನಿಮ್ಮ ಒಳ್ಳೇ ನಡಾವಳಿ ಇರಲಿ. ಎಲ್ಲರಲ್ಲಿರುವ ಸದ್ಗುಣಗಳನ್ನು ನೋಡಿರಿ. ನಾನು ಪಂಡಿತ, ದೊಡ್ಡವ, ನನ್ನ ಹೊರತಾಗಿ ಬೇರೊಬ್ಬನಿಲ್ಲವೆಂಬ ದುರಾಭಿಮಾನ ಬಿಟ್ಟು ನಮ್ರತೆಯಿಂದ ಎರಡನೇದವರನ್ನು ಸಂಗಡ ಕರೆದೊಯ್ಯುವುದೆಂಬುದನ್ನು ಮರೆಯದೇ ನೆನಪಿನಲ್ಲಿಡಿರಿ.

೧೦) ಧನದಾಶೆಯುಳ್ಳ ಲೋಭಿಯು ಹೇಗೆ ಸುಮ್ಮಗೆ ಗೂಢವಾಗಿ ಒಬ್ಬರಿಗೂ ತಿಳಿಯದಂತೆ ಧನಸಂಪಾನೆಯಲ್ಲಿ ಮಗ್ನನಾಗಿರುವನೋ ಮತ್ತು ಅವನು ದ್ರವ್ಯ ಸಂಪಾದನೆ ವಿಷಯವಾಗಿ ವ್ಯಾಖ್ಯಾನ ಕೊಡುವುದಿಲ್ಲವೋ, ಅದರಂತೆಯೇ ನೀವು ಸುಮ್ಮನೇ ಅಂತರಂಗದಲ್ಲಿ ದೈವೀಗುಣಗಳ ಸಂಪತ್ತುಗಳಿಸುವಲ್ಲಿ ನಿರತರಾಗಿರಿ. ಈ ದೈವೀಗುಣ ಧನ ಗಳಿಸುವಲ್ಲಿ ಬಹಿರಂಗ ರೊಚ್ಚಿಗೆ ತಾರದೆ ಕೇವಲ ಬರಿ ಮಾತುಗಳನ್ನು ಬೀರದೆ, ಡಂಗುರ ಹೊಯ್ಯದೇ, ಕೇವಲ ಅಂತರಂಗ ಸಾಧನ ಮಾಡುವುದೆಂಬುದು ಮರೆಯದೇ ನೆನಪಿನಲ್ಲಿಡಿ.

## ಕಟು ವಚನಗಳನ್ನು ಬಿಡಿರಿ- ಮೃದು ಮಧುರ ನುಡಿ ನುಡಿಯಿರಿ

೧೧) ದುರ್ವಿಚಾರವನ್ನು ಬಿಡಿರಿ. ನಾನು ದೊಡ್ಡವನು ಎರಡನೇದವರಿಂದ ನನಗೇನು ಭಯ; ಈ ಗರ್ವಿಕೆಯಿಂದ ಎರಡನೇದವರಿಗೆ ಸಿಟ್ಟಿನಿಂದ ಅಂಜಿಸುವುದು, ಹೊಡೆಯುವುದು, ಛಲ ಮಾಡುವುದು, ಕಪಟವೃತ್ತಿಯಿಂದ ಅವರನ್ನು ಮೋಸ ಮಾಡುವುದರಿಂದ ನಿಮ್ಮ ಮಿತ್ರರಿಗೂ

ಸಂಗಡಿಗರಿಗೂ, ಸ್ತ್ರೀಪುತ್ರ ಸೇವಕರಿಗೂ ನೀವು ವೈಮನಸ್ಯರಾಗಿ ನಿಮ್ಮಿಂದ ದೂರಾಗಿ ಬಿಗಡಾಯಿಸಿ ವಿರುದ್ಧರಾಗುವರು. ನಿಜವಾದುದ್ದೇನೆಂದರೆ ಇಂಥ ಅಂಜಿಕೆ, ಕಪಟ, ಛಲ ಬೆದರಿಸುವಿಕೆಯಿಂದ ನಿಮ್ಮವರನ್ನು ನೀವೆ ಅವರನ್ನು ಪರರನ್ನು ಮಾಡುವಿರಿ. ಸದಾ ಅವರನ್ನು ದೂರಟ್ಟುವಿರೆಂಬುದು ಮರೆಯದೇ ನೆನಪಿನಲ್ಲಿಡಿ.

೧೨) ಪ್ರೇಮ, ಸಹಾನುಭೂತಿ, ಸುಮ್ಮಾನ, ಮೃದುಮಧುರ ವಚನ, ಸಕ್ರೀಯವಾದ ಹಿತ, ತ್ಯಾಗ ಮತ್ತು ನಿಶ್ಚಲವಾದ ಸತ್ಯ. ಈ ವ್ಯವಹಾರದಿಂದಲೇ ನೀವು ಯಾರನ್ನಾದರೂ ನಿಮ್ಮವನನ್ನಾಗಿ ಮಾಡಿಕೊಳ್ಳುವಿರಿ. ನಿಮ್ಮ ವ್ಯವಹಾರವು, ನಿಮ್ಮ ಜೀವನವು, ಆಚರಣೆಯು ; ನಿಜವಾಗಿಯೂ ಹೀಗಿದ್ದರೆ ಎರಡನೇ ಜನರು ನಿಮ್ಮ ವಿಷಯವಾಗಿ ನಿಮಗೆ ದೊಡ್ಡ ದೊಡ್ಡ ಉತ್ತಮವಾದ ತ್ಯಾಗ ಮಾಡಲು ಸಿದ್ಧರಾಗುವರು. ಲೋಕಪ್ರಿಯರಾಗುವಿರಿ. ಜನರ ಹೃದಯದಲ್ಲಿ ಒಳ್ಳೆ ಮಧುರ ಪ್ರಿಯವಾದ ಸ್ಥಾನವು ನಿಮಗೆ ಸುರಕ್ಷಿತವಾಗಿ ದೊರೆಯುವುದು. ನೀವು ಸುಖಿಗಳಾಗುವಿರಿ. ನಿಮ್ಮ ಸಂಪರ್ಕದಲ್ಲಿ ಯಾರು ಬರುವರೋ ಅವರಿಗೂ ಸುಖಶಾಂತಿಯು ದೊರಯುವುದೆಂಬುದು ಮರೆಯದೇ ನೆನಪಿನಲ್ಲಿಡಿ.

೧೩) ಇಂಥ ಪ್ರಿಯ ಮಧುರ ವೃತ್ತಿಯಿಂದ, ಭಗವದರ್ಪಣ ಬುದ್ಧಿಯಿಂದ ಏನಾದರೂ ಕೊಡಲು ಅದು ನಿಮಗೆ ಏಕ ಬೀಜದಲ್ಲಿ ಅನಂತ ಫಲ ತುಂಬಿ ಫಲವೀವಂತೆ ಪರಿಣಾಮದಲ್ಲಿ ಅನಂತ ಫಲವು ದೊರೆಯುವುದು. ಸುಖಾಪೇಕ್ಷವಿದ್ದರೆ ಸುಖ ಕೊಡಿ. ಪ್ರೇಮ ಬಯಸುತ್ತಿದ್ದರೆ ಪ್ರೇಮದಾನ ಮಾಡಿ. ಹಿತ ಬಯಸಿದರೆ ಎಲ್ಲರಿಗೂ ಹಿತವಾಗುವ ಯೋಚನೆ ಮಾಡಿ. ಸನ್ಮಾನ ಬಯಸಿದರೆ ಎಲ್ಲರ ಸನ್ಮಾನ ಮಾಡುವುದು. ಸದ್ಗುಣ ಬಯಸಿದರೆ ಸದ್ಗುಣಗಳನ್ನು ದಾನ ಮಾಡಿ ಸದ್ಗುಣಾಚರಣೆಯಿಂದ ಸಂಸಾರದಲ್ಲಿ ನಿಶ್ಚಿಂತರಾಗಿ ಶಾಂತಿಯಿಂದ ಇರುತ್ತ ಭೂತದಯೆಯುಳ್ಳವರಾಗಿದ್ದು ಅಂತ್ಯದಲ್ಲಿ ಆನಂತ ಶಾಂತಿ ಆನಂದವನ್ನು ಪ್ರಾಪ್ತ ಹೊಂದುವುದಾದರೆ ಜಗತ್ತಿನಲ್ಲಿರುವ ಜೀವಿಗಳು ಸುಖ ಶಾಂತಿಗಳು ಇರಬೇಕೋ, ಸಹಜವಾದ ಶಾಂತಿ ಆನಂದವನ್ನು ಪಡೆಯಬೇಕೋ ಅಂಥ ನೈಜವಾದ ಸುಖಶಾಂತಿ ಆನಂದವೀವ ಕರ್ಮಾಚರಣೆ ಮಾಡುವುದೆಂಬುದು ಮರೆಯದೇ ನೆನಪಿನಲ್ಲಿಟ್ಟು ಆಚರಿಸುವುದು -ಇದೇ ದಾಸರಿಗೆ ಪ್ರೀತಿ; ಭಗವಂತನ ಪ್ರಸಾದಕ್ಕೆ ಕಾರಣ.

ಅವರು ಮತ್ತೊಂದು ಲೇಖನದಲ್ಲಿ ಏಕಾಂತ ಭಕ್ತನ ಲಕ್ಷಣಗಳನ್ನು ಕುರಿತು ಹೀಗೆಂದಿದ್ದಾರೆ :

೧) ವಿಶ್ವಾಸಮಾಡಿ ನಿಶ್ಚಯಿಸಿರಿ- ಎನ್ನ ಮೇಲೆ ಭಗವಂತನ ಅನಂತ ಕೃಪೆಯಿದೆ. ಅನವರತವೂ ಭಗವತ್ಕೃಪೆಯ ಸೋನೆ (ಮಳೆ) ಗರಿವುತ್ತಿದೆ. ಎನ್ನ ತನು-ಮನ-ರೋಮ ರೋಮಗಳು ಸಹ ಭಗವತ್ಕೃಪೆಯ ಸೋನೆಯಿಂದ ತೊಯ್ದುತೊಯ್ದು ಸಮಗ್ರ ಹಸಿಯಾಗಿದೆ. ನಾನು ಭಗವತ್ಕೃಪೆಯ ಸುಧಾಸಮುದ್ರದಲ್ಲಿ ಆನಂದ ಮಗ್ನನಾಗಿರುವೆ. ಎನ್ನ ಮೇಲೆ, ಕೆಳಗೆ, ಎಡ, ಬಲ, ಬಾಹಿರ ಅಂತರ ಸರ್ವತ್ರದಲ್ಲಿಯೂ ಭಗವಂತನ ಕೃಪೆ ತುಂಬಿ ತುಳುಕುತ್ತಲಿದೆ. ಎಲ್ಲ ರೀತಿಯಿಂದಲೂ ನಾನು ಭಗವಂತನ ಕೃಪೆಯೆಂಬ ಸುರಿಮಳೆಯಲ್ಲಿ ಸದಾತೃಪ್ತ ಆಗುತ್ತಲಿರುವೆನೆಂಬ ವಿಶ್ವಾಸ ನಂಬಿಕೆಯ ನಿಶ್ಚಯ ಮಾಡಿರಿ.

೨) ನಿಶ್ಚಯಮಾಡಿ - ಭಗವತ್ಕೃಪೆಯ ಪ್ರಸಾದರೂಪ ಸ್ನಾನದಿಂದ ಎನ್ನ ಮಲರೂಪವಾದ ಪಾಪವು ತೊಳೆದು ಹೋಗಿದೆ. ಪಾಪ-ತಾಪಗಳೆಂಬ ಎಲ್ಲ ಕಸಕುಪ್ಪಿಗಳು ತೇಲಿ ಹರಿದು ಹೋಗಿವೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ದಂಭ ದುರಾಭಿಮಾನಿ ಈರ್ಷ ವೈರಗಳೆಲ್ಲ ನಷ್ಟವಾಗಿವೆ. ಇಂಥ ಭಗವತ್ಕೃಪೆ ಇರಲು ಹಸಿವೆ ತೃಷೆ ಪಾಪಗಳು ಎನ್ನಲ್ಲಿ ಇರಲಾರುವು.

೩) ನಂಬಿಕೆಯಿಡಿ- ಭಗವತ್ಕೃಪೆಯ ಪ್ರಭಾವದಿಂದ ಎನ್ನೊಳಗೆ ಭಗವಂತ ಎಲ್ಲಿರುವನೆಂಬ ಸಮಬುದ್ಧಿ, ಶಾಂತಿ, ವಿಷಯ ಅನಾಸಕ್ತಿ, ಜ್ಞಾನಪ್ರೇಮ ಭಕ್ತಿಗಳು ನಿತ್ಯ ಹೆಚ್ಚುತ್ತಲಿವೆಯೆಂಬುದು ನಿಶ್ಚಯ ಮಾಡಿ.

೪) ಸ್ಥಿರಮನಸ್ಕರಾಗಿ- ಈ ಭಗವಂತನ ಕೃಪೆಯಿಂದ ಈಗ ಎನ್ನ ಮನದಲ್ಲಿ ಕೆಟ್ಟ ಪಾಪ ವಿಚಾರ ಸೇರಲಾರದು. ಎನ್ನ ವಾಣಿಯು ಶುದ್ಧವಾಗಿದೆ. ಸುಳ್ಳು ಎಂದಿಗೂ ನಾಲಿಗೆ ನುಡಿಯಲಾರದು. ಕಠಿಣ ವಿಷವಾಕ್ಯಗಳೆಂದಿಗೂ ಹೊರಡಲಾರವು. ಎನ್ನ ಯಾವ ಇಂದ್ರಿಯಗಳೂ ಎಂದಿಗೂ ಭಗವದ್ವಿಮುಖವಾಗಿ ವರ್ತಿಸಲಾರವೆಂಬುದು ನಿಶ್ಚಯ ತಿಳಿಯಿರಿ.

೫) ನಿಶ್ಚೈಸಿರಿ- ಈಗ ಎನ್ನ ಮನ ಭಗವತ್ ಸ್ಮರಣ ಚಿಂತನ, ಮನನ, ಧ್ಯಾನ, ಮೃದು, ಮಧುರ, ಸುಂದರ ಭಗವಂತನ ರೂಪ ಧ್ಯಾನದಲ್ಲಿ ಆಸಕ್ತಿ ಹೊಂದಿದೆ. ಒಂದು ಕ್ಷಣ ಮಾತ್ರವಾದರೂ ಭಗವಂತನ ವಿಸ್ಮರಣೆಯಾಗಲಾರದು. ಎನ್ನ ವಾಣಿ ಭಗವಂತನ ನಾಮ ಸಂಕೀರ್ತನೆ ಗುಣಗಾನ ದಿಂದ ಎಂದಿಗೂ ತೊಲಗಲಾರದು. ಎನ್ನ ಶರೀರವು ಎಂದಿಗೂ ಭಗವತ್ ಸೇವೆ ಮಾಡದಿರಲಾರದು. ನಿರಂತರ ಭಗವತ್ ಸೇವೆ ಮಾಡವುದೆಂಬ ನಿಶ್ಚಯವಿರಲಿ.

೬) ಸಿದ್ಧಾಂತಗೈಯಿರಿ- ಭಗವತ್ಕೃಪೆಯಿಂದ ನಾನು ಭಗವಂತನ ಭಕ್ತನಾಗಿರುವೆ. ಭಗವಂತನು ಎನ್ನವನಾಗಿದ್ದಾನೆ. ನಮ್ಮಗಳ ಈ ಸಂಬಂಧವು ಎಂದಿಗೂ ಯಾವಾಗಲೂ ಬಿಡುಗಡೆಯಾಗಲಾರದು. ಒಂದು ವೇಳೆಯಾದರೂ ನಾನು ಭಗವಂತನಿಂದ ವಿಮುಖನಾಗಲಾರೆ. ಭಗವಂತನು ನನ್ನಿಂದ ಚ್ಯುತನಾಗಿ ಬೇರೆಯಿರಲಾರ. ಭಗವಂತನಿಂದಲೇ ನನ್ನ ಇರುವಿಕೆ ಎಂಬ ಸಿದ್ಧಾಂತ ತಿಳಿಯಿರಿ.

೭) ನೆರೆನಂಬಿ- ನಾನು ಭಗವದಾಧೀನನಾಗಿದ್ದೇನೆ. ಶರೀರ, ಮನ, ಇಂದ್ರಿಯ ಎಲ್ಲವೂ ಭಗವಂತನ ಅಧೀನವಾದ ಮೇಲೆ ನಡೆನುಡಿ ಎಲ್ಲ ವ್ಯಾಪಾರವು ಆತನ ದ್ವಾರವೇ; ಆ ಭಗವಾನನ ಪ್ರೇರಣೆ ಆತನ ಶಕ್ತಿಯ ದ್ವಾರಾ ಆ ಭಗವಂತನ ಮಂಗಳಕರವಾದ ಸತ್ಯಸಂಕಲ್ಪದ ಇಚ್ಛಾದಿಂದ ಆಗುವುದು. ಸ್ವತಃ ಮಂಗಳಮಯನಾದ ಭಗವಂತನಿರಲು ಸ್ವಭಾವಿಕವಾಗಿ ಎನ್ನ ಶರೀರದಿಂದ ಮಂಗಳಕಾರ್ಯ ಮನದಿಂದ ಮಂಗಳಮಯ ರೂಪಚಿಂತನ ಇಂದ್ರಿಯಗಳೆಲ್ಲ ಮಂಗಳಕರವಾದ ವ್ಯಾಪಾರ ಮಾಡುವುದೆಂಬುದು ನಿಜವಾಗಿ ನಂಬಿ.

೮) ಚಿತ್ತೇಕಾಗ್ರತೆ ಇರಲಿ- ಸರ್ವೋತ್ತಮನಾದ ಭಗವಂತನೊಬ್ಬನೇ ಮಂಗಳ ಸ್ವರೂಪ. ಮಂಗಳಮಯ ವ್ಯಾಪಾರ. ಈ ಮಂಗಳಮಯ ಭಗವಂತನ ಹೊರ್ತಾಗಿ ಎಲ್ಲವೂ ಆಸಾರ ಅನಿತ್ಯ ಅಮಂಗಳ ಸ್ವರೂಪಗಳಾಗಿವೆ. ಎನ್ನ ಚಿತ್ತದಲ್ಲಿ ಮಂಗಳಕರ ಭಗವಂತನಿರಲು ಅಮಂಗಳವು ಎನ್ನ ಸಮೀಪಕ್ಕೆ ಸಹ ಎಂದಿಗೂ ಬಾರವೆಂಬ ಚಿತ್ತೇಕಾಗ್ರತೆ ಇರಲಿ.

೯) **ನೈಜಭಾವದೊಲುಮೆ** - ಇಂತು ಮಂಗಳಕರನಾದ ಭಗವಂತ ಸ್ಥಿರ ಚಿತ್ತದಲ್ಲಿರಲು ಮಂಗಳಕರವಾದ ಶಾಂತಿ, ಸಮಚಿತ್ತ, ಪ್ರೇಮ ಜ್ಞಾನ ಭಕ್ತಿ ವೈರಾಗ್ಯ ಆನಂದಾದಿಗಳು ನನ್ನನ್ನು ಎಂದೂ ಬಿಟ್ಟಿರಲಾರವು. ಏಕೆಂದರೆ ಜಗತ್ತಿಗೆ ಮಂಗಳಕಾರನಾದ ಸೂರ್ಯನ ಪ್ರಕಾಶವು ಸೂರ್ಯನ ಸಂಗಡವಿರುವಂತೆ ಸರ್ವ ಮಂಗಳಕರನಾದ ಭಗವಂತನು ನಿತ್ಯನಾಗಿ ಎನ್ನಿಂದಗಲದೇ ಇರುವ ನೈಜಮಂಗಳ ಭಾವದೊಲುಮೆ ಇರಲಿ.

೧೦) **ಮುಮುಕ್ಷುವಿನ ಧೃಡಮನ**- ಎನ್ನ ಚಿತ್ತ ಮಂದಿರವು ಭಗವಂತನ ಅನಂತ ಗುಣರೂಪ ಕ್ರಿಯೆಯಿಂದ ಭರಿತವಾಗಿದೆ. ತುಂಬಿ ತುಳುಕುತ್ತಿದೆ. ಅನ್ಯ ವಿಷಯಗಳು ಅನ್ಯ ವಸ್ತುಗಳು ಸೇರಲು ಸ್ವಲ್ಪಾದರೂ ಸ್ಥಳವಿಲ್ಲದೆಂಬುದು ನಿಶ್ಚೈಸಿರಿ.

೧೧) **ಮುಕ್ತರನಡೆ**- ನಾನು, ನನ್ನ ತನುಮನ ಇಂದ್ರಿಯಗಳೆಲ್ಲವೂ ಆ ಮಹಾ ಪ್ರಭುವಿನ ಅಧೀನವಾಗಿದೆ. ತನು ನನ್ನದಲ್ಲ ಮನ ಎನ್ನದಲ್ಲ -ಇಂದ್ರಿಯಗಳೆಲ್ಲ ಎನ್ನ ಸ್ವಾಧೀನವಲ್ಲ. ನಾನು ಯಾವಾಗಲೂ ಅಸ್ವತಂತ್ರ. ಆ ಭಗವಂತನು ತನ್ನ ಇಚ್ಛಾನುಸಾರ ಪ್ರವರ್ತಿಸುವಂತೆ ವರ್ತಿಸುವವು. *ಹರಿಯಿಂದ ನಡಿವೋರು ಹರಿಯಿಂದ ನುಡುವೋರು* - ಎಂಬ ದಾಸರ ವಚನ ನಂಬಿ ನಿಶ್ಚೈಸಿದರೆ ಇಂದೇ ಮುಕ್ತಿ ಇದೆ. ಮುಕ್ತ ನಡೆಯನ್ನರಿತು ಮುಕ್ತರಾಗಿರಿ.

## ೧೧

ಸಾಮಾನ್ಯವಾಗಿ ಗೋರೆಬಾಳ ಹನುಮಂತರಾಯರು ಹರಿದಾಸ ಸಾಹಿತ್ಯಕ್ಕೆ ಮಾಡಿದ ಸೇವೆಯನ್ನು ಶರಣ ಸಾಹಿತ್ಯಕ್ಕೆ ಡಾ. ಹಳಕಟ್ಟಿಯವರು ಮಾಡಿದ ಸೇವೆಯೊಂದಿಗೆ ಹೋಲಿಸುತ್ತಾರೆ. ಇಬ್ಬರೂ ವಕೀಲ ವೃತ್ತಿಯಲ್ಲಿದ್ದು, ಕ್ರಮೇಣ ಧಾರ್ಮಿಕ ಸಾಹಿತ್ಯದ ಕಡೆಗೆ ತಿರುಗಿದವರು. ಒಬ್ಬರು ವಚನ ಸಾಹಿತ್ಯದ ಸಂವೃದ್ಧಿ ಸೌಂದರ್ಯಗಳಿಗೆ ಹೋಗಿ ಶರಣದೀಕ್ಷೆ ಸ್ವೀಕರಿಸಿ ಬಾಳಿನ ಕೊನೆಯವರೆಗೆ ಶರಣ ಸಾಹಿತ್ಯಕ್ಕಾಗಿ ಹಸ್ತಪ್ರತಿಗಳ ಸಂಗ್ರಹ, ಸಂಶೋಧನೆ, ಪರಿಷ್ಕರಣೆ, ಮುದ್ರಣ, ಪ್ರಕಟಣೆಗಳಿಗಾಗಿ ದುಡಿದರು. ಇನ್ನೊಬ್ಬರು ಇದೇ ಬಗೆಯ ಕಾರ್ಯವನ್ನು ಹರಿದಾಸ ಸಾಹಿತ್ಯಕ್ಕೆ ಮಾಡಿದರು. ಹಳಕಟ್ಟಿಯವರು ಶಿವಾನುಭವವೆಂಬ ಮಾಸಿಕವನ್ನು ಈ ಕಾರ್ಯಕ್ಕಾಗಿ ಆರಂಭಿಸಿದರೆ, ಹನುಮಂತರಾಯರು ಹರಿದಾಸ ಸಾಹಿತ್ಯದ ದ್ವೈಮಾಸಿಕವನ್ನು ಕೆಲವು ವರ್ಷ ನಡೆಸಿದರು. ಹಳಕಟ್ಟಿಯವರು ವಚನ ವಾಙ್ಮಯದ ಭಗೀರಥರಾದಂತೆ ಹನುಮಂತರಾಯರು ದಾಸ ಸಾಹಿತ್ಯದ ಭಗೀರಥರಾದರು. ವ್ಯತ್ಯಾಸವೆಂದರೆ ಲೌಕಿಕ ಜೀವನದಲ್ಲಿ ಹಳಕಟ್ಟಿಯವರ ಕಾರ್ಯ ಸಮಾಜದ ಬಂಧುಗಳಿಂದ ಗುರುತಿಸಲ್ಪಟ್ಟು ತಮ್ಮವರಿಂದ ಅವರು ರಾವ್ ಬಹದೂರ್ ಬಿರುದಾಂಕಿತರೂ, ವಿಶ್ವವಿದ್ಯಾನಿಲಯದಿಂದ ಡಿಲಿಟ್ ಪದವಿ ಪಡೆದ ವಿದ್ವಾಂಸರೂ ಆದರು. ಆದರೆ ಇದಾವ ಲೌಕಿಕ ಮಾನ, ಸನ್ಮಾನಗಳು ಹನುಮಂತರಾಯರಿಗೆ ದೊರಕಲಿಲ್ಲ. ಇಬ್ಬರೂ ತಮ್ಮ ಪರಿಸರದಿಂದ ಚಿಮ್ಮಿ ಬಂದ ಬೆಳಕಿನ ಪುಂಜಗಳು. ಇಬ್ಬರೂ ಸ್ವಾರ್ಥರಹಿತರಾಗಿ ದುಡಿದ ಸೇವಾ ದೀಕ್ಷಿತರು.

ಇಬ್ಬರೂ ಪ್ರಾಚೀನರ ಸಾಹಿತ್ಯ ಸಂಸ್ಕೃತಿಗಳಿಗೆ ಮಾರು ಹೋಗಿ ಕಾಲ ಪ್ರವಾಹದ ವಿರುದ್ಧ ಹೋರಾಡಿ ಅವನ್ನು ಗಳಿಸಿ ಆಯಾ ಸಾಹಿತ್ಯದ ಜಲರಾಶಿಯಲ್ಲಿ ಅಡಗಿದ್ದ ಅನರ್ಘ್ಯ

ರತ್ನಗಳನ್ನು ಹೊರಗೆ ತಂದು ನಾಡು ನುಡಿಗಳಿಗೆ ಅನುಪಮ ಸೇವೆ ಸಲ್ಲಿಸಿದ ಮಹಾ ಚೇತನರು. ಒಬ್ಬರು ವಚನ ಶಾಸ್ತ್ರ ಪಿತಾಮಹರೆನಿಸಿದರೆ, ಇನ್ನೊಬ್ಬರು ಹರಿದಾಸ ಸಾಹಿತ್ಯ ಪ್ರವರ್ತಕರೆನಿಸಿದರು. ಶರಣ ಸಾಹಿತ್ಯವನ್ನು ಬೆಳಕಿಗೆ ತರುವುದು ಹಳಕಟ್ಟಿಯವರ ಲಿಂಗ ಪೂಜೆಯಾದರೆ, ಹರಿದಾಸ ಸಾಹಿತ್ಯವನ್ನು ಹೊರಗೆ ತರುವುದೇ ಹನುಮಂತರಾಯರಿಗೆ ಹರಿವಾಯುಗಳ ಪೂಜೆಯಾಯಿತು. ಇಬ್ಬರೂ ತಮಗೆ ದುರ್ಲಭವಾಗಿದ್ದ ಗ್ರಂಥಶಾಸ್ತ್ರದ ಪರಿಚಯವಿಲ್ಲದೆ, ಸ್ವಂತ ಪರಿಶ್ರಮ, ಶ್ರಮ ಸಾಧ್ಯವಾದ ದುಡಿಮೆ ಯಿಂದ ಗ್ರಂಥ ಸಂಪಾದನೆ ಶಾಸ್ತ್ರಕ್ಕೆ ತಮ್ಮದೆ ಆದ ಮಹತ್ತರ ಕೊಡುಗೆಯನ್ನು ನೀಡಿದರು. ಇಬ್ಬರಲ್ಲೂ ಗ್ರಂಥ ಸಂಪಾದಕರಿಗೆ ಇರಬೇಕಾಗಿದ್ದ ಪ್ರಾಮಾಣಿಕತೆ, ನಿರ್ಣಯಾತ್ಮಕತೆ, ವಿಚಾರ ಪಕ್ವತೆ ಮತ್ತು ಆಯಾ ವಿಷಯಗಳಿಗೆ ಸಂಬಂಧಿಸಿದ ಪಾಂಡಿತ್ಯಗಳು ಇದ್ದವು. ಇವರಿಬ್ಬರಿಗೂ ತಮಗೆ ದೊರೆತ ಹಸ್ತ ಪ್ರತಿಗಳನ್ನು ವೈಜ್ಞಾನಿಕವಾಗಿ ಗ್ರಂಥ ಸಂಪಾದನಾ ಕ್ರಮದಂತೆ ಸಂಪಾದಿಸಿ ಪ್ರಕಟಿಸಲಿಲ್ಲ. ಅದು ಅವರ ಉದ್ದಿಶ್ಯವೂ ಆಗಿರಲಿಲ್ಲ. ಅದಕ್ಕೆ ಬೇಕಾದ ಸಮಯವಾಗಲಿ, ಅನುಕೂಲಗಳಾಗಲೀ ಇರಲಿಲ್ಲ. ನಷ್ಟವಾಗದಂತೆ ಅದಷ್ಟೂ ಸಾಹಿತ್ಯವನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಅವರು ಕಾಲನವಿರುದ್ಧ ಹೋರಾಡುವುದರಲ್ಲಿ ಉಳಿದ ವಿಚಾರಗಳಿಗೆ ವೇಳೆ ಇರಲಿಲ್ಲ. ಹೀಗೆ ಹಳಕಟ್ಟಿಯವರು ವಚನ ಸಾಹಿತ್ಯ ಮಾಡಿದ ಸೇವೆ ಅವರನ್ನು ಪ್ರಾತಃಸ್ಮರಣೀಯರ ಸಾಲಿನಲ್ಲಿ ಎತ್ತರದ ಸ್ಥಾನ ದೊರಕಿಸಿ ಕೊಟ್ಟಿದ್ದಾರೆ. ಇಂಥದೇ ಸ್ಥಾನ ಗೋರೆಬಾಳ ಹನುಮಂತ ರಾಯರಿಗೆ ಹರಿದಾಸ ಸಾಹಿತ್ಯದಲ್ಲಿ ದೊರಕಿದೆ.

ಗೋರೆಬಾಳ ಹನುಮಂತರಾಯರು ತಮ್ಮ ದೀರ್ಘ ಜೀವನದ ಕೊನೆಯ ಹಂತಕ್ಕೆ ದೈಹಿಕವಾಗಿ ಮಾನಸಿಕವಾಗಿ ಸಿದ್ಧರಾಗುತ್ತಿದ್ದರು. ಅವರು ಕೈಗೊಂಡಿದ್ದ ಜೀವಿತದ ಮಹಾಕಾರ್ಯ, ಹರಿಕಥಾಮೃತಸಾರದ ಗ್ರಂಥ ಪ್ರಕಟಣೆಯೊಂದಿಗೆ ಸಾಧಿಸಿತ್ತು. ಅವರು ತಮ್ಮ ಸಮಸ್ತ ಗ್ರಂಥಗಳ ಮುದ್ರಣ ಪ್ರಕಟಣ ಕಾರ್ಯವನ್ನು ಶ್ರೀ ವರದೇಂದ್ರ ಸಾಹಿತ್ಯ ಮಂಡಲಕ್ಕೆ ಒಪ್ಪಿಸಿ, ಕೈತೊಳೆದು ಕೊಂಡಿದ್ದರು. ತಾವು ಕಷ್ಟ ಪಟ್ಟು ಸಂಗ್ರಹಿಸಿದ್ದ ಸುಮಾರು ೧೫೦ ಹೊತ್ತಿಗೆಗಳಲ್ಲಿ ಪ್ರಕಟವಾಗ ಬೇಕಾಗಿದ್ದ ಹರಿದಾಸ ಸಾಹಿತ್ಯವನ್ನೆಲ್ಲಾ ಹದಿನೈದು ಸಂಪುಟಗಳಲ್ಲಿ ಅಂದವಾಗಿ ಬರೆಸಿ, ಬೈಂಡು ಮಾಡಿಸಿ, ಅದನ್ನು ಕೃಷ್ಣಾರ್ಪಣ ಭಾವದಿಂದ ಮಂಡಲಿಗೆ ಅರ್ಪಿಸಿ, ತಮ್ಮ ಅವತಾರ ಲೀಲೆಯನ್ನು ಮುಗಿಸಲು ಸಿದ್ಧರಾದರು.

ಅವರು ನಿರೀಕ್ಷಿಸುತ್ತಿದ್ದ ಆ ಅಮೃತ ಗಳಿಗೆ ಹತ್ತಿರ ಬಂದಿತು. ಅವರು ೧೯೬೯ರಲ್ಲಿ ಭೀಷ್ಮರಂತೆ ಜೀವನದ ಸಹಸ್ರ ಕೋಟಲೆಗಳೆಂಬ ಶೂಲೆಗಳೆಂಬ ಶೂಲಗಳಿಗೆ, ಚಿಂತೆಯ ಚಿತೆಯಲ್ಲಿ ವ್ಯಾಧಿಗ್ರಸ್ತವಾಗಿ ಜೀವಚ್ಛವವಾಗಿ ಮಲಗಿದ್ದರು. ಪಾಶ್ವವಾಯುವಿನಿಂದ ಮಲಗಿದ್ದ ಅವರನ್ನು ಹೈದರಾಬಾದಿನಲ್ಲಿದ್ದ ಅಳಿಯ ದಾಮೋದರರಾಯರು ತಮ್ಮ ಮನೆಗೆ ಕರೆದೊಯ್ದರು. ಅಲ್ಲಿ ಪರಮಾತಮ್ಮನು ಅವರನ್ನು ತನ್ನ ಬಳಿಗೆ ಬರಮಾಡಿಕೊಂಡನು. ಗೋರೆಬಾಳು ಹನುಮಂತರಾಯರ ಜೀವನ ಭವ ಬಂಧನದ ಶೃಂಖಲೆಗಳನ್ನು ಕಳಚಿಕೊಂಡು ಅವರ ಆರಾಧ್ಯ ದೈವ ಸುಂದರವಿಠಲನ ಪಾದಗಳಲ್ಲಿ ಲೀನವಾಯಿತು. ನೊಂದ ಜೀವ ತಣ್ಣಗಾಯಿತು. ಆದರೆ ಅವರು ಮಾರ್ತಾಂಡನಂತೆ ಜ್ಞಾನಜ್ಯೋತಿ ಹೊತ್ತಿಸಿ ಹರಿದಾಸ ಸಾಹಿತ್ಯದ ಮೂಲಕ ಸಮಸ್ತ ಸಜ್ಜನರಿಗೆ ಬೆಳಕನ್ನೆರೆದರು.

# ಪರಿಶಿಷ್ಟ

## ಗೋರೆಬಾಳು ಹನುಮಂತರಾಯರು ಪ್ರಕಟಿಸಿದ ಹರಿದಾಸ ಸಾಹಿತ್ಯ ಗ್ರಂಥಗಳು

**I. ಹರಿದಾಸ ಸಾಹಿತ್ಯ :**

ಪುರಂದರದಾಸರು ಮತ್ತು ಹರಿದಾಸರ ಪೀಳಿಗೆ, ಮೋಕ್ಷ ಮಾರ್ಗ ಪ್ರದೀಪಿಕಾ, ವಿಜಯ ದಾಸರ ಸ್ತೋತ್ರ ಭಾಗ ಸುಳಾದಿ, ಪ್ರಾರ್ಥನಾ ಭಾಗ ಸುಳಾದಿ, ಉಪಾಸನಾ ಭಾಗ ಸುಳಾದಿ, ಸಾಧನಾ ಭಾಗ ಸುಳಾದಿ (ಎರಡು ಭಾಗಗಳು) ಪ್ರಮೇಯ ಭಾಗ ಸುಳಾದಿ, ತೀರ್ಥಕ್ಷೇತ್ರ ಮಹಿಮಾ ಸುಳಾದಿ, ಸೃಷ್ಟಿ ಪ್ರಕರಣ ಸುಳಾದಿ, ಚಕ್ರಾಬ್ಜ ಮಂಡಲ ಸುಳಾದಿ, ವಿಜಯದಾಸರ ಪದಗಳು (ಎರಡು ಭಾಗಗಳು) ವಿಜಯದಾಸರ ಚರಿತ್ರೆ, ವೆಂಕಟೇಶ ಮಹಾತ್ಮೆ ಸುಳಾದಿ, ಹನುಮದ್ವ್ರತ ಸುಳಾದಿ, ಗೋಪಾಲವಿಠಲರ ಸುಳಾದಿ,, ಪುರಂದರದಾಸರ ಸುಳಾದಿ, ಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ, ಜಗನ್ನಾಥದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ, ವೇಣು ಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ, ಗೋಪಾಲದಾಸವರ್ಯಾದಿ ಹರಿದಾಸರ ಪದ, ಆದ್ಯಾದಿ ಹರಿದಾಸರ ಪದ ಸುಳಾದಿ, ಶ್ರೀಪಾದರಾಜಾದಿ ಹರಿದಾಸರ ಸ್ತೋತ್ರ ಮತ್ತು ಪದ, ವಾಸುದೇವ ವಿಠಲರ ಪದಗಳು, ಗುರು ವಿಜಯವಿಠಲರ ಕೃತಿಗಳು. ರಾಘವೇಂದ್ರ ಗುರುಸಾರ್ವಭೌಮ, ಇಂದಿರೇಶ ವಿಠಲಕೃತ ಲಕ್ಷ್ಮೀ ಲೀಲಾಮೃತ ಇತ್ಯಾದಿ.

**II. ಗದ್ಯ ಗ್ರಂಥಗಳು :**

೧.ಸದಾಚಾರ
೨.ಪಂಚಭೇದ
೩.ಬ್ರಹ್ಮಚರ್ಯ
೪.ಆಧ್ಯಾತ್ಮ ಮಾಲಾ (ಎರಡು ಭಾಗಗಳು)
೫.ಸಂಧ್ಯೋಪಾಸನೆ (ಎರಡು ಭಾಗಗಳು)
೬.ಆಧ್ಯಾತ್ಮಿಕ ವಿವಿಧ ನಿಬಂಧಗಳು.

**III. ಇತರ ಧಾರ್ಮಿಕ ಕಾವ್ಯಗಳು :**

೧. ಹರಿಕಥಾಮೃತ ಸಾರ ಸಂಗ್ರಹ.
೨. ಹರಿವಾಯು ಸ್ತುತಿ
೩. ಪ್ರಾಕೃತ ರಾಘವೇಂದ್ರ ಸ್ತೋತ್ರ
೪. ಶ್ರೀ ಅನಂತನ ವ್ರತಕಥಾ

೫. ಮುಯ್ಯದ ಪದ
೬. ಶ್ರೀ ಕೃಷ್ಣಲೀಲಾಮೃತ
೭. ಸೀತಾ ಸ್ವಯಂವರ
೮. ಕಾಳೀ ಸ್ವಯಂವರ
೯. ಹನುಮದ್ವಿಲಾಸ
೧೦. ಭೀಮಸೇನ ವಿಲಾಸ
೧೧. ವೀರಭದ್ರವಿಲಾಸ
೧೨. ಪಾರ್ಥವಿಲಾಸ
೧೩. ಅನಿರುದ್ಧ ವಿಲಾಸ
೧೪. ವಸಿಷ್ಟ-ವಿಶ್ವಾಮಿತ್ರ ಆಖ್ಯಾನ
೧೫. ಶ್ರೀಕೃಷ್ಣಜಯಂತಿ ಕಥಾ
೧೬.ಮನ್ಮಥ ವಿಲಾಸ.

**IV. ಮಹಾಕಾವ್ಯ**
ಶ್ರೀಸುಮಧ್ವವಿಜಯ (ವರಸುಂದರ ವೆಂಕಟೇಶ ಪ್ರಣೀತ)

**V. ಶ್ರೀ ಹರಿಕಥಾಸಾರಮೃತ ಟೀಕಾ**
ಹರಿಕಥಾಮೃತಸಾರ ಪಂಚರತ್ನ ಟೀಕಾ (ಆರು ಸಂಪುಟಗಳು) - ಇತ್ಯಾದಿಗಳು.



# ಸುಬೋಧ ರಾಮರಾಯರು

(ಕ್ರಿ.ಶ. ೧೮೯೦ -೧೯೭೦)

# ಸುಭೋಧ ರಾಮರಾಯರು

## (ಕ್ರಿ.ಶ. ೧೮೯೦-೧೯೭೦)

ಸುಭೋಧ ರಾಮರಾಯರು ಕ್ರಿ.ಶ.೧೮೯೦ರಲ್ಲಿ ಚಿಕ್ಕಮಗಳೂರಿನಲ್ಲಿ ಜನಿಸಿದರು. ಇವರ ತಂದೆ ಹನುಮಂತರಾಯರು; ತಾಯಿ ಭಾರತೀಬಾಯಿ. ಈ ದಂಪತಿಗಳಿಗೆ ಆರು ಮಂದಿ ಮಕ್ಕಳು. ಇವರಲ್ಲಿ ಮೂವರು ಗಂಡು ಮಕ್ಕಳು, ಮೂವರು ಹೆಣ್ಣು ಮಕ್ಕಳು. ರಾಮರಾಯರು ಹೆಣ್ಣು ಮಕ್ಕಳು ಹುಟ್ಟಿದ ಮೇಲೆ ಹುಟ್ಟಿದ್ದರು. ಇವರ ಅಣ್ಣ ಸುಬ್ಬರಾಯ; ತಮ್ಮ ಅನಂತ ಪದ್ಮನಾಭ ಮೂರ್ತಿ, ಇವರಲ್ಲಿ ನಡುಕಲ ಮಗುವೇ ರಾಮರಾಯರು.

ಹನುಮಂತರಾಯರ ಹಿರಿಯರು ಯಾರೋ ಮೈಸೂರಿನಲ್ಲಿದ್ದರಂತೆ. ಈ ಕಾರಣ ದಿಂದಾಗಿ ಈ ಮನೆತನಕ್ಕೆ 'ಎಂ' ಅಂದರೆ 'ಮೈಸೂರು' ಅಂಟಿಕೊಂಡು ಬಂದಿತ್ತು. ಅವರು ಬೆಂಗಳೂರಿಗೆ ಬಂದುದೇ ಒಂದು ಕಥೆ. ಸುಭೋದ ರಾಮರಾಯರಾದುದೇ ಇನ್ನೊಂದು ಕಥೆ ! ರಾಮರಾಯರು ತಮ್ಮ ಸಾರಸ್ವತ ಸೇವೆಯಿಂದ ಪ್ರಸಿದ್ಧಿಗೆ ಬಂದ ಮೇಲೆ ಅವರು ತಮ್ಮ ಬಿಡುವಿನಲ್ಲಿ ಆತ್ಮಕಥೆಯನ್ನು ಬರೆಯಲು ಯೋಚಿಸಿ ಅದರ ರೂಪರೇಖೆಗಳನ್ನು ಗುರುತು ಹಾಕಿದ್ದರು. ಆದರೆ ಕಾರ್ಯ ಬಾಹುಳ್ಯದಿಂದ ಇದನ್ನು ಅವರು ಬರೆಯಲೇ ಇಲ್ಲ. ಈ ಆತ್ಮವೃತ್ತ ಬರೆಯಲ್ಪಟ್ಟಿದ್ದರೆ ಇದೊಂದು ಜೀವನ ಚರಿತ್ರೆಗಳ ವಾಙ್ಮಯದಲ್ಲಿ ಒಂದು ಮಹತ್ಪೂರ್ಣ ಕೃತಿಯಾಗುತ್ತಿತ್ತು; ಆದರೆ ಕನ್ನಡಿಗರಿಗೆ ಆ ಭಾಗ್ಯವಿರಲಿಲ್ಲ. ಅವರು ತಮ್ಮ ಜೀವಿತದ ಬಗ್ಗೆ ಬರೆದಿಟ್ಟಿರುವ ತುಣುಕು ವಿವರ ಗಳಿಂದ ನಾವು ತೃಪ್ತಿಪಟ್ಟುಕೊಳ್ಳಬೇಕಾಗಿದೆ.

ಅವರು ಬರೆದಿಟ್ಟಿರುವ ತಮ್ಮ ಆರಂಭದ ಜೀವನದ ಹೋರಾಟದ ಭಾಗ ಹೀಗಿದೆ :-

"ನಮ್ಮ ತಂದೆಯವರಿಗೆ ಮೈಸೂರು ಹನುಮಂತರಾಯರೆಂದು ಏಕೆ ಅಡ್ಡ ಹೆಸರು ಬಂತೋ ತಿಳಿಯದು. ಅವರು ಎಂದೂ ಮೈಸೂರನ್ನು ನೋಡಿದಿಲ್ಲ. ಆದರೂ ನಮ್ಮ ಮನೆತನಕ್ಕೆ ಮೈಸೂರಿನ ಸಂಕೇತವಾದ 'ಎಂ' ಹೇಗೋ ಸೇರಿಕೊಂಡು ಬಂದಿದೆ.

ತಾಯಿಯವರ ನಾಮಧೇಯ ಭಾರತೀಬಾಯಿಯೆಂದು.... ನನ್ನ ಜನ್ಮ ಕ್ರಿ.ಶ. ೧೮೯೦ನೇ ಇಸವಿ ವಿಕೃತನಾಮ ಸಂವತ್ಸರದ ಭಾದ್ರಪದ ಶುದ್ಧ ಚೌತಿ- ಅಂದರೆ ವಿನಾಯಕನ ಹಬ್ಬದ ದಿನ ಆಯಿತು. ಮಹಾ ಸಮಾಧಾನದ ಪ್ರಕೃತಿಯವಳೆಂದು ಹೆಸರಾಗಿದ್ದ ನಮ್ಮ ತಾಯಿಯ ಹೆಚ್ಚು ಪರಿಚಯವಾಗಲು ಅವಕಾಶವಿರಲಿಲ್ಲ. ಬಾಲ್ಯದ ಹೆಚ್ಚಿನ ಸಂಗತಿಗಳ ನೆನಪಿಲ್ಲ. (ತಾಯಿ ತೀರಿಕೊಂಡ ಮೇಲೆ) ನಾವುಗಳೆಲ್ಲ ಪರದೇಶಿಗಳಾದೆವು. ನಮ್ಮ ತಂದೆ ತಮಗೆ ತರೀಕೆರೆಯ ಬಳಿ ಇದ್ದ ಜಮೀನು, ಭೂಮಿ, ಮನೆಯಲ್ಲಿದ್ದ ಹಸು-ಎಮ್ಮೆ ಮೊದಲಾದ ಸಮಸ್ತವನ್ನೂ ವಿನಿಯೋಗಿಸಿ ನಾಲ್ಕು ಮಂದಿ ಪರದೇಶಿ ಮಕ್ಕಳ ಪೋಷಣೆ ಮಾಡಿದರು."

"ನಮ್ಮ ತಂದೆಯವರು ಶಿವಮೊಗ್ಗಾಕ್ಕೆ ಸುಮಾರು ಮೂರು ಮೈಲು ದೂರವಿದ್ದ ರಾಮಯ್ಯನ ಕೊಪ್ಪ ಎಂಬ ಗ್ರಾಮದ ಪಟೇಲಿ ಕೆಲಸಕ್ಕೆ ಒಪ್ಪಿಕೊಂಡಿದ್ದರು. ಆ ಸಂಬಂಧ ಕಂದಾಯ ಮುಂತಾದ್ದನ್ನು ವಸೂಲು ಮಾಡಿ ಸರಕಾರಕ್ಕೆ ಜಮಾ ಮಾಡಿಸುವುದು ಅವರ ಕರ್ತವ್ಯವಾಗಿತ್ತು. ಸುಮಾರು ೧೯೦೩ನೆ ಇಸ್ವಿಯಲ್ಲಿ ಹಾಗೆ ಜಮೆಯಾಗಿದ್ದ ಸುಮಾರು ೧೫೦ ರೂಗಳನ್ನು ಸರ್ಕಾರಿ ಖಜಾನೆಗೆ ಜಮೆ ಮಾಡಿಸಲು ತಮ್ಮ ಕಾಹಿಲೆಯ ಕಾರಣದಿಂದ ತಾವೇ ಹೋಗಲು ಸಾಧ್ಯವಿಲ್ಲದೆ ಆ ಗ್ರಾಮದ ಶ್ಯಾನುಭೋಗರಾಗಿದ್ದ ಕೃಷ್ಣಪ್ಪ ಎಂಬಾತನನ್ನು ನಂಬಿ ಆತನ ಕೈಲಿ ಕೊಟ್ಟಿದ್ದರಂತೆ. ರಸೀತಿ ಮುಂತಾಗಿ ಏನೂ ಇಲ್ಲದೆ ಕೈಗೆ ಸಿಕ್ಕಿದ ಆ ಹಣವನ್ನು ಆತ ದುರುಪಯೋಗ ಪಡಿಸಿಕೊಂಡು, ಸರಕಾರದ ಹಣ ದುರುಪಯೋಗಪಡಿಸಿಕೊಂಡ ಅಪರಾಧಕ್ಕೆ ನಮ್ಮ ತಂದೆಯನ್ನು ಗುರಿ ಮಾಡಿದ. ಏನೊಂದು ಮೋಸ, ಕಾಪಟ್ಯ ಅರಿಯದ ನಮ್ಮ ತಂದೆಯವರು ಈ ಅಪವಾದ ಹೊತ್ತು, ಮಾನಕ್ಕೆ ಹೆದರಿ ನಮ್ಮನ್ನು ಪರದೇಶಿಗಳನ್ನಾಗಿ ಮಾಡಿ ಊರು ಬಿಟ್ಟು ಎಲ್ಲೋ ಹೊರಟು ಹೋದರು. ನಮ್ಮ ತಂದೆ ದೇಶಾಂತರ ಹೊರಟು ಹೋದ ತರುವಾಯ (ನಾವು) ಹೊನ್ನಾಳಿಗೆ ಹೋಗಿ ನೆಲೆಸಿದೆವು (೧೯೦೪).

ಚಿಕ್ಕಂದಿನಲ್ಲಿ ನಮ್ಮ ತಾಯಿ ತೀರಿಹೋದ ತರುವಾಯ ನಾವು ಒಂದೇ ಊರಿನಲ್ಲಿ ನೆಲೆಯಾಗಿ ನಿಂತಿರಲಿಲ್ಲವಾಗಿ ನನಗೆ ಪ್ರಾರಂಭದಿಂದಲೂ ವಿದ್ಯಾಭ್ಯಾಸ ಗೊತ್ತಾಗಿ ನಡೆಯಲೇ ಇಲ್ಲ. (ನಾನು ಒಂದನೆ ಕ್ಲಾಸಿನಲ್ಲಿದ್ದಾಗ) ಪುಣ್ಯಕೋಟಿ ಗೋವು ತನ್ನ ಪರದೇಶಿ ಕರುವನ್ನು ಬೇರೆ ಹಸುಗಳ ವಶಕ್ಕೆ ಕೊಟ್ಟು ತಾನು ಹುಲಿಯ ಆಹಾರಕ್ಕೆಂದು ಹೊರಟಾಗ ಹೇಳಿಕೊಂಡ "*ಅಮ್ಮಗಳಿರಾ ಅಕ್ಕಗಳಿರಾ, ನಮ್ಮ ತಾಯೊಡ ಹುಟ್ಟುಗಳಿರಾ, ನಿಮ್ಮ ಕಂದಾನೆಂದು ತಿಳಿಯಿರಿ ತಬ್ಬಲಿಯನೀ ಕರುವನು*"- ಎಂಬ ಪದ್ಯಗಳನ್ನು ಓದಿ ಅವರೊಂದಿಗೆ ನಮ್ಮ ತಬ್ಬಲಿತನವನ್ನು ಹೋಲಿಸಿಕೊಂಡು ದುಃಖಿಸುತ್ತಿದ್ದ ಸ್ಥಿತಿ ಈಗಲೂ ಜ್ಞಾಪಕವಿದೆ.

ಹೊನ್ನಾಳಿಗೆ ಬಂದಾಗ ನಾನು ಕನ್ನಡ ಐದನೆಯ ತರಗತಿಯಲ್ಲಿದ್ದೆ. ಆ ವರ್ಷ ನಡೆದ ಕ್ಲಾಸ್ ಪರೀಕ್ಷೆಯಲ್ಲಿ ಎಲ್ಲದರಲ್ಲೂ ಬಹು ಉತ್ತಮವಾಗಿ ನಂಬರುಗಳು ಬಂದಿದ್ದರಿಂದ ಆ ವರ್ಷದಲ್ಲೇ ಲೋವರ್ ಸೆಕೆಂಡರಿ ಪರೀಕ್ಷೆಗೆ ಕಳುಹಿಸಲು ಉಪಾಧ್ಯಾಯರುಗಳೆಲ್ಲ ನಿಶ್ಚಯಿಸಿದರು. ಆದರೆ ಪರೀಕ್ಷೆಗೆ ಕಳುಹಿಸಬೇಕಾದ ಸಮಯಕ್ಕೆ ೫ ರೂಪಾಯಿಗಳನ್ನು ಹವಣಿಸಿಕೊಳ್ಳುವುದು ಬಹು ಪ್ರಯಾಸವಾಗಿ ಕೊನೆಗೂ ಆ ದಿನ ದುಡ್ಡು ಕಟ್ಟಲು ಸಾಧ್ಯವಾಗಲಿಲ್ಲ. ಉಪಾಧ್ಯಾಯರುಗಳು ತಮ್ಮಲ್ಲೇ ಚಂದಾ ಹಾಕಿಕೊಂಡು ಪರೀಕ್ಷೆಯ ಶುಲ್ಕವನ್ನು ಕಟ್ಟಿ ನನ್ನ ಹೆಸರು ದಾಖಲು ಮಾಡಿಬಿಟ್ಟರು. ಆದರೆ ಪರೀಕ್ಷೆಗೆ ಕಳುಹಿಸಿದ ಒಂದು ತಿಂಗಳೊಳಗಾಗಿ ಊರಿನಲ್ಲಿ ಇಲಿಗಳು ಬೀಳಲು ಪ್ರಾರಂಭವಾಗಿ ಪ್ಲೇಗು ವ್ಯಾಧಿ ಶುರುವಾಯಿತು. ಅದಕ್ಕೆ ತಮ್ಮ ಮೂರ್ತಿ ಬಲಿಯಾದ.

ಈ ದುರಂತಗಳೆಲ್ಲ ಮುಗಿದು ಮತ್ತೆ ಪರೀಕ್ಷೆಗೆ ಕೂತುಕೊಳ್ಳಬೇಕೆಂದಿದ್ದಾಗ ನಮ್ಮ ತಂದೆ ಸಿರಿಸಿಯಲ್ಲಿ ಅನಾಥಸ್ಥಿತಿಯಲ್ಲಿ ಮೃತರಾದರೆಂಬ ವಾರ್ತೆ ತಿಳಿಯಿತು. ಪರೀಕ್ಷೆಯ ಮೂರು ದಿನಗಳೂ ಕರ್ಮಾಂತರದಲ್ಲಿ ಕಳೆಯಿತು. ಕಡೆಗೆ ೧೯೦೮ನೇ ವರ್ಷದಲ್ಲಿ ಹೊನ್ನಾಳಿ ಮಿಡಿಲ್ ಸ್ಕೂಲಿನಿಂದಲೇ ಪರೀಕ್ಷೆಗೆ ಹೋಗಿದ್ದು ಪಾಸಾಯಿತು.

ಇದಾದ ಮೇಲೆ ಬೆಂಗಳೂರಿನಲ್ಲಿದ್ದ ನಮ್ಮ ಚಿಕ್ಕಪ್ಪ ಕೃಷ್ಣರಾಯರ ಬಳಿ ಇದ್ದು ಮುಂದೆ ಓದಬೇಕೆಂದು ಏರ್ಪಾಡಾಯಿತು. ನಾನು ಇಂಗ್ಲೀಷ್ ಕಲಿಯಲಿಕ್ಕಾಗಿ ಅಮೇರಿಕನ್ ಅಡ್ವೆಂಟ್ ಮಿಷನ್ ಸ್ಕೂಲಿಗೆ ಸೇರಿ ಇಂಗ್ಲಿಷ್ ಪ್ರಿಮರ್ ಪ್ರಾರಂಭಿಸಿದೆ. ಇಂಗ್ಲಿಷ್ ಚೆನ್ನಾಗಿ ಓದಿಕೊಂಡು ವಾರದ ಪರೀಕ್ಷೆಗಳು, ಟರ್ಮ್ ಪರೀಕ್ಷೆಗಳು ಹೀಗೆ ಎಲ್ಲದರಲ್ಲೂ ಮೊದಲನೆಯ ರ್‍ಯಾಂಕ್ ನನ್ನದು ಎಂದು ಉಪಾಧ್ಯಾಯರಿಗೆ ಮಾತ್ರವಲ್ಲ ಸ್ಕೂಲು ಪ್ರಿನ್ಸಿಪಾಲ್ ಆಗಿದ್ದ, ಫಾದರ್ ಬೋಯೋ ಎಂಬುವರಿಗೂ ತಿಳಿದು ನನ್ನ ವಿಷಯದಲ್ಲಿ ವಿಶೇಷ ಪ್ರೀತಿ ಅಭಿಮಾನಗಳುಂಟಾಗಲು ಅವಕಾಶವಾಯಿತು.

ಇಂಥ ಸ್ಥಿತಿಯಲ್ಲಿದ್ದಾಗ ನನಗೊಂದು ವಿಧಿಯ ಕಾಟ ಪ್ರಾರಂಭಿಸಿ, ಆ ಶಾಲೆ ಬಿಡಲೇ ಬೇಕಾಯಿತು. ಆ ಘಟನೆ ನಡೆದುದು ಹೀಗೆ :

ನರಸಿಂಹಯ್ಯನೆಂಬ ಕೆಟ್ಟ ವಿದ್ಯಾರ್ಥಿಯ ಸಹವಾಸವಾಗಿ ಅವನ ಅತಿ ಸ್ನೇಹದಿಂದ ಒಂದು ಗಾಂಜಾ ಗುಳಿಗೆಯನ್ನು ಇನ್ನೊಬ್ಬ ಸ್ನೇಹಿತ ನಂಜುಡಯ್ಯನ ಜತೆಯಲ್ಲಿ ತಿಂದು ಬಿಸಿಲಿನಲ್ಲಿ ಆಡಿದ್ದರಿಂದ ನಂಜುಂಡಯ್ಯನಿಗೆ ಕ್ಲಾಸಿಗೆ ಬಂದ ಕೂಡಲೇ ವಾಂತಿಯಾಯಿತು. ಕಾರಣ ವಿಚಾರಿಸಲಾಗಿ ನಾನು ನಡೆದುದನ್ನು ನಡೆದಂತೆ ಸಹಜವಾಗಿ ಸಾಕ್ಷಿ ಹೇಳಿದೆ. ಆದರೆ ಅದೇ ಪ್ರಮಾದವಾಗಿ ಫಾದರ್ ಬೋಯೋ ಸ್ಕೂಲು ಲೀವಿಂಗ್ ಸರ್ಟಿಫಿಕೇಟು ಕೊಡಿಸಿ ಕಳುಹಿಸಿಬಿಟ್ಟರು.

ಮುಂದೆ ಬೆಂಗಳೂರಿನಲ್ಲೇ ಇದ್ದು ವಿದ್ಯಾಭ್ಯಾಸ ಮುಂದುವರೆಸಲು ಗೃಹಚ್ಛಿದ್ರ ಕಾರಣ ದಿಂದ ಸಾಧ್ಯವಾಗಲಿಲ್ಲ. ಹೊನ್ನಾಳಿ ಬಿಟ್ಟು ಮೂರು ವರ್ಷಗಳಾಗಿದ್ದುದರಿಂದ ಎಲ್ಲರನ್ನೂ ನೋಡಿಕೊಂಡು ಬಂದು ಬೇಕಾದರೆ ಮುಂದೆ ಓದಬಹುದು ಎಂದುಕೊಂಡು ಹೊನ್ನಾಳಿಗೆ ಹೋದೆ. ಅಲ್ಲಿನ ತಾಲ್ಲೂಕು ಆಫೀಸಿನಲ್ಲಿ ಎಂಟೋ ಹತ್ತೋ ರೂಪಾಯಿ ಸಂಬಳದ ಮೇಲೆ ಬದಲಿ ಕೆಲಸಕ್ಕೆ ನೇಮಕವಾಯಿತು. ಇಂದ-ಗೆ ಮಾಡುವುದು, ಫಾರಂಗಳಿಗೆ ರೂಲು ಹಾಕುವುದು, ರಿಕಾರ್ಡು ಆಫೀಸಿನಲ್ಲಿ, ಟ್ರಜರಿಯಲ್ಲಿ ಗುಮಾಸ್ತರಿಗೆ ಸಹಾಯಕನಾಗಿ ಕೆಲಸ ಮಾಡುತ್ತಾ ಒಂದೆರಡು ವರ್ಷ ಕಳೆಯಿತು. ಸಬ್ ರಿಜಿಸ್ಟ್ರಾರ್ ಗುಮಾಸ್ತೆ ಕೆಲಸ ಖಾಲಿ ಬಿದ್ದಾಗ್ಗೆ ಆ ಕೆಲಸಕ್ಕೆ ನನ್ನನ್ನು ಅಪೇಕ್ಷಿಸಿದರು. ಅಲ್ಲಿ ನಾಲ್ಕಾರು ತಿಂಗಳು ಕೆಲಸ ಮಾಡುವ ವೇಳೆಗೆ ಆ ಉದ್ಯೋಗದ ಸ್ವಭಾವದಿಂದಾಗಿ ಸಂಬಳ ಕ್ಕಿಂತಲೂ ಹೆಚ್ಚಾಗಿ ಸ್ವಲ್ಪ ಸಂಪಾದನೆ ಆಗುತ್ತಿತ್ತು. ಪೋಸ್ಟಾಫೀಸಿನಲ್ಲೊಂದು ಸೇವಿಂಗ್ಸ್ ಬ್ಯಾಂಕ್ ಲೆಖ್ಖ ಪ್ರಾರಂಭಿಸಿಟ್ಟೆ. ಹಿಂದು ಇಂಗ್ಲಿಷ್ ಪೇಪರಿನಲ್ಲಿ ಭಗವದ್ಗೀತಾ ಇಂಗ್ಲಿಷ್ ಟ್ರಾನ್ಸ್‌ಲೇಷನ್ ನಲ್ಲಿ ದೊರಕುತ್ತೆಂದು (ಓದಿ) ನೋಡಿ ಕಲ್ಕತ್ತಾಕ್ಕೆ ಬರೆದು ಆ ಪುಸ್ತಕ ತರಿಸಿಕೊಂಡು ಅದನ್ನು ಓದಿದೆ. ಭಗವದ್ಗೀತಾ ಸಂಬಂಧ ಹೊಂದಿದ್ದು ಅದೇ ಮೊದಲು.

೧೯೧೨ನೇ ಇಸವಿ ಜೂನ್-ಜುಲೈ ತಿಂಗಳ ಸಮಯ ಎಂದು ತೋರುತ್ತೆ- ಆ ಊರಿನ ಮಿಡಲ್ ಗ॥ ಸ್ಕೂಲು ಲೈಬ್ರರಿಯಲ್ಲಿ ಶ್ರೀರಾಮ ಪಟ್ಟಾಭಿಷೇಕ ಎಂಬ ಒಂದು ಗ್ರಂಥ ಓದಲು ದೊರೆಯಿತು. ಅದು ಮಹಾಲಕ್ಷ್ಮೀ ಎಂಬ ಹೆಸರಿನಿಂದ ನಂದಳಿಕೆ ಲಕ್ಷ್ಮೀನಾರಣಪ್ಪ (ಮುದ್ದಣ) ಬರೆದದ್ದು. ಅದು ಓದಲು ಬಹು ಮನೋಹರವಾದ್ದು- ಅದನ್ನು ಓದಿ ಮುಗಿಸಿದ ಮೇಲೆ ಅದರ ಕಥಾ ರಸಭಾವಗಳಿಗೆ ಮನಸ್ಸು ಸೂರೆ ಹೋಗಿ ಅದನ್ನು ವಚನದಲ್ಲಿ ಬರೆಯಬೇಕೆಂಬ ಅಭಿಲಾಷೆ

ಹುಟ್ಟಿತು. ಒಂದು ತಿಂಗಳ ಕಾಲ ಅದೇ ಕೆಲಸವಾಗಿ ಕುಳಿತು ಅದನ್ನು ವಚನ ರೀತಿಯಲ್ಲಿ ಬರೆದೆ. ಅದು ವಾರ್ಧಕ ಷಟ್ಪದಿಯ ಗ್ರಂಥ. ಹಾಗೆ ಆ ಗದ್ಯ ಗ್ರಂಥವು ಸಿದ್ಧವಾಗುವ ಕಾಲಕ್ಕೆ ಸರಿಯಾಗಿ ಕೂಡ್ಲಿ ಶ್ರೀ ಅಕ್ಷೋಭ್ಯತೀರ್ಥ ಮಠದ ಸ್ವಾಮಿಗಳೊಬ್ಬರು ಆ ಊರಿಗೆ ಬಂದು ಅಲ್ಲೇ ವಕೀಲರಾಗಿದ್ದ ಶ್ರೀ ಬಾಲಕೃಷ್ಣರಾಯರೆಂಬುವರ ಮನೆಯಲ್ಲಿ ಭಿಕ್ಷೆ ನಡೆದು ಆ ದಿನ ಸಾಯಂಕಾಲ ಮಂಗಳಾರತಿ ಗಾಗಿ ಎಲ್ಲರೂ ಅಲ್ಲಿ ನೆರೆದಿದ್ದೆವು. ನಮ್ಮ ಅಮಲ್ದಾರ್ರು ಶ್ರೀ .ಎಂ. ಹಯಗ್ರೀವರಾಯರೆಂಬುವರು ನನ್ನ ವಿಷಯದಲ್ಲಿ ಬಹು ಪ್ರೀತಿ ವಿಶ್ವಾಸವಿಟ್ಟುಕೊಂಡಿದ್ದ ರಿಂದ, ಅವರ ಮೂಲಕ ಆ ದಿನ ಸಾಯಂಕಾಲ ಶ್ರೀ ಸ್ವಾಮಿಗಳ ಸನ್ನಿಧಿಯಲ್ಲಿ ಮಂಗಳಾರತಿಯ ವೇಳೆಯಲ್ಲಿ ನಾನು ಬರೆದಿದ್ದ ಆ ಗದ್ಯ ಶ್ರೀರಾಮಪಟ್ಟಾಭಿಷೇಕ ಕಥೆಯನ್ನು ಓದಲು ಅವಕಾಶ ದೊರಕಿಸಿಕೊಂಡಿದ್ದಾಯಿತು. ಜನರೆಲ್ಲ ಮಂಗಳಾರತಿಗಾಗಿ ನೆರೆದು ಉತ್ಸಾಹಗೊಂಡಿರುವಾಗ್ಗೆ ನಾನು ಅಮಲ್ದಾರ್ರವರ ಪ್ರೋತ್ಸಾಹದ ಮೇಲೆ ಶ್ರೀ ಸ್ವಾಮಿಗಳ ಅನುಜ್ಞೆ ಪಡೆದು ಅದನ್ನು ಓದಲು ಪ್ರಾರಂಭಿಸಿದೆ.

ಪ್ರಾರಂಭದಲ್ಲಿ ಕೆಲವು ಶ್ಲೋಕಗಳಲ್ಲಿ ದೈವ ಪ್ರಾರ್ಥನೆಯಾಗಿ ಕಥಾ ಪ್ರಾರಂಭಿಸುವುದ ರಲ್ಲಿದ್ದೆ. ಆ ವೇಳೆಗೆ *"ಓಹೋ ಕರ್ಪೂರ ಶ್ರೀನಿವಾಸರಾಯರು ಬಂದರು"*- ಎಂದು ಸಭೆಯವರೆಲ್ಲ ಸಂಭ್ರಮಗೊಂಡು ಎದ್ದು ನಿಂತರು. ಅಮಲ್ದಾರ್ರವರು ಬಾಗಿಲವರೆಗೂ ಹೋಗಿ ಅವರನ್ನು ಆದರದಿಂದ ಬರಮಾಡಿಕೊಂಡು ಸ್ವಾಮಿಗಳ ಸನ್ನಿಧಿಯಲ್ಲಿ ಕೂಡಿಸಿದರು. ಅಷ್ಟರಲ್ಲಿ ಓದಲು ನಿಂತಿದ್ದ ನನ್ನ ಪರಿಚಯವನ್ನೂ ಮಾಡಿಕೊಟ್ಟರು. ಹೀಗೆ ಎಲ್ಲ ನಡೆದುಎಲ್ಲರೂ ಕುಳಿತ ತರುವಾಯ "ಓದಪ್ಪಾ ಓದು"- ಎಂದು ನನ್ನನ್ನೂ ಕುರಿತು ಪ್ರೋತ್ಸಾಹಿಸಿದರು. ನಾನು ಮತ್ತೆ ಉಳಿದಿದ್ದ ಒಂದೆರಡು ರಾಮಕರ್ಣಾಮೃತದ ಪ್ರಾರಂಭದ ಶ್ಲೋಕಗಳನ್ನು ಹೇಳಿ ವಿವಿಧ ವರ್ಣನೆಗಳೊಂದಿಗೆ ಮನೋಹರವಾಗಿದ್ದ ಶ್ರೀರಾಮ ಪಟ್ಟಾಭಿಷೇಕದ ಆ ಕಥಾ ಭಾಗವನ್ನು ಸುಮಾರು ಅರ್ಧ ಮುಕ್ಕಾಲು ಘಂಟೆಯ ಹೊತ್ತು ಓದಿ ಮುಗಿಸಿದೆ. ಕರ್ಪೂರ ಶ್ರೀನಿವಾಸರಾಯರೂ, ಸಭಿಕರೂ ತುಂಬ ಪ್ರಶಂಸೆ ಮಾಡಿದರು. ಅಮಲ್ದಾರ್ರು ಮೆಚ್ಚಿಕೊಂಡರು. ಸ್ವಾಮಿಗಳವರೂ ಶ್ಲಾಘಿಸಿದರು. ತರುವಾಯ ಸ್ವಾಮಿಗಳು ಮಂಗಳಾರತಿ ಮುಗಿಸಿ ಎಲ್ಲರಿಗೂ ಮಂತ್ರಾಕ್ಷತೆ ಪ್ರಸಾದ ವಿನಿಯೋಗಿಸಿದರು.

ಅಷ್ಟು ಮಂದಿ ಜನರೆದುರಿಗೆ ಶ್ರೀ ಕರ್ಪೂರ ಶ್ರೀನಿವಾಸರಾಯರು ಮಾಡಿದ ಪ್ರಶಂಸೆ ಯನ್ನು ಕೇಳಿ ನನಗೆ ಉತ್ಸಾಹ ಗರ್ವ ಉಂಟಾಗಲಿಲ್ಲ. ವಿಶೇಷ ನಾಚಿಕೆ ಆದಂತಾಯಿತು. ಎಲ್ಲರಿಗಿಂತಲೂ ಮುಂಚೆಯೇ ಹೊರಬಿದ್ದು ಕಟ್ಟೆಯ ಮೇಲೆ ಕಂಬದ ಮರೆಗೆ ನಿಂತುಕೊಂಡಿದ್ದೆ. ಸ್ವಲ್ಪ ಹೊತ್ತಿನಲ್ಲೆ ಹೊರಕ್ಕೆ ಬಂದ ರಾಯರು ನನ್ನ ಹೆಸರನ್ನೇ ಹೇಳಿಕೊಂಡು "ಎಲ್ಲಪ್ಪಾ ಆ ರಾಮಾಯಣದ ರಾಮರಾವ್ ಎಲ್ಲಿ"- ಎನ್ನುತ್ತಾ ಬಾಗಿಲು ದಾಟಿ ಹೊರಕ್ಕೆ ಬಂದರು. ಅಲ್ಲೇ ಇದ್ದ ನಾನು ಮುಂದಕ್ಕೆ ನಡೆದು ಕೈ ಮುಗಿದೆ. ನನ್ನನ್ನು ನೋಡಿ ಅವರು ಬಹು ವಿಶ್ವಾಸದಿಂದ ಕೊರಳ ಸುತ್ತಲೂ ಕೈ ಹಾಕಿಕೊಂಡು,

*"ಏನಪ್ಪಾ, ಎಲ್ಲಿದ್ದಿ? ಏಕೆ ಸಂಕೋಚ? ಬಾ ಹೋಗೋಣ"*- ಎಂದು ನನ್ನನ್ನು ತಮ್ಮೊಡನೆ ಟ್ರಾವಲರ್ಸ್ ಬಂಗಲೆಯವರೆಗೆ ಕರೆದೊಯ್ದರು. ರಾತ್ರಿ ಒಂಭತ್ತು ಘಂಟೆಗೆ ಮೇಲಾಗಿ

ಹೋಗಿದ್ದರೂ ಅಲ್ಲಿಯವರೆಗೆ ಇಬ್ಬರೂ ಹೋಗಿ ಅವರ ಆಫೀಸಿನಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಮಾತುಕತೆಗೆ ಪ್ರಾರಂಭಿಸಿದರು.

“ರಾಮರಾವ್, ಇಲ್ಲಿ ಏನು ಮಾಡಿಕೊಂಡಿದ್ದೀಯ? ನಿನ್ನ ಲೇಖನ ಶೈಲಿ ನೋಡಿದರೆ, ನಿನಗೆ ದೈವಾನುಗ್ರಹವಿದ್ದಂತೆ ತೋರುತ್ತದೆ. ನೀನು ಕುಗ್ರಾಮದಲ್ಲಿ ತಾಲ್ಲೂಕು ಕಛೇರಿಯ ಒಂದು ಕ್ಷುದ್ರ ಕೆಲಸಕ್ಕೆ ಸೇರಿಕೊಂಡು ಏಕೆ ಕಾಲ ಕಳೆಯುತ್ತಿ? ನಿಮ್ಮಂಥವರು ಸ್ವತಂತ್ರ ಜೀವನ ನಡೆಸಬೇಕಪ್ಪ. ನಿನಗೆ ಪದ್ಯಕ್ಕಿಂತ ಗದ್ಯ ರೂಪವಾಗಿ ಕಥಾಲೇಖನ ಸಾಮರ್ಥ್ಯ ಸ್ವಾಭಾವಿಕವಾಗಿ ಲಭ್ಯವಾಗಿರುವಂತೆ ತೋರುತ್ತೆ. ನೀನು ನಾರಣಪ್ಪನ ಗದುಗಿನ ಭಾರತವನ್ನು ಕನ್ನಡ ವಚನ ರೂಪದಲ್ಲಿ ಬರಿ. ಅದನ್ನು ಛಾಪ ಮಾಡಿಸುವ ಭಾರ ನನಗಿರಲಿ. ಅದರ ಮಾರಾಟದಿಂದ ಬಂದ ಹಣದಲ್ಲಿ ವೆಚ್ಚ ಹೋಗಲಾಗಿ ಮಿಕ್ಕ ಹಣ ನೀನು ತೆಗೆದುಕೊಂಡು ಸ್ವಂತಂತ್ರವಾಗಿ ಜೀವನ ಮಾಡಿಕೊಂಡಿರು. ಈ ಜುಜುಬಿ ಸಂಬಳದ ಕ್ಷುದ್ರ ನೌಕರಿಯಲ್ಲಿ ಬಿದ್ದು ಏಕೆ ಒದ್ದಾಡುತ್ತೀ”- ಎಂದು ತುಂಬ ಪ್ರೋತ್ಸಾಹಕರವಾಗಿ ಮಾತನಾಡಿ ಹಿರಿಯರಾಗಿ ಬುದ್ಧಿ ಹೇಳಿದರು.

“ನಾನು ಸದ್ಯದಲ್ಲೇ ನಿನಗೆ ಆ ಮಹಾಭಾರತದ ಪ್ರತಿಯೊಂದನ್ನು ಕಳುಹಿಸಿಕೊಡುತ್ತೇನೆ. ಅದನ್ನು ಚೆನ್ನಾಗಿ ಓದಿಕೊಂಡು ಗದ್ಯದಲ್ಲಿ ಬರೆಯಲು ಪ್ರಾರಂಭಿಸು- ಇನ್ನು ಮೂರು ತಿಂಗಳಲ್ಲಿ ಮತ್ತೆ ನಾನು ಇಲ್ಲಿಗೆ ಬರುತ್ತೇನೆ. ಅದನ್ನು ಆಗ ನೋಡಿ ಮುಂದಿನ ಏರ್ಪಾಡು ಮಾಡೋಣ. ಬೆಂಗಳೂರಿಗೆ ಇಬ್ಬರೂ ಹೋಗೋಣ -ಎಂದೆಲ್ಲ ಆತ್ಮೀಯವಾಗಿ ನುಡಿದರು. ರಾಮರಾಯರು ತಮ್ಮ ಜೀವನದಲ್ಲಿ ಸಾಹಿತ್ಯಾಂಕುರ ಹಾಗೂ ಸ್ವತಂತ್ರ ಜೀವನೋತ್ಸಾಹ, ಆದರ್ಶ ತುಂಬಿದ ಕರ್ಪೂರ ಶ್ರೀನಿವಾಸ ರಾಯರ ಸಂದರ್ಶನ ಅನಂತರ ತಾವು ಸ್ವತಂತ್ರ ವೃತ್ತಿ ಹಿಡಿದು ಬಾಳಲು ಮಾಡಿದ ಸಾಹಸಗಳನ್ನು ವಿವರಿಸಿ, ತಮ್ಮ ಆ ಬರವಣಿಗೆಯನ್ನು ನಿಲ್ಲಿಸಿಬಿಟ್ಟಿದ್ದರು.”

-ಹೀಗೆ ಕರ್ಪೂರ ಶ್ರೀನಿವಾಸರಾಯರ ಹಿತವಾದವನ್ನು ನೆನೆಸಿಕೊಂಡು ರಾಮರಾಯರು ತಮ್ಮ ೨೩ನೆಯ ವಯಸ್ಸಿನಲ್ಲಿ ಬೆಂಗಳೂರಿಗೆ ಬಂದರು.

೨

ರಾಮರಾಯರು ಬೆಂಗಳೂರಿಗೆ ೧೯೧೩ನೆ ಮಾರ್ಚ್ ೩೧ರಂದು ಉದ್ಯೋಗಾಕಾಂಕ್ಷೆಯಿಂದ ಬಂದವರು ಕೊನೆಯವರೆಗೂ ಬೆಂಗಳೂರಿನಲ್ಲಿಯೇ ನೆಲೆಸಿದರು. ಅವರು ೧೯೭೦ನೇ ಮಾರ್ಚ್ ೧೯ರಂದು, ತಮ್ಮ ಸ್ವಗೃಹದಲ್ಲಿ ೮೦ನೇ ವಯಸ್ಸಿನಲ್ಲಿ ತೀರಿಕೊಳ್ಳುವವರೆಗೂ ಅವರು ಒಂಟಿ ಸಲಗನಂತೆ ತಮ್ಮ ದಾರಿಯನ್ನು ಕಂಡುಕೊಳ್ಳಲು ಹೋರಾಟ ನಡೆಸಿದರೇ ಹೊರತು ಯಾವುದೇ ಸರಕಾರಿ ಆಫೀಸಿನಲ್ಲಿ ಗುಲಾಮಗಿರಿಗೆ ಬೀಳಲಿಲ್ಲ. ಅವರು ಮುಂದೆ ಕೈಗೊಂಡ ಉದ್ಯೋಗವಾದರೂ ಶಾಲಾ ಉಪಾಧ್ಯಾಯ ವೃತ್ತಿ. ಅದು ತಮ್ಮ ಪತ್ರಿಕಾಕಾರ್ಯ, ಗ್ರಂಥ ರಚನೆ, ಜ್ಞಾನ ಪ್ರಸಾರ ಕಾರ್ಯಕ್ಕೆ ಪ್ರತಿಬಂಧಕವಾದಾಗ ಅದನ್ನೂ ತೊರೆದು ತಮ್ಮ ಜೀವಿತ ಕಾರ್ಯವಾದ ಜ್ಞಾನ ಪ್ರಸಾರ ಕಾರ್ಯಕ್ಕೆ ಸರ್ವಸ್ವವನ್ನು ಮೀಸಲಿಟ್ಟು ತಮ್ಮ ಜೀವನದ ಕೊನೆಯ ಉಸಿರಿನ

ವರೆಗೂ ಜ್ಞಾನ ಕಾರ್ಯಕ್ಕಾಗಿಯೇ ದುಡಿದು ಸಮಸ್ತ ಕನ್ನಡಿಗರಿಂದ ಸುಬೋಧರಾಮರಾಯರೆಂದು ಕೀರ್ತಿಗಾರರಾಗಿ ಸಂತೃಪ್ತಿಯಿಂದ ತಮ್ಮ ಇಹಲೋಕದ ಬದುಕನ್ನು ಸಮಾಪ್ತಿಗೊಳಿಸಿದರು. ರಾಮರಾಯರು ನಿಜಕ್ಕೂ ವಾಙ್ಮಯ ತಪಸ್ವಿ.

ಕನ್ನಡದಲ್ಲಿ ಶರಣರ ಬದುಕನ್ನು ಮರಣದಲ್ಲಿ ನೋಡು- ಎಂಬ ಗಾದೆಯ ಮಾತಿದೆ. ರಾಮರಾಯರು ಹರಿಶರಣರು. ದಾಸ ಸಾಹಿತ್ಯ ಗಂಗೆಯನ್ನು ಜನಮನದ ಬಾಗಿಲಿಗೆ ಹರಿಸಿದ ಆಧುನಿಕ ಭಗೀರಥರೆಂದು ಕೀರ್ತಿಸಲ್ಪಟ್ಟರು.

ಅವರು ತೀರಿಕೊಂಡುದಾದರೂ ಹೇಗೆ?

ಅವರ ಕೊನೆಯ ದಿನಗಳ ಚಿತ್ರಣವನ್ನು ಸುಭೋಧ ರಾಮರಾಯರನ್ನು ಕುರಿತು ಬರೆದಿರುವ ಡಾ|| ಕೆ.ಎಂ. ಕೃಷ್ಣರಾಯರು ಅತ್ಯಂತ ಮನೋಜ್ಞವಾಗಿ ನೀಡಿದ್ದಾರೆ.

"ಎಂದಿನಂತೆಯೇ ಅಂದೂ ಅವರು ಆರೋಗ್ಯವಾಗಿಯೇ ಇದ್ದರು. ಎಂಭತ್ತು ವರ್ಷದ ವಯೋಧರ್ಮಕ್ಕೆ ಕೆಲವು ದೇಹ ದೌರ್ಬಲ್ಯಗಳಿದ್ದುವಷ್ಟೇ ಹೊರತು, ಬೇರೆ ಯಾವ ವಿಶಿಷ್ಟವಾದ ಖಾಯಿಲೆಯಿಂದಲೂ ಅವರು ನರಳುತ್ತಿರಲಿಲ್ಲ.

ಬೆಳಗಿನ ಝಾವ ಐದು ಗಂಟೆಗೇ ಎದ್ದು ರಾಮರಾಯರಿಗೆ ಮುಖ ತೊಳೆದುಕೊಂಡು ಕುಳಿತು ರಾಮನಾಮ ಬರೆಯುವ ರೂಢಿ, ಬಹು ಕಾಲದಿಂದ ಎಂದರೆ ಸುಮಾರು ಅರವತ್ತು ವರ್ಷಗಳಿಂದ ನಡೆಸಿಕೊಂಡು ಬರುತ್ತಿದ್ದ ರೂಢಿ! ಹಾಗೆ ಬರೆದು ಅದುವರೆಗೆ ಸಂಗ್ರಹಿಸಿದ್ದ ದೊಡ್ಡ ಗಂಟನ್ನು ಬದರೀಯಾತ್ರೆಯ ಸಂದರ್ಭದಲ್ಲಿ ತ್ರಿವೇಣೀ ಸಂಗದಸಲ್ಲಿ ಸಮರ್ಪಿಸಿ ಬಂದಿದ್ದು, ಅಲ್ಲಿಂದೀಚೆಗೆ ಅದನ್ನು ಮುಂದುವರೆಸಿದ್ದರು.

ಆದರೆ ೧೯, ಮಾರ್ಚ್, ೧೯೭೦ರಂದು ರಾಮನಾಮ ಬರೆಯದೇ ಹಾಗೇ ಕುಳಿತುಕೊಂಡಿದ್ದರು. ಆಮೇಲೆ ಮತ್ತೆ ಮಲಗಿಕೊಂಡರು. ಮನೆಯಲ್ಲಿದ್ದವರಿಗೆ ಇದು ಆಶ್ಚರ್ಯವನ್ನುಂಟು ಮಾಡಿತು. ವಿಚಾರಿಸಿದಾಗ "ಸ್ವಲ್ಪ ಸಂಕಟವಾಗುತ್ತಿದೆ. ಕೊಂಚ ಸುಧಾರಿಸಿಕೊಂಡು ಏಳಬೇಕಾಗಿದೆ. ಮಲಗಿಕೊಳ್ಳಬೇಕೆನಿಸುತ್ತಿದೆ"- ಎಂದರು.

ಬೆಳಿಗ್ಗೆ ಎಂಟು ಗಂಟೆಗೆ ಡಾಕ್ಟರನ್ನು ಕರೆಸಲಾಯಿತು. ಹಿಂದಿನ ದಿನ ಏಕಾದಶೀ ಪ್ರಯುಕ್ತ ಮಾಡಿದ ಉಪವಾಸದಿಂದ ಕೊಂಚ ಆಯಾಸ ಹೆಚ್ಚಾಗಿರಬೇಕು ಎಂದು ಹೇಳಿ ಡಾಕ್ಟರು ಔಷಧ ಕೊಟ್ಟು ಹೋದರು. ಹನ್ನೊಂದು ಗಂಟೆಯ ವೇಳೆಗೆ ಹಸಿದು ಕುಳಿತಿದ್ದ ಮನೆಯವರನ್ನೆಲ್ಲಾ ಊಟ ಮಾಡಿ ಎಂದರು. ತಾವು ಮಾತ್ರ ಏನೋ ಸ್ತೋತ್ರ ಹೇಳಿಕೊಳ್ಳುತ್ತಾ ಹಾಗೇ ಮಲಗಿದರು. ೧೨ ಗಂಟೆಗೆ ಯಾರೋ ಬಂದು ಮಾತನಾಡಿಸಿದಾಗ ಅವರೊಡನೆ ಮಾತನಾಡಿ ಅವರನ್ನು ಕಳಿಸಿ ಮತ್ತೆ ಆಯಾಸವಾಗಿದೆಯೆಂದು ಮಲಗಿಕೊಂಡರು.

ಕೊಂಚ ಹೊತ್ತಾದ ಮೇಲೆ ಮಕ್ಕಳು- ಮೊಮ್ಮಕ್ಕಳನ್ನೆಲ್ಲಾ ಹತ್ತಿರ ಕರೆದು ಮಾತನಾಡಿಸಿ ಸುತ್ತಲೂ ಕುಳಿತುಕೊಳ್ಳುವಂತೆ ತಿಳಿಸಿದರು. ಎಲ್ಲರೂ ಬಂದು ಕುಳಿತಾಗ "ರಾಮನಾಮ ಹೇಳಿ"- ಎಂದರು. "ಶುದ್ಧಬ್ರಹ್ಮ ಪರಾತ್ಪರರಾಮ" ಸ್ತೋತ್ರವನ್ನು ಗಟ್ಟಿಯಾಗಿ ಎಲ್ಲರಿಂದಲೂ ಹೇಳಿಸುತ್ತಾ

ತಾವೂ ಹೇಳುತ್ತಿದ್ದರು. ಕೊಂಚ ಹೊತ್ತು ಇದಾದ ಮೇಲೆ ರಾಯರು ಹಿರಿಯ ಮಗ ಪ್ರಹ್ಲಾದನನ್ನು ಕುರಿತು, "ಗಂಗೆ ತೆಗೆದುಕೊಂಡು ಬಾ"- ಎಂದರು.

ಹೀಗೇಕೆ ಮಾತನಾಡುವರು ಎಂದು ಯಾರಿಗೂ ತಿಳಿಯದೆ ಎಲ್ಲರೂ ಕಳವಳಪಟ್ಟರು. ದ್ವಾದಶಿ ದಿನ ಬೆಳಿಗ್ಗೆ ಎಂದಿನಂತೆ ಪಾರಣೆಯನ್ನು ಅವರು ಅದುವರೆಗೂ ಮಾಡಿರಲಿಲ್ಲ. ಮೊದಲಿನಂತೆ ಹೆಚ್ಚಾಗಿ ಶಕ್ತರಾಗದಿರುವುದನ್ನು ಕಂಡು ಅವರು ಹೇಳಿದಂತೆ ಮಾಡುವುದು ಲೇಸು ಎಂದುಕೊಂಡು ಗಂಗೆಯ ಗಿಂಡಿ ತಂದು ಒಡೆದು ಎರಡು ಗುಟುಕು ಬಾಯಲ್ಲಿ ಹಾಕಿದರು.

ಆ ಬಳಿಕ ಪ್ರಹ್ಲಾದನನ್ನು ಹತ್ತಿರ ಕರೆದು ತಲೆಯ ಮೇಲೆ ಕೈಯಿಟ್ಟು "ದೇವರು ಕಾಪಾಡುತ್ತಾನೆ ; ನಾನು ಇನ್ನು ಹೋಗುತ್ತೇನೆ"- ಎಂದರು. ಆ ವೇಳೆಗೆ ಧ್ವನಿ ಕುಗ್ಗುತ್ತಾ ಬಂದಿತ್ತು. ಆದರೂ ಜ್ಞಾನ ಚೆನ್ನಾಗಿಯೇ ಇದ್ದಿತು. "ಕಾಲು ನಿಸ್ತೇಜವಾಗುತ್ತಿದೆ! ಕೈಗೆ ಜೋಂಪು ಬರುತ್ತಿದೆ"- ಎಂದು ಹೇಳುತ್ತಾ ಎದೆಯ ಮೇಲೆ ಕೈಯಿಟ್ಟುಕೊಂಡರು. ಕೂಡಲೇ ಬಾಯಲ್ಲಿ ರಾಮನಾಮ ಜಪ ಪ್ರಾರಂಭವಾಯಿತು. ಅರವತ್ತು ವರ್ಷಗಳ ಅಭ್ಯಾಸವಲ್ಲವೇ? ಹೀಗೆ ಜಪ ಕೆಲಹೊತ್ತು ನಡೆದು ಮಧ್ಯಾಹ್ನ ಮೂರೂವರೆ ಗಂಟೆಯ ವೇಳೆಗೆ ಸುಬೋಧ ರಾಮರಾಯರು ಕಣ್ಣು ಮುಚ್ಚಿದರು- ಪ್ರಾಣಪಕ್ಷಿ ಹಾರಿಹೋಯಿತು. ಸಾತ್ವಿಕ ಚೇತನ ತನ್ನ ಪಾಲಿನ ಕಾರ್ಯ ಮುಗಿಸಿ ತೆರಳಿತು."

*- (ಸುಬೋಧ ರಾಮರಾಯರು; ಡಾ|| ಕೆ. ಎಂ. ಕೃಷ್ಣರಾಯರು- ಪು.೬೯)*

ರಾಮರಾಯರ ಜೀವನದ ಆರಂಭ ಹೇಗೆ ಸರಳವಾಗಿತ್ತೋ ಅವರ ಅಂತ್ಯವೂ ಅಷ್ಟೇ ಸರಳವಾಗಿತ್ತು. ಅವರ ಜೀವನವೇ ನಿರುದ್ವೇಗದ ಗಂಗಾ ಪ್ರವಾಹವಿದ್ದಂತೆ. ಸಾಂಸಾರಿಕ ಹಾಗೂ ವ್ಯವಹಾರಿಕ ಉಬ್ಬರವಿಳಿತಗಳಲ್ಲಿ ಮುಳುಗಿದ್ದಾಗಲೂ ಅವರು ತಮ್ಮ ಚಿತ್ತದ ಶಾಂತಿಯನ್ನಾಗಲೀ, ಮನಸ್ಸಿನ ಸಂಯಮವನ್ನಾಗಲೀ ಕಳೆದುಕೊಂಡಿರಲಿಲ್ಲ. ಎಂಥ ದುರ್ಭರ ಪ್ರಸಂಗದಲ್ಲೂ ಧೈರ್ಯವನ್ನೂ, ಸಹನೆಯನ್ನೂ ಕಳೆದುಕೊಂಡಿರಲಿಲ್ಲ. ಅವರು ಹೊಗಳಿಕೆ ತೆಗಳಿಕೆಗಳಿಗೆ ಅತೀತರಾಗಿದ್ದರು. ರಾಗ ದ್ವೇಷಗಳಿಂದ ಸಂಪೂರ್ಣ ಮುಕ್ತರಾಗಿದ್ದರು. ಅವರ ಸಾಧನೆಯನ್ನು ಕುರಿತು ಯಾರಾದರೂ ಹೊಗಳಿದಾಗ, ಗುಣಗಾನ ಮಾಡಿದಾಗ ಅವರು ನಮ್ರತೆಯಿಂದ ಹೇಳುತ್ತಿದ್ದ ಮಾತು ಇದು.

"ನಾನು ತೃಪ್ತ... ನಿರ್ವಂಚನೆಯಿಂದ, ಶ್ರದ್ಧೆಯಿಂದ ಕನ್ನಡ ಮಕ್ಕಳು ಶುದ್ಧವಾಗಿ ಬಾಳಲೆಂಬ ಸದಾಶಯದಿಂದ ದೇವರು ನನಗೆ ನಿಯಾಮಕ ಮಾಡಿದ ಕರ್ತವ್ಯವನ್ನು ನಿರ್ವಹಿಸಿದ್ದೇನೆ."

ಒಮ್ಮೆ ದೊಡ್ಡ ದೊಡ್ಡ ವರ್ಣರಂಜಿತ ಪತ್ರಿಕೆಗಳು ಆಧುನಿಕ ಅಭಿರುಚಿಗಳನ್ನು ಪೂರೈಸಲು ಹೊರಬರುತ್ತಿರುವ ಕಾಲದಲ್ಲಿ ಸಣ್ಣ ಪುಟ್ಟ ಪತ್ರಿಕೆಗಳು ಬದುಕಲು ಸಾಧ್ಯವೇ ಎಂದು ರಾಮ ರಾಯರನ್ನು ಒಬ್ಬ ಮಿತ್ರರು ಪ್ರಶ್ನಿಸಿದರಂತೆ.

ಈ ಸಮಯದಲ್ಲಿ ಅವರಿಂದ ಪ್ರಕಟಗೊಳ್ಳುತ್ತಿದ್ದ ಸುಭೋಧ ಪತ್ರಿಕೆಯು ಪ್ರಸಾರದ ದೃಷ್ಟಿಯಿಂದ ತುಂಬ ಬಡವಾಗಿತ್ತು. ರಾಮರಾಯರು ಅದಕ್ಕೇನೂ ಸಂಕೋಚಗೊಳ್ಳದೆ, ಮನಸ್ಸು ಪ್ರಕ್ಷುಬ್ಧ ಮಾಡಿಕೊಳ್ಳದೆ ಹೀಗೆ ಉತ್ತರ ಕೊಟ್ಟರಂತೆ.

"ಆನೆಗಳಿವೆ ಎಂದು ಹಸು, ಕರು, ಮೇಕೆ, ಕುರಿಗಳೆಲ್ಲ ನಾಶವಾದರೆ ಹೇಗೆ! ಅವುಗಳ

ಪಾತ್ರವನ್ನು ಅವು ನಿರ್ವಹಿಸುತ್ತವೆ" ಎಂದು ಮಾರ್ಮಿಕವಾಗಿ ಹೇಳಿ, ಮತ್ತೆ ಹೇಳಿದರು :

"ಮಳೆಗಾಲದಲ್ಲಿ ಭೋರ್ಗರೆದು ಬೇಸಿಗೆಯಲ್ಲಿ ಒಣಗುವ ಮಹಾ ನದಿಗಳಿವೆ. ಸದಾ ಸರ್ವದಾ ನೆರೆಹೊರೆಯನ್ನು ಹಸಿರಿನಿಂದ ಮೆರೆಸುವ ಹಳ್ಳಗಳೂ ಇವೆ. ಕ್ಷಣಿಕ ಮನರಂಜನೆಯಿಂದ ಅಪ್ರಾಪ್ತ ವಯಸ್ಕರ ಅಪಕ್ವ ಬುದ್ಧಿಯನ್ನು ಕೆರಳಿಸುವ ಸಾಹಿತ್ಯವೂ ಇದೆ, ಸುಪ್ತ ಚೇತನವನ್ನು ಜಾಗೃತಗೊಳಿಸುವ ದಿವ್ಯ ಸಾಹಿತ್ಯವೂ ಇದೆ. ಯಾರಿಗೆ ಯಾವುದು ಬೇಕೋ ಅವರು ಅದನ್ನು ಪಡೆಯುತ್ತಾರೆ"- ಎಂಥ ಉದಾತ್ತ ಚಿಂತನೆ!

ರಾಮರಾಯರು ಪ್ರಸಿದ್ಧಿ ಕೀರ್ತಿಗಳಿಗಾಗಿ ಹಂಬಲಿಸಿದವರಲ್ಲ. ಅವರು ಜನರ ದೃಷ್ಟಿಯಿಂದ, ಅರಸರ ಅವಲೋಕನದಿಂದ ದೂರವಿದ್ದು ಕೈಲಾದುದನ್ನು ಮಾಡಬೇಕು, ಅದು ದೇವರಿಗೆ ಪ್ರಿಯವಾಗಬೇಕು - ಎಂಬ ನಿಜವಾದ ಹರಿದಾಸರ ಮನೋಭಾವದಿಂದ ಬದುಕನ್ನು ಸ್ವೀಕರಿಸಿದ್ದರು. ಅಂತೆಯೇ ಬಾಳಿದ್ದರು. ಅವರು ಶಾಲೆಯಲ್ಲಿ ಕಲಿತುದು ಕಡಿಮೆ ; ಜೀವನವೇ ಅವರ ಪಾಠಶಾಲೆ ಯಾಗಿತ್ತು. ಅರಿವೇ ಅವರ ಪಾಲಿಗೆ ಗುರುವಾಗಿತ್ತು. ಕಡೆಯ ತನಕ ರಾಮರಾಯರು ಜೀವನದ ವಿದ್ಯಾರ್ಥಿಗಳಾಗಿಯೇ ಇದ್ದರು.

ಸುಮಾರು ವರ್ಷಗಳ ಮೊದಲು "ಕನ್ನಡ ನುಡಿ" ಅವರನ್ನು ಕುರಿತು ಹೀಗೆ ಬರೆದಿತ್ತು. "ಸೌಮ್ಯ ಗಂಭೀರ ಮುಖ, ಅದಕ್ಕೊಪ್ಪುವ ಬಿಳಿಯದಾದ ಮೀಸೆ. ಕನ್ನಡಕದ ಹಿಂದೆ ಹೊಳೆಯುವ ಅಂತಃಕರಣ ಭರಿತ ಕಣ್ಣುಗಳು, ವಿಶಾಲವಾದ ಹಣೆ, ಕುತ್ತಿಗೆ ಮುಚ್ಚುವ ಕ್ಲೋಸ್‌ಕಾಲರ್ ಕೋಟು. ಎದ್ದು ಕಾಣುವ ಅಂಚಿಲ್ಲದ ಬಿಳಿಯ ಮೈಸೂರು ರುಮಾಲು; ಶುಭ್ರವಾದ ಬಿಳಿಯ ಧೋತ್ರ, ಹೊದೆದ ಒಂದು ಜರಿಯಂಚಿನ ಉತ್ತರೀಯ. ಒಟ್ಟಿನಲ್ಲಿ ಮೊದಲ ನೋಟಕ್ಕೇ ಆಕರ್ಷಿಸುವಂಥ ವ್ಯಕ್ತಿತ್ವ ಅವರದು.

ಮೃದು ಮನಸ್ಸು, ಕಾರ್ಯದಕ್ಷತೆ, ಕಷ್ಟಸಹಿಷ್ಣುತೆ, ಸರಸಪ್ರಿಯತೆ, ಸತ್ಯ ನಿಷ್ಠುರತೆ, ಸೌಜನ್ಯತೆ, ನಿರಾಡಂಬರ ಪ್ರಿಯತೆ - ಇವುಗಳು ಪದಗಳಾಗಿ ಮಾತ್ರವಲ್ಲ, ಅವರ ವ್ಯವಹಾರದಲ್ಲಿ ಕಂಡು ಬರುವ ವಿಶೇಷ ಗುಣಗಳು. ಹಿಡಿದ ಕೆಲಸವನ್ನು ಕೊನೆಗಾಣಿಸುವ ದೃಢತೆ, ತರುಣರನ್ನು ನಾಚಿಸುವ ಉತ್ಸಾಹ. ಇವು ಅವರಲ್ಲಿ ಎದ್ದು ಕಾಣುವ ಕೆಲವು ವೈಶಿಷ್ಟ್ಯಗಳು. ಇವೇ ಅವರ ಬಾಳಿನ ರಹಸ್ಯವೆನ್ನಬಹುದು"-ಎಂಬುದಾಗಿ ಸುಮನಾ ಅವರು ತಾವು ಕಂಡ ಸುಬೋಧರಾಮರಾಯರ ಬಗ್ಗೆ ಕನ್ನಡನುಡಿಯಲ್ಲಿ ಬರೆದರು.

*-(ಕನ್ನಡನುಡಿ- ಮಾರ್ಚ್ ೧೯೬೬)*

ತಮ್ಮ ಕನ್ನಡ ಕುಲರಸಿಕರು ಗ್ರಂಥ ಮಾಲೆಯಲ್ಲಿ ಅನಕೃ ಅವರು ರಾಮರಾಯರನ್ನು ಚಿತ್ರಿಸಿದ್ದು ಹೀಗೆ ;-

"ರಾಮರಾಯರ ಜೀವನ ಶ್ರದ್ಧೆ, ಸಹಿಷ್ಣುತೆ ನಿರಂತರ ಪರಿಶ್ರಮಗಳ ಒಂದು ಮಹಾ ಕಾವ್ಯ. ಅವರು ಹಿಡಿದ ಜಾಡು ಲೋಕಪ್ರಿಯ ಮಾರ್ಗವಲ್ಲ. ಅವರು ಆಶ್ರಯಿಸಿದ ಸಾಹಿತ್ಯ ಮನರಂಜಕ ಸಾಹಿತ್ಯವಲ್ಲ. ಲೋಕಪ್ರಿಯ ಸಾಹಿತ್ಯಾರಾಧಕನೇ ಅಶನವಸನಗಳಿಗೆ ತೊಳಲಾಡುವಾಗ

ಧಾರ್ಮಿಕ ಸಾಹಿತ್ಯ, ಅದರಲ್ಲೂ ಒಂದು ಮತವನ್ನವಲಂಬಿಸಿದ ಸಾಹಿತ್ಯ ಸೇವೆ ಮಾಡು ವವರ ಕಷ್ಟ ಎಷ್ಟೆಂಬುದು ವರ್ಣನಾತೀತ."

"ರಾಮರಾಯರು ವಿಶೇಷ ಪರಿಶ್ರಮ ಮಾಡಿ ಹಲವು ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಿಸಿ, ಅಧಿಕೃತವಾದ ಗ್ರಂಥಗಳನ್ನು ಪ್ರಕಟಿಸಿ ಮಹೋಪಕಾರ ಮಾಡಿದ್ದಾರೆ."

"ರಾಮರಾಯರು ಯಾವ ಆಡಂಬರಕ್ಕೆ ಹೋಗದೆ ನಿಷ್ಕಲ್ಮಷ ಮನಸ್ಸಿನಿಂದ ಸತತ ವಾಗಿ ಮೂವತ್ತೈದು ವರ್ಷಗಳ ಕಾಲ ಕನ್ನಡನಾಡಿನ ಸೇವೆ ಮಾಡಿದ್ದಾರೆ. ಆದರೆ ಅವರಿಗೆ ದೊರಕಿರುವ ಪ್ರೋತ್ಸಾಹ, ಪ್ರತಿಫಲ ಶೋಚನೀಯವಾಗಿದೆ. ಶ್ರೀ ಆಲೂರು ವೆಂಕಟರಾಯ ರನ್ನುಳಿದು ಯಾವ ಹಿರಿಯ ಸಾಹಿತಿಯೂ ರಾಮರಾಯರ ಬಗ್ಗೆ ಒಂದು ಒಳ್ಳೆಯ ಮಾತನ್ನೂ ಆಡದಿರುವುದು ನಮ್ಮ ಔದಾರ್ಯ, ಗುಣಗ್ರಾಹತೆಗಳ ಹೆಗ್ಗುರುತಾಗಿದೆ."

"ರಾಮರಾಯರು ಮಹಾಕಾವ್ಯಗಳನ್ನು ಬರೆದಿಲ್ಲ. ಉದ್ದಾಮ ಗ್ರಂಥಗಳನ್ನು ವಿರಚಿಸಿಲ್ಲ. ವಿಶ್ವ ವಿದ್ಯಾನಿಲಯದ ಡಿಗ್ರಿಗಳನ್ನು ಮೆರೆಸಿಕೊಂಡು ಸಾಹಿತ್ಯಾಚಾರ್ಯರಾಗಲಿಲ್ಲ. ಅವರ ಸಾಹಿತ್ಯ, ಶ್ರಮಜೀವಿಯೊಬ್ಬ ಶ್ರಮಜೀವಿಗಾಗಿ ಬರೆದ ಸಾಹಿತ್ಯ. ಕಲಿತವನಿಗೆ ಕಲಿಸುವ ಪ್ರಯತ್ನ ಅವರು ಮಾಡಿಲ್ಲ. ಅರಿಯದವರ ಮನಸ್ಸಿನಲ್ಲಿ ಅರಿವು ಮೂಡಿಸುವ ಕೆಲಸ ಮಾಡಿದ್ದಾರೆ. ಕನ್ನಡನಾಡಿನ ಸಾಹಿತ್ಯ ಜಾಗೃತಿಗೆ ರಾಮರಾಯರ ಸೇವೆಯೂ ತನ್ನ ಮಹತ್ವದ ಕಾಣಿಕೆ ನೀಡಿದೆ ಎಂಬುದನ್ನು ಮರೆಯಬಾರದು. ಇಂದು ಪ್ರಜ್ವಲಿಸುತ್ತಿರುವ ಕನ್ನಡ ದೀವಿಗೆಯ ಹಣತೆಗೆ ಹಲವು ಪುಣ್ಯ ಪುರುಷರು ತಮ್ಮ ಜೀವನವನ್ನೇ ತೈಲವಾಗಿ ಎರೆದಿದ್ದಾರೆ. ಅಂಥ ಸೇವಾವ್ರತದಲ್ಲಿ ರಾಮರಾಯರೊಬ್ಬರು. ಅವರ ಶ್ರದ್ಧೆ, ನಿಷ್ಠೆ, ಸೇವಾಕಾಂಕ್ಷೆ ಕಿರಿಯರ ನಂದಾದೀಪವಾಗಲಿ."

*- (ಕನ್ನಡ ಕುಲರಸಿಕರು, ಜೂನ್ ೧೯೫೧)*

ಹೀಗೆ ಅವರು ತೀರಿಕೊಂಡಾಗ ಅವರನ್ನು ಹತ್ತಿರದಿಂದ ಕಂಡವರು ದೂರದಿಂದ ನೋಡಿದವರು, ಗ್ರಂಥಗಳಿಂದ ಅರಿತವರು ಅವರನ್ನು ಸರಳ ಸೌಜನ್ಯಗಳ ಗಣಿ, ಭಾರತದ ಪರಂಪರೆಯ ಪ್ರತಿನಿಧಿ, ಹರಿದಾಸ ಸಾಹಿತ್ಯ ಧುರೀಣಾ, ನೂರ ಅರವತ್ತು ಕೃತಿಗಳ ಲೇಖಕ, ಸದಾಚಾರ ಸಂಪನ್ನ, ನಿಯಮನೀತಿ ನಿಷ್ಠೆಗಳ ಯೋಗ್ಯ ಪರಿಪಾಲಕ, ತಮ್ಮ ಕಾಲದ ಕನ್ನಡಿಗರ ವಾಚನಾಭಿರುಚಿ ವರ್ಧಕ, ಸಾಧು, ಸರಳ ಸಜ್ಜನಿಕೆಯ ನಿರ್ಮಲಮೂರ್ತಿ - ಎಂದೆಲ್ಲಾ ಹೊಗಳಿ ಶ್ರದ್ಧಾಂಜಲಿಯನ್ನು ಅರ್ಪಿಸಿದರು.

ರಾಮರಾಯರು ತೀರಿಕೊಂಡ ಮೇಲೆ ಬಂದ ಶ್ಲಾಘನೆ-ಮರಣೋತ್ತರ ಬರುವ ಸಾಮಾನ್ಯ ಶ್ರದ್ಧಾಂಜಲಿಯಾಗಿರಲಿಲ್ಲ. ನಾಡಿನ ಎಲ್ಲ ಪತ್ರಿಕೆಗಳು ಅವರ ಸೇವೆಯನ್ನು ಕುರಿತು ಮುಕ್ತ ಮನಸ್ಸಿನಿಂದ ಹೊಗಳಿದ್ದವು. "ಸುಬೋಧ ರಾಮರಾಯರು ಸಮಾಜಕ್ಕೆ ಬಹು ಮುಖ್ಯ ಸೇವೆಯನ್ನು ಸಲ್ಲಿಸಿದ್ದರೂ, ಸಾಹಿತ್ಯ ಕ್ಷೇತ್ರದಲ್ಲಿನ ಅವರ ಕಾರ್ಯ ವೈಶಿಷ್ಟ್ಯಪೂರ್ಣವಾದು ದಾಗಿದೆ. ಜನಮನವನ್ನು ತಿದ್ದುವ ಕಾರ್ಯವನ್ನು ಸುಬೋಧ ರಾಮರಾಯರಷ್ಟು ಚೆನ್ನಾಗಿ ಯಾರು ಮಾಡಿಲ್ಲ. ತಮ್ಮ ಸುಸ್ವಭಾವದಿಂದ ಸಾಕಷ್ಟು ಜನಪ್ರಿಯರಾಗಿದ್ದರು ಅವರು."

*- (ಸಂಯುಕ್ತ ಕರ್ನಾಟಕ, ೨೧-೩-೧೯೭೦)*

"ಗೀತೆಯಲ್ಲಿ ಶ್ರೀಕೃಷ್ಣನು ಬಣ್ಣಿಸಿರುವ ಸ್ಥಿತಪ್ರಜ್ಞನ ರೀತಿಯಲ್ಲಿ ದೀರ್ಘಕಾಲ ಪುಣ್ಯ ಕೆಲಸದಲ್ಲೇ ತೊಡಗಿದ್ದು, ಸಾರ್ಥಕ ಬಾಳುವೆ ನಡೆಸಿದವರು ಶ್ರೀ ಸುಬೋಧ ರಾಮರಾಯರು. ಕೀರ್ತಿ ಕಾಮನೆಗಳ ಪ್ರಲೋಭಕ್ಕೆ ಬಲಿಯಾಗದೆ, ಪ್ರಚಾರಾಡಂಬರದ ಕೃತಕ ಬೆಳಕಿನಲ್ಲಿ ಬೆಳಗದೆ, ತಮ್ಮಷ್ಟಕ್ಕೆ ಮೌನ ರೀತಿಯಲ್ಲಿ ದುಡಿಯುತ್ತ, ಅಗಾಧ ಕೆಲಸ ಮಾಡಿದರು. ಮಹಾಮಹಿಮರು, ಸಾಧು ಸಂತರು, ವೀರಧೀರರ, ಸಾಧ್ವಿ ಶಿರೋಮಣಿಗಳ, ಪತಿವ್ರತೆಯರ ಕಥೆಗಳನ್ನು ತಿಳಿಗನ್ನಡದಲ್ಲಿ ಬರೆದು, ಸುಲಭ ಬೆಲೆಯ ಹೊತ್ತಿಗೆಗಳನ್ನು ಪ್ರಕಟಿಸಿ, ನಮ್ಮ ಸಂಸ್ಕೃತಿಯ ಭವ್ಯ ಪರಂಪರೆಯ ಸಂದೇಶವನ್ನು ನಾಡಿನ ಮನೆ ಮನೆಗೂ ಮುಟ್ಟಿಸಿ ಪುಣ್ಯ ಕಟ್ಟಿಕೊಂಡರು ರಾಮರಾಯರು. ಸ್ವಭಾವತಃ ಅವರು ಒಬ್ಬ ಸಂತರೇ ಆಗಿದ್ದರು. ಆದರೆ ಸಮಾಜ ಜೀವನದಿಂದ ದೂರವಾಗಿ ನಿರ್ಲಿಪ್ತ ಏಕಾಂಗಿತನಕ್ಕೆ ಬದಲಾಗಿ ನಮ್ಮ ನಡುವೆಯೇ ಇದ್ದುಕೊಂಡು ಒಡನಾಡಿಗಳ ಒಪ್ಪು ತಪ್ಪುಗಳನ್ನೆಲ್ಲಾ ಪುಟ್ಟ ನಗೆಯಿಂದ ಗಮನಿಸಿ, ಭರಿಸಿ ತಮ್ಮ ಸುತ್ತಲಿನ ಜೀವನ ಧರ್ಮನಿಷ್ಠವಾಗಲು ಶ್ರಮಿಸಿದುದು ರಾಮರಾಯರ ವೈಶಿಷ್ಟ್ಯ. ಇಂಥ ಪ್ರಾಮಾಣಿಕ ಧರ್ಮಿಷ್ಠ, ಕಾರ್ಯನಿಷ್ಠ, ಸತ್ಪುರುಷರು ವಿರಳ. ಇಂಥವರೊಬ್ಬರು ಕಣ್ಮರೆಯಾದಾಗ ನಾಡು ನಿಜವಾಗಿಯೂ ಬಡವಾಗುತ್ತದೆ."

*- (ಕನ್ನಡಪ್ರಭ, ೨೨-೩-೧೯೭೦)*

"ನನ್ನದು ಪಾಮರ ಸೇವೆ ಎಂದು ನಮ್ರವಾಗಿ ಹೇಳಿಕೊಳ್ಳುತ್ತಿದ್ದ ರಾಮರಾಯರು ರಚಿಸಿದ ಈ ಬಗೆಯ ಪುಸ್ತಕಗಳು ಭಾರತದ ಬೇರೆ ಯಾವ ಭಾಷೆಯಲ್ಲೂ - ಈ ಪ್ರಮಾಣದಲ್ಲಿ ಪ್ರಕಟವಾಗಿಲ್ಲ"- ಎಂಬುದು ಕನ್ನಡಿಗರು ಹೆಮ್ಮೆ ಪಡಬಹುದಾದ ಅಂಶ.

"ಆತ್ಮಸಮಾಧಾನ ಮತ್ತು ಸಮಾಜದ ಹಿತ ಇವೆರಡೇ ಉದ್ದಿಶ್ಯಗಳನ್ನಿಟ್ಟುಕೊಂಡು ನಿಷ್ಕಾಮ ಕರ್ಮಯೋಗಿಯಂತೆ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ದುಡಿದವರು ಶ್ರೀ ರಾಮ ರಾಯರು.

ಆಯಾಸವಿಲ್ಲದ ಮರಣ. ದೈನ್ಯರಹಿತ ಜೀವನ ಕೇವಲ ಭಗವದ್ಭಕ್ತರ, ಮಹಾಮಹಿಮರ ಪಾಲಿಗೆ ಬರುವ ಅತಿಶಯ ಭಾಗ್ಯ. ಅವರ ಜೀವನಚರಿತ್ರೆಗಳ ಪುಟ್ಟ ಪುಸ್ತಕಗಳು, ಕನ್ನಡ ಸಾಹಿತ್ಯದಲ್ಲಿಯೇ ಹೊಸ ಹೆಜ್ಜೆ - ಹೊಸ ಪ್ರಕಾರ. ಶೀಲವಂತ ಸಾಹಿತ್ಯ ರಚನೆ ಅವರ ಗುರಿ. ಲೇಖನಿ ಸಮಾಜವನ್ನು ತಿದ್ದುವ ಪ್ರಭಾವೀ ಸಾಧನವಾಗಬೇಕು ಎಂಬುದೇ ಅವರ ಪತ್ರಿಕೋದ್ಯಮರ ಗುರಿ."

*- (ಪ್ರಜಾವಾಣಿ, ೨೧-೩-೧೯೭೦)*

"ಕನ್ನಡ ಸಾಹಿತ್ಯದ ನವೋದಯಕ್ಕೆ ಮುಂಚೆಯೇ ಆಧುನಿಕ ಸಾಹಿತ್ಯದ ಮುಂಗನಸಿನಂತೆ, ಕನ್ನಡ ಸಾಹಿತ್ಯದ ಅಪಾರ ಕೃತಿ ರಚನೆ ಮಾಡಿದ ಹಿರಿಯ ಸಾಹಿತಿ ಶ್ರೀ ಸುಬೋಧ ರಾಮರಾಯರ ಸುಬೋಧ ಮಾಸಪತ್ರಿಕೆಯ ಮೂಲಕ ಸುಬೋಧ ರಾಮರಾಯರೆಂದು ಹೆಸರಾದ ಶ್ರೀಯುತರು ದಾಸ ಸಾಹಿತ್ಯ ಹಾಗೂ ಹಲವಾರು ಮಹನೀಯರ ಜೀವನ ಚರಿತ್ರೆಗಳನ್ನೂ ರಚಿಸಿ ಕನ್ನಡ ಸಾರಸ್ವತ ಪ್ರಪಂಚಕ್ಕೆ ಅಮೋಘವಾದ ಸೇವೆ ಸಲ್ಲಿಸಿದ್ದಾರೆ."

*- (ಕನ್ನಡನುಡಿ. ೧-೪-೧೯೭೦)*

"ಮಾಧ್ವ ಸಂಘ, ಮಾಧ್ವ ಯುವಕರಸಂಘ, ಅಖಿಲ ಭಾರತ ಮಾಧ್ವ ಮಹಾಮಂಡಲಿಗಳ ಮುಖಾಂತರ ಮಾಧ್ವರಲ್ಲಿ, ಮಾಧ್ವ ಯುವಕರಲ್ಲಿ ಆಸ್ತಿಕ ಭಾವನೆಯನ್ನುಂಟು ಮಾಡಿದರು. ರಾಮರಾಯರು ಒಂದು ವ್ಯಕ್ತಿಯಲ್ಲ. ಒಂದು ಶಕ್ತಿಯಾಗಿದ್ದರು... ತಮ್ಮ ಸದಾಚಾರ ನಿರಾಡಂಬರ ಪ್ರವೃತ್ತಿ ನಿಷ್ಕಲಂಕ ಚಾರಿತ್ರ್ಯದಿಂದ ರಾಮರಾಯರು ಮಾಧ್ವರ ಹೃದಯದಲ್ಲಿ ಅಜರಾಮರ ವಾಗಿದ್ದಾರೆ."

*- (ತತ್ತ್ವವಾದ, ಏಪ್ರಿಲ್ ೧೯೭೦)*

"ಪುಸ್ತಕಗಳ ಬಗ್ಗೆ ಮಾತನಾಡುವಾಗ ಕಣ್ಣುಗಳಲ್ಲಿ ಬೆಳಕು, ಇಂದಿನದು ಹಿಂದಿನದು ಎಲ್ಲವನ್ನೂ ನೆನಪಿನಲ್ಲಿಟ್ಟುಕೊಂಡು ಇಸವಿಗಳ ಸಮೇತ ವಿವರಣೆ ಕೊಡುತ್ತಿದ್ದ ಅವರ ಎಪ್ಪತ್ತೊಂಭತ್ತು ವಯಸ್ಸಿನ ಜ್ಞಾಪಕಶಕ್ತಿ ಅದ್ಭುತವಾದುದು. ಪುಸ್ತಕಗಳಿಗೂ ಅವರಿಗೂ ಐವತ್ತೈದು ವರ್ಷಗಳ ನಂಟು. ತಾವು ಮಾಡುವ ಬರೆಯುವ ಓದುವ ಕೆಲಸವೆಲ್ಲ ದೇವರ ಸೇವೆ ಎಂಬ ಭಕ್ತಿ ಭಾವನೆ, ದೈವಭಕ್ತಿ ಅವರ ಜೀವನದುದ್ದಕ್ಕೂ ಅವರ ಕೈ ಹಿಡಿದು ನಡೆಸಿದ ಸಂಗಾತಿ. ಅದೇ ಅವರ ವಿಪುಲ ಸುಬೋಧ ಸಾಹಿತ್ಯದೃಷ್ಟಿಯ ಅಡಿಗಲ್ಲು."

*- (ಕಸ್ತೂರಿಯಲ್ಲಿ ಚಿರಂಜೀವಿ ಅವರ ಲೇಖನ, ಅಕ್ಟೋಬರ್, ೧೯೬೯)*

"ಹಿಂದೆ ಓದಿದ ಸ್ಮರಣೆಯಿಂದ ಈಗ ಅವುಗಳನ್ನೆಲ್ಲಾ ಪುನಃ ಪದೇ ಪದೇ ಓದುತ್ತಾ ಬರಬೇಕೆಂಬ ಆಸೆಯಾಗಿದೆ. ಅವುಗಳಷ್ಟು ಹೃದಯವನ್ನು ಪರಿವರ್ತಿಸುವ ಚಿಕ್ಕ ಗ್ರಂಥಗಳ ಮಾಲೆ ಮತ್ತೊಂದಿಲ್ಲ. ಕುಚೇಲನನ್ನು ನಾನು ಅದೆಷ್ಟು ಬಾರಿ ಓದಿದ್ದೇನೋ ಆಗೆಲ್ಲ ಅದು ನನ್ನ ಕಣ್ಣೀರು ತಂದಿದೆ."

*- ದಾವಣಗೆರೆ ಭೀಮರಾಯರು.*

"ಈಗ ಪ್ರೌಢ ಕಾವ್ಯಗಳಿಗಿಂತಲೂ ಹೆಚ್ಚಾಗಿ ಪಾಮರರಿಗೆ ಬೋಧಪ್ರದವಾದ ಗ್ರಂಥಗಳು ಬೇಕಾಗಿದೆ. ಆರ್ಯ ಸಂಸ್ಕೃತಿಯ ವೈಭವವನ್ನೂ, ಪಾಶ್ಚಾತ್ಯ ಸಂಸ್ಕೃತಿಯ ಶ್ರೇಷ್ಠ ಲಕ್ಷಣಗಳನ್ನು ಜನಸಾಮಾನ್ಯರಿಗೆ ತಿಳಿಸುವ ಸುಲಭವಾದ ಸರಳವಾದ ಶೈಲಿಯಲ್ಲಿ ಬೋಧಿಸುವ ಅಗ್ಗದ ಬೆಲೆಯುಳ್ಳ ಉತ್ತಮ ಗ್ರಂಥಗಳು ರಾಶಿರಾಶಿಯಾಗಿ ನಮಗೆ ಬೇಕಾಗಿದೆ."

ಧನವಿಲ್ಲದ ದಾರಿದ್ರ್ಯಕ್ಕಿಂತಲೂ, ಭಾವೋನ್ನತಿಯಿಲ್ಲದ ಬಡತನವು ಹೆಚ್ಚು ದಾರುಣ ವಾದುದು. ಆದುದರಿಂದ ಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವ ತಿಳಿಗನ್ನಡದಲ್ಲಿ ಅನೇಕ ಗ್ರಂಥಗಳನ್ನು ಬರೆದು ಜ್ಞಾನಭಕ್ತಿಯನ್ನು ನೀಡಬೇಕಾದುದು ಅವಶ್ಯಕ. ಈ ಭಾಗದಲ್ಲಿ ಕೃಷಿ ಮಾಡುತ್ತಿರುವವರೆಲ್ಲರೂ (ಸುಬೋಧ ರಾಮರಾಯರು) ಧನ್ಯರು.

*- ಸಿ.ಕೆ.ವೆಂಕಟರಾಮಯ್ಯ*

"ಲೋಕದಲ್ಲಿ ಅನ್ನದಾನ ವಸ್ತ್ರ ದಾನಕ್ಕಿಂತಲೂ ಜ್ಞಾನದಾನ ಮೇಲು. ಜನರಲ್ಲಿ ತಿಳುವಳಿಕೆಯು ಹರಡಿ ಹೆಚ್ಚಬೇಕು."

*- ಎನ್. ವೆಂಕಟೇಶ ಐಯ್ಯಂಗಾರ್*

"ನನಗೆ ತಿಳಿದ ಮಟ್ಟಿಗೆ ಹಿಂದೀ, ಬಂಗಾಳಿ, ಗುಜರಾತೀ, ಆಂಧ್ರ ಸಾಹಿತ್ಯ ಪ್ರಪಂಚದಲ್ಲಿ ಈ ಬಗೆಯಾಗಿ ಏಕವ್ಯಕ್ತಿಯ ಪ್ರಯತ್ನದಿಂದ ಇಂಥ ಅದ್ಭುತ ಸಾಹಿತ್ಯ ಸೇವೆಯನ್ನು ಮಾಡಿರುವವರಾರೂ ಕಂಡುಬರುವುದಿಲ್ಲ. ಈ ದೃಷ್ಟಿಯಿಂದ ಬಿರುದುಬಾವಲಿಗಳ ಆಸೆಗೊಳಗಾಗದೆ ಹಲವು ಕಷ್ಟಗಳಿಗೊಳಗಾದರೂ ಎದೆಗುಂದದೆ, ಸತತ ಸೇವೆಯಿಂದ ಸಾಹಿತ್ಯ ಸೇವಾ ಪ್ರಪಂಚದಲ್ಲಿ ತಾವು ಧುರೀಣ ಸ್ಥಾನವನ್ನು ಹೊಂದಿರುವಿರಿ. ಈ ವಿಚಾರವನ್ನು ಯಾರು ಮನ್ನಿಸದಿದ್ದರೂ ಮುಂದಿನ ಪೀಳಿಗೆಯಿಂದ ತಮ್ಮ ಸೇವೆಗೆ ಉಚಿತ ಸ್ಥಾನವು ದೊರಕದಿರದು."

*- ಕೃ. ಭಾರದ್ವಾಜ, ಸಂಪಾದಕರು, ರಂಗಭೂಮಿ.*

"ಉತ್ತಮವಾದ ಆದರ್ಶಗಳು, ಓಜಸ್ವಿಯಾದ ಸರಳ ಶೈಲಿಗಳು, ಅಪ್ರಸಕ್ತವಲ್ಲದ ವಿಚಾರ ಸರಣಿ, ಹೆಚ್ಚೂ ಇಲ್ಲದೆ ಕಡಿಮೆಯೂ ಇಲ್ಲದೆ ಇರುವ ವಿಷಯಗಳು. ಇವುಗಳಿಂದ ಕೂಡಿರುವ ಗ್ರಂಥಗಳಿಗೆ ಯಾವಾಗಲು ಗೌರವವುಂಟು ಎಂಬ ಮಾತು ನಿಜವಾದರೆ ತಮ್ಮ ಗ್ರಂಥಮಾಲೆಯು ಚಿರಾಯು ಎಂಬ ವಿಚಾರದಲ್ಲಿ ಸಂದೇಹವಿಲ್ಲ."

*- ದೇವುಡು ನರಸಿಂಹಶಾಸ್ತ್ರಿ.*

"ಜನಾಂಗದ ಸಾಮಾಜಿಕ ರಾಜಕೀಯ ತಾತ್ವಿಕ ಜೀವನಗಳಲ್ಲಿ ಸೂಕ್ತವಾದ ಮಾರ್ಪಾಡು ಉಂಟಾಗಲು ಈ ಗ್ರಂಥಗಳು ಬಹುಮಟ್ಟಿಗೆ ಸಾಧಕವಾಗಿದೆ."

*- ವರವಣಿ ರಾಮರಾವ್*

"ತಮ್ಮ ಗ್ರಂಥಮಾಲೆ ಕರ್ಣಾಟಕದ ಮೂಲೆಮೂಲೆಗಳಿಗೆ ಕೂಡ ನುಗ್ಗಿ ಹೆಂಗಸರು ಮಕ್ಕಳ ಕೈಲಿ ಕೂಡಾ ನಲಿದಾಡುತ್ತಿದೆ. ಈ ಬಗೆಯ ಗ್ರಂಥಮಾಲೆಯಿಂದ ದೇಶಸೇವೆಯಾಗುವುದೆಂಬುದು ನಿರ್ವಿವಾದ ವಿಷಯ."

*- ಹೊಸಕೆರೆ ಚಿದಂಬರಯ್ಯ*

In the Kannada literary horizon Rama Rao was the first, perhaps he only one to dedicate himself to the unenviabel task of publishing small books on great leaders; ancient and modern in different fields - religion, Politics, Education, Social reform, Literature, Art, Music, Science, Industry Etc.

What W.T.Steat did for the education of the masses in England and what G.A.Nateshan did to educate the English speaking Indians. Subodha Rama Rao did for the education of the kannadiga children and masses.

***- ( Bharatha Jyothi, March 12, 1969)***

ಹೀಗೆ ಜೀವಿಸಿದ್ದಾಗ ತಮ್ಮ ಸಮಕಾಲಿನ ಗಣ್ಯವ್ಯಕ್ತಿಗಳಿಂದಲೂ, ಮಡಿದ ಮೇಲೂ ಹೃದಯ ಸ್ಫೂರ್ತಿಯಾದ ಶ್ರದ್ಧಾಂಜಲಿ ಗೌರವವನ್ನು ಪಡೆದ ಸುಬೋಧ ರಾಮರಾಯರ ಬಹುಮುಖ ಸೇವೆಯನ್ನು ನಾವು ಪ್ರಮುಖವಾಗಿ ನಾಲ್ಕು ಘಟ್ಟಗಳಲ್ಲಿ ನೋಡಬಹುದಾಗಿದೆ. ಅವು

ಸುಬೋಧ ಕುಸುಮಾಂಜಲಿ ಗ್ರಂಥಮಾಲೆ, ಸುಬೋಧ ಪತ್ರಿಕೆ ಹಾಗೂ ಸಮಾಜಸೇವೆ, ತತ್ವಜ್ಞಾನ ಪ್ರಚಾರಕ್ಕಾಗಿ ಮಾಡಿದ ದಾಸ ಸಾಹಿತ್ಯ ಸೇವೆ.

೩

ಸುಬೋಧ ಗ್ರಂಥಮಾಲೆಯನ್ನು ಆರಂಭಿಸಲು ರಾಮರಾಯರಿಗೆ ದೊರೆತ ಪ್ರೇರಣೆ ಏನು, ಇದಕ್ಕೆ ಉತ್ತರ ಹುಡುಕಲು ರಾಮರಾಯರ ಅಂದಿನ ಪರಿಸರ ತಿಳಿದುಕೊಳ್ಳುವುದು ಅಗತ್ಯ.

ರಾಮರಾಯರು ಹೊನ್ನಾಳಿಯಲ್ಲಿದ್ದ ತಮ್ಮ ತಾಲ್ಲೂಕು ಆಫೀಸಿನ ನೌಕರಿಯನ್ನು ಬಿಟ್ಟ ಮೇಲೆ ಸ್ವತಂತ್ರ ಉದ್ಯೋಗವನ್ನು ಹಿಡಿಯುವ ಹಂಬಲದಲ್ಲಿ ಒಂದು ಕಿರಾಣಿ ಅಂಗಡಿಯನ್ನು ತೆಗೆದರು. ಸ್ಥಳದ ವರ್ತಕರ ಈರ್ಷೆ, ಬಂಡವಾಳದ ಕೊರತೆ, ಅವರ ನಿಸ್ಪೃಹತೆ ಮೊದಲಾದ ಕಾರಣಗಳಿಂದಾಗಿ ಈ ಪ್ರಯತ್ನ ವಿಫಲವಾಯಿತು. ಅವರು ಅಂಗಡಿಯನ್ನು ಮುಚ್ಚಿ, ತಮ್ಮ ಭಾಗ್ಯವನ್ನು ಅರಿಸಿಕೊಂಡು ಬೆಂಗಳೂರಿಗೆ ಬಂದಿದ್ದರು.

ಈ ವೇಳೆಗೆ ದ್ವಿತೀಯ ಮಹಾಯುದ್ಧ ಆರಂಭದ ಕಾಲವಾಗಿತ್ತು. ಅವರು ಉಟ್ಟ ಬಟ್ಟೆಯಲ್ಲಿ ಬೆಂಗಳೂರಿಗೆ ಬಂದಿದ್ದರು. ದಂಡಿನ ಪ್ರದೇಶದಲ್ಲಿ ಅಕ್ಕ ಜಾನೂಬಾಯಿ ಉಪಾಧ್ಯಾಯಿನಿಯಾಗಿದ್ದರು. ಒಬ್ಬರಿಗೆ ಹೊರೆಯಾಗಬಾರದೆಂದು ಒಂದು ಶಿಶುವಿಹಾರದಲ್ಲಿ ಹತ್ತು ರೂಪಾಯಿಯ ಕೆಲಸಕ್ಕೆ ಸೇರಿಕೊಂಡರು.

ರಾಮರಾಯರ ಮನೋವೃತ್ತಿ ಅಧ್ಯಾಪಕರ ಕೆಲಸಕ್ಕೆ ಕೇಳಿ ಮಾಡಿಸಿದಂತಿತ್ತು. ಶಾಲೆಯ ಸಂಬಳ ಕಡಿಮೆ ಇದ್ದರೂ, ಅವರು ವಿದ್ಯಾರ್ಥಿಗಳ ಜತೆಯಲ್ಲಿ ತಮ್ಮ ತೊಂದರೆಯನ್ನು ಮರೆತರು. ತಮ್ಮ ಕರ್ತವ್ಯದಲ್ಲಿ ಶ್ರದ್ಧೆಯಿಂದ ದುಡಿಯುತ್ತಿದ್ದರು. ವಿದ್ಯಾರ್ಥಿಗಳೊಡನೆ ಬೆರೆತು ಅವರಲ್ಲಿ ವ್ಯಕ್ತಿತ್ವವನ್ನು ಅರಳಿಸುವ ಶೀಲಸಚ್ಚರಿತ್ರೆಗಳನ್ನು ಬೆಳೆಸುವ ಪವಿತ್ರ ಕಾರ್ಯದಲ್ಲಿ ತಮ್ಮ ಜೀವನದ ಸಾಫಲ್ಯತೆಯನ್ನು ಕಂಡುಕೊಂಡರು. ಕರ್ಪೂರ ಶ್ರೀನಿವಾಸರಾಯರು ಅವರ ಪಾಲಿನ ಗುರು, ಹಿತೈಷಿ- ಮಾರ್ಗದರ್ಶಿ ಎಲ್ಲವೂ ಆಗಿದ್ದರು. ಈಗ ಅವರು ರಾಜ್ಯದ ಚೀಫ್ ಇಂಜನಿಯರ್ ಆಗಿದ್ದರು. ಬಿಡುವಿಲ್ಲದಷ್ಟು ದುಡಿಮೆ; ಇಂಥದರಲ್ಲೂ ರಾಮರಾಯರು ಬರೆದಿದ್ದ ಕುಮಾರವ್ಯಾಸ ಭಾರತ ಗದ್ಯಾನುನುವಾದದ ಹಸ್ತಪ್ರತಿಯನ್ನು ಓದಿಸಿ ಕೇಳಿದರು. ಅದನ್ನು ಪಂಡಿತರಿಂದ ಪರಿಷ್ಕರಿಸಿದ ಮೇಲೆ ಅಚ್ಚು ಮಾಡುವ ವಿಚಾರವನ್ನು ರಾಮರಾಯರ ಮುಂದೆ ಇಟ್ಟರು. ಇದರಿಂದ ಉತ್ಸಾಹಗೊಂಡ ಅವರು ತಾವೇಕೆ ಮಕ್ಕಳ ಪುಸ್ತಕದ ರಚನೆಗೆ ಕೈ ಹಾಕಬಾರದು ಎಂಬ ವಿಚಾರವನ್ನು ಮೆಲಕು ಹಾಕಿದರು. ಅವರು ಶಾಲೆಯಲ್ಲಿ ಕಲಿಸಬೇಕಾಗಿದ್ದುದರಿಂದ ಅನಾಯಾಸವಾಗಿ ಅನೇಕ ಗ್ರಂಥ ಗಳನ್ನೂ ಓದುವ ಅವಕಾಶ ದೊರೆತಿತ್ತು. ಅವರ ಕೈಗೆ ಇಂಗ್ಲೆಂಡಿನ ಸ್ಟೆಡ್ ಎಂಬ ಗ್ರಂಥಕರ್ತನು ಬರೆದಿದ್ದ ಜಾನ್‌ಬನಿಯನ್ ಅವರ ಪಿಲಿಗ್ರಿಮ್ಸ್ ಪ್ರೋಗ್ರೆಸ್ (ಯಾತ್ರಿಕನಸಂಚಾರ) ಗ್ರಂಥ ದೊರೆತಿತ್ತು. ಅದನ್ನು ಓದಿ ಅವರು ಪ್ರಭಾವಿತರಾದರು. ಈತನು ತಾನು ಸೆರೆಮನೆಯಲ್ಲಿದ್ದಾಗ ಈ ಧಾರ್ಮಿಕ ಗ್ರಂಥವನ್ನೂ ಬರೆದಿದ್ದನು. ಅದನ್ನು ವಿಲಿಯಂ ಸ್ಟೆಡರು ಮಕ್ಕಳಿಗೆ ತಿಳಿಯುವಂತೆ

ಸರಳ ಭಾಷೆಯಲ್ಲಿ ವಿವರಿಸಿದ್ದರು. ಈ ಮಾಲೆಯ ಇತರ ಗ್ರಂಥಗಳನ್ನು ಓದಿ ಅವರು ಪ್ರಭಾವಿತರಾದರು.

ತಾವೇಕೆ ಇಂಥ ಪುಟ್ಟ ಪುಸ್ತಕಗಳನ್ನು ಕನ್ನಡದ ಮಕ್ಕಳ ಸಲುವಾಗಿ ಬರೆಯಬಾರದು? ಎಂದು ಆಲೋಚಿಸಿದರು. ಆಗ ದೇಶದಲ್ಲಿ ಸ್ವಾತಂತ್ರ್ಯಕ್ಕಾಗಿ ಆಂದೋಳನ ನಡೆದಿತ್ತು. ಅದು ತಿಲಕ್ ಮತ್ತು ಗೋಖಲೆಯವರ ಕಾಲ, ಮಹಾತ್ಮಗಾಂಧೀಜಿ ಇನ್ನೂ ಸ್ವತಂತ್ರ್ಯದ ಚಳುವಳಿಯ ಪಂಜನ್ನು ಹಿಡಿದಿರಲಿಲ್ಲ. ಯುದ್ಧದ ಕಾವು ಬೇರೆ. ಜನತೆಯಲ್ಲಿ ಒಂದು ರೀತಿಯ ರಾಷ್ಟ್ರೀಯ ಪ್ರಜ್ಞೆ, ಜಾಗೃತಿ ಮೂಡುತ್ತಿದ್ದ ಕಾಲ. ಇಂಥ ಕಾಲದಲ್ಲಿ ರಾಮರಾಯರು ಅಧ್ಯಾಪಕರಾಗಿದ್ದುದರಿಂದ ಮಕ್ಕಳಲ್ಲಿ ಸನ್ನಡತೆಯನ್ನು ಬೆಳೆಸಲು ತಾವೇಕೆ ಚಿಕ್ಕ ಪುಟ್ಟ ಗ್ರಂಥಗಳನ್ನು ಅವರಿಗೆ ಅರ್ಥವಾಗುವ ಭಾಷೆಯಲ್ಲಿ ರಚಿಸಬಾರದು? ಎಂದು ಆಲೋಚಿಸುತ್ತಿದ್ದರು.

ಅವರು ಅನೇಕ ಗ್ರಂಥಗಳನ್ನು ವ್ಯಾಸಂಗ ಮಾಡಿ ಭಾರತೀಯರ ಪುರಾಣ ಪುರುಷರಾದ ಧ್ರುವ, ಚಂದ್ರಹಾಸ, ಪ್ರಹ್ಲಾದ ,ಹರಿಶ್ಚಂದ್ರ, ಸಾವಿತ್ರಿಯರನ್ನು ಕುರಿತು ಹಸ್ತಪ್ರತಿಗಳನ್ನು ಸಿದ್ಧಪಡಿಸಿ ಅವುಗಳನ್ನು ಗುರುಗಳಾಗಿದ್ದ ಕರ್ಪೂರ ಶ್ರೀನಿವಾಸರಾಯರಿಗೆ ತೋರಿಸಿದರು.

ಅವನ್ನು ಪರಾಂಬರಿಸಿದ ಶ್ರೀನಿವಾಸರಾಯರು "ರಾಮರಾವ್, ನೀನು ಮಕ್ಕಳಿಗಾಗಿ ಬರೆಯುತ್ತೇನೆಂದು ಹೇಳುತ್ತಿ. ಈಗ ಬರೆದಿರುವುದು ಮಕ್ಕಳಿಗೆ ಅರ್ಥವಾಗದ ಭಾಷೆ. ಅವರು ಅದನ್ನು ಓದಿ ಅರ್ಥಮಾಡಿಕೊಳ್ಳಲಾರರು. ದೊಡ್ಡವರು ಈ ಕಡೆ ಕಣ್ಣೆತ್ತಿ ನೋಡಲಾರರು. ಹೀಗಾಗಿ ನಿನ್ನ ಪುಸ್ತಕ ಮಕ್ಕಳಿಗೆ ಎಟುಕಲಾರದೆ, ದೊಡ್ಡವರಿಗೆ ಬೇಡದೆ, ಶ್ರಮವ್ಯರ್ಥವಾಗುತ್ತದಲ್ಲ"- ಎಂದು ಹೇಳಿ ಮುಂದೆ ಏನು ಮಾಡಬೇಕೆಂಬ ಬಗ್ಗೆ ಮಾರ್ಗದರ್ಶನ ಮಾಡಿದರು.

"If you want to write books for the childrens, confine yourself to a sentence consisting of three or four words, each word containing not more than three or four letters".

(ನೀನು ಮಕ್ಕಳಿಗೆ ಪುಸ್ತಕಗಳನ್ನು ಬರೆಯಬೇಕೆಂದಿದ್ದರೆ ಮೂರು ನಾಲ್ಕು ಅಕ್ಷರಗಳಿಗಿಂತ ಹೆಚ್ಚಿಲ್ಲದ, ಮೂರು ನಾಲ್ಕು ಅಂಥ ಶಬ್ದಗಳಿಗಿಂತ ಹೆಚ್ಚಿಲ್ಲದ ಚಿಕ್ಕ ವಾಕ್ಯಗಳಲ್ಲಿ ಬರೆಯುವುದನ್ನು ಅಭ್ಯಾಸ ಮಾಡು) - ಎಂದು ಹೇಳಿದರು. ಅವರ ಮಾತು ರಾಮರಾಯರ ಮೇಲೆ ವಿಶೇಷ ಪರಿಣಾಮ ಮಾಡಿತು.

ಅವರು ಮತ್ತೆ ಕುಳಿತು ಧ್ರುವ ಚರಿತ್ರೆಯನ್ನು ಶ್ರೀನಿವಾಸರಾಯರು ನೀಡಿದ್ದ ಸೂಚನೆಗಳಂತೆ ಬರೆದು, ಅವರ ಅವಗಾಹನೆಗೆ ಒಪ್ಪಿಸಿದರು. ಅದರ ಪರಿಣಾಮ ಎಷ್ಟಾಯಿತೆಂದರೆ ರಾಯರು ಆಫೀಸಿಗೆ ಹೋಗುವುದನ್ನು ಮರೆತು ಅವನ್ನು ಓದಿಸಿ ಕೇಳಿ ಆನಂದಿಸಿದರು. ಮಿತ್ರರಾದ ಆರ್.ವೆಂಕಟರಾಮಯ್ಯನವರ ಬೆಂಬಲ, ಪ್ರೋತ್ಸಾಹದಿಂದ ಸುಬೋಧ ಕುಸುಮಾಂಜಲಿಯನ್ನು ೧೯೧೫ರಲ್ಲಿ ಆರಂಭಿಸಿಯೇ ಬಿಟ್ಟರು. ಅದು ಮುದ್ರಣ ವೆಚ್ಚ, ಕಾಗದ, ಅಂಚೆಗಳು ಕಡಿಮೆಯಾಗಿದ್ದ ಕಾಲ. ಹೀಗಾಗಿ ಅವರ ಗ್ರಂಥರಚನೆಗೆ, ಮುದ್ರಣಕ್ಕೆ ಅನುವಾಗಿತ್ತು.

ಈ ವೇಳೆಗೆ ರಾಮರಾಯರಿಗೆ ದಂಡಿನ ಮುನಿಸಿಪಲ್ ಶಾಲೆಯಲ್ಲಿ ಕೆಲಸ ದೊರಕಿತ್ತು. ಟ್ರೈನಿಂಗ್ ಶಾಲೆಗೆ ಅವರನ್ನು ಕಳುಹಿಸಿದ್ದರು. ಆ ಶಾಲೆ ದಂಡಿನ ಸೆಂಟ್ ಜೋಸೆಫ್ ಕಾಲೇಜಿನ ಕಟ್ಟಡದಲ್ಲಿ ಇತ್ತು. ಅಲ್ಲಿ ಆಗ ಕನ್ನಡದ ಕಾರ್ಯಕ್ಕಾಗಿ ದೀಕ್ಷೆ ತೊಟ್ಟಿದ್ದ ಟಿ.ಎಸ್.ವೆಂಕಣ್ಣಯ್ಯನವರು ಕೆಲಸ ಮಾಡುತ್ತಿದ್ದರು. ಅವರ ಮಿತ್ರರು ಎ.ಆರ್.ಕೃಷ್ಣಶಾಸ್ತ್ರಿಗಳು ಅವರನ್ನು ನೋಡಲು ಆಗಾಗ್ಗೆ ಬರುತ್ತಿದ್ದರು. ಗೋಪಾಲಕೃಷ್ಣ ಗೋಖಲೆಯವರು ತೀರಿಕೊಂಡ ಸಮಯದಲ್ಲಿ ಅವರ ಹೆಸರಿನಲ್ಲಿ ಒಂದು ರಾತ್ರಿ ಶಾಲೆಯನ್ನು ಕಾರ್ಮಿಕ ಹಾಗೂ ಶ್ರಮಜೀವಿಗಳ ಸಲುವಾಗಿ ತೆರೆದಿದ್ದರು. ರಾಮರಾಯರು ಈ ಶಾಲೆಗಾಗಿ ದುಡಿಯುತ್ತಿದ್ದರು. ಅವರು ತಮ್ಮ ಮಿತ್ರರೊಡನೆ ಸೇರಿಕೊಂಡು ಧಾರ್ಮಿಕ ಚಟುವಟಿಕೆಗಳ ಸಲುವಾಗಿ ಹಿತಕಾರಿಣಿ ಸಂಘವೊಂದನ್ನು ಸ್ಥಾಪಿಸಿದ್ದರು. ಹೀಗೆ ಸಾಹಿತ್ಯ, ಸಮಾಜ ಶಿಕ್ಷಣ, ದೇಶಸೇವೆಗಳ ಕಾರ್ಯಗಳಲ್ಲಿ ರಾಮರಾಯರು ತಮ್ಮನ್ನೇ ಅರ್ಪಿಸಿಕೊಂಡಿದ್ದರು.

ಎರಡು ವರ್ಷಗಳ ನಂತರ ಅವರು ದಂಡಿನ ಆರ್.ಬಿ.ಎ.ಎನ್.ಎಂ.ಶಾಲೆಯಲ್ಲಿ ಸೇರಿಕೊಂಡ ಮೇಲೆ, ಅವರಿಗೆ ಸಾಕಷ್ಟು ಬಿಡುವೂ, ಮಿತ್ರರ ಬೆಂಬಲವೂ ದೊರೆತು, ಸುಬೋಧ ಗ್ರಂಥಮಾಲೆ ಕನಸಾಗಿದ್ದುದು, ನನಸಾಯಿತು.

ಈ ವೇಳೆಗೆ ರಾಮರಾಯರು ವಿವಾಹವಾಗಿ ಗೃಹಸ್ಥರಾಗಿದ್ದರು. ೧೯೧೮ರಲ್ಲಿ ಯುದ್ಧ ಮುಗಿದು, ಬ್ರಿಟಿಷರು ಜಯಶಾಲಿಗಳಾದರೂ, ಅವರು ಒಪ್ಪಿಕೊಂಡಿದ್ದ ಡೊಮಿನಿಯನ್ ಸ್ಟೇಟಸ್ ಕೊಡಲು ನಿರಾಕರಿಸಿ, ಜಲಿಯನ್ ವಾಲಾಬಾಗ್ ಪ್ರಕರಣದಲ್ಲಿ ಸಹಸ್ರಾರು ನಿರಪರಾಧಿ ದೇಶಭಕ್ತರ ರಕ್ತವನ್ನು ಹರಿಸಿದ್ದರು. ರಾಮರಾಯರಿಗೆ ನೌಕರಿಯನ್ನು ತ್ಯಜಿಸಿ ಈ ಚಳುವಳಿಗೆ ಸೇರಬೇಕೆಂಬ ಆಸೆ ಇದ್ದರೂ, ಜೀವನ ನಿರ್ವಹಣೆಗೆ ಬೇರೆ ದಾರಿಯಿರಲಿಲ್ಲ. ಹೀಗಾಗಿ ಅವರು ಕೆಲಸದಲ್ಲಿ ಇದ್ದುಕೊಂಡೇ, ಸ್ವಾತಂತ್ರ್ಯ ಹೋರಾಟಕ್ಕೆ ಜನರನ್ನು ಸಿದ್ಧ ಮಾಡುವ ಕಾರ್ಯದಿಂದಲೇ ತೃಪ್ತಿ ಹೊಂದಬೇಕಾಯಿತು. ಸ್ವರಾಜ್ಯಕ್ಕಾಗಿ ಭಾರತೀಯ ನಾಯಕರು ಮಹಾತ್ಮಗಾಂಧಿ, ಜವಹರಲಾಲ್ ನೆಹರು, ವಲ್ಲಭಭಾಯಿಪಟೇಲ್, ರಾಜೇಂದ್ರಪ್ರಸಾದರು ನಡೆಸುತ್ತಿದ್ದ ಜನ ಜಾಗೃತಿಯ ಆಂದೋಳನಕ್ಕೆ ತಮ್ಮ ಪೂರ್ಣ ಸಹಕಾರವನ್ನು ನೀಡಿದರು.

ಈ ಸಮಯದಲ್ಲಿ ರಾಮರಾಯರು ಗಾಂಧಿ ಮೈದಾನದಲ್ಲಿ ನಡೆಯುತ್ತಿದ್ದ ರಾಜಕೀಯ ಮುಖಂಡರ ಸಭೆಗಳಲ್ಲಿ ದೇಶಭಕ್ತಿಯನ್ನು ಉದ್ರೇಕಿಸುವ ಕವನಗಳನ್ನು ರಚಿಸಿ, ವಾಚಿಸುತ್ತಿದ್ದರು. ಸಿ.ಆರ್.ದಾಸ್, ಮಹಾತ್ಮ ಗಾಂಧಿ, ಕಸ್ತೂರಿರಂಗ ಅಯ್ಯಂಗಾರ್, ಸತ್ಯಮೂರ್ತಿಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಅವರ ಭಾಷಣಗಳನ್ನು ಆಲಿಸಿ ರಾಮರಾಯರು ಸ್ಫೂರ್ತಿಗೊಂಡರು. ಸ್ವದೇಶಿ ವ್ರತ ಸ್ವೀಕರಿಸಿದರು; ಸರಳ ಜೀವನಕ್ಕೆ ಒಲಿದರು. ಅವರು ರಚಿಸಿದ ಸ್ವಾತಂತ್ರ್ಯ ಗೀತೆ ಸಣ್ಣ ಪುಸ್ತಕವಾಗಿ ಸಹಸ್ರಾರು ಪ್ರತಿಗಳು ಮಾರಾಟವಾದವು.

ಇದೇ ಸಮಯಕ್ಕೆ ಶಂಕರಮಠದ ಒಂದು ಸಣ್ಣ ಮನೆಯಲ್ಲಿ ೧೯೧೫ರಲ್ಲಿ ಕರ್ಪೂರ ಶ್ರೀನಿವಾಸರಾಯರು, ವೆಂಕಣ್ಣಯ್ಯ, ಡಿ.ವಿ.ಗುಂಡಪ್ಪ, ಬೆಳ್ಳಾವೆ ವೆಂಕಟನಾರಾಣಪ್ಪ ಮುಂತಾದವರು ಕನ್ನಡ ಸಾಹಿತ್ಯ ಪರಿಷತ್ತನ್ನು ಆರಂಭಿಸಿ, ನಾಡು ನುಡಿಗಳ ಸೇವೆಗೆ ಟೊಂಕ ಕಟ್ಟಿ ದುಡಿಯು

ತ್ತಿದ್ದರು. ಸಾಹಿತ್ಯದಲ್ಲಿ ನವೋದಯವನ್ನೂ, ಯುವಕರಲ್ಲಿ ಜಾಗೃತಿಯನ್ನು ತರುವ ಕಾರ್ಯದಲ್ಲಿ ತೊಡಗಿದ್ದರು. ಇದರ ಪ್ರಭಾವ ರಾಮರಾಯರ ಮೇಲೆ ಬಿದ್ದಿತು. ಅವರು ತಮ್ಮ ಸಾಹಿತ್ಯ ಸೇವೆಯಿಂದ ಜನಮನವನ್ನು ಅರಳಿಸಲು ಸಂಕಲ್ಪ ಮಾಡಿ, ಕೃತಿರಂಗಕ್ಕೆ ಇಳಿದರು.

"ಅಷ್ಟರಲ್ಲಿ ಅದೇ ಸಂವತ್ಸರ ಮೇ ತಿಂಗಳಿನಲ್ಲಿ ಪ್ರಥಮ ಸಾಹಿತ್ಯ ಪರಿಷದಧಿವೇಶನವು ಬೆಂಗಳೂರಿನ ಗೌರ್ನಮೆಂಟ್ ಕೊಲಿಜಿಯೇಟ್ ಹೈಸ್ಕೂಲಿನ ಸಭಾಂಗಣದಲ್ಲಿ ನೆರೆದಿದ್ದಾಗ ಅಲ್ಲೇ ಒಂದೆಡೆ ಕುಳಿತು ನಾನೂ ನನ್ನ ಶಕ್ತ್ಯಾನುಸಾರ ಭಾಷಾ ಸೇವೆ ಮಾಡಿ ಧನ್ಯನಾಗುವ ಮಾರ್ಗವಾವುದು ಎಂದು ಚಿಂತಿಸುತ್ತಾ ಒಳಗೊಳಗೇ ಸಂಕಟಪಡುತ್ತಿದ್ದೆ. ಅಂದಿನ ಸಭಾಧ್ಯಕ್ಷರ ಭಾಷಣವೂ ಇತರ ಅನೇಕರ ಉಪನ್ಯಾಸಗಳೂ ಸಾಹಿತ್ಯ ದೇವತಾರಾಧನೆಯಲ್ಲಿ ತೊಡಗಿದ್ದ ಬಹುಮಂದಿ ಸಾಹಿತ್ಯ ಭಕ್ತರ ಉತ್ಸಾಹಭರಿತವಾದ ಕಾರ್ಯಗಳು ಅನಾಮಧೇಯನಾಗಿ ಒಂದು ಮೂಲೆಯಲ್ಲಿ ಕುಳಿತಿದ್ದ ನನ್ನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತು"- ಎಂದು ರಾಮರಾಯರು ಬರೆದಿದ್ದಾರೆ.

ಆ ಕಾಲದಲ್ಲಿ ಕನ್ನಡ ಸಾಹಿತ್ಯ ಸೇವೆ ಮಾಡಲು ಅಪೇಕ್ಷಿಸಿದ್ದ ವ್ಯಕ್ತಿಗೆ ಎಲ್ಲೆಡೆಯಿಂದ ವಿಘ್ನಗಳು. ಕನ್ನಡ ಭಾಷಾ ಪರಿಸ್ಥಿತಿ ಶೋಚನೀಯವಾಗಿತ್ತು. ಕನ್ನಡ ಗ್ರಂಥಗಳಿಗೆ ಪ್ರೋತ್ಸಾಹ ವಿರಲಿಲ್ಲ. ಆಗ ಪ್ರಕಟವಾಗುತ್ತಿದ್ದ ಗ್ರಂಥಗಳೆಂದರೆ, ಸಂಸ್ಕೃತ ಕನ್ನಡ ಪಂಡಿತರು ಬರೆಯುತ್ತಿದ್ದ ಪೌರಾಣಿಕ ಮತ್ತು ಶಾಸ್ತ್ರ ಗ್ರಂಥಗಳು. ಅವು ಹಳೆಯ ಶೈಲಿಯಲ್ಲಿ ಇದ್ದು ಓದಲು ಬೇಸರ ತರುತ್ತಿದ್ದವು.

"ಈ ಕಂತೆ ಪುರಾಣಗಳಲ್ಲಿ ಓದಿ ತಿಳಿಯಬೇಕಾದ ಸಂಗತಿಗಳೇನಿವೆ?"- ಎಂದು ವಿದ್ಯಾವಂತ ವಾಚಕರು ಅನಾದರದಿಂದ ನೋಡುತ್ತಿದ್ದರು. ಇದರೊಂದಿಗೆ ಆ ಕಾಲದಲ್ಲಿ ಇಂಗ್ಲಿಷ್ ಭಾಷಾ ಮೋಹ ಸರ್ವವ್ಯಾಪಿಯಾಗಿತ್ತು. ಇದರ ಜೊತೆಗೆ ರಾಷ್ಟ್ರಭಾಷೆಯಾಗಿ ಹಿಂದಿ ತಲೆ ಎತ್ತುತ್ತಿತ್ತು. ಒಂದು ಕಡೆ ಇಂಗ್ಲಿಷ್- ಇನ್ನೊಂದು ಕಡೆ ಹಿಂದಿ ಹೀಗೆ ಕನ್ನಡವು ತಲೆ ಎತ್ತದಂತೆ ಸಂಚು ನಡೆಸಿದ್ದ ಕಾಲ ಅದು. ಆದರೆ ಕನ್ನಡದ ಅಶ್ವಿನಿ ದೇವತೆಗಳಂತಿದ್ದ ವೆಂಕಣ್ಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರಿಗಳು ಕನ್ನಡಕ್ಕೆ ಸಂಜೀವಿನಿಯನ್ನು ತಂದು ಭಾಷಾ ಜಾಗೃತಿಗೆ ಕಾರಣರಾದರು. ಪರಿಷತ್ತು ಆರಂಭವಾದ ಮೇಲೆ ಇಂಗ್ಲಿಷ್ ಬಲ್ಲ ವಿದ್ವಾಂಸರು ಕನ್ನಡದಲ್ಲಿ ಗ್ರಂಥ ರಚನೆ ಮಾಡಲು ತೊಡಗಿದರು. ಆದರೂ ಸಂಭಾಷಣೆ, ಭಾಷಣ ಮಾತ್ರ ಇಂಗ್ಲಿಷಿನಲ್ಲೇ ನಡೆಯುತ್ತಿತ್ತು. ಇದು ಶಿಷ್ಟರಭಾಷೆ ಎನಿಸಿಕೊಂಡಿತು. ಇದಕ್ಕೆ ಬಿ.ಎಂ.ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ರಂಥವರೂ ಹೊರತಾಗಿರಲಿಲ್ಲ.

ಆ ಕಾಲದ ಪರಿಸ್ಥಿತಿಯನ್ನು ಕುರಿತು ರಾಮರಾಯರು "ಜನಸಾಮಾನ್ಯರಲ್ಲಿ ಕರ್ಣಾಟಕ ಭಾಷೆಯಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಿ, ಬೆಳೆಸಬೇಕಾದ ಪ್ರಯತ್ನವೊಂದು ಆ ಕಾಲದಲ್ಲಿ ಅತಿ ಮುಖ್ಯವಾದ ಕಾರ್ಯವಾಗಿ ಪರಿಣಮಿಸಿತು"- ಎಂದು ಬರೆದಿದ್ದಾರೆ.

"ನಮ್ಮ ಜನಗಳಲ್ಲಿ ಮಾತೃಭಾಷಾ ವಾಚನಾಭಿರುಚಿಯನ್ನು ಹೆಚ್ಚಿಸಲು ಇತರ ಪೊಳ್ಳು ಕಥೆಗಳನ್ನೂ ಬರೆಯುವುದಕ್ಕಿಂತಲೂ ನಮ್ಮ ಭಾರತ ದೇಶದ ಮಹನೀಯ ವ್ಯಕ್ತಿಗಳ ಜೀವನ

ಚರಿತ್ರೆಗಳನ್ನು ಪ್ರಕಟಿಸುವುದಾದರೆ ಅದರಿಂದ ಹೊಸ ನಮೂನೆಯಲ್ಲಿ ಬರೆದ ಗ್ರಂಥಗಳು ಮಾತ್ರವಲ್ಲದೆ ಸನಾತನ ಧರ್ಮ ಸಮ್ಮತವಾದ ಅತ್ಯುತ್ತಮ ಆದರ್ಶಗಳನ್ನು ಕೊಟ್ಟಂತಾಗುವುದು" - ಎಂದು ರಾಮರಾಯರು ಹೇಳಿಕೊಂಡಿದ್ದಾರೆ.

ಈ ಕಾಲದಲ್ಲಿ ಚಾ.ವಾಸುದೇವಯ್ಯನವರು ತಮ್ಮ ಆಚಾರ್ಯಕೀರ್ತಿ ಎಂಬ ಗ್ರಂಥವನ್ನು ಎರಡು ಭಾಗಗಳಲ್ಲಿ ರಚಿಸಿ, ವಾಚನಾಭಿರುಚಿಯನ್ನು ಬೆಳೆಸಿದರು. ಎಂ.ಎಸ್. ಪುಟ್ಟಣ್ಣನವರು ತಮ್ಮ ಮಾಡಿದ್ದುಣ್ಣೋ ಮಹರಾಯ, ಸುಮತಿ ಮದನಕುಮಾರರ ಚರಿತ್ರೆ, ಮುಸುಕು ತೆಗೆಯೇ ಮಾಯಾಂಗನೆ, ನೀತಿ ಚಿಂತಾಮಣಿ -ಕಥೆಗಳ ಮೂಲಕ ಓದುಗರಿಗೆ ಮನರಂಜನೆಯನ್ನು ಒದಗಿಸುವ ಮೂಲಕ ವಾಚನಾಭಿರುಚಿಯನ್ನು ಬೆಳೆಸಿದರು.

ಈ ಹಿನ್ನೆಲೆಯಲ್ಲಿ ೧೯೧೫ನೆಯ ಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯನ್ನು ರಾಮರಾಯರು ತಮ್ಮ ಮಿತ್ರರಾದ ವೆಂಕಟರಾಮಯ್ಯ ಮತ್ತು ವೈ.ವಿ.ಕೃಷ್ಣಮೂರ್ತಿ ಅವರ ಪ್ರೋತ್ಸಾಹ ನೆರವುಗಳಿಂದ ಆರಂಭ ಮಾಡಿದರು. ಅವರು ಈ ಹಿಂದೆ ಬರೆದಿದ್ದ ಚಂದ್ರಹಾಸವು ಮೊದಲನೆಯ ಗ್ರಂಥವಾಗಿ ಪ್ರಕಟವಾಯಿತು.

ತರುವಾಯ ೧೯೧೬ರಲ್ಲಿ ಧ್ರುವ, ೧೯೧೭ರಲ್ಲಿ ಪ್ರಹ್ಲಾದ ಮತ್ತು ಸಾವಿತ್ರಿ ಗ್ರಂಥಗಳು ಪ್ರಕಟಿಸಲ್ಪಟ್ಟವು. ಇದನ್ನು ನೋಡಿ ಜನ ಸಾಮಾನ್ಯರಿಗೆ ಕುತೂಹಲ ಆಸಕ್ತಿಗಳು ಬೆಳೆದವು. ಮದ್ರಾಸಿನ ಬೆನಗಲ್ ರಾಮರಾಯರು, ತ್ರಿವೇಂದ್ರಂನಲ್ಲಿದ್ದ ಗೋಪಿನಾಥರಾಯರು, ಬೆಂಗಳೂರಿನ ಹೆಚ್.ವಿ. ನಂಜುಂಡಯ್ಯನವರು, ಎಂ.ಶ್ಯಾಮರಾಯರು, ಕೆ.ಶಂಕರನಾರಾಯಣ ರಾಯರು ಮುಂತಾದವರು ಈ ಪ್ರಯತ್ನವನ್ನು ಶ್ಲಾಘಿಸಿದರು.

ಮುಂದಿನ ಮೂರು ವರ್ಷಗಳಲ್ಲಿ ಅಂದರೆ ೧೯೧೮ರಿಂದ ೧೯೨೧ರ ಅವಧಿಯಲ್ಲಿ ಹರಿಶ್ಚಂದ್ರ, ಮಹಿಳಾ ಸುನೀತಿ ಶತಕ, ವಿನಾಯಕ, ಅಹಲ್ಯಾ ಬಾಯಿ ಹೋಳ್ಕರ್, ದಾದಾಭಾಯಿ ನವರೋಜಿ, ಮಹಾತ್ಮಗಾಂಧಿ ಮತ್ತು ಲೋಕಮಾನ್ಯತಿಲಕ್ ಎಂಬ ಹೆಸರಿನ ಗ್ರಂಥಗಳು ಪ್ರಕಟವಾದುವು. ಜನರಿಂದ ಪ್ರೋತ್ಸಾಹ ಉತ್ತೇಜನಗಳು ದೊರೆತು ಈ ಗ್ರಂಥಗಳು ಜನಪ್ರಿಯವಾದವು. ಇದರಿಂದ ಸ್ಫೂರ್ತಿ ಪಡೆದು ರಾಮರಾಯರು ೧೯೨೨ನೇ ಅಕ್ಟೋಬರ್ ತಿಂಗಳಲ್ಲಿ ಈ ಗ್ರಂಥಗಳ ಸಲುವಾಗಿ ಒಂದು ಗ್ರಂಥಮಾಲೆಯನ್ನು ಆರಂಭಿಸಿ, ಅದಕ್ಕೆ ಸುಬೋಧ ಕುಸುಮಾಂಜಲಿ ಎಂದು ಹೆಸರಿಟ್ಟರು.

ಈ ಗ್ರಂಥಮಾಲೆಯನ್ನು ಆರಂಭಿಸುವುದರಲ್ಲಿ ರಾಮರಾಯರು ಕೆಲವು ಸ್ಪಷ್ಟ ಉದ್ದಿಶ್ಯಗಳನ್ನು ಕಣ್ಣ ಮುಂದೆ ಇರಿಸಿಕೊಂಡಿದ್ದರು.

"ನಮ್ಮ ಬಾಲಕ ಬಾಲಕಿಯರಿಗೆ ಪೂರ್ವಿಕಾಧುನಿಕ ಭಾರತೀಯ ಮಹಾ ಪುರುಷರ ಮತ್ತು ಸಾಧ್ವೀಮಣಿಯರ ಪವಿತ್ರ ಜೀವನಾದರ್ಶಗಳನ್ನು ಸುಲಭವಾದ ತಿಳಿಗನ್ನಡದಲ್ಲಿ ಬರೆದು ಕೊಡುವುದು."

"ಬಾಲ್ಯದಿಂದಲೇ ಪದ ಚಿನ್ಹೆಯ ಪವಿತ್ರ ಮಾರ್ಗವೂ (Foot prints on the

sands of time) ಗೋಚರವಾಗಬಹುದೆಂದೂ, ಅವರ ಅನಿಷ್ಕಲ್ಮಷ ಮನಸ್ಸಿನಲ್ಲಿ ಮಹನೀಯರ ಪವಿತ್ರ ಜೀವಿತೋದಾಹರಣೆಗಳೆಂಬ ಅಮೃತ ಬೀಜಗಳು ಬಿದ್ದರೆ ಅವು ಮುಂದೆ ಅವರ ವಯಸ್ಸಿನಲ್ಲಿ ಸತ್ಪರಿಣಾಮಗಳನ್ನು ತಪ್ಪದೆ ಉಂಟುಮಾಡಬಲ್ಲದೆಂದು ಎಣಿಸಿದೆನು."

೨. ಜನಸಾಮಾನ್ಯಕ್ಕೆ ಅವಶ್ಯಕವಾದ ಬೋಧಪರ ಗ್ರಂಥಗಳನ್ನು ಒದಗಿಸಬೇಕೆಂಬುದು.

"ಇಂಥ ಸಂದರ್ಭಲ್ಲಿ ಉನ್ನತ ವಿಚಾರಗಳನ್ನು ಸುಲಭವಾಗಿ ಭಾಷೆಯಲ್ಲಿ ಬರೆದು ಸುಲಭ ಬೆಲೆಯಲ್ಲಿ ದೊರೆವ ಚಿಕ್ಕ ಪುಸ್ತಕಗಳ ರೂಪದಲ್ಲಿ ಅವರಿಗೆ ದೊರಕುವುದಾದರೆ, ಅವರಲ್ಲಿ ವಾಚನಾಭಿರುಚಿಯನ್ನು ಬೆಳೆಸುವ ಕಾರ್ಯದೊಂದಿಗೆ ದೇಶಾಭಿಮಾನ, ಧರ್ಮಾಭಿಮಾನಗಳನ್ನು ಬೆಳೆಯಿಸಬಹುದೆಂಬುದು ನನ್ನ ಅಪೇಕ್ಷೆ."

೩. ಇಂಗ್ಲಿಷ್ ಪದವೀಧರರಾದ ಮಹನೀಯರು ಕನ್ನಡ ಗ್ರಂಥ ರಚನೆಗೆ ತೊಡಗುವ ಪೂರ್ವದಲ್ಲಿ ಕನ್ನಡ ಪಂಡಿತರು ಕೇವಲ ಪಂಡಿತ ಜನ ಸಾಧ್ಯವಾದ ಉದ್ಗ್ರಂಥದ ರಚನೆ ಮಾತ್ರವೇ ಭಾಷಾಸೇವೆ ಎಂದು ಭಾವಿಸಿದ್ದಂತೆ ತೋರುತ್ತದೆ.....

"ಅಜೀರ್ಣವಾದವರಿಗೆ ಮೃಷ್ಟಾನ್ನವನ್ನು ಕೊಡುವ ಬೀಗರ ಔತಣದ ಕಾರ್ಯವು ಒಂದೆಡೆ ನಡೆಯುತ್ತಿರಲು ಹಸಿದು ಕಂಗಾಲಾದ ಕಡು ಬಡವನಿಗೆ ಒಂದು ಗುಕ್ಕು ಹಿಟ್ಟು ಕೊಡುವ ಕಾರ್ಯವು ನಡೆಯತಕ್ಕದ್ದು ಅವಶ್ಯಕವೆಂದೂ ಅದಕ್ಕೆ ಸ್ವಲ್ಪ ಬೆಲೆಯ ಈ ಪುಸ್ತಗಳು ಪ್ರಚಾರವನ್ನು ಹೆಚ್ಚುಸವುದೇ ಕರ್ತವ್ಯವೆಂದೂ ನಿರ್ಧರಿಸಲಾಯಿತು."

ಈ ಘನೋದ್ದೇಶದಿಂದ ಪ್ರೇರಿತವಾದ ಕುಸುಮಗಳಲ್ಲಿ ಪ್ರಧಾನವಾಗಿ ಸುಬೋಧ ರಾಮರಾಯರು ಇವುಗಳನ್ನು ನೀಡಲು ಉದ್ದೇಶಿಸಿದ್ದುದರಿಂದ ಈ ಮಾಲೆಗೆ ಸುಬೋಧ ಕುಸುಮಾಂಜಲಿ ಎಂದು ಹೆಸರಿಟ್ಟರು. ಮುಂದೆ ಈ ಗ್ರಂಥಮಾಲೆಯ ಕುಸುಮಗಳಲ್ಲಿ ಈ ಜ್ಞಾನ ಹೇಗೆ ನೀಡಿತೆಂಬುದರ ಬಗ್ಗೆ ಅವರು ಪ್ರಕಟಿಸಿದ ಗ್ರಂಥಗಳು ಸಾಕ್ಷಿಯಾಗಿವೆ. ಅವರು ಬರೆದ ಸಿ.ಆರ್. ದಾಸರ ಚರಿತ್ರೆಯಲ್ಲಿ ತಂದೆಯ ಸತ್ಕೀರ್ತಿಗೆ ಅಂದಿದ್ದ ದಿವಾಳಿತನದ ಕಳಂಕವನ್ನು ಅವರು ಹೇಗೆ ತೊಡೆದು ಹಾಕಿದರೆಂಬ ಪ್ರಸಂಗ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಬೆಂಜಮಿನ್ ಫ್ರಾಂಕ್ಲಿನನ ಜೀವನ ಚರಿತ್ರೆಯನ್ನು ಬರೆಯುವಾಗ ಅವನು ಸದ್ಗುಣಗಳನ್ನು ರೂಢಿಸಿಕೊಳ್ಳಲು ಮಾಡಿದ ಪ್ರಯತ್ನ ಅವನು ಅನುಸರಿಸುತ್ತಿದ್ದ ಸದ್ಗುಣಗಳ ವೇಳಾಪಟ್ಟಿ ಮುಂತಾದವುಗಳನ್ನು ವರ್ಣಿಸಿದ್ದರು.

ದೇಶಪ್ರೇಮಕ್ಕೆ ಲೋಕಮಾನ್ಯ ತಿಲಕ್, ಮಹಾತ್ಮ ಗಾಂಧಿ, ಜವಹರಲಾಲ ನೆಹರು, ಸರ್ದಾರ ವಲ್ಲಭಬಾಯಿ ಪಟೇಲರು, ಇತ್ಯಾದಿ ಮಹಾ ಪುರುಷರ ಜೀವನ ಚರಿತ್ರೆಯನ್ನೂ, ಧಾರ್ಮಿಕ ಜೀವನದ ಸಮನ್ವಯಕ್ಕೆ ತ್ರಿಮತಾಚಾರ್ಯರಾದ ಶಂಕರ, ಮಧ್ವ ಮತ್ತು ರಾಮಾನುಜಾ ಚಾರ್ಯರ ಜೀವನಗಳನ್ನೂ, ಕ್ಷಾತ್ರಕ್ಕೆ, ಸ್ವಾಭಿಮಾನಿಗಳಿಗೆ ಝಾನ್ಸಿರಾಣಿ ಲಕ್ಷ್ಮೀಬಾಯಿ, ರಜಪೂತರ ಇತಿಹಾಸಗಳನ್ನೂ, ಸ್ವತಂತ್ರ್ಯ ಪ್ರೇಮಕ್ಕೆ ಬಂಕಿಮಚಂದ್ರ, ಸತ್ಯನಿಷ್ಠೆಗೆ ಹರಿಶ್ಚಂದ್ರ, ತ್ಯಾಗಕ್ಕೆ ಬಲಿಚಕ್ರವರ್ತಿ, ಸ್ವಾಮಿ ಭಕ್ತಿಗೆ ಆಂಜನೇಯ, ಶೀಲಸಂವರ್ಧನೆಗೆ ಏಕಾದಶೀ ವ್ರತ, ನಿಷ್ಠೆಗೆ ಅಂಬರೀಷ, ರುಕ್ಮಾಂಗದರು; ಭಗವದ್ಭಕ್ತಿಗೆ ಕುಚೇಲ ಧ್ರುವ, ಪ್ರಹ್ಲಾದ, ಮಾರ್ಕಂಡೇಯ,

ಅಜಮಿಳ, ಮೀರಾಬಾಯಿ ಮುಂತಾದವರೂ, ಕೃತ್ವ ಶಕ್ತಿಗೆ ಬೆಂಜಮಿನ್ ಫ್ರಾಂಕ್ಲಿನ್, ಜೆ.ಎನ್.ತಾತಾ, ದಕ್ಷತೆಗೆ ದಿವಾನ ಮಾಧವರಾವ್, ವಿಶ್ವೇಶ್ವರಯ್ಯ - ಹೀಗೆ ದೇಶ ವಿದೇಶಗಳ ಮಹಾಪುರುಷರ ಜೀವನಗಳಿಂದ ಬಾಲಕರ ಮನಸ್ಸಿನ ಮೇಲೆ ಪ್ರತಿಬಿಂಬಿಸಿದ್ದಾರೆ.

ಮಹಾಪುರುಷರನ್ನು ತಮ್ಮ ಕಥಾನಾಯಕರಾಗಿ ಆರಿಸಿಕೊಳ್ಳಲು ರಾಮರಾಯರು ದೇಶಕಾಲಗಳ ಕೃತಕ ಮೇರೆಯನ್ನು ಹಾಕಿಕೊಳ್ಳಲಿಲ್ಲ. ಅವರು ಈ ಬಗ್ಗೆ ಒಂದೆಡೆ ಹೀಗೆಬರೆದಿದ್ದಾರೆ

"ಸಜ್ಜನರೂ, ಜ್ಞಾನಿಗಳೂ, ಭಗವದ್ಭಕ್ತರೂ, ಸತ್ವನಿಷ್ಠರೂ, ಸತ್ಯಾನ್ವೇಷಿಗಳೂ ಒಂದು ಜನಾಂಗಕ್ಕೆ ಅಥವಾ ಒಂದು ದೇಶಕ್ಕೆ ಮಾತ್ರವೇ ಸೇರಿದವರಲ್ಲ, ಅವರು ಅಖಿಲ ಜಗತ್ತಿನ ಸ್ವತ್ತು, ಆಸ್ತಿ, ನಿಧಿ; ವಿಶ್ವ ಕುಟುಂಬಿಗಳಾದ ಅವರು ಜಾತಿ ಕುಲಗಳೆಂಬ ಕ್ಷುದ್ರ ಸರಹದ್ದುಗಳನ್ನು ಮೀರಿ ಸದ್ಗುಣ ಸನ್ನಡತೆಗಳ ಪ್ರಭಾವದಿಂದ ಅಖಿಲ ಜಗತ್ತಿನ ಆದರ್ಶಮತಿಗಳಾಗುವರು"- ಬೆಂಜಮಿನ್ ಫ್ರಾಂಕ್ಲಿನನ ಜೀವನ ಚರಿತ್ರೆಯ ಮುನ್ನುಡಿಯಲ್ಲಿ ರಾಮರಾಯರು ತಿಳಿಸಿದ್ದಾರೆ.

"ಇಂಥ ದೇಶೋದ್ಧಾರಕರ ಸತ್ಯನಿಷ್ಠರ, ಪರೋಪಕಾರಿಗಳ ಪಂಡಿತೋತ್ತಮರ ಚರಿತ್ರೆಗಳನ್ನು ಉದಾರಭಾವದಿಂದ ಸಂಗ್ರಹಿಸಿ, ಪಠಿಸಬೇಕಲ್ಲದೆ ಅವರು ಪರಕೀಯರು, ಪರಮ ತೀಯರು ಎಂಬ ಸಂಕುಚಿತ ಮನಸ್ಕತೆಯಿಂದ ನೋಡಬಾರದು"- ಎಂದು ಎಚ್ಚರಿಸಿದ್ದಾರೆ.

ಭಾರತದ ಸಂಸ್ಕೃತಿಯ ಪ್ರಾಚೀನತೆ, ಅದರ ಶ್ರೇಷ್ಠ ಸಂಗತಿಗಳು, ಭಾರತೀಯರ ಹಿರಿಮೆ ಹಾಗೂ ದೌರ್ಬಲ್ಯಗಳು, ಇಂದಿನ ಅವರ ದುಸ್ಥಿತಿ, ಅದಕ್ಕೆ ಕಾರಣಗಳು, ಅವುಗಳ ನಿವಾರಣೋ ಪಾಯಗಳು - ಹೀಗೆ ಇವೆಲ್ಲ ಸಂಗತಿಗಳನ್ನು, ಭಾರತೀಯರ ಚಿತ್ತದಾಸ್ಯವನ್ನೂ, ಮನಸ್ಸಿನ ಕ್ಷೋಭ್ಯವನ್ನೂ ೧೯ನೇ ಶತಮಾನದ ಉತ್ತರಾರ್ಧದಲ್ಲಿ ಜನಿಸಿ, ಈ ದೆಸೆಯಲ್ಲಿ ಕೆಲಸ ಮಾಡಿದ ರಾಜಾರಾಮ ಮೋಹನರಾಯರು ಮತ್ತು ಬಂಕಿಮಚಂದ್ರ ಚಟರ್ಜಿ ಇವರ ಉಜ್ವಲ ಜೀವನದ ಚರಿತ್ರೆಯ ಹಿನ್ನೆಲೆಯಲ್ಲಿ ಕೂಲಂಕುಷವಾಗಿ ಚರ್ಚಿಸಿದ್ದಾರೆ.

ಇಂದಿನ ಸಮಾಜವನ್ನು ತಿದ್ದಲಾಶಿಸುವ ನಾಯಕರು ಹೇಗಿರಬೇಕು, ವರಿಷ್ಠ ಅಧಿಕಾರ ಸೂತ್ರಗಳನ್ನು ಕೈಲಿ ಹಿಡಿದು ಜನತೆಯ ಕಲ್ಯಾಣ ರಾಜ್ಯದ ಕಡೆಗೆ ನಡೆಸಲು ಹೊರಟಿರುವ ಅಧಿಕಾರಿಗಳು ಹೇಗಿರಬೇಕು - ಎಂಬುದನ್ನು ಅತ್ಯಂತ ಮನೋಜ್ಞವಾಗಿ ಸರ್.ಬಿ.ಮಾಧವ ರಾಯರ ಜೀವನ ಚರಿತ್ರೆಯಲ್ಲಿ ನಿರೂಪಿಸಿದ್ದಾರೆ.

ವ್ಯಕ್ತಿಗೆ ಶೀಲ ಮುಖ್ಯ. ನೈತಿಕ ಮೌಲ್ಯಗಳನ್ನು ಎತ್ತಿ ಹಿಡಿಯಬಲ್ಲ ಸಾಹಿತ್ಯವೇ ಉತ್ತಮ ಸಾಹಿತ್ಯವೆಂಬುದನ್ನು ಮನಗಂಡಿದ್ದ ರಾಮರಾಯರು ರುಕ್ಮಾಂಗದನ ಜೀವನ ಚರಿತ್ರೆಯ ಹಿನ್ನೆಲೆಯಲ್ಲಿ ಏಕಾದಶಿ ವ್ರತದ ನಿಜವಾದ ಅರ್ಥವನ್ನು ಮನೋಜ್ಞವಾಗಿ ವರ್ಣಿಸಿದ್ದಾರೆ. ಅಹಲ್ಯಾದೇವಿಯ ಕಥೆಯಲ್ಲಿ ಅವರ ದೃಷ್ಟಿ ಅತ್ಯಂತ ಉನ್ನತವಾಗಿದೆ.

"ಅಹಲ್ಯಾ, ತಾರಾ ಮುಂತಾದವರ ಚರಿತ್ರೆಗಳಲ್ಲಿ ಅವರುಗಳ ಮೇಲೆ ಹೊರಿಸಲ್ಪಟ್ಟಿರುವ ವ್ಯಭಿಚಾರಾದಿ ದೋಷಗಳನ್ನು ಕುರಿತು ನಮ್ಮ ಸ್ಥೂಲ ದೃಷ್ಟಿಗೆ ಗೋಚರವಿರುವ ಲೌಕಿಕ ಕ್ರಿಯೆಗಳಿ ಗಿಂತಲೂ ತಾತ್ವಿಕವಾದ ಅಂತರಾರ್ಥಗಳನ್ನು ಗ್ರಹಿಸತಕ್ಕದ್ದೇ ಹೆಚ್ಚು ಸಮಂಜಸವೆಂದು

ಸೂಚಿಸಬೇಕಾಗಿದೆ.. ದೇವತೆಗಳು ಮನುಷ್ಯ ಲೋಕದ ರಕ್ಷಣೆಗಾಗಿಯೂ, ಅದರ ಅಭಿವೃದ್ಧಿಯನ್ನು ಗಮನಿಸುವುದಕ್ಕಾಗಿಯೂ ಇರುವರಲ್ಲದೆ, ಅದನ್ನು ಭ್ರಷ್ಟಗೊಳಿಸುವುದಕ್ಕಾಗಿಯಲ್ಲವೆಂಬುದನ್ನು ನಾವು ಚೆನ್ನಾಗಿ ಗ್ರಹಿಸಬೇಕು"- ಎಂದು ಸೂಚಿಸಿದ್ದಾರೆ.

ಇಂಥ ಉದಾತ್ತ ಧ್ಯೇಯದಿಂದ ಹೊರಟ ಗ್ರಂಥಮಾಲೆ ಸುಬೋಧ ಕುಸುಮಾಂಜಲಿ.

ಆರಂಭದಲ್ಲಿ ಈ ಕಿರುಹೊತ್ತಿಗೆಗಳು ಕ್ರೌನ್ ಆಕಾರದ ಹದಿನಾರನೆ ಒಂದು ಪುಟ್ಟ ಪುಸ್ತಕಗಳಾಗಿ ಮುಂದೆ ಅಷ್ಟದಳಾಕೃತಿಗಳಾದವು. ಸುಮಾರು ಐವತ್ತು ಪುಟ ಗ್ರಂಥಗಳ ಬಿಡಿಪ್ರತಿಯ ಬೆಲೆ ಕೇವಲ ಎರಡು ಆಣೆಗಳು. ವಾರ್ಷಿಕ ಚಂದಾ ಮೊಬಲಗು, ಒಂದೂವರೆ ರೂಪಾಯಿ–ಗ್ಲೇಸ್ ಕಾಗದದ ಪ್ರತಿಗಳಿಗೆ ಎರಡೂವರೆ ರೂಪಾಯಿಗಳು. ಅಂದಿನ ಆ ಪ್ರಕಟಣೆಗಳ ಬೆಲೆ ಹಾಗೂ ಮೌಲ್ಯವನ್ನು ಇಂದಿನ ಸಾಹಿತ್ಯ ಗ್ರಂಥಗಳೊಂದಿಗೆ ಹೋಲಿಸಿದಾಗ, ನಂಬುವುದು ಕಷ್ಟವಾಗುತ್ತದೆ, ಆದರೆ ಇದು ನಿಜ. ೧೯೨೨ರಲ್ಲಿ ಆರಂಭವಾದ ಗ್ರಂಥಮಾಲೆಯಲ್ಲಿ ತಪ್ಪದೆ ವರ್ಷಕ್ಕೆ ಹನ್ನೆರಡು ಕುಸುಮಗಳಂತೆ ಅರಳಿವೆ. ೧೯೩೧ರ ವೇಳೆಗೆ ಈ ಮಾಲೆಯಲ್ಲಿ ಭಕ್ತರ ಜೀವಿತಗಳು ೨೪, ರಾಜಕೀಯ ಪುರುಷರ ಜೀವನ ಚರಿತ್ರೆಗಳ ೨೫, ಧಾರ್ಮಿಕ ವೀರರ ಜೀವನ ಚರಿತ್ರೆಗಳು ೨೦, ಮತ ಸ್ಥಾಪಕರ ಜೀವನ ಚರಿತ್ರೆಗಳು ೮, ಪತಿವ್ರತಾ ಸ್ತ್ರೀಯರ ಜೀವನ ಚರಿತ್ರೆಗಳು ೧೧, ವೀರ ನಾರೀಮಣಿಗಳ ಜೀವಿತಗಳು ೯, ಸುಧಾರಕರ ಜೀವಿತಗಳು ೪, ಪದ್ಯ ರೂಪದ ಕೃತಿಗಳು ೧೦, ಹೀಗೆ ಮಾಲೆಯ ಕುಸುಮಗಳು ಒಂದು ನೂರ ನಲವತ್ತು ಬಿಡಿ ಮುತ್ತುಗಳಾಗಿ ಅರಳಿದ್ದವು. ಈ ಮಾಲೆಯ ಗ್ರಂಥಗಳು ಅಂದಿನವರೆಗೆ ಮೂರು ನಾಲ್ಕು ಲಕ್ಷ ಪ್ರತಿಗಳು ಮಾರಾಟವಾಗಿದ್ದವು. ಶ್ರೀ ರಾಘವೇಂದ್ರಸ್ವಾಮಿಗಳವರ ಜೀವನ ಚರಿತ್ರೆ ಹದಿನೇಳು ಬಾರಿ ಮುದ್ರಣವಾಗಿತ್ತು. ಇವುಗಳನ್ನು ಸಂಗ್ರಹಿಸಿದಾಗ ಸಾವಿರ ಪುಟಗಳ ಹತ್ತು ಸಂಪುಟಗಳಾಗುತ್ತವೆ. ಆರಂಭದಲ್ಲಿ ಮೂರು ಸಾವಿರ ಪ್ರತಿಗಳನ್ನು ಮುದ್ರಿಸುತ್ತಿದ್ದರು. ಒಂದೂವರೆ ಸಾವಿರ ಚಂದಾದಾರರ ಕೈಗೆ ಹೋಗುತ್ತಿದ್ದವು. ೧೯೩೧ರ ವೇಳೆಗೆ ಈ ಕುಸುಮಗಳು ಬೊಂಬಾಯಿ, ಪೂನಾ, ನಾಗಪುರ, ಆಗ್ರ, ಡೆಲ್ಲಿ, ಕಲ್ಕತ್ತ, ಮದರಾಸುಗಳು ಮಾತ್ರವಲ್ಲ, ಪೂರ್ವ ಆಫ್ರಿಕಾ, ರಂಗೂನ್, ಸಿಂಹಳಗಳನ್ನೂ, ಇಂಗ್ಲೆಂಡ್ ಮತ್ತು ಅಮೇರಿಕಾದಲ್ಲಿ ವಾಸಿಸುವ ಕನ್ನಡಿಗರ ಮನೆಗಳನ್ನು, ವಿಶ್ವವಿದ್ಯಾನಿಲಯಗಳನ್ನೂ, ಪುಸ್ತಕ ಭಂಡಾರಗಳನ್ನೂ ಮುಟ್ಟಿದ್ದವು.

ಇಷ್ಟೆಲ್ಲ ಪ್ರಚಾರದ ಹಿಂದೆ ಇದ್ದವರು ಸುಬೋಧ ರಾಮರಾಯರು ಒಬ್ಬರೇ, ಇದು ಅವರ ಏಕಾಂಗ ಸಾಹಸವಾಗಿತ್ತು. ಅವರನ್ನು ಈ ಕಷ್ಟ ಸಾಧ್ಯವಾದ ಕಾರ್ಯಕ್ಕೆ ಪ್ರೇರೇಪಿಸಿದ ಅಂಶ ಯಾವುದು?

ರಾಮರಾಯರು ಲಾರ್ಡ್ ಮೆಕಾಲೆ ಅವರ ಮಾತನ್ನು ಒಮ್ಮೆ ಉದಾಹರಿಸಿದ್ದಾರೆ.

"ಯಾವ ರಾಷ್ಟ್ರದ ಜನಾಂಗಕ್ಕೆ ತಮ್ಮ ಪೂರ್ವಿಕರ ಭವ್ಯ ಕೃತಿಗಳನ್ನು ಕುರಿತು ಅಭಿಮಾನ ವಿರುವುದಿಲ್ಲವೋ ಅವರು ತಮ್ಮ ವಂಶಜರಿಗೆ ತಮ್ಮ ವಿಷಯದಲ್ಲಿ ಅಭಿಮಾನವುಂಟಾಗುವಂಥ ಯಾವುದೊಂದು ಸ್ಮರಣೀಯವಾದ ಕಾರ್ಯವನ್ನು ಮಾಡುವುದಕ್ಕೆ ಎಂದೂ ಶಕ್ತರಾಗಲಾರರು."

ಇದನ್ನು ರಾಮರಾಯರು ತಮ್ಮ ಹೃತ್ಫಲಕದಲ್ಲಿ ಮೂಡಿಸಿಕೊಂಡಿದ್ದರು. ಅವರ ಎಲ್ಲ ಕಾರ್ಯ ಚಟುವಟಿಕೆಗಳ ಹಿಂದಿದ್ದ, ಕರ್ತೃತ್ವಕಾರಕ ಸಂಗತಿ ಇದಾಗಿತ್ತು.

೪

ಪತ್ರಿಕಾಕರ್ತರಾಗಿ ಸುಬೋಧ ರಾಮರಾಯರು ಮಾಡಿದ ಸೇವೆ ಕಡಿಮೆ ಏನಲ್ಲ. ಭಾರತೀಯರ ಸ್ವಾತಂತ್ರ್ಯದ ಸಮರದಲ್ಲಿ ಪತ್ರಿಕೆಗಳು ಪ್ರಧಾನ ಪಾತ್ರ ವಹಿಸಿದ್ದವು. ಮಹಾತ್ಮ ಗಾಂಧೀಜೀ, ನೆಹರು ಅವರು ಪತ್ರಿಕಾ ಸಂಪಾದಕರಾಗಿ, ಸ್ವತಂತ್ರ್ಯದ ದುಂದುಭಿಯನ್ನು ಪತ್ರಿಕಾದ್ವಾರ ಮೊಳುಗಿಸುತ್ತಿದ್ದುದಲ್ಲದೆ, ಭಾರತೀಯರ ನವಜನ್ಮಕ್ಕೆ ಕಾರಣಭೂತವಾದ ಆತ್ಮ ವಿಶ್ವಾಸವನ್ನು, ಧೈರ್ಯ, ಸ್ಥೈರ್ಯ, ಬಲಿದಾನ, ಚಾರಿತ್ರ್ಯ ಶುದ್ಧಿಯನ್ನೂ ಒತ್ತಿ ಹೇಳಿ ರಾಷ್ಟ್ರ ನಿರ್ಮಾಣದ ಮಹಾತ್ಕಾರ್ಯದಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ಮದರಾಸಿನ ಹಿಂದೂ ಈ ದಿಸೆಯಲ್ಲಿ ಒಂದು ವಿಕ್ರಮವನ್ನೇ ಸಾಧಿಸಿತ್ತು.

ರಾಮರಾಯರು ತಮ್ಮ ಗ್ರಂಥಗಳ ಮೂಲಕ ಮಾಡಲು ಅಪೇಕ್ಷಿಸಿದ್ದಾದರೂ ಈ ಕಾರ್ಯವನ್ನೇ. ಅವರು ಒಂದೆಡೆ ಹೀಗೆ ಬರೆದಿದ್ದಾರೆ :

"ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಮೂಲಕ ನಮ್ಮ ನಾಡಿನ ಬಾಲಕ ಬಾಲಕಿಯರಿಗೆ ಭಾರತ ದೇಶದ ಪೌರಾಣಿಕ, ಐತಿಹಾಸಿಕ ಮತ್ತು ಆಧುನಿಕ ಕಾಲದ ಮಹಾ ಪುರುಷರ ಮತ್ತು ಮಹಿಳಾಮಣಿಯರ ಆದರ್ಶ ಜೀವನ ಚರಿತ್ರೆಗಳನ್ನು ಒದಗಿಸಿಕೊಟ್ಟು ತನ್ಮೂಲಕ ಅವರಲ್ಲಿ ಧೈರ್ಯ ಸಾಹಸಗಳು, ನೀತಿ ನಿಯಮಗಳು, ಕಾರ್ಯಶ್ರದ್ಧೆ, ಸತ್ಯಧರ್ಮ, ನ್ಯಾಯಪ್ರಿಯತೆ, ದೈವಭಕ್ತಿ -ದೇಶ ಭಕ್ತಿಗಳೇ ಮೊದಲಾದ ಸದ್ಗುಣಗಳ ಸನ್ನಡತೆಯನ್ನು ಮೂಡಿ ಬರುವಂತೆ ಸಹಕರಿಸ ಬೇಕು -ಎಂಬ ಮಹೋನ್ನತ ಧ್ಯೇಯದಿಂದ ಪ್ರೇರಿತನಾಗಿ ೧೯೧೫ರಲ್ಲಿ ಅಂದರೆ ಈಗ್ಗೆ ೫೩ ವರ್ಷಗಳ ಹಿಂದೆ ಈ ಗ್ರಂಥ ಲೇಖನೋದ್ಯಮವನ್ನು ಪ್ರಾರಂಭಿಸಿದೆ" - ಎಂದು ೧೯೬೮ರಲ್ಲಿ ಅಂದರೆ ಸಾಯಲು ಕೇವಲ ಎರಡು ವರ್ಷಗಳ ಮೊದಲು ಬರೆದಿದ್ದರು.

ಅವರು ಸುಬೋಧ ಕುಸುಮಾಂಜಲಿಯನ್ನು ಪರಿಷ್ಕರಿಸಿ ಮತ್ತೆ ಸಂಪುಟಗಳಾಗಿ ಪ್ರಕಟಿಸುವ ಸಾಹಸ ಕೈಗೊಂಡು, ಹೊರಡಿಸಿದ ಮನವಿಯಲ್ಲಿ ಈ ಮಾತುಗಳನ್ನು ಬರೆದಿದ್ದಾರೆ.

"ನಮ್ಮ ನಾಡಿನ ಭವಿಷ್ಯತ್ಕಾಲೀನ ಜನಾಂಗವೇ ಇಂದಿನ ನಮ್ಮ ಬಾಲಕ ಬಾಲಕಿಯರು. ಅವರಿಗೆ ಇಂದು ದೊರೆವ ಧ್ಯೇಯ ಜೀವನ ಮಾರ್ಗದರ್ಶನವೇ ಅವರ ಭವಿಷ್ಯ ಜೀವನ ಪಥವನ್ನು ರೂಪಿಸಬೇಕಾಗಿದೆ. ನಮ್ಮ ಪೂರ್ವಿಕ ಮಹಾಪುರುಷರು ನಡೆದ ಮಹೋನ್ನತ ಮಾರ್ಗವೇ ಅತ್ಯಂತ ಹಿತಕಾರಿ ಎಂಬುದು ಸರ್ವಮಾನ್ಯ ಅಭಿಪ್ರಾಯ. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಇಂದಿನ ದೇಶ ಕಾಲ ಸ್ಥಿತಿ, ಜನಮನೋವೃತ್ತಿ, ಅನೀತಿ ಆಚಾರಗಳು, ಅವಿಧೇಯತೆ, ಅಷಡ್ಡಾಳ ವರ್ತನೆಗಳು, ದಿನದಿನಕ್ಕೂ ಹೆಚ್ಚುತ್ತಿರುವ ಹಿಂಸೆ, ಕೊಲೆ, ಸುಲಿಗೆ ಮುಂತಾದ ದುಷ್ಟ ಮನೋಭಾವಗಳು-

ಇವನ್ನೆಲ್ಲ ಪರಿಶೀಲಿಸಿದರೆ ಇಂದಿನ ಜನತೆಗೆ ಆವರ ಬಾಲ್ಯದಿಂದ ಯೋಗ್ಯ ಮಾರ್ಗದರ್ಶನದ ಅಭಾವವೇ ಕಾರಣವೆನ್ನಲು ಏನು ಸಂಶಯವಿಲ್ಲ."

ಆದುದರಿಂದ ನಮ್ಮ ಇಂದಿನ ಎಳೆಯ ವಯಸ್ಸಿನ ಬಾಲಕ-ಬಾಲಕಿಯರಿಗೆ ಆದರ್ಶ ಸಾಹಿತ್ಯವನ್ನು ಮಾತೃಭಾಷೆಯ ಚಿಕ್ಕ ಪುಸ್ತಕಗಳ ಮೂಲಕ ಒದಗಿಸಿಕೊಟ್ಟಲ್ಲಿ ಅದು ಅವರನ್ನು ಸಚ್ಚರಿತ್ರರನ್ನಾಗಿಸಲು ಸಹಕರಿಸುವುದೆಂದು ನಂಬಬಹುದಾಗಿದೆ.

"ನಮ್ಮ ದೇಶದಲ್ಲಿ ಈಗ ದೇಶಾಭಿವೃದ್ಧಿಗೆಂದು, ಕಲ್ಲು, ಮರ, ಕಬ್ಬಿಣ, ಸಿಮೆಂಟು, ಗಾರೆ, ಗಾಜು ಇತ್ಯಾದಿ ಜಡಪದಾರ್ಥಗಳಿಗಾಗಿ ಲಕ್ಷಲಕ್ಷವಾಗಿ ದ್ರವ್ಯ ವ್ಯಯ ಮಾಡಲು ಸಿದ್ಧರಾಗಿರುವ ಮಹನೀಯರನೇಕರಿದ್ದಾರೆ. ಆದರೆ ಆದೇ ದೇಶಾಭಿವೃದ್ಧಿಗಾಗಿಯೇ ಜೀವಂತ ವ್ಯಕ್ತಿಗಳಾದ ಜನಾಂಗ ಸಸಿಗಳನ್ನು ತಯಾರಿಸಲು ಅವಶ್ಯಕವಾದ ಅಕ್ಷರಾಭಿವೃದ್ಧಿಯ ವಾಙ್ಮಯ ಸೇವೆಗಾಗಿ, ಹತ್ತಿಪ್ಪತ್ತು ಸಹಸ್ರ ದ್ರವ್ಯವನ್ನು ಎರವಲಾಗಿತ್ತು, ಈ ಕಾರ್ಯವನ್ನು ಮುಂದುವರಿಸಲು ಬೆಂಬಲಿಗರಾಗಿ ಮುಂದೆ ಬರುವ ದೇಶಾಭಿಮಾನಿ ಮಹನೀಯರು ಮನಸ್ಸು ಮಾಡಿದಲ್ಲಿ ಗ್ರಂಥಮಾಲೆಯ ಪುನಃ ಮುದ್ರಣ ಕಾರ್ಯವು ಶೀಘ್ರದಲ್ಲೇ ಫಲಕಾರಿಯಾಗಲು ಸಾಧ್ಯವುಂಟು."

ಆದರೆ ಅವರು ಗತಿಸಿ ಎಷ್ಟೋ ವರ್ಷಗಳು ಕಳೆದರೂ, ಅವರು ಕಂಡ ಈ ಪುನಃ ರ್ಮುದ್ರಣದ ಕನಸು ಮಾತ್ರ ನನಸಾಗಲೇ ಇಲ್ಲ. ಇದರಿಂದ ನಮ್ಮ ದೇಶದ ಜನತೆಯ ವಿಚಾರ ದಾರಿದ್ರ್ಯವೆಂಥದೆಂದು ತಿಳಿಯುತ್ತದೆ. ಇದರಂತೆ ಅವರು ಸ್ಥಾಪಿಸಿದ್ದ ಸುಬೋಧ ಮಾಸ ಪತ್ರಿಕೆಯೂ, ಇನ್ನಿತರ ಪತ್ರಿಕೆಗಳೂ ನಿಂತುಹೋಗಿದೆ. (ಆರ್ಥಿಕ ಮುಗ್ಗಟ್ಟನಿಂದಲೂ, ಓದುಗರ ಅನಾದರದಿಂದಲೂ) ಅವುಗಳನ್ನು ಮತ್ತೆ ಮೃತ ಸಂಜೀವಿನಿ ವಿದ್ಯೆ ಕಲಿತು, ಉಜ್ಜೀವಿಸುವ ಪ್ರಕಾಶಕ ನಿಗಾಗಿ ಕಾದಿದೆ. ಮೂರ್ಛೆಸ್ಥಿತಿಗೆ ಸಂದಿದ್ದು, ಸಂಜೀವಿನಿಯಿಂದ ಪುನಃ ಪ್ರಾಣ ಸಂಚಾರ ಗೊಳಿಸಬಲ್ಲ ಅಂಜನೇಯನಿಗಾಗಿ ಅದು ಕಾದಿದೆ.

ರಾಮರಾಯರು ಕೈಗೊಂಡ ಎಲ್ಲ ಸಾರಸ್ವತ ಸೇವೆಯ ಚರಮಗುರಿ ಎಂದರೆ ಜನತೆಯಲ್ಲಿ ಸುಬೋಧೆಯನ್ನುಂಟು ಮಾಡುವುದೇ ಆಗಿತ್ತು. ಇದು ಅವರ ಬಾಳಿನ ಸಂದೇಶ.

"ಹಿಂದಿನ ಕಾಲದಲ್ಲಿ ರಾಜಮಹಾರಾಜರುಗಳು ಕವಿಗಳಿಗೆ ಬಿರುದುಗಳನ್ನು ಕೊಡುತ್ತಿದ್ದರು. ಈಗ ಭಾರತ ಸರ್ಕಾರ ಪ್ರಶಸ್ತಿಗಳನ್ನು ಕೊಡಲು ಉಪಕ್ರಮಿಸಿದೆ. ಈ ಬಗೆಯ ಬಿರುದು ಬಾವಲಿಗಳು ಕೆಲಮೊಮ್ಮೆ ಹುಸಿಯಾಗಿ ಬೀಕಲಾಗಿ ಪರಿಣಮಿಸುವ ಸಂಬಂಧವುಂಟು. ಆದರೆ ಜನ ಕೊಟ್ಟ ಬಿರುದು ಗಟ್ಟಿ. ರಾಮರಾಯರ ಹೆಸರಿನ ಹಿಂದೆ ಅನುಸರಿಸಿ ಬರುವ ಸುಬೋಧ ಅಂಥ ಗಟ್ಟಿ ಬಿರುದು" -ಎಂದು ಒಬ್ಬ ಲೇಖಕರು ಬರೆದಿದ್ದಾರೆ. ಈ ಮಾತು ಅಕ್ಷರಶಃ ಸತ್ಯ,

ಸುಬೋಧ ಕುಸುಮಾಂಜಲಿಯು ಒಬ್ಬ ವ್ಯಕ್ತಿಯ ಅದ್ಭುತವಾದ ಕರ್ತೃತ್ವಶಕ್ತಿಯ, ಆದರ್ಶದ ಸತತ ದುಡಿಮೆ, ಕಾರ್ಯಶ್ರದ್ಧೆಯ ಫಲ, ಬೇರಾವ ಸಾಹಿತ್ಯದಲ್ಲೂ ದೊರಕದ ಅಪೂರ್ವ ದಾಖಲೆ ಎಂದಿದ್ದಾರೆ ವಿಮರ್ಶಕರು.

*- (ಸಂಯುಕ್ತ ಕರ್ನಾಟಕ, ೨೬, ೪-೬೯)*

ಸುಬೋಧ ರಾಮರಾಯರಿಗೆ ಆವರತ್ತು ವರ್ಷ ತುಂಬಿದಾಗ, ಅವರ ಅಭಿಮಾನಿಗಳು ಅಂದಿನ ಕೇಂದ್ರ ವಾಣಿಜ್ಯ ಅಧಿಕಾರಿ ಡಿ.ಪಿ.ಕರಮರಕರ ಅವರು ಕೇಂದ್ರ ವಾರ್ತಾ ಮಂತ್ರಿಯಾಗಿದ್ದು ಆರ್.ಆರ್.ದಿವಾಕರರ ನೇತೃತ್ವದಲ್ಲಿ ದೆಹಲಿಯಲ್ಲಿನ ಕರ್ನಾಟಕ ಸಂಘದ ಆಶ್ರಯದಲ್ಲಿ ಏರ್ಪಡಿಸಿದ್ದ ಉತ್ಸವದಲ್ಲಿ "ಈ ಗ್ರಂಥ ಮಾದರಿಯು ಕನ್ನಡ ಜನತೆಗೆ ಜ್ಞಾನ, ಸಂಸ್ಕೃತಿ ಮತ್ತು ನೈತಿಕಭಾವವನ್ನು ದೊರಕಿಸಿ ಕೊಡುವುದರಲ್ಲಿ ಬಹುಮಟ್ಟಿಗೆ ಕೃತಕೃತ ವಾಗಿದೆ"- ಎಂದು ಹೇಳಿದರು. -(ತಾಯಿನಾಡು, ೨೪-೯-೫೦)

ಆದರೇನು? ಮಂತ್ರಿಮಹೋದಯರೆಲ್ಲ ವೇದಿಕೆಯ ಮೇಲೆ ಮುಕ್ತಕಂಠದಿಂದ ಹೊಗಳಿ ಹಾಡಿದ್ದರೂ, ರಾಮರಾಯರಿಂದ ಆರಂಭಿಸಲ್ಪಟ್ಟ ಕುಸುಮಾಂಜಲಿಯಾಗಲಿ, ಸುಬೋಧ ಪತ್ರಿಕೆಯಾಗಲೀ ಜೀವಂತ ಬಾಳಲಿಲ್ಲ ! ಇದು ಒಂದು ವಿಡಂಬನೆ.

ಒಮ್ಮೆ ಸುಬೋಧ ರಾಮರಾಯರನ್ನು ಸುಪ್ರಸಿದ್ಧ ಶಿಶು ಸಾಹಿತ್ಯ ಲೇಖಕರಾದ ಬಿ.ಪಾಂಡುರಂಗರಾಯರು ಆಕಾಶವಾಣಿಯ ಪರವಾಗಿ ಸಂದರ್ಶನ ನಡೆಸಿದರು. ಆಗ ಪಾಂಡುರಂಗ ರಾಯರು "ಜನಸೇವೆಗೆ ಸಾಹಿತ್ಯದ ಆಯ್ಕೆ ಏಕೆ?"- ಎಂಬ ಒಂದು ಪ್ರಶ್ನೆ ಕೇಳಿದರು. ಅದಕ್ಕೆ ಸುಬೋಧ ರಾಮರಾಯರು ನೀಡಿದ ಉತ್ತರ ಹೀಗಿತ್ತು :

"ಜನಾಂಗವೆಂದರೇನು? ದೇಹ, ಮನಸ್ಸು ಮತ್ತು ಬುದ್ಧಿ ಇವುಗಳಿಂದ ಕೂಡಿರುವ ವ್ಯಕ್ತಿಗಳ ಸಮೂಹ ತಾನೇ. ಇಂಥ ವ್ಯಕ್ತಿಗಳ ಈ ಮೂರು ಅಂಗಗಳೂ ಸರ್ವತೋಮುಖವಾದ ಶ್ರೇಯೋದಾಯಕ ಸಾಹಿತ್ಯದಿಂದಲ್ಲದೆ ಮತ್ಯಾವ ಸಾಧನದಿಂದ ಸಾಧ್ಯವಿದೆ? ಆದ್ದರಿಂದ ಜನಾಂಗರೂಪೀ ಜನಾರ್ಧನನನ್ನು ಉತ್ತಮ ರೀತಿಯಲ್ಲಿ ಆರಾಧಿಸಬೇಕೆಂಬ ಅಪೇಕ್ಷೆಯುಳ್ಳ ಸಾಹಿತಿಯು ಅಗತ್ಯವಾಗಿ ಅಂಥ ಪುಷ್ಟಿಕರ ಸಾಮಗ್ರಿಯನ್ನೊದಗಿಸ ಬೇಕಾಗುವ ಕರ್ತವ್ಯವೇ ಆಗಿದೆ ಎಂಬ ದೃಷ್ಟಿಯಿಂದ ಇದನ್ನು ಪವಿತ್ರ ಸೇವಾಕಾರ್ಯವೆಂದು ಕೈಗೊಂಡೆ."

ಅವರು ಕೇಳಿದ ಮತ್ತೊಂದು ಪ್ರಶ್ನೆ ಹೀಗಿತ್ತು :-

"ನೀವೇಕೆ ಸುಬೋಧ ಪತ್ರಿಕೋದ್ಯಮ ಕೈಗೊಂಡಿರಿ?"

ರಾಮರಾಯರ ಉತ್ತರ-

"ಪೂಜ್ಯರೂ, ಅಂದು ಹಿತಚಿಂತಕರೂ ಆಗಿದ್ದ ದಿವಂಗತ ಕರ್ಪೂರ ಶ್ರೀನಿವಾಸ ರಾಯರು ಪ್ರಾರಂಭಕಾಲದಲ್ಲಿ ನನಗೊಂದು ಎಚ್ಚರಿಕೆಯ ಮಾತನ್ನು ಹೇಳಿದ್ದರು.

"ರಾಮರಾವ್, ಇಲ್ಲಿ ಕೇಳು, *ಅನಾರಂಭೋ ಮನುಷ್ಯಾಣಾಂ ಪ್ರಥಮಂ ಬುದ್ಧಿ ಲಕ್ಷಣಂ*- ಎಂಬ ಆರ್ಯವಾಕ್ಯವಿದೆ. ನಾವು ದಕ್ಷಿಣಾತ್ಯರು. ಕೇವಲ ಆರಂಭ ಶೂರರು ಎಂಬ ಬಿರುದನ್ನು ಈಗಾಗಲೇ ಗಳಿಸಿದ್ದೇವೆ. ಉತ್ಸಾಹದಿಂದ ಇಂದು ಪ್ರಾರಂಭಿಸಿ, ನಾಳೆಯೇ ನಿಲ್ಲಿಸಿ ಬಿಡುವಂತಿದ್ದರೆ ಇದನ್ನು ಆರಂಭಿಸಬೇಡ" - ಎಂದರು.

ಆದರೆ ಭಗವಂತನ ಅನುಗ್ರಹದಿಂದಲೂ, ಆ ಪೂಜ್ಯರ ಪರಮಾಶೀರ್ವಾದ ಬಲ ದಿಂದಲೂ, ಕರ್ನಾಟಕ ವಾಚಕ ಮಹಾಶಯರ ಅಭಿಮಾನ ಪ್ರೋತ್ಸಾಹಗಳಿಂದಲೂ ಅದು

(ಸುಬೋಧ ಪತ್ರಿಕೆ) ಇಷ್ಟು ಕಾಲ ಜೀವಿಸಿಕೊಂಡು ಇಂದೂ ಯಥಾನುಶಕ್ತಿ ಸೇವಾನಿರತವಾಗಿರವುದಕ್ಕಾಗಿ ಕೃತಜ್ಞತನಾಗಿದ್ದೇನೆ. ಧನ್ಯನೆಂದು ಕೊಂಡಿದ್ದೇನೆ.

ನಮ್ಮ ವಾಙ್ಮಯಾರಾಧನೆಯನ್ನು ಕುರಿತು ಭಗವಂತನು ಗೀತೆಯಲ್ಲಿ ವರ್ಣಿಸುತ್ತ "ಸತ್ಯ ಪ್ರಿಯ ಮತ್ತು ಹಿತ"- ಎಂದಿದ್ದಾರೆ. ಇವುಗಳನ್ನು ಸಾಧಿಸುವ ವಾಙ್ಮಯ ಸೇವೆಯನ್ನು ವಾಙ್ಮಯ ತಪಸ್ಸೆಂದು ಕರೆದಿದ್ದಾನೆ. ಅದನ್ನು ಈ ಸಂದರ್ಭದಲ್ಲಿ ಅನ್ವಯಿಸಿಕೊಳ್ಳಬಹುದೆಂದು ನನ್ನ ಭಾವನೆ. ಇವುಗಳಲ್ಲಿ ಯಾವುದೇ ಮಾರ್ಗವನ್ನು ಹಿಡಿದು ಪ್ರತಿಪಾದಿಸದ ವಾಙ್ಮಯ ಸೇವೆಯು ಜಗತ್ತಿನಲ್ಲಿ ಜೀವಿಸುವುದು ಅಸಾಧ್ಯವಾಗುವುದು.

ಕೇವಲ ಜನರ ಪ್ರೀತಿಯನ್ನು ಗಳಿಸಬೇಕೆಂದು ಹಿತ ಮತ್ತು ಪ್ರಿಯ ರಹಿತವಾದ ಸಾಹಿತ್ಯವನ್ನೇ ಆಗಲೀ, ಕಾಮ ಕ್ರೋಧ ಮೋಹಾದಿಗಳಾದ ಚಿತ್ತೋದ್ರೇಕವನ್ನುಂಟು ಮಾಡುವ, ಪ್ರಿಯಕರವೆಂದು ತೋರುವ ಲಾಭದಾಯಕ ಸಾಹಿತ್ಯವನ್ನೇ ಆಗಲೀ, ಕೇವಲ ಹಿತವನ್ನೇ ಸಾಧಿಸಬೇಕೆಂದು ಸತ್ಯ ಮತ್ತು ಪ್ರಿಯ ರಹಿತವಾದ ಸಾಹಿತ್ಯವನ್ನೇ ಆಗಲಿ ಜನತೆಗೆ ನೀಡಿದಲ್ಲಿ ಅಂಥ ಪತ್ರಿಕೆಗಳ ಜೀವಿತ ಅಸಾಧ್ಯವಾಗುವುದು ಮಾತ್ರವಲ್ಲ, ಅನರ್ಥವಾಗುವುದು. ಶ್ರದ್ಧಾವಂತನಾದ ವ್ಯಕ್ತಿಯ ಈ ವಾಙ್ಮಯ ಸೇವೆಯನ್ನು ಒಂದು ಪವಿತ್ರ ಕರ್ತವ್ಯ, ತನ್ನ ಸ್ವಧರ್ಮ ಮತ್ತು ಜೀವಿತ ಧ್ಯೇಯ ಎಂದುಕೊಂಡು ಕಷ್ಟ ನಿಷ್ಠುರಗಳಿಗಂಜದೆ ನಡೆಸಲು ನಿರ್ಧರಿಸಬೇಕಲ್ಲದೆ, ಇದೊಂದು ಉದ್ಯೋಗವೆಂದು ಭಾವಿಸುವುದು ನನ್ನ ಪ್ರಕೃತಿಗೆ ಸರಿ ಹೋಗುವುದಿಲ್ಲ. ಆದರೆ ಕಾಲ ದೇಶಾದಿಗಳು ವ್ಯತ್ಯಾಸಗೊಂಡಿರುವ ಇಂದು ಮೂಲ ನಿಷ್ಠೆಗೆ ವಿರೋಧವಿಲ್ಲದಂತೆ ಸೇವಾ ತತ್ಪರವಾಗುವ ವ್ಯಕ್ತಿ ಈ (ಪತ್ರಿಕಾ) ಕ್ಷೇತ್ರದಲ್ಲಿ ಜಯಶಾಲಿಯಾಗಬಹುದೆಂದು ನಂಬುತ್ತೇನೆ."

ರಾಮರಾಯರು ಅಂದು ವ್ಯಕ್ತಪಡಿಸಿದ ಈ ನಿರೀಕ್ಷೆ, ಭರವಸೆಯ ಮಾತು ಮಾತ್ರ ದಿಟವಾಗಲಿಲ್ಲವೆಂಬುದು ವಿಷಾದದ ಮಾತು.

ರಾಮರಾಯರು ಸುಬೋಧ ಕುಸುಮಾಂಜಲಿಯನ್ನು ಆರಂಭಿಸಿದ ಹತ್ತು ವರ್ಷಗಳ ಅನಂತರ ಅಂದರೆ ೧೯೨೫ರಲ್ಲಿ ತಮ್ಮ *ಸುಬೋಧ* ಹೆಸರಿನ ಮಾಸ ಪತ್ರಿಕೆಯನ್ನು ದಂಡಿನ ಪ್ರದೇಶದಲ್ಲಿ ಆರಂಭಿಸಿದರು.

ಮುಂದೆ ೧೯೩೫ರ ಸುಮಾರಿನಲ್ಲಿ ಅವರು ತಮ್ಮ ಬಂಧುವಾದ ಎಸ್.ಜಿ.ಕೃಷ್ಣರಾಯರ ನೆರವಿನಲ್ಲಿ ಲಲಿತ ಸಾಹಿತ್ಯಕ್ಕೆಂದೇ ಮೀಸಲಾದ *ನಗುವನಂದ* ಎಂಬ ಪತ್ರಿಕೆಯನ್ನು ಆರಂಭಿಸಿದರು. ಮಾರನೆಯ ವರ್ಷ ೧೯೩೬ರಲ್ಲಿ *ಸಮಾಜಸೇವಕ* ಎಂಬ ಹೆಸರಿನ ಒಂದು ಪತ್ರಿಕೆಯನ್ನು ನಡೆಸಿದರು. ಇದು ಕೇವಲ ಒಂದು ವರ್ಷ ಮಾತ್ರ ನಡೆದು ನಿಂತುಹೋಯಿತು. ನಗುವನಂದವೂ ಕೇವಲ ಕೆಲವು ವರ್ಷಗಳು ನಡೆದು, ಕೊನೆಗೆ ಅದೂ ಅಸ್ತಂಗತವಾಯಿತು. ಸುಬೋಧ ಪತ್ರಿಕೆಯು ಮಾತ್ರ ರಾಮರಾಯರ ಅವಸಾನವಾದವರೆಗೂ ಕ್ರಮವಾಗಿ ಪ್ರಕಟಗೊಳ್ಳುತ್ತಿದ್ದು, ಮುಂದಿನ ಕೆಲವು ವರ್ಷಗಳಲ್ಲಿ ಅದೂ ಆರ್ಥಿಕ ಕಾರಣಗಳಿಂದಾಗಿ ಕುಂಟುತ್ತ ನಡೆದು, ಕಡೆಗೆ ನಿಂತುಹೋಯಿತು. ಆದರೆ ಈ ಪತ್ರಿಕೆ ಮಾಡಿದ ಸೇವೆ ಮಾತ್ರ ಕಡಿಮೆಯ ದರ್ಜೆಯದಲ್ಲ. ಇದು ಕನ್ನಡ ಪತ್ರಿಕಾ ಪ್ರಪಂಚದಲ್ಲಿ

ಒಂದು ಮೈಲಿಗಲ್ಲನ್ನು ನಿರ್ಮಿಸಿತು. ಸುಬೋಧ ರಾಮರಾಯರ ಸಂಪಾದಕತ್ವದಲ್ಲಿ ೧೯೭೮ನೇ ಜನವರಿ ಸಂಚಿಕೆಯಿಂದ ನಲವತ್ತು ಮೂರನೆ ಸಂಪುಟವನ್ನು ಪ್ರಕಟಿಸಿತ್ತು. ಆದರೆ ಅದು ತನ್ನ ಸ್ವರ್ಣ ಮಹೋತ್ಸವವನ್ನು ಕಾಣದೆ ಅಸ್ತಂಗತವಾಯಿತು.

ಆಂದು ಕನ್ನಡದಲ್ಲಿ ಖ್ಯಾತ ಸಾಹಿತಿಗಳಿಗಿದ್ದ ಎಲ್ಲರೂ ಈ ಸುಬೋಧ ಲೇಖಕರಾಗಿದ್ದರು. ಅನಕೃ, ಸಿ.ಕೆ.ನಾಗರಾಜರಾವ್, ತ.ಸು.ಶಾಮರಾಯರು, ಜಿ.ಪಿ.ರಾಜರತ್ನಂ, ವರದರಾಜಾರಾವ್, ಕೆ.ಎಂ,ಕೃಷ್ಣರಾವ್, ಎಸ್.ಕೆ.ರಾಮಚಂದ್ರಾವ್ -ಮುಂತಾದ ಲೇಖಕರೆಲ್ಲರ ಆರಂಭ ಬರಹ ಪ್ರಕಟವಾದುದು ಸುಬೋಧ ಪತ್ರಿಕೆಯಲ್ಲಿ ಎಂಬುದನ್ನು ಮರೆಯುವಂತಿಲ್ಲ. ಅನಕೃ ಅವರ ರಾಜಾ ರವಿವರ್ಮ, ರಾಮಚಂದ್ರರಾಯರ ಸಂಗೀತಕ್ಕೆ ಸಂಬಂಧಿಸಿದ ಲೇಖನ ಮಾಲೆ ತುಂಬ ಜನಪ್ರಿಯಗೊಂಡು, ಅನಂತರ ಗ್ರಂಥಗಳಾಗಿ ಪ್ರಕಟವಾಗಿದ್ದವು. ಸುಬೋಧ ಪತ್ರಿಕೆಯಲ್ಲಿ ಬರುತ್ತಿದ್ದ ವಿಮರ್ಶೆಗಳು ಪ್ರೌಢವಾಗಿ ನಿಷ್ಪಕ್ಷಪಾತವಾಗಿರುತ್ತಿದ್ದವು. ಇದಕ್ಕೆ ಪಂಡಿತ ತಾರಾನಾಥರಾಯರ ಧರ್ಮಸಂಭವ, ಎಸ್.ಜಿ.ಶಾಸ್ತ್ರಿಗಳ ಗೊಂಬೆಮನೆ, ಅನಕೃ ಅವರ ರಾಜಾರವಿವರ್ಮ ಕೃತಿಗಳ ವಿಮರ್ಶೆ ದಿಟ್ಟ ವಿಮರ್ಶೆಗೆ ಉದಾಹರಣೆಗಳು.

ಸುಬೋಧ ಪತ್ರಿಕೆಗೆ ಅಂದಿನ ಪತ್ರಿಕಾ ಪ್ರಪಂಚದಲ್ಲಿ ಅಗ್ರಸ್ಥಾನವಿತ್ತು. ಆಗ ಬೆಂಗಳೂರಿನಲ್ಲಿ ಸರಸ್ವತಿ, ಧಾರವಾಡದಲ್ಲಿ ಜಯಕರ್ನಾಟಕ, ವಾಗ್ಭೂಷಣ ಪತ್ರಿಕೆಗಳೂ, ಮಂಗಳೂರಿನಲ್ಲಿ ಬೋಧಿನಿಯು (೧೯೧೮) ಪ್ರಕಟವಾಗುತ್ತಿದ್ದವು. ರಾಮರಾಯರು ಈ ಪತ್ರಿಕೆಯಲ್ಲಿ ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಕನ್ನಡ ಅನುವಾದವನ್ನು ಕ್ರಮ ಕ್ರಮವಾಗಿ ಕೊಟ್ಟು ಮುಂದೆ ಅವುಗಳನ್ನು ಗ್ರಂಥಗಳಾಗಿ ಪ್ರಕಟಿಸಿದರು. ರಾಮರಾಯರ ಬಹುತೇಕ ಗ್ರಂಥಗಳು ಪ್ರಕಟವಾದುದು ಹೀಗೆ. ತಮ್ಮ ಇಳಿವಯಸ್ಸಿನಲ್ಲಿ ಅಂದರೆ ೭೮ನೆಯ ವಯಸ್ಸಿನಲ್ಲೂ ಅವರು ನಾಡು ನುಡಿಗಳ ಹಿತವನ್ನು ಕುರಿತು ನಿರ್ಭಯವಾಗಿ ತಮ್ಮ ಸಂಪಾದಕೀಯ ಟಿಪ್ಪಣಿಗಳನ್ನು ಬರೆಯುತ್ತಿದ್ದರು. ಅವರು ಕನ್ನಡಿಗರ ನಿರಭಿಮಾನತನವನ್ನೂ, ಗೋಹತ್ಯೆಯನ್ನೂ, ಸಾವರಕರರ ದೇಶಪ್ರೇಮವನ್ನೂ ಕುರಿತು ಆ ವರ್ಷ ಬರೆದ ಸಂಪಾದಕೀಯ ಟಿಪ್ಪಣಿ ಲೇಖನಗಳು ಇಂದಿಗೂ ಸ್ಫೂರ್ತಿದಾಯಕವಾಗಿದೆ. ಈಗಲೂ ಅವುಗಳನ್ನು ಸಂಗ್ರಹಿಸಿ, ಪ್ರಕಟಿಸಿದರೆ ಅದೊಂದು ಸಮಕಾಲೀನ ಸಮಸ್ಯೆಗಳಿಗೆ ಯೋಗ್ಯ ಪರಿಹಾರ ಸೂಚಿಸುವ ಚಿರಂತನ ಮೌಲಿಕವುಳ್ಳ ಲೇಖನ ಸಂಗ್ರಹವಾಗುವುದರಲ್ಲಿ ಸಂದೇಹವಿಲ್ಲ.

ರಾಮರಾಯರು ಸುಬೋಧ ಪತ್ರಿಕೆಯನ್ನು ಸ್ವಂತ ವಿಚಾರ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ಚಿಂತನ ಸಾಹಿತ್ಯಗಳಿಂದ ಶ್ರೀಮಂತಗೊಳಿಸುತ್ತಿದ್ದರು. ಅವರು ಪತ್ರಿಕೆಗಾಗಿ ಬರೆದು ಅನಂತರ ಪ್ರಕಟವಾದ ಗ್ರಂಥಗಳು ಹೀಗಿವೆ ;-

೧) ರಾಮಾಯಣ - ಇದು ಆನಂದರಾಮಾಯಣವನ್ನು ಆಧರಿಸಿ ಬರೆದ ಗ್ರಂಥವಾಗಿದೆ.

೨) ಭಗವದ್ಗೀತಾ ಅನುವಾದ -

೩) ಮಹಾಭಾರತ - ಕುಮಾರವ್ಯಾಸವನ್ನು ಅನುಸರಿಸಿ ಬರೆದ ಭಾರತ ಗ್ರಂಥ.

೪) ಕನ್ನಡ ಭಾಗವತ (ಎರಡು ಸಂಪುಟಗಳಲ್ಲಿ ಮೊದಲು ಪ್ರಕಟವಾಗಿ ಅನಂತರ ಒಂದು ಸಂಪುಟದಲ್ಲಿ ಪ್ರಕಟವಾಯಿತು)

೫) ಮಧ್ವಮತ ಕೈಪಿಡಿ.

೬) ಚತುಶ್ಲೋಕೀಯ- (ಪುರಂದರದಾಸರ ನಾಲ್ಕು ನೂರನೇ ವರ್ಷದಲ್ಲಿ ಪ್ರಕಟವಾದ ಕಾವ್ಯ.

೭) ಸಾವಿತ್ರಿ ಹಾಡು.

೮) ಸುನೀತ ಶತಕ - (ಗೋವಿನ ಮಟ್ಟನಲ್ಲಿ ಬರೆದದ್ದು. ಇದನ್ನು ಹಾಡಿದ ಗೃಹಿಣಿಯರೂ, ಕೇಳಿ ಮಂಗಳ ಮಾಡಿದ ಗೃಹಸ್ಥರೂ ಉಂಟು).

ಇವಲ್ಲದೆ ರಾಮರಾಯರು ಇನ್ನಿತರ ಗ್ರಂಥಗಳನ್ನು ರಚಿಸಿ ಸಾರಸ್ವತ ಸೇವೆ ಮಾಡಿದ್ದಾರೆ. ಅವರು ವಿಶೇಷವಾಗಿ ಸ್ವತಂತ್ರ ಗ್ರಂಥವನ್ನು ರಚಿಸದಿದ್ದರೂ, ಆಗಾಗ್ಗೆ ಇತರ ಭಾಷೆಗಳಿಂದ ಶ್ರೇಷ್ಠ ಗ್ರಂಥಗಳನ್ನು ಕನ್ನಡಕ್ಕೆ ಅನುವಾದ ಮಾಡಿ, ಸಾಹಿತ್ಯವನ್ನು ಸಂವೃದ್ಧಗೊಳಿಸಿದ್ದಾರೆ.

೧) ಲೂಯಿ ಆರ್ ಬ್ರೈಟ್‌ನೋಹಾರ್ಟ್ ಎಂಬುವನು ಬರೆದ ಯಂತ್ರ ಶಿಲ್ಪಿ (ಇಂಜಿನಿಯರ್) ಹೆನ್ರಿಫೋರ್ಡನ ಜೀವನ ಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

೨) ಡಾ॥ ಹೆಲನ್‌ಕೆಲರ್ ಬರೆದ ಆತ್ಮಕಥೆಯನ್ನು ನನ್ನ ಜೀವನ ಕಥೆ -ಎಂದು ಅನುವಾದಿಸಿದ್ದಾರೆ.

೩) ರಾಜಾಸ್ಥಾನದ ಕಥಾವಳಿ ಎರಡು ಭಾಗಗಳಲ್ಲಿ ಅನುವಾದಿಸಿದ್ದಾರೆ. ಇದು ಒಂದು ತೆಲುಗು ಗ್ರಂಥದಿಂದ ಪ್ರೇರಿತವಾಗಿ ಕನ್ನಡಕ್ಕೆ ಇಳಿದಿದೆ. ಇದರಲ್ಲಿ ರಾಜಪುತ್ರರ ಶೌರ್ಯ, ತ್ಯಾಗ, ದೇಶಪ್ರೇಮಗಳ ಸ್ಮರಣೀಯ ಕಥೆಗಳು ಬಂದಿವೆ. ಇದು ಆರ್ಯಕೀರ್ತಿಗೆ ಸರಿಸಾಟಿಯಾದ ಗ್ರಂಥ.

೪) ಮೈಸೂರಿನ ರಾಜ್ಯಲಕ್ಷ್ಮಿಯರು ಸ್ವತಂತ್ರ ಗ್ರಂಥ. ೧೯೪೨-೪೩ರಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಗೆ ಉಪಪಠ್ಯ ಗ್ರಂಥವಾಗಿತ್ತು. ಈ ಗ್ರಂಥವನ್ನು ಓದಿ ನಾಲ್ವಡಿ ಕೃಷ್ಣಭೂಪಾಲರ ಪತ್ನಿಯವರು ರಾಮರಾಯರನ್ನು ಕರೆಸಿಕೊಂಡು ಸನ್ಮಾನ ಮಾಡಿ, ಗೌರವಿಸಿದರಂತೆ.

ಇವೆಲ್ಲ ಗ್ರಂಥಗಳಿಗೆ ಶಿರೋಪ್ರಾಯವಾಗಿರುವ ಗ್ರಂಥವೆಂದರೆ ಅವರು ಬರೆದಿರುವ ಜೀವನಕ್ಕೆ ಬೆಳಕು -ಈ ಗ್ರಂಥವು ಮುಂಬಯಿ ಹೈಕೋರ್ಟಿನಲ್ಲಿ ಜಡ್ಜಿಗಳಾಗಿದ್ದ ಶ್ರೇಷ್ಠ ಚಿಂತನಶೀಲರಾದ ಜಸ್ಟೀಸ್ ಚಂದಾವಾರ್ಕರ್ ಮಹಾಶಯರು ಬರೆದಿದ್ದ "Light for Life" - ಎಂಬ ಗ್ರಂಥದಿಂದ ಪ್ರೇರಿತರಾಗಿ ಬರೆದ ಒಂದು ಮೌಲಿಕ ಗ್ರಂಥ. ಇದು ೧೯೪೮ರಲ್ಲಿ ಪ್ರಕಟವಾಯಿತು.

ಈ ಗ್ರಂಥದ ಮುನ್ನಡಿಯಲ್ಲಿ ಅಂದಿನ ಕಾರ್ಮಿಕ ಮಂತ್ರಿಯಾಗಿದ್ದ ಶ್ರೀ ಕೆ.ಟಿ. ಭಾಷ್ಯಂ ಅವರು ಹೀಗೆ ಬರೆದರು.

"ಅವರ ಸಾಹಿತ್ಯ ಸೇವೆಯ ವೈಶಿಷ್ಟ್ಯವೆಂದರೆ ಆರ್ಯ ಸಂಸ್ಕೃತಿಯ ಜೀವಾಳವಾದ ಧಾರ್ಮಿಕ ಜೀವನದ ಆದರ್ಶ ತತ್ವಗಳನ್ನು ಎತ್ತಿ ಹಿಡಿದು ಸಾರುವುದು. ಒಂದು ರೀತಿಯಲ್ಲಿ

ಧಾರ್ಮಿಕ ಸಾಹಿತ್ಯ ಸೇವೆಗೆ ಅವರ ಜೀವನವು ಮೀಸಲಾಗಿದೆ ಎಂದರೆ ಅತಿಶಯೋಕ್ತಿಯಾಗಲಾರರು. ಪ್ರಸಕ್ತ ಗ್ರಂಥದಲ್ಲಿ ಅವರು ಮಾನವನ ಜೀವನವು ಉತ್ತಮವಾಗಿ, ಸುಖಮಯವಾಗಿ, ಇಹಪರಗಳ ಶ್ರೇಯಸ್ಸಿಗೆ ಸಾಧಕವಾಗಿರುವಂತೆ ಮಾಡಿಕೊಳ್ಳುವುದಕ್ಕೆ ಅತ್ಯಾವಶ್ಯಕವಾದ ಸಾಧನೋಪಾಯ ಗಳನ್ನು ಕುರಿತು ವಿಚಾರ ಮಾಡಿದ್ದಾರೆ. ಪರಿಶುದ್ಧವಾದ ಆಚರಣೆಯಿಂದ ಶೀಲವನ್ನು ಕಾಪಾಡಿ ಕೊಳ್ಳಬೇಕಾದುದು ಮುಖ್ಯ. (Character is lost everything is Lost). ನೀತಿಪತನವು ಜೀವನವನ್ನು ಹದಗೆಡಿಸಿ ಮನುಷ್ಯನನ್ನು ಹಗುರಮಾಡಿಬಿಡುತ್ತದೆ. ಆದುದರಿಂದ ನೀತಿ ಮಾರ್ಗವನ್ನು ಅನುಸರಿಸಿದ ಧರ್ಮ ಬದ್ಧವಾದ ಜೀವನವೇ ಉದಾತ್ತ ಜೀವನ. ಇಂಥ ಉದಾತ್ತ ಜೀವನವನ್ನು ನಡೆಸುವುದಕ್ಕೆ ನಿರ್ಮಲ ಚಾರಿತ್ರವಾದ ಸತ್ಪುರುಷರ ಆದರ್ಶವೇ ನಮಗೆ ದಾರಿ ತೋರಿಸತಕ್ಕ ಬೆಳುದೀವಿಗೆ - Lives of greatmen all remind us, we can make our lives sublime - ಎಂಬುದಾಗಿ ಆಂಗ್ಲೇಯ ಕವಿಯೋರ್ವನು ಹೇಳಿರುವಂತೆ ಮಹಾಪುರುಷರ ಜೀವನವು ನಮ್ಮ ಜೀವನವನ್ನು ಶ್ರೇಷ್ಠವಾದುದನ್ನಾಗಿ ಮಾಡಿಕೊಳ್ಳಲು ಮಾರ್ಗದರ್ಶನವಾಗಿರುತ್ತದೆ."

ಈ ಗ್ರಂಥವು ಚಿಕ್ಕದಾದರೂ ಚೊಕ್ಕ ಬಂಗಾರದ ಗಣಿಯಾಗಿದೆ. ಇದನ್ನು ರಾಮರಾಯರ ಜೀವನ ಸಂದೇಶ ಗ್ರಂಥರಾಜನೆಂದು ಕರೆಯಬಹುದಾಗಿದೆ. ಇದರಲ್ಲಿರುವ ಅನೇಕ ಸಂಗತಿಗಳು ಅವರ ವ್ಯಾಸಂಗ, ಜೀವನದ ಆಳವಾದ ಅನುಭವ, ಚಿಂತನ ಮಂಥನಗಳಿಂದ ಪರಿಪಕ್ವವಾದ ತಾತ್ವಿಕ ಆಲೋಚನೆಗಳ ಒಂದು ಜ್ಞಾನ ದೀವಿಗೆಯಂತೆ ಇದೆ. ಮುಂದಿನ ತಲೆಮಾರಿಗೆ ಬೆಳಕು ಬೀರುವ ಜ್ಯೋತಿಯಂತೆ ಇದ್ದು, ಅನೇಕರ ಬಾಳಿಗೆ ಸ್ಫೂರ್ತಿಯನ್ನೂ ನೀಡಿದೆ. ಇದು ಹಲವು ಭಾಷೆಗಳಿಗೆ ಅನುವಾದಗೊಳ್ಳಲು ಅರ್ಹತೆ ಪಡೆದಿರುವ ಗ್ರಂಥವಾಗಿರುವುದರಿಂದ ಅದರಲ್ಲಿ ಪ್ರತಿಪಾದಿತವಾದ ವಿಷಯಗಳನ್ನು ವಿವರವಾಗಿ ಪರಿಶೀಲಿಸುವುದು ಅಗತ್ಯವಿದೆ.

ಈ ಗ್ರಂಥದ ಆರಂಭದ ಅಧ್ಯಾಯ ನೈತಿಕ ಶಿಕ್ಷಣವನ್ನು ಕುರಿತು ಬರೆದದ್ದಾಗಿದ್ದರೂ, ಇದೇ ಇಡೀ ಗ್ರಂಥದ ತಿರುಳೂ ಆಗಿದೆ.

ನೈತಿಕ ಶಿಕ್ಷಣವೆಂದರೇನು? ಈ ಬಗ್ಗೆ ಆಲೋಚಿಸಿ ಲೇಖಕರು ಹೀಗೆ ಉತ್ತರ ಕೊಟ್ಟಿದ್ದಾರೆ.

"ಯುಕ್ತ ಆಯುಕ್ತ, ಸತ್ಯ ಅಸತ್ಯ, ಕರ್ತವ್ಯ ಅಕರ್ತವ್ಯ ಇವುಗಳನ್ನು ವಿವೇಚಿಸಿ, ತಿಳಿಸುವ ಶಕ್ತಿಯೇ ನೀತಿ" - ಎಂದು ಕಲೆಯಲ್ಪಡುತ್ತದೆ. ಈ ನೀತಿ ಮಾರ್ಗಕ್ಕೆ ವಿರೋಧವಿಲ್ಲದಂತೆ ನಡೆಯವುದೇ ವಿದ್ಯಾಭ್ಯಾಸದ ಅತಿಮುಖ್ಯ ಪ್ರಯೋಜನ. ಮನುಷ್ಯನು ನೀತಿವಂತನಲ್ಲದಿದ್ದರೆ ಎಲ್ಲ ಗುಣಗಳೂ ವ್ಯರ್ಥವಾದಂತೆ.

ಶಿವಾಜಿಯ ಜೀವನದ ಒಂದು ಪ್ರಸಂಗವನ್ನು ಕೊಟ್ಟಿದ್ದಾರೆ. ಅವನ ಸರದಾರ ತಾನಾಜಿ ಎಂಬುವನು ಸೆರೆ ಸಿಕ್ಕಿದ ಒಬ್ಬ ಸುಂದರ ಮುಸಲ್ಮಾನ ಹೆಣ್ಣು ಮಗಳನ್ನು ತಂದು ಶಿವಾಜಿಗೆ ಕಾಣಿಕೆಯಾಗಿ ಅರ್ಪಿಸಿದಾಗ ಅವನು ಹೀಗೆ ಉದ್ಗಾರ ತೆಗೆದನಂತೆ.

"ಇಲ್ಲಿ ನೋಡು, ನನ್ನ ತಾಯಿಯಾದ ಜೀಜಾಬಾಯಿಯು ಈ ಸ್ತ್ರೀಯಷ್ಟು ಸುಂದರ

ಳಾಗಿದ್ದಿದ್ದರೆ ನಾನೂ ಸ್ಫುರದ್ರೂಪಿಯಾಗಿ ಜನ್ಮಿಸಬಹುದಿತ್ತು"- ಎಂದು ಹೇಳಿ ಅವಳನ್ನು ಮಗಳಂತೆ ನಡೆಸಿಕೊಂಡು, ಮಾವನ ಮನೆಗೆ ಉಡುಗರೆಗಳೊಂದಿಗೆ ಕಳುಹಿಸಿ ಕೊಡುವನು.

ಗುರಿ ಮುಖ್ಯವಾಗಿರುವಂತೆ, ಅದಕ್ಕೊಯ್ಯುವ ಮಾರ್ಗವೂ ಅಷ್ಟೇ ಪರಿಶುದ್ಧವಾಗಿರಬೇಕು. ಗಾಂಧೀಜಿ ಅವರು-

"ಅನ್ಯಾಯ ಅಸತ್ಯ ಅಸಭ್ಯ ಮಾರ್ಗಗಳಿಂದ ಸ್ವರಾಜ್ಯ ದೊರೆಯುವಂತಿದ್ದರೆ ಅಂಥ ಸ್ವರಾಜ್ಯವೂ, ಸ್ವಾತಂತ್ರ್ಯವೂ ನನಗೆ ಬೇಡ, ಎಂದಿದ್ದರು" -ಎಂಬುದನ್ನು ಲೇಖಕರು ತಿಳಿಸುತ್ತಾರೆ.

"ಲೋಕದಲ್ಲಿ ಸತ್ಯ, ನೀತಿ, ಧರ್ಮ, ಅಹಿಂಸೆ ಪರೋಪಕಾರ ಮುಂತಾದವುಗಳ ಬೀಜಗಳು ಗಿಡವಾಗಿ ಬೆಳೆದು ಕಾಲಾಂತರದಲ್ಲಿ ಸುಖ ಸಂತೋಷ ಐಕ್ಯಮತ್ಯ, ಶಾಂತತೆ, ಮುಂತಾದ ಸತ್ಫಲಗಳನ್ನು ಜನಾಂಗಕ್ಕೆ ಪ್ರಾಸಾಧಿಸುತ್ತದೆ. ಹಾಗೆಯೇ ಸುಳ್ಳು, ಕಳ್ಳತನ, ದಂಬ, ಅನೀತಿ, ಹಿಂಸೆ ಮೊದಲಾದ ದುರ್ಗುಣಗಳ ಬೀಜಗಳು ಕಾಲಾಂತರದಲ್ಲಿ ಮೊಳೆತು ಗಿಡ ಮರಗಳಾಗಿ ಬೆಳೆದು ಮಾನವ ಕುಲವನ್ನು ಕಷ್ಟ, ದುಃಖ, ಸಂಕಟ, ಅನೈಕಮತ್ಯ, ರೋಗ ದಾರಿದ್ರ್ಯ - ಮುಂತಾದ ದುಷ್ಫಲಗಳಿಂದ ಹಿಂಸಿಸಿ ನಾಶಗೊಳಿಸಲು ಸಹಾಯವಾಗುವುವು. ಇದು ಪ್ರಕೃತಿ ಧರ್ಮವು."

ಈ ಮಾತಿಗೆ ನಿದರ್ಶನವಾಗಿ ಲೇಖಕರು ಹಿಟ್ಲರ್, ಮಸೋಲೋನಿಯರ ಉದಾಹರಣೆಯನ್ನು ನೀಡಿದ್ದಾರೆ.

ಮುಂದಿನ ಅಧ್ಯಾಯದಲ್ಲಿ ವ್ಯಕ್ತಿತ್ವವನ್ನು ಕುರಿತು ಹೇಳಿದ್ದಾರೆ. ಅವರ ಅಭಿಪ್ರಾಯದಲ್ಲಿ ತನ್ನ ವ್ಯಕ್ತಿತ್ವವನ್ನು ಬೆಳೆಸಿ ಕಾಪಾಡಿಕೊಂಡ ಮನುಷ್ಯ ಮಾತ್ರನೇ ಪೌರುಷಶಾಲಿ ಎನಿಸಿಕೊಳ್ಳಲು ಯೋಗ್ಯನು.

ದೇಹದ ವಿಷಯದಲ್ಲಿ ನಮ್ಮ ಕರ್ತವ್ಯ-

"ನಿರೋಗಿಯಾಗಿ ಉತ್ತಮ ಸ್ಥಿತಿಯಲ್ಲಿರುವ ದೇಹದಲ್ಲಿ ಮಾತ್ರವೇ ನಿಷ್ಕಲ್ಮಷವಾದ ಮತ್ತು ದೃಢವಾದ ಮನಸ್ಸು ಇರಲು ಸಾಧ್ಯ"- ಎನ್ನುತ್ತಾರೆ ಲೇಖಕರು. ಬಲಹೀನವಾದ ರೋಗಗ್ರಸ್ತ ಶರೀರದಿಂದ ಏನು ಸಾಧ್ಯ? ದೇಹವು ಪರಮಾತ್ಮನ ವಾಸಕ್ಕೆ ಯೋಗ್ಯ ಮಂದಿರವಾಗಬೇಕು. ನಿಜವಾಗಿ ಹೇಳುವುದಾದರೆ ಆರೋಗ್ಯ, ದೇಹಾರೋಗ್ಯವೇ ಮಹಾಭಾಗ್ಯ. ಇದೇ ನಿಜವಾದ ಸಂಪತ್ತು.

ತನ್ನ ದೇಹದ ಅಂಗಗಳ ಮೇಲೆ ಸ್ವಾಮ್ಯನ್ನು ಹೊಂದದ ಮನುಷ್ಯನು ಇತರರ ಮೇಲೆ ಅಧಿಕಾರ ನಡೆಸುವುದೆಂದರೆ ಹಾಸ್ಯಾಸ್ಪದವಲ್ಲವೆ?

ನೈರ್ಮಲ್ಯ, ಆಹಾರ, ವ್ಯಾಯಾಮ ಮತ್ತು ವಿರಾಮ ಆ ವಿಚಾರಗಳಲ್ಲಿ ಗೊತ್ತಾದ ನಿಯಮಗಳನ್ನು ಇಟ್ಟುಕೊಂಡು ನಡೆದ ಜೀವನವು ಆರೋಗ್ಯಕ್ಕೆ ರಾಜಮಾರ್ಗ ತೆರೆಯುವುದು.

ಸ್ಥಿರಗೊಂಡ ಮನಸ್ಸು ಒಂದು ಅತ್ಯುತ್ತಮ ಆಯುಧ ಸಾಮಗ್ರಿ ಇದ್ದಂತೆ. ಅದರ ಉಪಯೋಗದ ಮೇಲೆ ಕೀರ್ತಿ ಅಪಕೀರ್ತಿ ನಿಂತಿರುತ್ತದೆ.

ಲೇಖಕರು ಮಿತಸ್ವಭಾವ (Temperance)ವನ್ನು ಕುರಿತು ಹೀಗೆ ನುಡಿದಿದ್ದಾರೆ.

ಮಿತತನವು ಆಹಾರ ನಿದ್ರೆ, ಮಾತುಕತೆ, ಬರವಣಿಗೆ ಮುಂತಾದ ನಮ್ಮ ವ್ಯವಹಾರದ ಎಲ್ಲಾ ವಿಚಾರಗಳಲ್ಲೂ ಅಭ್ಯಾಸವಾಗಿ ನಿತ್ಯದ ಆಚರಣೆಗೆ ಬರಬೇಕು-

*ವಚನದೊಳಿಹರಪರ ಸುಖಮಂ*
*ವಚನದೊಳಂ ದೈವಗತಿಯು ದುರ್ಗತಿಯಕ್ಕು*
*ವಚನದೊಳರಿ ಮಿತ್ರತೆಯುಂ*
*ವಚನಾಮೃತದಿಂದೆ ಕಷ್ಟ ನೀಶ್ವರನರಿಯಾ ॥*

- ಎಂಬ ಸುಭಾಷಿತಕಾರನ ಮಾತನ್ನು ಉದಾಹರಿಸುತ್ತಾರೆ.

ದೇಹ ನೈರ್ಮಲ್ಯ : ದೇಹ ಮತ್ತು ಮನಸ್ಸುಗಳ ನೈರ್ಮಲ್ಯವನ್ನು ಕುರಿತು ಲೇಖಕರ ವಿಚಾರ ಹೀಗಿದೆ -

ದೇಹ ನೈರ್ಮಲ್ಯದ ನೆರೆಯಲ್ಲಿಯೇ ದೈವಸಾನ್ನಿಧ್ಯವಿರುವುದೆಂದರೆ ಅತಿಶಯೋಕ್ತಿಯಾಗಲಾರದು. ದೇಹನೈರ್ಮಲ್ಯವೇ ಮನೋನೈರ್ಮಲ್ಯಕ್ಕೆ ಆಸ್ತಿಭಾರ. ಮನುಷ್ಯನ ವ್ಯಕ್ತಿತ್ವವು ದೇಹ ಮನಸ್ಸು ಮತ್ತು ಆತ್ಮ -ಎಂಬ ಈ ಮೂರು ವಸ್ತುಗಳ ಸಮ್ಮಿಳನದಿಂದ ಏರ್ಪಟ್ಟದೆ. ವ್ಯಾಸಂಗದಿಂದಾಗುವ ಲಾಭವೇನು? ಓದಿದುದನ್ನು ಮನನ ಮಾಡಿ ಜೀರ್ಣಿಸಿಕೊಂಡಾಗಲೇ ವ್ಯಾಸಂಗದಿಂದ ಲಾಭ, ಪ್ರಕೃತ ಸ್ಥಿತಿಯಲ್ಲಿ ನಮ್ಮ ಬಾಲಕರು ವಾಚನ, ಶ್ರವಣ ಮನನ ಈ ಮೂರು ವಿಚಾರಗಳಲ್ಲಿ ಹೆಚ್ಚು ಶ್ರದ್ಧೆಯುಳ್ಳವರಾಗಬೇಕಾಗಿದೆ.

ಯೋಚನಾಶಕ್ತಿ ಎಷ್ಟು ತೀವ್ರವಾಗಿದ್ದರೂ ಹೃದಯವು ಭಾವನಾಶವಾಗಿ ಅದನ್ನು ಪ್ರೇರೇರಿಸದಿದ್ದರೆ ಯಾವ ಕಾರ್ಯವೂ ನಡೆಯಲಾರದು ಎನ್ನುತ್ತಾರೆ ಲೇಖಕರು.

ಜೀವಿತದ ಉದ್ದಿಶ್ಯವೇನು- ಈ ಪ್ರಶ್ನೆಯನ್ನು ಎತ್ತಿಕೊಂಡು ಅವರು ಹೀಗೆ ಉತ್ತರ ಕೊಡುತ್ತಾರೆ.

"*ಪರೋಪಕಾರಾರ್ಥಮಿದಂ ಶರೀರಂ* ಇದು ಸುಭಾಷಿತಕಾರನ ವಾಕ್ಯ. ಪರೋಪಕಾರಕ್ಕೆ ಇರುವ ಪ್ರತಿಬಂಧಕ ಸ್ವಾರ್ಥ. ಇದಕ್ಕೆ ನಿಷ್ಕಾಮವೇ ಔಷಧ. ದೇವರನ್ನು ಮೆಚ್ಚಿಸುವ ಸಲುವಾಗಿ ಮಾಡುವ ಕೆಲಸ ಕರ್ತವ್ಯವೆನಿಸಿಕೊಳ್ಳುತ್ತದೆ. ಇದೇ ದೇವರ ಪೂಜೆಯಾಗುತ್ತದೆ."

"ಕಾಲದ ಸದುಪಯೋಗವನ್ನು ಅರಿತ ಮಹನೀಯರು ತಮ್ಮ ಪಂಚಭೌತಿಕ ಶರೀರವು ಕಳೆದುಹೋದ ಮೇಲೂ ಯಶ ಶರೀರರಾಗಿ ಲೋಕದಲ್ಲಿ ಶಾಶ್ವತವಾಗಿ ಜೀವಿಸುವರು."

ಲೇಖಕರು ಜೀವನಕ್ಕೆ ಒಂದು ಮುಖ್ಯ ಕಸುಬು ಇರುವಂತೆ ಒಂದು ಅಡ್ಡ ಕಸಬೂ ಇರಬೇಕೆನ್ನುತ್ತಾರೆ. ಮನುಷ್ಯನು ತನ್ನ ಜೀವಿತದ ಮುಖ್ಯ ವೃತ್ತಿಯೊಂದಿಗೆ ಅಡ್ಡಕಸಬು ಕೆಲವು ವೇಳೆ ಬಹು ಪ್ರಯೋಜನಕರವಾಗಿ, ಆಪತ್ಕಾಲದ ಆತ್ಮಾವಲಂಬನೆಗೂ ಸಹಾಯವಾಗಬಹುದು - ಇದು ಲೇಖಕರ ಅಭಿಪ್ರಾಯ.

ಮನುಷ್ಯನು ಸಮಾಜಜೀವಿ. ಅಂದ ಮೇಲೆ ಸಂಘ ಜೀವನಕ್ಕೆ ಬೇಕಾದ ಮನೋಭಾವ ಸೇವಾಭಾವ, ಅಂದರೆ ನಮಗಿಂತ ಕೀಳು ತರಗತಿಗಳಲ್ಲಿರುವವರ ಸೇವೆಯೇ ನಿಜವಾದ ಸೇವೆ.

ತನ್ನಲ್ಲಿರುವ ಅಹಂಕಾರ-ಮಮಕಾರಗಳನ್ನೂ, ಕಾಮಕ್ರೋಧಗಳನ್ನೂ, ಮನಸ್ಸಿನ ಏರಿಳಿತಗಳನ್ನೂ, ಸಮಸ್ಥಿತಿಯಲ್ಲಿಟ್ಟಿರುವವನೇ ನಿಜವಾದ ಸೇವೆ ಮಾಡಬಲ್ಲಾತ. ಜೀವನದಲ್ಲಿ ಆದರ್ಶ ಯಾವುದು? ದೊಡ್ಡವರ ಆಚರಣೆಯೇ ಅನುಕರಣೀಯವಾದ ಮೇಲ್ಪಂಕ್ತಿ. ಉನ್ನತಿಯ ಮಾರ್ಗದಲ್ಲಿ ನಡೆಯಲು ಜನತೆಗೆ ಆದರ್ಶಗಳು ಬೇಕು.

"ಮಹಾಪುರುಷರ ಜೀವನಚರಿತ್ರೆಗಳೇ ಯೋಗ್ಯ ಆದರ್ಶಗಳೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಒಂದೊಂದು ಸದ್ಗುಣವೂ ಜೀವಿತದಲ್ಲಿ ಪ್ರಯೋಗಕ್ಕೆ ಇಡಲ್ಪಟ್ಟು, ಯಾವುದೊಂದೂ ವ್ಯಕ್ತಿಯ ಅನುಭವಕ್ಕೆ ಬಂದಲ್ಲದೆ, ಆದರ್ಶವೆನಿಸುವುದಿಲ್ಲ. ಅವನು ಮಾನಾಪಮಾನ, ಲಾಭ, ನಷ್ಟಗಳಿಂದ ಮೇಲೇರಬೇಕು. ಸೇವಾದೀಕ್ಷೆಯೊಂದೇ ಜೀವಿತದ ಉದ್ದಿಶ್ಯವಾಗಿರಬೇಕು.

ಮನಸ್ಸಾಕ್ಷಿಯ ಮಾತು ಮೇಲಿಂದ ಮೇಲೆ ನಾವು ಕೇಳುತ್ತೇವೆ. ಇದರ ವ್ಯಾಖ್ಯೆಯನ್ನು ಲೇಖಕರು ಹೇಗೆ ಮಾಡಿದ್ದಾರೆ.

"ಮನಸ್ಸಿನಲ್ಲಿ ದೈವತ್ವವು ಬೀಜರೂಪದಲ್ಲಿ ಇದ್ದೇ ಇದೆ. ಅದು ವಿದ್ಯೆ, ಅನುಭವ, ಸತ್ಸಹವಾಸ, ಮುಂತಾದವುಗಳ ಮೂಲಕ ಬೆಳೆದು ಬರಬೇಕು. ಅದನ್ನು ಹಾಗೆ ಪ್ರಯತ್ನಪೂರ್ವಕ ಬೆಳೆಯಿಸತಕ್ಕದ್ದು ಮನುಷ್ಯತ್ವದ ಕರ್ತವ್ಯ" - ಎಂದು ಡಾರ್ವಿನನು ಹೇಳಿದ ಮಾತನ್ನು ಉಲ್ಲೇಖಿಸುತ್ತಾರೆ.

"ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಲೋಕದ ಸಮಷ್ಟಿ ಜೀವನದ ಹಿತಕ್ಕಾಗಿ ಸಲ್ಲಿಸಬೇಕಾದ ಒಂದು ಕರ್ತವ್ಯವಿದೆ"- ಎಂದು ಲೇಖಕರು ಹೇಳುತ್ತಾರೆ.

ಸಾಮಾನ್ಯವಾಗಿ ಯಶಸ್ವೀ ಪುರುಷನ ಗುಟ್ಟು ಅವನ ಕಾಲದ ಸದುಪಯೋಗದಲ್ಲಿ ಅಡಗಿದೆ- ಎನ್ನುತ್ತಾರೆ.

"ಆಲಸ್ಯ ಭಾವವನ್ನೂ, ಅಸೂಯಾಭಾವವನ್ನೂ ಬಿಟ್ಟು ನಾವು ನಮ್ಮ ಸುತ್ತಮುತ್ತಿನ ಪ್ರಪಂಚವನ್ನೂ, ನಮ್ಮ ಸಮಾಜವನ್ನೂ ಕಣ್ಣು ಬಿಟ್ಟು ವಿಚಾರಪೂರ್ವಕ ನೋಡಿದರೆ ಎಷ್ಟು ಕಾರ್ಯಗಳು ನಮ್ಮ ಕೈಕಾದು ಕುಳಿತಿವೆ ಎಂಬುದನ್ನು ತಿಳಿಯಬಹುದು. ತಮ್ಮ ಕಾಲವನ್ನು ಸದುಪಯೋಗ ಪಡಿಸಿಕೊಂಡು ಮಹತ್ಕಾರ್ಯಗಳನ್ನು ಸಾಧಿಸಿದ ಮಹನೀಯರನೇಕರು ಲೋಕದ ಚರಿತ್ರಾಕಾಶದಲ್ಲಿ ನಕ್ಷತ್ರ ಸದೃಶರಾಗಿ ಪ್ರಕಾಶಿಸುತ್ತಿರುವರು. ಭಾರತದ ತರುಣರು ಆತ್ಮಾವಲಂಬನೆ ಹೊಂದಿ ಸ್ವಾಭಿಮಾನಶೀಲರಾಗಲಿ, ಧೀರ ಮನೋಭಾವವುಳ್ಳವರಾಗಿ ತಮ್ಮ ಕೀರ್ತಿ ಶರೀರಗಳನ್ನು ಜಗತ್ತಿನಲ್ಲಿ ನೆಲೆಸಲು ಸಾಧಕವಾಗಿರುವಂಥ ಅಗಾಧವಾದ ಆಕಾಂಕ್ಷೆಗಳನ್ನುಂಟು ಮಾಡಲಿ, ಕಾರ್ಯ ಸಾಧನಾ ತತ್ಪರರಾಗಲಿ"- ಎಂದು ನಾಡಿನ ಯುವಕರಿಗೆ ಕರೆ ನೀಡಿದ್ದಾರೆ.

ಬಡತನ-ಸಿರಿತನಗಳು ಮಹತ್ಕಾರ್ಯ ಸಾಧನೆಗೆ ಸಾಧಕ ಬಾಧಕಗಳಲ್ಲ. ಐಶ್ವರ್ಯವು ಮನುಷ್ಯನಲ್ಲಿ ದರ್ಪಗಳು, ಸುಖಾಭಿಲಾಷೆ, ಸೋಮಾರಿತನ, ಸ್ವಾರ್ಥಪರತೆ - ಇವುಗಳನ್ನು ಹೆಚ್ಚಿಸುವುದರಲ್ಲಿ ಮುಖ್ಯ ಕಾರಣವಾಗಿದ್ದರೆ, ಬಡತನವು ಇವುಗಳ ದುಷ್ಟ ಭಾವನೆಯಿಂದ ಮನಸ್ಸನ್ನು ಶುದ್ಧಗೊಳಿಸಿ, ಸತ್ಯ, ಶಾಂತತೆ, ವಿನಯ, ತ್ಯಾಗ, ಭಗವದ್ಭಕ್ತಿ, ಭೂತದಯೆ - ಮುಂತಾದ

ಸದ್ಗುಣಗಳನ್ನು ಬೆಳೆಸಲು ಸಹಾಯ ಮಾಡುತ್ತದೆ. ಆದುದರಿಂದ ಬಡತನ ಶಾಪವಲ್ಲ, ವರ ಎನ್ನುತ್ತಾರೆ ಲೇಖಕರು.

"ಉದ್ಯೋಗಶೀಲ ಚಿತ್ತವೃತ್ತಿಯೊಂದಿದ್ದರೆ, ಧೀರ ಮನೋವೃತ್ತಿಯೊಂದಿದ್ದರೆ ಲೋಕೋಪಕಾರ ಮಾಡಬೇಕೆಂಬ ಮಹತ್ವಾಕಾಂಕ್ಷೆಯೊಂದಿದ್ದರೆ, ನಿಮಗೆ ಸಹಾಯ ಮಾಡಲು ಪ್ರಪಂಚವೇ ಕೈಕಟ್ಟಿ ಸಿದ್ಧವಾಗಿ ನಿಂತಿರುವುದು. ನಿಸ್ವಾರ್ಥ ಸೇವೆಗೆ ನಾನು ಸಿದ್ಧನಿದ್ದೇನೆ ಎಂದು ನಿಮ್ಮನ್ನು ನೀವು ಒಪ್ಪಿಸಿ, ಅದರ ಕೆಲಸವನ್ನು ಅದು ನೋಡಿಕೊಳ್ಳುತ್ತದೆ."

ಮಹನೀಯರ ಜೀವನ ಚರಿತ್ರೆಗಳೆಂದರೆ ಒಂದೊಂದು ಸದ್ಗುಣವೂ ಪರೀಕ್ಷಿತವಾಗಿ ಪ್ರಯೋಗಕ್ಕಿಡಲ್ಪಟ್ಟ ಒಂದು ಪ್ರಯೋಗಶಾಲೆ ಇದ್ದಂತೆ. ಇವರು ವೈದ್ಯರಿಂದ ಶುದ್ಧಿಗೊಳಿಸಲ್ಪಟ್ಟ ಔಷಧಗಳಂತೆ. ಅದನ್ನು ಲೋಕವು ಸ್ವೀಕರಿಸಲು ಅರ್ಹವಾಗಿರುತ್ತದೆ. ಆದುದರಿಂದ ಈ ದೃಷ್ಟಿಯಿಂದ ಮಹಾಪುರುಷರ ಜೀವನಾನುಭವವು ಲೋಕಕ್ಕೊಂದು ಅಮೂಲ್ಯ ಸೌಭಾಗ್ಯವಿದ್ದಂತೆ ಸಹಾಯ ಮಾಡಬಲ್ಲದು. ಅವರ ಜೀವನ ಚರಿತ್ರೆಗಳ ಗ್ರಂಥಭಂಡಾರವು ರತ್ನ ಭಂಡಾರದಂತೆಯೇ ಇರುವುದು ಎಂದರೆ ಅತಿಶಯೋಕ್ತಿಯೆನಿಸಲಾರದು- ಎಂದಿದ್ದಾರೆ.

"ಸ್ವಾಭಿಮಾನ, ಮಹತ್ವಾಕಾಂಕ್ಷೆ- ಧೀರಮನೋಭಾವಗಳು ಪೌರುಷವಂತನ ಚಿನ್ಹೆಗಳು. ಇವೇ ಮಾನವತ್ವದ ಲಕ್ಷಣಗಳು. ಸ್ವಾಭಿಮಾನ ಪುರುಷನು ಸ್ವಾಲಂಬಿಯಾಗಿರುವನು. ಎಂಥ ಆಪತ್ಕಾಲದಲ್ಲೂ ಆತನು ತನ್ನ ಮಾನ, ಘನತೆ, ಆತ್ಮ ಗೌರವಗಳ ರಕ್ಷಣೆಯನ್ನು, ಪ್ರಾಣ ರಕ್ಷಣೆಗಿಂತಲೂ ಹೆಚ್ಚೆಂದು ಭಾವಿಸುವನು. ಅಚಲ ಚಿತ್ತವೃತ್ತಿಯುಳ್ಳ ಧೀರರಿಗಲ್ಲದೆ ಇತರರಿಗೆ ಮಹತ್ವಾಕಾಂಕ್ಷೆ ಉದಯಿಸದು. ಹಾಗೆಯೇ ಮಹಾಮೇರುಗಳಾದ ಮಾನವರೂ, ಮಹತ್ವಾ ಕಾಂಕ್ಷೆಯಾಗಿ ಹಿಮಾಲಯ ಸದೃಶ ಕಷ್ಟಗಳಿದ್ದರೂ ಅಗಾಧವೆನ್ನಿಸುವಂಥ ಕಾರ್ಯಸಾಧನೆ ಮಾಡುವರಲ್ಲದೆ ಕ್ಷುದ್ರ ಫಲಗಳಿಗಾಗಿ ಆಶಿಸರು" - ಇದು ಲೇಖಕರ ಬಿಚ್ಚು ನುಡಿ!

"ನಿನ್ನನ್ನು ನೀನು ಲೋಕ ಸೇವೆಗಾಗಿ ಕೊಡಲು ಸಿದ್ಧನಿದ್ದರೆ ನಿನ್ನ ಬೆಂಬಲಕ್ಕೆ, ನೀನು ಉದ್ದೇಶಿಸಿದ ಕಾರ್ಯಕ್ಕೆ ಸಹಾಯ ಮಾಡಲು ಇಡೀ ಜಗತ್ತೇ ನಿನಗಾಗಿ ನಿಂತಿರುತ್ತದೆ"- ಎಂದು ತಿಳಿ.

ಯಾವ ಯುವಕನೇ ಇರಲಿ, ತಾನು ಬಡವನಾಗಿ ಹುಟ್ಟಿದೆ, ಅದು ತನ್ನ ಅಭಿವೃದ್ಧಿಗೆ ಪ್ರತಿಬಂಧಕ ಎಂದು ತಿಳಿಯದೆ ಕಾರ್ಯೋನ್ಮುಖವಾಗಬೇಕು. ಉತ್ಸಾಹ, ಸಾಹಸ, ಬುದ್ಧಿ ಶಕ್ತಿಗಳನ್ನು ಉಪಯೋಗಿಸಿ ಕಾರ್ಯಶೀಲನಾಗುವ ಧೈರ್ಯ ಮಾಡಿದರೆ ಸಾಕು. ಅವನ ಅಭಿವೃದ್ಧಿಯು ಅವನ ಕೈಯಲ್ಲೇ ಇದೆ.

ಆದ್ದರಿಂದ ಮಹತ್ವಾಕಾಂಕ್ಷೆಯುಳ್ಳ ತರುಣನು ಧೀರ ಮನೋವೃತ್ತಿಯನ್ನು ತನ್ನಲ್ಲಿ ಗಳಿಸಿಕೊಂಡು ಸ್ವಾಭಿಮಾನಿಶೀಲನು ಆದರೆ ಸಾಕು. ಮುಂದಿನ ಕಾರ್ಯವನ್ನೆಲ್ಲಾ ಕರ್ಮಾಧಿ ದೇವತೆಗಳು ಬೆಂಬಲವಾಗಿ ನಿಂತು ನಡೆಸುವರೆಂದು ತಿಳಿದು ಮುನ್ನುಗ್ಗಬೇಕು. ಇದನ್ನು ವಿವರಿಸಲು ಈ ಸುಭಾಷಿತವನ್ನು ಹೇಳಿದ್ದಾರೆ. ನಿಸ್ವಾರ್ಥ ಜನತಾಸೇವೆಯೇ ಜನಾರ್ಧನ ಸೇವೆ.

*ಗುರುದೈವಂ ವಿದ್ಯಾರ್ಥಿಗೆ ತರುಣಿಗೆ ಪತಿದೈವಂ*
*ಉಳಿದ ಮನುಜರ್ಗೆಲ್ಲಂ*
*ಪೊರೆಲವಂ ದೈವಂ ಜಗದೊಳಗರಸಿಂಗಂ*
*ಪ್ರಜೆಯ ದೈವಮೆಲೆ ಗುಣರತ್ನಾ ॥*

ಈ ಗ್ರಂಥದ ಸಂದೇಶವಾಗಿ ಸುಬೋಧ ರಾಮರಾಯರು ಹೇಳುವ ಮಾತಿದು–

"ಮನುಷ್ಯನು ಉದಾರ ಮನೋಭಾವದಿಂದ ತನ್ನ ಸೇವಾಕ್ಷೇತ್ರವನ್ನು ವಿಸ್ತಾರಗೊಳಿಸಿಕೊಂಡು ಜನತೆಯ ಕ್ಷೇಮಚಿಂತನೆ ಮಾಡಿ, ಅವರ ಸೇವೆಯಲ್ಲಿ ತೊಡಗುವವನೆಂದರೆ ಅದಕ್ಕಿಂತಲೂ ಮಿಗಿಲಾದ ಜನಾರ್ಧನ ಸೇವೆ ಮತ್ತೊಂದಿಲ್ಲ."

ರಾಮರಾಯರು ಈ ಗ್ರಂಥದಲ್ಲಿ ಹೇಳಿರುವುದನ್ನೆಲ್ಲಾ ತಮ್ಮ ಜೀವನದಲ್ಲಿ ಪ್ರಯೋಗಕ್ಕೆ ತಂದ ಮಹನೀಯರು. ಅವರ ಜೀವನವೇ ಒಂದು ಮಹಾ ಕಾವ್ಯ. ಅವರ ಬದುಕು ಒಂದು ಚೊಕ್ಕ ಬಂಗಾರ!

ೞ

ರಾಮರಾಯರು ಮಾಡಿದ ಸೇವೆಯಲ್ಲೆಲ್ಲಾ ಶಾಶ್ವತವಾಗಿ ನಿಲ್ಲುವಂಥದು ಅವರು ಹರಿದಾಸ ಸಾಹಿತ್ಯ– ವಾಙ್ಮಯಗಳಿಗೆ ಮಾಡಿದ ಸೇವೆ. ಇದು ಅವರನ್ನು ದಾಸಸಾಹಿತ್ಯ ಪ್ರವರ್ತಕರೆಂದು ಇತಿಹಾಸದಲ್ಲಿ ಶಾಶ್ವತ ಸ್ಥಾನವನ್ನು ದೊರಕಿಸಿ ಕೊಟ್ಟಿದೆ.

ದಾಸಸಾಹಿತ್ಯವು ಪಾಮರರ ಸಲುವಾಗಿ, ಶ್ರೀ ಮದಾನಂದತೀರ್ಥರು ಬೋಧಿಸಿದ ದ್ವೈತ ಸಿದ್ಧಾಂತವನ್ನು ಅವರ ದೇಶಭಾಷೆಯಾದ ಕನ್ನಡದಲ್ಲಿ ತಿಳಿಸಿಕೊಡಲು ಮಾಡಿದ ಒಂದು ಪ್ರಯತ್ನ. ಜನರನ್ನು ತಿದ್ದಿ ಸನ್ಮಾರ್ಗಕ್ಕೆ ತಿರುಗಿಸಲು ಹರಿದಾಸರು ಲೋಕ ಸಂಚಾರ ಕೈಗೊಂಡು, ಲೋಕ ಶಿಕ್ಷಣ ನೀಡುತ್ತಿದ್ದರು. ಪ್ರತಿಭಾನ್ವಿತರೂ, ಅಪರೋಕ್ಷ ಜ್ಞಾನಿಗಳೂ ಆಗಿದ್ದ ಅವರಿಂದ ವಿಪುಲವಾಗಿ ದಾಸ ಸಾಹಿತ್ಯ ನಿರ್ಮಾಣವಾಯಿತು. ಪುರಂದರದಾಸರೊಬ್ಬರೇ ನಾಲ್ಕೂ ಮುಕ್ಕಾಲು ಲಕ್ಷ ಪದಗಳನ್ನು ರಚಿಸಿದ್ದರೆಂದು ಹೇಳುತ್ತಾರೆ. ವಿಜಯರಾಯರೂ ಸಹಸ್ರಾರು ದೇವರನಾಮ, ಸುಳಾದಿಗಳನ್ನು ರಚಿಸಿದ್ದರು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ರಚಿತವಾಗಿದ್ದ ಈ ಪಾಮರ ಸಾಹಿತ್ಯ ವಿಜಯನಗರದ ಪತನದೊಂದಿಗೆ ನಷ್ಟವಾಯಿತು. ಗುರುಪೀಠಗಳು ಇವನ್ನು ಕಾಯ್ದಿಡುವ ಪ್ರಯತ್ನ ಮಾಡಲಿಲ್ಲ. ಪಂಡಿತರು ಪ್ರಾಕೃತವೆಂದು ತಿರಸ್ಕಾರದಿಂದ ಉಪೇಕ್ಷಿಸಿದರು. ಸ್ತ್ರೀಯರು, ಅಕ್ಷರಸ್ಥರಲ್ಲದ ಮಂದಮತಿಗಳು ಈ ಸಾಹಿತ್ಯವನ್ನು ಪೋಷಿಸಿಕೊಂಡು ಬಂದರು. ಹರಿದಾಸ ದೀಕ್ಷೆಯುಳ್ಳ ದಾಸರು, ಕೀರ್ತನಕಾರರಾಗಿ ಈ ಹಾಡುಗಳನ್ನು ಸಂಗ್ರಹಿಸಿಕೊಂಡು, ಅಲ್ಲಲ್ಲಿ ಲಿಖಿತಗೊಳಿಸಿ ಇಟ್ಟುಕೊಂಡರು. ಈ ಹೊತ್ತಿಗೆಗಳು ಕಾಲಕ್ರಮೇಣ ನುಸಿ, ಇಲಿ, ಗೆದ್ದಲುಗಳಿಗೆ ಆಹಾರವಾಗಿ, ಅವೂ ಜೀರ್ಣವಾಗಿ ನಷ್ಟವಾಗಿತ್ತು. ಇಂಥ ಸಂಧಿ ಕಾಲದಲ್ಲಿ ಆಂಗ್ಲರ ಉದಯದೊಂದಿಗೆ, ಮುದ್ರಣ ಸೌಕರ್ಯವು ದೊರಕಿದುದರಿಂದ, ನಮ್ಮ ದೇಶಕ್ಕೆ ಕ್ರೈಸ್ತ ಮತ ಪ್ರಚಾರದ ಸಲುವಾಗಿ ಬಂದ

ಪಾದ್ರಿಗಳು ಕನ್ನಡ ಕಲಿತು, ತಮ್ಮ ಮತವನ್ನೂ, ಬೈಬಲ ಸಾಹಿತ್ಯವನ್ನೂ ಪ್ರಚಾರ ಮಾಡಲು ಮುದ್ರಣ ಸಾಹಸಕ್ಕೆ ಕೈಯಿಕ್ಕಿದ್ದರು. ಇಂಥವರ ಪ್ರಯತ್ನದ ಫಲವಾಗಿ ಮಂಗಳೂರು, ಬೆಂಗಳೂರು, ಮೈಸೂರು, ಧಾರವಾಡಗಳಲ್ಲಿ ಮುದ್ರಣ ಯಂತ್ರಗಳು, ಕಲ್ಲಚ್ಚುಗಳು ಆರಂಭವಾಗಿ, ಕನ್ನಡದ ಕೆಲವು ಗ್ರಂಥಗಳು ಮುದ್ರಣವಾಗಿ, ಬೆಳಕನ್ನು ಕಂಡವು. ಮತನ ಸಾಹಿತ್ಯದಂತೆ ಹರಿದಾಸರ ಹಾಡುಗಳು ಜನಮನದಲ್ಲಿ ಪ್ರಚಾರದಲ್ಲಿದ್ದುದರಿಂದ ಇವುಗಳೂ ಆರಂಭದ ಮುದ್ರಾ ಶಾಲೆಗಳಲ್ಲಿ ಕಲ್ಲಚ್ಚು ಯಂತ್ರಗಳಿಂದ ಮುದ್ರಣಗೊಂಡು ಜನ ಸಾಮಾನ್ಯರ ಕೈಗೆ ಸಿಗುವಂತೆ ಆಯಿತು.

ಇಂಥ ಹರಿದಾಸರ ಕೃತಿಗಳ ಸಂಗ್ರಹ, ಸಂಸ್ಕರಣ, ಮತ್ತು ಮುದ್ರಣಗಳು ಮೊದಲು ಮಂಗಳೂರು, ಉಡುಪಿಗಳ ಕಡೆ ಕೈಗೊಳ್ಳುವ ಸಾಹಸ ಮಾಡಿದರು. ಇವರಲ್ಲಿ ಮೊಗ್ಲಿಂಗನು (Dr. Hermann Moegling) ೧೮೬೦ರಲ್ಲಿ ಪುರಂದರದಾಸರು, ಕನಕದಾಸರ ಹಾಡುಗಳನ್ನು ಸಂಗ್ರಹಿಸಿ, ಕನ್ನಡ ಹಾಗೂ ಜರ್ಮನ್ ಭಾಷೆಯಲ್ಲಿ ಪ್ರಕಟಿಸಿದನು. ಅವನ ನಂತರ ತುಮಕೂರು ಬಳಿ ಇದ್ದ ಸ್ಟೈಫನ್‌ಸನ್ನನು (R.V.John Stephenson) ಕೆಲವು ದಾಸರ ಹಾಡುಗಳನ್ನು ಇಂಗ್ಲೀಷಿಗೆ ಪರಿವರ್ತಿಸಿ, ಪ್ರಚಾರ ಮಾಡಿದನು. ಇದರಿಂದ ಸ್ಫೂರ್ತಿ ಪಡೆದ ಕೆಲವು ದೇಶೀಯ ವಿದ್ವಾಂಸರು ಕನ್ನಡದ ದೇವರ ನಾಮಗಳನ್ನು ದೇವನಾಗರಿ ಮತ್ತು ತೆಲುಗು ಲಿಪಿಗಳಲ್ಲಿ ಅಚ್ಚು ಮಾಡಿ ಪ್ರಚಾರಕ್ಕೆ ತಂದರು. ಇಂಥವರಲ್ಲಿ ಮದರಾಸಿನ ಕಲಂಕಿ ಶೇಷಗಿರಿರಾಯರೆಂಬುವರು ಎರಡು ಭಾಗಗಳಲ್ಲಿ ದೇವರ ನಾಮಗಳನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿ ಪ್ರಕಟಿಸಿದರು. ಹರಿಕಥಾಮೃತಸಾರಕ್ಕೆ ಸಂಕರ್ಷಣ ಒಡೆಯರು ಬರೆದ ವಿಸ್ತಾರವಾದ ವ್ಯಾಖ್ಯಾನವು ತೆಲುಗು ಭಾಷೆಯಲ್ಲಿ ಪ್ರಕಟವಾಯಿತು. ಬೆಳಗಾವಿಯಲ್ಲಿ ಬಾಳಬಂದು ಅಕ್ಷರದಲ್ಲಿ ಸಂಸ್ಕೃತ ಲಿಪಿಯಲ್ಲಿ ಶ್ರೀರಾಮ ತತ್ವಪ್ರಕಾಶ ಛಾಪಾ ಖಾನೆಯವರು, ಮಡಕಶಿರ ಬಾಲಕೃಷ್ಣರಾಯರೂ ದಾಸರ ಹಾಡುಗಳನ್ನು ತೆಲುಗು ಲಿಪಿಯಲ್ಲಿ ಪ್ರಕಟಿಸಿ ಮಹೋಪಕಾರ ಮಾಡಿದರು, ಕ್ರಿ.ಶ. ೧೯೦೫ರಲ್ಲಿ ಬೆಂಗಳೂರಿನ S.G.N.Press ಮಾಲಿಕರಾದ ಬಿ.ಬಸಪ್ಪಶೆಟ್ಟಿ ಎಂಬುವರು ಬಾಗೇಪಲ್ಲಿ ತಾಲ್ಲೂಕು, ಪಾತಪಾಳ್ಯದ ಹರಿದಾಸರಾದ ಗುರುರಾಮ ವಿಠಲರ ಕೃತಿಗಳನ್ನು ಅಚ್ಚು ಮಾಡಿ ಜಗದೀಶ ವಿಠಲಾಂಕಿತ ನಾರಾಯಣದಾಸರಿಗೆ ಕಾಪೀರೈಟ್‌ನ್ನು ನೀಡಿದರು.

ಗುರುರಾಮ ವಿಠಲರು ಶ್ರೀ ಜಗನ್ನಾಥದಾಸರಾಯರ ಶಿಷ್ಯ ಪರಂಪರೆಯಲ್ಲಿ ಬಂದವರು. ಅವರ ಶಿಷ್ಯರು ಪ್ರೇಮದಾಸರು–ಅಭಿನವ ಜನಾರ್ಧನವಿಠಲಾಂಕಿತರು. ಅವರ ಶಿಷ್ಯರು ಭಾಗ್ಯನಿಧಿ ವಿಠಲರು. ಅವರ ಶಿಷ್ಯರೇ ವಿಜಯರಾಮವಿಠಲರು. ಇವರು ರಾಮವಿಠಲಾಂಕಿತದಲ್ಲಿ ಅನೇಕ ದೇವರ ನಾಮಗಳನ್ನು ಮಾಡಿದ್ದರು. ಇವರ ಶಿಷ್ಯರೇ ಸುಬ್ರಹ್ಮಣ್ಯದಾಸರು. ಹುಟ್ಟುತ್ತಲೇ ಕುರುಡರಾದುದರಿಂದ ಇವರನ್ನು ಕುರುಡದಾಸರೆಂದು ಕರೆಯುತ್ತಿದ್ದರು. ಇವರು ಕುರುಡರಾದರೂ ಕಾಶಿಯಿಂದ ರಾಮೇಶ್ವರದವರೆಗೆ ಸಂಚರಿಸಿ, ಅನೇಕ ಕ್ಷೇತ್ರಗಳನ್ನು ನೋಡಿ, ದೇವರ ನಾಮಗಳನ್ನು ರಚಿಸಿದ್ದರು. ಇವರು ರಚಿಸಿರುವ ಗ್ರಂಥಗಳಲ್ಲಿ ಸಿದ್ಧಾಂತಸಾರ, ಹರಿಕೀರ್ತನೆಗಳು (ಎರಡು ಭಾಗ) ಮತ್ತು ಸೀತಾದೇವಿಯ ಕಥೆ, ರುಕ್ಮಾಂಗದ ನಾಟಕಗಳಲ್ಲದೆ, ಹರಿಕಥೆಗಳಿಗಾಗಿ ಪ್ರಹ್ಲಾದ ಚರಿತ್ರೆ, ಮಾಧವ ಚರಿತ್ರೆ, ಅನಸೂಯಾ ಚರಿತ್ರೆ, ದ್ರೌಪದಿ ಮಾನ ಸಂರಕ್ಷಣೆ, ದೂರ್ವಾಸ ಚರಿತ್ರೆಗಳನ್ನು

ಬರೆದಿದ್ದಾರೆಂದು ತಿಳಿದುಬರುತ್ತದೆ. ಇವು ಪ್ರಕಟವಾಗಿದ್ದು, ಹಳೆಯ ಮೈಸೂರು ದೇಶದಲ್ಲಿ ಪ್ರಚಾರದಲ್ಲಿದ್ದವು.

ತುಮಕೂರಿನಲ್ಲಿದ್ದ ಕಳ್ಳಂಬಳ್ಳದ ಸೀನಪ್ಪನೆಂಬ ಗೃಹಸ್ಥರು, ವೃತ್ತಿಯಲ್ಲಿ ಶ್ಯಾನುಭೋಗರಾದರೂ, ಹರಿದಾಸರ ಚರಿತ್ರೆಗಳನ್ನೂ, ಅವರ ದೇವರ ನಾಮಗಳನ್ನೂ ಸಂಗ್ರಹಿಸಿ ಬರೆದುಕೊಳ್ಳುವ ಹವ್ಯಾಸದಲ್ಲಿದ್ದರು. ಇವರು ಸಂಗ್ರಹಿಸಿದ ಸಾವಿರಾರು ಕೀರ್ತನೆಗಳ ಹೊತ್ತಿಗೆಯನ್ನು ನೋಡಿದ ಬೇಲೂರು ಕೇಶವದಾಸರು ಅದರ ಪ್ರಯೋಜನ ಪಡೆದು ಮುಂದೆ ತಮ್ಮ ಕರ್ನಾಟಕ ಭಕ್ತವಿಜಯ ಗ್ರಂಥವನ್ನು ಬರೆದರು.

ಹರಿದಾಸರ ಪರಂಪರೆ ವಿಜಯದಾಸರಿಂದ ನೇರವಾಗಿ ಮೋಹನದಾಸರ ಮೂಲಕವೂ, ಜಗನ್ನಾಥದಾಸರ ಮೂಲಕವೂ ಹರಿದು ಬಂದು ಈ ಪರಂಪರೆಯಲ್ಲಿ ಇಂದಿನವರೆಗೆ ಹರಿದಾಸ ದೀಕ್ಷೆ, ದಾಸ ಸಾಹಿತ್ಯ ಸಂಗ್ರಹಕಾರ್ಯಗಳು ನಡೆದುಕೊಂಡು ಬಂದಿತು.

ಇವರಲ್ಲಿ ಮೋಹನದಾಸರ ಪರಂಪರೆ ಚಿಪ್ಪಗಿರಿಯಲ್ಲಿ ಮುಂದುವರಿದು ಕೊಂಡು ಬಂದು, ವಿಜಯರಾಯರ ಕಟ್ಟೆಯ ಪೂಜೆ, ಜೀರ್ಣೋದ್ಧಾರ, ಹರಿದಾಸ ಸಾಹಿತ್ಯ ಪ್ರಚಾರಗಳಿಗೆ ಟೊಂಕಕಟ್ಟಿ ನಿಂತು ಶ್ರೇಷ್ಠ ಸೇವೆ ಸಲ್ಲಿಸಿತು. ಇವರಲ್ಲಿದ್ದ ಸಹಸ್ರಾರು ದೇವರ ನಾಮಗಳ ಹೊತ್ತಿಗೆಯನ್ನು ಉಪಯೋಗಿಸಿ ಗೋರೆಬಾಳ ಹನುಮಂತರಾಯರು ಉತ್ತರ ಕರ್ನಾಟಕದಲ್ಲಿ ಹರಿದಾಸ ಸೇವೆ ಮಾಡಿದರು.

ಮೈಸೂರು ಪ್ರಾಂತ್ಯದಲ್ಲಿ ಜಗನ್ನಾಥದಾಸರ ಪರಂಪರೆಯಲ್ಲಿ ಬಂದ ಹರಿದಾಸರು ಈ ಸ್ತುತ್ಯವಾದ ಕಾರ್ಯವನ್ನು ಮುಂದುವರಿಸಿಕೊಂಡು ಬಂದರು. ಆದವಾನಿಯ ಪಂಗನಾಮದ ತಿಮ್ಮಣ್ಣ- ವೇಣುಗೋಪಾಲದಾಸರು ಆಗಿ ಹೋದ ಮೇಲೆ ಅವರ ಪರಂಪರೆಯಲ್ಲಿ ದೊಡ್ಡಬಳ್ಳಾಪುರದ ಮುದ್ದು ಮೋಹನ ವಿಠಲರವರೆಗೆ ಈ ದಾಸ ಪರಂಪರೆ ನಡೆದುಕೊಂಡು ಬಂದಿತು.

ಈ ಮುದ್ದು ಮೋಹನದಾಸರಿಗೆ ಐವರು ಶಿಷ್ಯರು. ಇವರಲ್ಲಿ ಬಾಲಕೃಷ್ಣ ವಿಠಲರು, ಕರಿವರದ ವಿಠಲರು, ಕರುಣಾಕರವಿಠಲರು, ಜ್ಞಾನದಾನವಿಠಲರು, ಸಹೋದರರು. ಇನ್ನೊಬ್ಬ ಶಿಷ್ಯರು ಸುಬ್ಬರಾಯರು. ಈ ಸಹೋದರರು ಪ್ರಖ್ಯಾತ ಹರಿಕಥಾ ವಿದ್ವಾಂಸರು.

ಹಿಂದಿನಿಂದಲೂ ತುಮಕೂರು ಷಾಷ್ಟಿಕ ವಂಶಕ್ಕೆ ಒಂದು ಭದ್ರ ಕೋಟೆ. ಇಲ್ಲಿಗೆ ವ್ಯಾಸರಾಯರು ಬಂದಿದ್ದರು. ಅವರು ಪ್ರತಿಷ್ಠಾಪಿಸಿದ ಪ್ರಾಣದೇವರು, ವ್ಯಾಸರಾಯರ ಮಠಗಳು ಇಂದಿಗೂ ಇವೆ. ಈ ವ್ಯಾಸರಾಯ ಮಠಕ್ಕೆ ದಿವಾನರಾಗಿ ಕೆಲಸ ಮಾಡುತ್ತಿದ್ದವರು ಮೂರ್ತಾಚಾರ್ಯರು ಮತ್ತು ಕರಿಗಿರಿಯಾಚಾರ್ಯರು. ಇವರು ತುಮಕೂರು ಬಳಿಯ ಹಾಲುಗುರುಕೆ ಮತ್ತು ಸಾರ್ಥವಳ್ಳಿ ಗ್ರಾಮಗಳ ಗುತ್ತೇದಾರರು ಅಂದರೆ ಜಹಗೀರುದಾರರಾಗಿದ್ದರು. ಮೂರ್ತಾಚಾರ್ಯರ ಮಕ್ಕಳೇ ವೆಂಕಣ್ಣದಾಸರು ಮತ್ತು ವೆ ॥ ಶ್ರೀ ವೇಣುಗೋಪಾಲದಾಸರು. ವೆಂಕಣ್ಣನವರ ಮಕ್ಕಳೇ ಬೆಂಗಳೂರಿನ ಪ್ರಭಾತ ಕಲಾವಿದರೆಂದು ಪ್ರಸಿದ್ಧರಾದ ಗೋಪಿನಾಥದಾಸ ಸಹೋದರರು.

ಈ ಮುದ್ದು ಮೋಹನದಾಸರ ಶಿಷ್ಯರಲ್ಲಿ ಕರಿವರದವಿಠಲರೂ, ಕರುಣಾಕರವಿಠಲರೂ ಹರಿಕಥೆಗಳನ್ನು ಮಾಡುತ್ತಿದ್ದರು. ಹೀಗಾಗಿ ಅವರು ವಿಪುಲವಾದ ದಾಸಸಾಹಿತ್ಯವನ್ನೂ ಸಂಗ್ರಹಿಸಿ, ಹೊತ್ತಿಗೆಗಳಲ್ಲೂ ಬರೆದು ಇಟ್ಟಿದ್ದರು. ಇಂಥವರುಗಳ ಅನೇಕ ಗಂಟುಗಳು ತಮ್ಮ ತಂದೆಯವರ ಮೂಲಕವಾಗಿ ಬೆಂಗಳೂರಿನ ಚಾಮರಾಜಪೇಟೆಯಲ್ಲಿ ವಾಸಿಸುತ್ತಿದ್ದ ದಾಸರ ಲಕ್ಷ್ಮೀನಾರಾಯಣ ರಾಯರ ಬಳಿ ಇತ್ತು. ಅವರ ಪರಿಚಯ ಚೆನ್ನಾಗಿ ಇದ್ದ ಸುಬೋಧರಾಮರಾಯರು ಹರಿದಾಸ ಸಾಹಿತ್ಯವನ್ನು ಪ್ರಚಾರಕ್ಕೆ ತರುವ ಸಂಕಲ್ಪ ಮಾಡಿದ್ದು, ಕನ್ನಡನಾಡಿನ ಭಾಗ್ಯ ವಿಶೇಷವೆಂದು ಹೇಳಬೇಕು.

ಸುಬೋಧ ರಾಮರಾಯರು ನಮ್ಮ ತರುಣರಲ್ಲಿ ಸನ್ನಡತೆ, ಶೀಲ, ಭಗವದ್ಭಕ್ತಿಗಳನ್ನು ಧರ್ಮಾಚರಣೆಯನ್ನು ಪ್ರಚಾರಕ್ಕೆ ತರಲು ತಮ್ಮ ಸುಬೋಧ ಕುಸುಮಾಂಜಲಿಯನ್ನು ಆರಂಭಿಸಿದ್ದರಷ್ಟೆ. ಇದಕ್ಕೆ ದೊರೆತ ಪ್ರೋತ್ಸಾಹದಿಂದ ಸುಬೋಧ ಪತ್ರಿಕೆಯನ್ನು ಆರಂಭಿಸಿದರು. ಮುಂದೆ ನಷ್ಟವಾಗುತ್ತಿದ್ದ ಹರಿದಾಸ ವಾಙ್ಮಯವನ್ನು ಉಳಿಸಿ, ಪ್ರಚಾರಕ್ಕೆ ತರುವ ಸಲುವಾಗಿ ಅವರು ಹರಿದಾಸ ಕೀರ್ತನತರಂಗಿಣಿ ಎಂಬ ಹೆಸರಿನಲ್ಲಿ ಒಂದು ಮಾಸಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯನ್ನು ಆರಂಭಿಸಲು ಅವರಿಗಿದ್ದ ಉದ್ದಿಶ್ಯವನ್ನು ಅವರ ಮಾತುಗಳನ್ನೇ ಕೇಳಿ–

"ಕರ್ಣಾಟಕದಲ್ಲಿ ಸುಪ್ರಸಿದ್ಧರೆನಿಸಿ ಜನತೆಗೆ ಜ್ಞಾನ ಭಕ್ತಿ ವೈರಾಗ್ಯಗಳು, ಲೋಕನೀತಿ, ಧರ್ಮಸೂಕ್ಷ್ಮಗಳು, ವೇದ ಶಾಸ್ತ್ರ ಪುರಾಣಗಳ ಸಕಲ ಧರ್ಮ ರಹಸ್ಯಗಳು, ಇವನ್ನು ಮೃದು ಮಧುರ ತಿಳಿಗನ್ನಡ ಭಾಷೆಯಲ್ಲಿ ಬೋಧಿಸಿ, ಕರ್ಣಾಟಕ ಸಂಗೀತ ಸಾಹಿತ್ಯಗಳೆರಡನ್ನೂ ಉದ್ಧರಿಸಿರುವ ದಾಸವರ್ಯರ ಅಮೂಲ್ಯ ಕೀರ್ತನ ಪದ ಸುಳಾದಿಗಳ ಸಂಗ್ರಹ, ದಾಸ ಸಾಹಿತ್ಯದ ನಿಧಿ. ಇಂಥ ಅಮೂಲ್ಯ ಸಾಹಿತ್ಯವನ್ನು ಜನ ಸಾಮಾನ್ಯರ ಕೈಗೆ ದೊರಕುವಂತೆ ಮಾಡಲು ಸುಬೋಧ ರಾಮ ರಾಯರು ನಿಶ್ಚಯಿಸಿ, ಈ ಪವಿತ್ರ ಕಾರ್ಯಕ್ಕಾಗಿ ಟೊಂಕ ಕಟ್ಟಿ ನಿಂತರು."

ಈ ಬಗ್ಗೆ ಅವರು ಆಕಾಶವಾಣಿಗೆ ನೀಡಿದ ಸಂದರ್ಶನದಲ್ಲಿ ಹೀಗೆ ನುಡಿದಿದ್ದಾರೆ ;

"ಮಾನವ ಜನ್ಮ ಸೃಷ್ಟಿಯಲ್ಲಿ ಶ್ರೇಷ್ಠವಾದುದೆಂದು ಸರ್ವವಿದಿತವಷ್ಟೆ. ಈ ಮನುಷ್ಯ ಜನ್ಮವು ಸಾರ್ಥಕಗೊಳ್ಳಬೇಕಾದರೆ ಜಗದೀಶ್ವರನಲ್ಲಿ ಮೂಡುವ ಅನನ್ಯ ಭಕ್ತಿಯೊಂದೇ ಪರಮ ಸಾಧನ. ಆದರೆ ಸೃಷ್ಟಿಕರ್ತನ ಸಂಕಲ್ಪಾನುಸಾರ ಅನಂತಜೀವಿಗಳಿಂದ ಕೂಡಿದ ಈ ಜಗತ್ತಿನ ನಿತ್ಯ ಜೀವನ ಯಾತ್ರೆಯೂ ಸಾಗಬೇಕಾಗಿದೆ. ಅದರೊಂದಿಗೆ ಭಕ್ತನು ನಿಷ್ಕಾಮಿಯಾಗಿ ಸೇವಾತತ್ಪರನಾಗಿ ಬೆರೆಯಬೇಕು. ಇಂಥ ನಿಷ್ಕಾಮ ಸೇವಾ ಮನೋಭಾವವು ಭಗವಂತನ ಮಹಾತ್ಮ್ಯ ಜ್ಞಾನವಾಗದೆ ಲಭ್ಯವಾಗದು. ಆದ್ದರಿಂದ ಈ ಭಕ್ತಿಜ್ಞಾನ ನಿಷ್ಕಾಮ ಕರ್ಮನಿಷ್ಠೆ ವಿರಕ್ತ ಮುಂತಾದವುಗಳಲ್ಲಿ ಸಾಧನೆಯಾದರೆಮಾತ್ರವೇ ಮನುಷ್ಯ ಜನ್ಮ ಸಾರ್ಥಕವಾದೀತು. ಅದಕ್ಕೆ ಅವಶ್ಯಕಸಾಮಗ್ರಿಯನ್ನೊದಗಿಸುವ ಮತ್ತು ವೇದಶಾಸ್ತ್ರ ಪುರಾಣ ಉಪನಿಷತ್ತುಗಳಲ್ಲಿ ಅಡಗಿದೆ. ಅದು ಸರ್ವಸಾಮಾನ್ಯರಿಗೆ ದೂರವಾದ ಸಂಸ್ಕೃತ ಭಾಷೆಯಲ್ಲಿರುವುದರಿಂದ ಹತಾಶರಾಗಿದ್ದ ಜನತೆಯ ಉದ್ಧಾರಕ್ಕಾಗಿಯೆಂದೇ ಮಹತ್ಮರಾದ ಪುರಂದರ ಕನಕದಾಸರಾದಿ ದಾಸವರ್ಯರು ಸಕಲ ಶಾಸ್ತ್ರಾರ್ಥಗಳನ್ನು ಒಳಗೊಂಡಿದ್ದ

ಹರಿದಾಸ ವಾಙ್ಮಯವನ್ನೂ ರಚಿಸಿದರು. ಅವು ಕಾಲಧರ್ಮದಿಂದ ವಿಶೇಷವಾಗಿ ಖಿಲವಾಗಿ ದೊರೆತು, ಸ್ವಲ್ಪವೂ ಶುದ್ಧ ಪಾಠವಿಲ್ಲದೆ ಕಲ್ಲು ಬತ್ತಗಳೊಂದಿಗೆ ಬೆರೆತ ಮೃಷ್ಟಾನ್ನದ ತುತ್ತಿನಂತೆ ಕಷ್ಟದಾಯಕವಾಗಿದ್ದುದರಿಂದ, ಅಲ್ಲಲ್ಲಿ ದೊರೆತ ಹಸ್ತ ಪ್ರತಿಗಳಿಂದ ಈ ದಾಸ ಸಾಹಿತ್ಯವನ್ನು ಸಂಗ್ರಹಿಸಿ ಸಹೃದಯ ಸನ್ಮಿತ್ರರ ಸಹಾಯದಿಂದ ಪರಿಶೋಧ ಸಾಧ್ಯವಾದುದು ನನ್ನ ಪುಣ್ಯೋದಯವೆಂದು ಭಾವಿಸಿದ್ದೇನೆ. ಈ ಪವಿತ್ರ ಕಾರ್ಯವು ನನ್ನಿಂದ ನಡೆಯಲು ಅನುಗ್ರಹಿಸಿದ್ದಕ್ಕಾಗಿ ದಯಾಮಯನಾದ ಭಗವಂತನಲ್ಲಿ ಕೃತಜ್ಞತಾಪೂರ್ವ ವಂದನೆಗಳನ್ನು ಅರ್ಪಿಸುತ್ತೇನೆ."

ಅವರು ಬಹಳ ಶ್ರಮವಹಿಸಿ ದೊರೆತ ಅಶುದ್ಧ ಪಾಠಗಳನ್ನು ಪರಿಷ್ಕರಿಸಿ, ಶುದ್ಧ ಪಾಠಗಳನ್ನು ಗೊತ್ತು ಮಾಡಿ, ಸಂಪುಟ ಸಂಚಿಕೆಗಳಾಗಿ, ಈ ಕೀರ್ತನ ತರಂಗಿಣಿಯಲ್ಲಿ ಪ್ರತಿ ತಿಂಗಳು ಪ್ರಕಟಿಸಿದರು. ಮುಂದೆ ಅವುಗಳನ್ನು ಕೂಡಿಸಿ, ಬೇರೆ ಬೇರೆ ಹರಿದಾಸರ ಕೀರ್ತನಾ ಸಂಪುಟಗಳಾಗಿ ಪ್ರಕಟಿಸಿ, ಮಹೋಪಕಾರ ಮಾಡಿದರು.

ಇವುಗಳಲ್ಲದೆ ಬೇಲೂರು ಕೇಶವದಾಸರು ರಚಿಸಿದ, ಬಹು ವಿಷಯ ಗರ್ಭಿತವಾದ ಕರ್ಣಾಟಕ ಭಕ್ತ ವಿಜಯವೆಂಬ ಗ್ರಂಥವನ್ನು ಎರಡು ಭಾಗಗಳಲ್ಲಿ ಪ್ರಕಟಿಸಿ, ಅನಂತರ ಒಂದೇ ಬೃಹದ್ಗ್ರಂಥವಾಗಿ ಹೊರತಂದರು.

ಪುರಂದರದಾಸರ ಗ್ರಂಥದ ಕೀರ್ತಿ ಕೇಳಿ ಬೆಂಗಳೂರಿಗೆ ಬಂದಿದ್ದ ಸರ್ವೋದಯದ ನಾಯಕ ಶ್ರೀ ವಿನೋಬಾಭಾವೆ ಅವರು ಇವರ ಮನೆಗೆ ಕಾರ್ಯಕರ್ತರನ್ನು ಕಳುಹಿಸಿ, ಒಂದು ಪ್ರತಿಯನ್ನೂ ಪಡೆದರಂತೆ. ಈ ಗ್ರಂಥವನ್ನು ಅವರು ಬಹಳ ಮೆಚ್ಚಿಕೊಂಡಿದ್ದರಂತೆ.

ರಾಮರಾಯರಲ್ಲಿ ಒಂದು ವಿಶೇಷ ಗುಣವಿತ್ತು. ಅವರು ಯಾವುದೊಂದು ಕಾರ್ಯವನ್ನೂ ಪೂರ್ವಾಪರ ವಿಚಾರಿಸದೆ ಉತ್ಸಾಹದ ಭರದಲ್ಲಿ ಮಾಡುತ್ತಿರಲಿಲ್ಲ. ಎಲ್ಲವನ್ನೂ ಚೆನ್ನಾಗಿ ಆಲೋಚಿಸಿ, ಯೋಜನಾಬದ್ಧರಾಗಿ ಕೈಗೊಳ್ಳುತ್ತಿದ್ದರು.

ಒಮ್ಮೆ ಅವರ ಗುರುಗಳಂತಿದ್ದ ಕರ್ಪೂರ ಶ್ರೀನಿವಾಸರಾಯರು ಹೇಳಿದ್ದ ಮಾತು-ದಕ್ಷಿಣಾತ್ಯರು ಆರಂಭಶೂರರೆಂಬುದನ್ನು ಅವರು ಮರೆತಿರಲಿಲ್ಲ. ಕಾರ್ಯಾರಂಭ ಮಾಡಿ, ನಡುವೆ ನಿಲ್ಲಿಸುವುದಕ್ಕಿಂತಲೂ ಮಾಡದೆ ಇರುವುದೇ ಲೇಸೆಂದು ಅವರ ಅಭಿಪ್ರಾಯವಾಗಿತ್ತು. ರಾಮರಾಯರು ಒಂದು ಬಾರಿ ರಾಮತೀರ್ಥರು ಬರೆದ Secret of Success ಎಂಬ ಗ್ರಂಥವನ್ನು ಓದುತ್ತಿದ್ದಾಗ ಮಂತ್ರ ಸದೃಶ ನುಡಿಯೊಂದನ್ನು ಓದಿ ಪ್ರಭಾವಿತರಾಗಿದ್ದರು.

Never ask anybody if you are right. If your conscience is right go ahead.

ಅಂದಿನ ದಿನಗಳಲ್ಲಿ ಪ್ರಕಟಣ ಪ್ರಪಂಚವು ಗ್ರಂಥ ಮುದ್ರಣಕ್ಕೆ ಅನುಕೂಲವಾಗಿತ್ತು. ಆದರೆ ಮಾರಾಟ, ವಾಚನಾಭಿರುಚಿಗಳು ತೀರಾ ಕೆಳಮಟ್ಟದಲ್ಲಿತ್ತು. ಎರಡು ರೂಪಾಯಿಗೆ ಹದಿನಾರು ಪುಟಗಳ ಒಂದು ಫಾರಂ ಮುದ್ರಣ ವೆಚ್ಚ ತಗಲುತ್ತಿತ್ತು. ಎರಡು ರೂಪಾಯಿ ಎರಡು ಆಣೆಗಳಿಗೆ ಒಂದು ರೀಮು ಪೇಪರ್ ದೊರಕುತ್ತಿತ್ತು. ಆದರೆ ಹಣಕ್ಕೆ ಮಾತ್ರ ಅಭಾವವಿತ್ತು. ಕಾಸು

ಕೊಟ್ಟು ಕೊಳ್ಳುವವರ ಸಂಖ್ಯೆ ಕೈಯಿಂದ ಎಣಿಸಬಹುದಷ್ಟು ಇತ್ತು. ಲೈಬ್ರರಿಗಳು ಇಂದಿನಂತೆ ಇರಲಿಲ್ಲ. ಶಿಕ್ಷಣ ಇಲಾಖೆಯವರು ಕೃಪೆ ಮಾಡಿಕೊಂಡು ಕೊಂಡುಕೊಂಡರೆ ಉಂಟು, ಇಲ್ಲದಿದ್ದರೆ ಇಲ್ಲ. ಅವರಿಗೆ ಇಂಥ ಸಾಹಿತ್ಯಗಳಿಗೆ ಹಣವಿರಲಿಲ್ಲ. ಹೀಗಾಗಿ ರಾಮರಾಯರು ಬಹಳ ಸಾಹಸ ಮಾಡಿ, ಈ ಎರಡು ಗ್ರಂಥ ಮಾಲೆಗಳನ್ನು ಆರಂಭಿಸಿದರು ಮಾತ್ರವಲ್ಲ, ಬೆಳೆಸಿದರು. ಅವರು ಪೆಟ್ಟ ಪಾಡಿದ್ದು ಬೆವರಲ್ಲ; ರಕ್ತ; ಅವರ ಶ್ರಮ ವ್ಯರ್ಥವಾಗಲಿಲ್ಲ. ವಾಚನಾಭಿರುಚಿ ಹುಟ್ಟಿದ ಆಸ್ತಿಕರೆಲ್ಲರೂ ಈ ದಾಸ ಸಾಹಿತ್ಯದ ಪ್ರಕಟನೆಗಳಿಗೆ ಬೆಂಬಲವಾಗಿ ನಿಂತುದರಿಂದ, ಈ ಎಲ್ಲ ಕೃತಿಗಳು ಹಲವು ಮುದ್ರಣಗಳನ್ನು ಕಂಡವು. ಇದು ಸುಬೋಧ ರಾಮರಾಯರ ಮಹತ್ವದ ಸಾಧನೆ.

ಆ ಕಾಲದಲ್ಲಿ ಇದ್ದ ಪ್ರಕಟಣ ಜಗತ್ತಿನ ಬಗ್ಗೆ, ಓದುಗರ ಅನಾದರ, ಗ್ರಂಥಕರ್ತರ ಕಷ್ಟ ಕಾರ್ಪಣ್ಯಗಳ ಬಗ್ಗೆ ಚ. ವಾಸುದೇವಯ್ಯನವರ (ಆರ್ಯಕೀರ್ತಿ) ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಹೀಗೆ ಬರೆದಿದ್ದಾರೆ :

"ಸಾಹಿತ್ಯ ಸೇವಕನಿಗೆ ಸಮಾಜ ಸೇವಕನಿಗೆ ಇವರ ದಿವಸಗಳಲ್ಲಿ ಅಷ್ಟೇನೂ ಮರ್ಯಾದೆ ಸಲ್ಲಿಸುವ ವಾಡಿಕೆ ಇರಲಿಲ್ಲ. ಆದ ಕಾರಣ ವಾಸುದೇವಯ್ಯನವರ ಬಹು ಅಮೂಲ್ಯವಾದ ಎಲ್ಲ ಈ ಸೇವೆ ಬಹಳವೇನೂ ಪ್ರಶಂಸೆಯನ್ನು ಪಡೆಯಲಿಲ್ಲ." ಈ ಮಾತು ಆ ಕಾಲದಲ್ಲಿ ವಾಸುದೇವಯ್ಯ ನವರಂತೆ ಕನ್ನಡಿಗರಲ್ಲಿ ಜಾಗೃತಿ ಹುಟ್ಟಿಸಲೆಂದೇ ಬರೆಯುತ್ತಿದ್ದ ಸುಬೋಧ ರಾಮರಾಯರ ವಿಷಯದಲ್ಲಿ ಅಕ್ಷರಶಃ ಸತ್ಯವಾಗಿತ್ತು.

ಡಿ.ವಿ.ಗುಂಡಪ್ಪನವರು ವಾಸುದೇವಯ್ಯನವರ ಸೇವಾ ಕಾರ್ಯವನ್ನು ಪ್ರಶಂಸಿಸುತ್ತ ಒಮ್ಮೆ ಹೀಗೆ ಬರೆದಿದ್ದರು :

*"ಗ್ರಂಥಕರ್ತರಲ್ಲಿ ಎರಡು ಜಾತಿ. ಕೆಲವರಲ್ಲಿ ಗ್ರಂಥ ಎಷ್ಟು ದೊಡ್ಡದೋ ಜೀವನ ದೊಡ್ಡದಲ್ಲ. ಇನ್ನು ಕೆಲವರಲ್ಲಿ ಜೀವನ ದೊಡ್ಡದು. ಗ್ರಂಥ ಅದರ ಅಂಶ ಮಾತ್ರ. ಈ ವಿರಳವಾದ-ಎರಡನೆಯ ಜಾತಿಗೆ ಸೇರಿದವರು ಚ.ವಾಸುದೇವಯ್ಯನವರು. ಅವರ ಗ್ರಂಥಗಳು ಅವರ ಜೀವನ ವೃಕ್ಷದ ಪುಷ್ಪ ರಾಶಿಯಲ್ಲಿ ಕೆಲವು ಮಾತ್ರ. ಅವರ ದೃಷ್ಟಿ ನಿಂತಿದ್ದದ್ದು ಜೀವನದ ಉದಾತ್ತತೆಯ ಮೇಲೆ. ನಮ್ಮ ಜೀವನ ಪರಮೇಶ್ವರನಿಂದ ಬಂದದ್ದು. ಅದು ಅವನ ಸ್ವತ್ತು; ಅವನ ಸೇವೆಗಾಗಿ ಉಪಯೋಗಿಸಬೇಕಾದ್ದು, ನಾವು ಅದನ್ನು ನಿರ್ಮಲವಾಗಿರಿಸಿ, ಕಾಪಾಡಿ ದುಂದು ಮಾಡದೆ, ದುರುಪಯೋಗ ಪಡಿಸದೆ, ಈಶ್ವರ ಪ್ರೀತಿಯಾಗಬೇಕೆಂಬ ನಂಬಿಕೆಯಿಂದ ಪ್ರತಿಯೊಂದು ಕ್ಷಣವೂ ಬಾಳಿದರು ವಾಸುದೇವಯ್ಯನವರು."* ಈ ಮಾತುಗಳಲ್ಲಿ ಬಂದಿರುವ ವಾಸುದೇವಯ್ಯ ಎಂಬ ಕಡೆಗಳಲ್ಲಿ ರಾಮರಾಯರು ಎಂದು ಇಟ್ಟುಕೊಂಡರೆ ಅವರಿಗೂ ಈ ಮಾತುಗಳು ಹೊಂದುವುವು.

ಸುಮನಾ ಅವರು ಒಮ್ಮೆ ಬರೆದಂತೆ "ಅರವತ್ತು ವರ್ಷಗಳಿಂದಲೂ ನಿರಂತರವಾಗಿ ನಾಡು ನುಡಿಯ ಸೇವೆಯನ್ನು ಮಾಡುತ್ತ ಬಂದಿರುವ ಅವರ ಸ್ಮರಣೆ ಭಾಷಾಭಿಮಾನಿಗಳಾದ ಕನ್ನಡಿಗರು ಮಾಡದಿರುವುದು ನಿಜಕ್ಕೂ ವಿಷಾದದ ಸಂಗತಿ. ಅವರು ಯಾವ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿರಲಿಲ್ಲ. ವಿದ್ವತ್ ಸಭೆಗಳಲ್ಲಿ ಗಂಟೆಗಟ್ಟಲೆ ಭಾಷಣ ಬಿಗಿಯಲಿಲ್ಲ; ಡಾಕ್ಟರೇಟು ಪಡೆಯಲಿಲ್ಲ.

ಯಾವ ಮಹಾ ಕಾವ್ಯವನ್ನೂ ರಚಿಸಲಿಲ್ಲ. ಆದರೆ ಅವರನ್ನು ಬಲ್ಲವರಿಗೆ ಅವರ ಬದುಕು, ಅವರ ಜೀವನ ಶ್ರದ್ಧೆ, ಕಷ್ಟ ಸಹಿಷ್ಣುತೆ, ಸತತ ಪರಿಶ್ರಮಗಳೇ ಒಂದು ಕಾವ್ಯ."

ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ, ಅವರು ಮಾಡಿದ ಹರಿದಾಸ ಸಾಹಿತ್ಯ ಪ್ರಚಾರ ಹೆಚ್ಚು ಪ್ರಾಪ್ತಿ ಪಡೆಯುತ್ತದೆ.

ರಾಮರಾಯರು ಪುರಂದರದಾಸರು ಗ್ರಂಥದಲ್ಲಿ ದಾಸ ಸಾಹಿತ್ಯಕ್ಕೆ ತಾವು ಒಲಿದು ಬಂದ ಬಗೆಯನ್ನು ಮಾರ್ಮಿಕವಾಗಿ ವರ್ಣಿಸಿದ್ದಾರೆ.

"ಶ್ರೀ ಲಕ್ಷ್ಮೀಮನೋಹರನಾದ ಶ್ರೀ ಮನ್ನಾರಾಯಣಮೂರ್ತಿಯ ದಿವ್ಯ ಮಹಿಮೆಗಳನ್ನು, ಭಕ್ತವತ್ಸಲನಾದ ಆತನ ದಿವ್ಯ ಲೀಲೆಗಳನ್ನು ಶ್ರೀ ರಾಮಾಯಣ ಭಾಗವತ ಭಾರತ ಹರಿವಂಶಾದಿ ಪುರಾಣಗಳು ಅತಿಶಯವಾಗಿ ವರ್ಣಿಸುತ್ತಾ, ಕರ್ಮಬದ್ಧರಾದ ಮಾನವರು ಸಂಸಾರ ಶರಧಿಯನ್ನು ದಾಟಿ ಶ್ರೀವರನ ಪಾದರವಿಂದಗಳ ಸಾನ್ನಿಧ್ಯವನ್ನು ಸೇರಲು ಸಾಧಕವಾದ ನಾವೆಗಳೋ ಎಂಬಂತಿವೆ ಎಂಬ ಮಾತು ನಿರ್ವಿವಾದವಾದುದಷ್ಟೆ. ಈ ಗ್ರಂಥಗಳು ದೇವವಾಣಿಯಲ್ಲಿರುವುದರಿಂದಲೂ, ವಿಪುಲವಾಗಿರುವುದರಿಂದಲೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಮುಳುಗಿರುವ ಲೌಕಿಕ ಸಾಮಾನ್ಯರು ಭಾಷೆಯ ಜ್ಞಾನವಿಲ್ಲದ ಕಾರಣದಿಂದ ವಿಸ್ತಾರವಾಗಿರುವ ಆ ಸಂಸ್ಕೃತ ಗ್ರಂಥರಾಶಿಯನ್ನು ಓದಿ ಅದರ ಸಾರವನ್ನು ಗ್ರಹಿಸಿ, ತನ್ಮೂಲಕ ಭಗವಂತನ ಅನುಪಮ ಮಹಿಮೆಗಳಲ್ಲಿ ಯೋಗ್ಯ ಜ್ಞಾನವನ್ನು ಹೊಂದಿ, ಜೀವಿತ ಸಾರ್ಥಕ್ಯಕ್ಕೆ ಪ್ರಯತ್ನಿಸಲು ಸಿದ್ಧನಾಗತಕ್ಕದ್ದು ಅಸಾಧ್ಯವೆಂಬ ವಿಚಾರವಾದರೂ ಸರ್ವವಿದಿತ ವಿಷಯವಾಗಿದೆ. ದೇವವಾಣಿಯಲ್ಲಿರುವ ವೇದ ಶಾಸ್ತ್ರ ಪುರಾಣ ಇತಿಹಾಸಾದಿಗಳ ಸಾರವತ್ತಾದ ವಿಷಯಗಳು, ಲೌಕಿಕನ ನಿತ್ಯ ವ್ಯವಹಾರದ ಭಾಷೆಯಲ್ಲಿದ್ದರೆ, ಅವನು ಪರರ ಸಹಾಯವಿಲ್ಲದೆ ಅವುಗಳನ್ನು ಗ್ರಹಿಸಿ ತನ್ನ ಸದ್ಗತಿಯ ಮಾರ್ಗವನ್ನು ತಿಳಿದುಕೊಳ್ಳಲು ಅವಕಾಶವಿರುವುದೆಂಬ ಸದ್ಭಾವನೆಯಿಂದ, ಲೋಕೋಪಕಾರ ನಿರತರಾದ ಶ್ರೀಪಾದರಾಯರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜ ಸ್ವಾಮಿಗಳು, ಶ್ರೀ ಪುರಂದರ ದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸಾದಿ ಅನೇಕ ಮಂದಿ ಮಹನೀಯರು ಭಗವಂತನ ಗುಣ ಮಹಿಮೆಗಳ ವರ್ಣನಾ ರೂಪವಾದ ಭಕ್ತಿ ಜ್ಞಾನ ವೈರಾಗ್ಯ ಬೋಧಕಗಳಾದ ಲೌಕಿಕದ ಧನ ಯೌವನಾದಿಗಳ ಅಶಾಶ್ವತ ಸ್ಥಿತಿ, ವಿಚಾರವಾದ - ಹೀಗೆ ಅನಂತ ಬೋಧಪರ ವಿಷಯಗಳನ್ನು ಕುರಿತು ರಾಗತಾಳ ಸಮನ್ವಿತವಾದ ಚಿಕ್ಕ ಚಿಕ್ಕ ಪದಗಳ ಮೂಲಕ ತಿಳಿಗನ್ನಡದಲ್ಲಿ ಬೋಧಿಸಿರುತ್ತಾರೆ. ಇವುಗಳು ಕರ್ನಾಟಕ ದೇಶದ ಎಲ್ಲ ಭಾಗದ ಎಲ್ಲರಿಗೂ ಪ್ರಿಯವಸ್ತುಗಳಾಗಿ ಸರ್ವಮಾನ್ಯವಾಗಿದೆ.

ಹೀಗೆ ಬೇರೆ ಬೇರೆ ಕಾಲ ದೇಶಗಳಲ್ಲಿ ಬೇರೆ ಬೇರೆ ದಾಸರಾಯರಿಂದ ಕೀರ್ತಿಸಲ್ಪಟ್ಟ ಈ ಪದಗಳಲ್ಲಿ ಎಷ್ಟೋ ಸಂಖ್ಯೆಯ ಪದಗಳು ಲುಪ್ತವಾಗಿ ಕೇವಲ ಸ್ವಲ್ಪ ಭಾಗ ಮಾತ್ರ ಸಧ್ಯ ನಮಗೆ ದೊರೆಯುತ್ತದೆ. ಅವುಗಳಲ್ಲೂ ಬಗೆ ಬಗೆಯ ವ್ಯತ್ಯಾಸಗಳಿದ್ದು ಅರ್ಥ ಸಾಮಂಜಸ್ಯವಿದ್ದರೆ ರಾಗ ತಾಳಗಳ ಜೋಡಣೆಯಿಲ್ಲದೆ, ರಾಗತಾಳಗಳ ಜೋಡಣೆ ಇರುವಲ್ಲಿ ಅರ್ಥಭೇದ ಪಾಠ

ಭೇದಗಳಿದ್ದು - ಹೀಗೆ ಪ್ರಕೃತ ದೊರೆಯುತ್ತಿರುವ ದಾಸರ ಪದಗಳ ಪುಸ್ತಕಗಳೆಂಬುವು ಅನೇಕಾನೇಕ ತಪ್ಪು ತೊಡರುಗಳ ಕಂತೆಯಾಗಿ ಭಕ್ತವೃಂದಕ್ಕೆ ಒಂದೇ ಕಾಲದಲ್ಲಿ ಸಂತೋಷ ಕ್ಲೇಶಗಳೆರಡನ್ನೂ ಉಂಟುಮಾಡುತ್ತಿವೆ; ಹಾಗೆ ದೊರೆತ ಪದಗಳನ್ನು ಏಕತ್ರ ಸಂಗ್ರಹಿಸಿ ಜನ ಸಾಮಾನ್ಯಕ್ಕೆ ಗ್ರಂಥ ರೂಪದಲ್ಲಿ ದೊರೆಯುವಂತೆ ಅನುಕೂಲ ಪಡಿಸಲು ಮಹನೀಯರನೇಕರು ಈವರೆಗೆ ಪ್ರಯತ್ನಿಸಿರುತ್ತಾರೆ."

ಬೆಳಗಾವಿಯ ಶ್ರೀರಾಮತತ್ವ ಪ್ರಕಾಶ ಛಾಪಾಖಾನೆಯವರು ಬಾಳ ಬಂದು ಅಕ್ಷರದಲ್ಲೂ, ಮ|| ರಾ|| ಮಡಕಶಿರ ಬಾಲಕೃಷ್ಣರಾಯರು ತೆಲುಗು ಅಕ್ಷರದಲ್ಲೂ ಪ್ರಕಟಿಸಿದ ದಾಸರ ಪದಗಳ ಪುಸ್ತಕಗಳು ಈ ಭಾಗದಲ್ಲಿ ನಡೆದ ಪ್ರಥಮ ಪ್ರಯತ್ನದ ಫಲಗಳೆನ್ನಬಹುದು. ತರುವಾಯ ನಡೆದ ದೊಡ್ಡ ಪ್ರಯತ್ನವೆಂದರೆ ಉಡುಪಿಯ ಶ್ರೀ ಮನ್ಮಧ್ವ ಸಿದ್ಧಾಂತಪ್ರಕಾಶಿಕಾ ಗ್ರಂಥಮಾಲೆಯದು. ಈ ಗ್ರಂಥ ಮಾಲೆಯ ಪ್ರಕಾಶಕರಾದ ಮ|| ರಾ|| ಶ್ರೀಪಾವಂಜೆ ಗುರುರಾಯರವರು ಮೇಲ್ಕಂಡ ದಾಸರುಗಳಲ್ಲಿ ಸಾಮಾನ್ಯವಾಗಿ ಎಲ್ಲರ ಪದಗಳನ್ನು ಸಂಗ್ರಹಿಸಿ ಬೇರೆ ಬೇರೆ ಪುಸ್ತಕ ರೂಪವಾಗಿ ಪ್ರಕಟಿಸಿ, ಕರ್ಣಾಟಕ ಜನಾಂಗಕ್ಕೆ ಅಮೋಘ ಉಪಕಾರ ಮಾಡಿರುತ್ತಾರೆ. ಈ ಮಹತ್ವದ ಕಾರ್ಯವನ್ನು ಪ್ರಾರಂಭಿಸಿ, ಇಷ್ಟರ ಮಟ್ಟಿಗೆ ನೆರವೇರಿಸಿರುವ ಶ್ರೀರಾಯರಿಗೆ ಸಮಸ್ತ ಭಾಗಗಳ ಕರ್ಣಾಟಕರೂ ಕೃತಜ್ಞತರಾಗಿರಬೇಕಾಗಿದೆ. ಉಡುಪಿಯಲ್ಲಿ ಈ ದಾಸರ ಪದಗಳು ಛಾಪೆಯಾಗುವುದಕ್ಕೆ ಮುಂಚೆ, ಹೀಗೆ ಒಟ್ಟಿಗೆ ಎಲ್ಲಾ ಹರಿದಾಸರ ಪದಗಳನ್ನೂ ಒಂದೆಡೆಯಲ್ಲಿ ಗ್ರಂಥ ರೂಪದಲ್ಲಿ ನೋಡುವುದೇ ದುರ್ಲಭವಾಗಿತ್ತೆಂದರೆ ಅದರಲ್ಲಿ ಅತಿಶಯೋಕ್ತಿ ಇಲ್ಲ-

ಹೀಗಿದ್ದರೂ ಈವರೆಗೆ ನಡೆದಿರುವ ಪ್ರಯತ್ನದಿಂದ ಪ್ರಕಟವಾಗಿರುವ ದಾಸರ ಪದಗಳ ಪುಸ್ತಕಗಳು ವಿಸ್ತಾರವಾದ ಕರ್ಣಾಟಕ ದೇಶದ ಸಕಲ ಭಾಗಗಳಿಗೂ ಒದಗಲು ಸಾಕಷ್ಟು ಸಂಖ್ಯೆಯಿಂದ ದೊರೆಯುತ್ತಿವೆಯೆಂದು ಹೇಳಲಾಗುವುದಿಲ್ಲ. ಸರ್ವಜನಾದರಣೀಯವಾದ ರೀತಿಯಲ್ಲಿ, ತಪ್ಪುಗಳಿಲ್ಲದೆ ಶುದ್ಧವಾಗಿದೆಯೆಂದು ಹೇಳಲೂ ಸಾಧ್ಯವಿಲ್ಲ. ಕೇವಲ ಬಡತನ ಸ್ಥಿತಿಯಲ್ಲಿರುವ ಭಕ್ತಿ ವೈರಾಗ್ಯ ಶೀಲವಾದ ಆಸ್ತಿಕರೂ ಸಂಗ್ರಹಿಸಲು ತಕ್ಕ ಸ್ಥಿತಿಯಲ್ಲಿವೆ ಎಂಬಂತೆಯೂ ಇಲ್ಲ-

ಈಚೆಗೆ ದಾಸರ ಪದಗಳನ್ನು ಶುದ್ಧಗೊಳಿಸಿ ಪ್ರಕಟಿಸುವ ಪ್ರಯತ್ನಗಳೂ ಅಲ್ಲಲ್ಲಿ ನಡೆಯುತ್ತಿರುವುದು ಸಂತೋಷದ ಸಂಗತಿಯು. ಇಷ್ಟು ದಿನಗಳ ಮೇಲಾದರೂ ನಮ್ಮ ಕನ್ನಡಿಗರು ಕಣ್ಣು ಬಿಟ್ಟು ತಮ್ಮ ಸಾಹಿತ್ಯ ಭಂಡಾರದಲ್ಲಡಗಿದ್ದ ಈ ಜ್ಞಾನ ರತ್ನಾಹಾರದ ಬೆಲೆಯನ್ನು ಕಂಡು ಕೊಂಡುದು ಮುಂದಿನ ಅಭಿವೃದ್ಧಿಗೆ ಒಂದು ಶುಭ ಸೂಚನೆ.

ಆಂಗ್ಲೇಯ ಕವಿಶ್ರೇಷ್ಠರಾದ ಷೇಕ್ಸ್‌ಪಿಯರ್, ಮಿಲ್ಟನ್, ಟೆನ್ನಿಸನ್ - ಮುಂತಾದವರ ಕವಿತೆಗಳು ಎಷ್ಟೋ ಬಗೆಯ ಗ್ರಂಥ ರೂಪಗಳಲ್ಲಿ ಪ್ರಚಾರವಾಗಿ ಜನ ಸಾಮಾನ್ಯಕ್ಕೆ ದೊರೆಯುತ್ತಿದೆ

೬

ಸುಬೋಧ ರಾಮರಾಯರು ಸಂಘಜೀವಿ. ಅವರ ಕೃತಿಗಳು ಬೇರೆಯಲ್ಲ; ಅವರ ಜೀವನ ಬೇರೆಯಲ್ಲ. ತಾವು ಚಿತ್ರಿಸಿದ ಕಥಾನಾಯಕರ ಶ್ರೇಷ್ಠ ಗುಣಗಳನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಲು ಯತ್ನಿಸಿದ್ದರು. ಅವರದು ವೇದಿಕೆಯ ಮೇಲಿನ ಆದರ್ಶ ಪ್ರತಿಪಾದನೆಯ ಆದೇಶವಲ್ಲ ; ನಿತ್ಯ ಜೀವನದ ಸೂತ್ರವಾಗಿತ್ತು. ಪ್ರಯೋಗಕ್ಕೆ ಬಾರದ ಆದರ್ಶ ಪ್ರಯೋಜನ ವಿಲ್ಲವೆಂಬುದು ರಾಯರ ಸಿದ್ಧಾಂತವಾಗಿತ್ತು.

ಅಹಲ್ಯಾ ನಾರೀಮಣಿಯ ಜೀವನ ಚರಿತ್ರೆಯನ್ನು ಚಿತ್ರಿಸುವಾಗ ಬ್ರಾಹ್ಮಣ್ಯದ ಬಗ್ಗೆ ಅವರು ದಿಟ್ಟತನದಿಂದ ಹೀಗೆ ಬರೆದಿದ್ದಾರೆ :

"ಬ್ರಾಹ್ಮಣ್ಯವು ಕೇವಲ ಉಡುಪನ್ನು ಬದಲಾಯಿಸುವುದರಿಂದ ಪಡೆಯಬಹುದಾದ ವೇಷಾಂತರವೆಂದು ಭಾವಿಸುವುದಾದರೆ ಅದಕ್ಕಿಂತ ಹುಚ್ಚುತನವು ಮತ್ತೊಂದಿಲ್ಲ. ಬ್ರಾಹ್ಮಣ್ಯವು ಹುಡುಗಾಟಿಕೆಯಿಂದ ಬರತಕ್ಕದಲ್ಲ. ಬರಿಯ ಮೂರೆಳೆಯ ಒಂದು ದಾರವು ಪತಿತನಾದ ಒಬ್ಬನನ್ನು ಬ್ರಾಹ್ಮಣನೆನಿಸಲಾರದು.

ಪ್ರಾಣದೊಂದಿಗಿದ್ದು ಪಂಚೇಂದ್ರಿಯಗಳನ್ನು ವಿಶೇಷ ರಭಸದಿಂದ ಆಕರ್ಶಿಸುತ್ತಿರುವ ವಿಷಯ ಸುಖಗಳ ಉಲ್ಬಣತೆಗೆ ಒಳಗಾಗದೆ ಇಂದ್ರಿಯಗಳನ್ನು ಬಿಗಿಹಿಡಿದು, ಕಾಮಿನಿ, ಕಾಂಚನ ಭೋಗ ಸಾಮಗ್ರಿಗಳು ಇವುಗಳ ಮಧ್ಯದಲ್ಲಿದ್ದೂ ಅವುಗಳಿಂದ ಲಿಪ್ತನಾಗದೆ ಆಯಾ ಇಂದ್ರಿಯ ಗಳನ್ನು ಪರಹಿತ ಕಾರ್ಯಗಳಲ್ಲಿ ನಿರತವಾಗುವಂತೆ ತೊಡಗಿಸುವ ಕೆಲಸವು ಸಾಮಾನ್ಯವಾದುದಲ್ಲ. ವಿಶ್ವ ಕುಟುಂಬಿಯಾದ ಇವನು ದ್ವೇಷಾಸೂಯೆಗಳ ಸೋಂಕಿಲ್ಲದೆ ಲಾಭ ನಷ್ಟ, ಮಿತ್ರ ಶತ್ರು, ಜಯಾಪಜಯಗಳೆಂಬ ದ್ವಂದ್ವಗಳನ್ನು ದಾಟಿರುವನು. ಅವನಿಗೆ ಪ್ರಾಪಂಚಿಕವಾದ ಯಾವುದ ರಿಂದಲೂ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಅವನು ಕೇವಲ ಸಾಕ್ಷಿರೂಪನಾಗಿದ್ದು ಲೌಕಿಕ ಕಾರ್ಯಗಳನ್ನು ಸಾಗಿಸುತ್ತಿರುವನು. ಇದಕ್ಕೂ ಹೆಚ್ಚಾಗಿ ಅವನ ಧ್ಯೇಯವಾದರೋ ಜಗನ್ನಿಯಾ ಮಕಾನಾದ ಭಗವಂತನನ್ನು ಪ್ರಾಪ್ತ ಮಾಡಿಕೊಳ್ಳುವುದಾಗಿರುವುದಲ್ಲದೆ ಅವನು ಮತ್ತಾವ ಪದವಿ ಗೌರವಗಳನ್ನು ಕೋರದೆ ನಿತ್ಯತೃಪ್ತನಾಗಿರುವನು. ಇದೇ ಬ್ರಾಹ್ಮಣನ ಸಹಜ ಸ್ಥಿತಿಯು."

ಸುಬೋಧರಾಮರಾಯರು ಇಂಥ ಸಾತ್ವಿಕ ಬ್ರಾಹ್ಮಣರು. ಇವರು ಎಂದೂ ಶ್ರೀಮಂತ ರಾಗಿರಲಿಲ್ಲ. ಲೌಕಿಕ ಪದವಿ ಭಾಗ್ಯಗಳನ್ನು ಇವರು ಹಂಬಲಿಸಿದವರಲ್ಲ. ಆದರೆ ಹೃದಯ ಶ್ರೀಮಂತಿಕೆಯಿಂದ ಇವರೆಂದೂ ವಂಚಿತರಾಗಿರಲಿಲ್ಲ. ಲಕ್ಷ್ಮಿಯು ಒಲಿಯುವುದು ಎಂಥವನನ್ನು?

"ಲಕ್ಷ್ಮಿಯು ದುರ್ದಮನೀಯವಾದ ಧೈರ್ಯ ಸ್ಥೈರ್ಯಗಳು, ದೀರ್ಘ ಪರಿಶ್ರಮ, ಕಷ್ಟ ಸಂಕಷ್ಟಗಳಿಗಂಜದ ದೃಢ ಚಿತ್ತದಿಂದ ಮುಂದುವರೆಯುವ ಕಾರ್ಯ ಸಾಮರ್ಥ್ಯ, ಸುಖ ಸೌಲಭ್ಯಗಳಿಗೆ ಮರುಳಾಗದೆ ಮುಂದುವರೆಯುವ ಇಂದ್ರಿಯ ನಿಗ್ರಹ ಮುಂತಾದ ಗುಣಗಳನ್ನು ಗಳಿಸಿದ... ಪುರಷ ಪುಂಗವರನ್ನಲ್ಲದೆ, ಆಲಸ್ಯ, ಅಸಮರ್ಥತೆ, ಅಧೈರ್ಯಗಳ ನೆಲೆವೀಡಾದ

ಆಳುಬರುಕರನ್ನು ಮೆಚ್ಚಳು. ಪ್ರಕೃತಿಯನ್ನು ಕಟ್ಟಿ ಆಳುವ ಸಾಮರ್ಥ್ಯಶಾಲಿಯಲ್ಲದೆ ಹೇಡಿಯು ಲಕ್ಷ್ಮಿಯಿಂದ ಅನುಗ್ರಹಿತನಾಗಲಾರನು."

- (ಜೆ.ಎನ್.ತಾತಾ. ಪು ೪೨)

ರಾಮರಾಯರು ಗೊಡ್ಡು ವೈದಿಕರಾಗಿರಲಿಲ್ಲ. ವಿಜ್ಞಾನಕ್ಕೆ ವಿಮುಖರೂ ಆಗಿರಲಿಲ್ಲ.

"ವ್ಯವಹಾರ, ವೇದಾಂತ, ವಾಸ್ತವತೆ, ಆದರ್ಶ ಸಾಂಪ್ರದಾಯಕ ಆಚಾರ ನಿಷ್ಠೆ, ಯುಗಧರ್ಮಕ್ಕೆ ಹೊಂದಿಕೊಳ್ಳುವ ಸ್ವತಂತ್ರ ವಿಚಾರ, ಇವುಗಳ ಸಮತೂಕ- ಶ್ರೀರಾಮರಾಯರಲ್ಲಿ ಅದ್ಭುತವಾಗಿದೆ. ಅವರ ಕರ್ಣಾಟಕಾಭಿಮಾನವು ಭಾರತಮಾತೆಯ ಭಕ್ತಿಗೆ ಪೂರಕವಾಗಿದೆ "- ಎಂದಿದ್ದಾರೆ ಆರ್.ಜಿ.ಕುಲಕರ್ಣಿ.

- (ಸಂಯುಕ್ತ ಕರ್ಣಾಟಕ೨೫-೪-೬೨)

ರಾಮರಾಯರ ಸ್ವಂತ ಸಿದ್ಧಾಂತಕ್ಕೆ ಲೋಪವಿಲ್ಲದ, ಅನ್ಯಧರ್ಮ ಮತಾಚಾರಗಳ ಸಮನ್ವಯ ದೃಷ್ಟಿ ಲೋಕೋತ್ತರವಾದುದು. ಯೇಸುಕ್ರಿಸ್ತನನ್ನು ಕುರಿತು ರಾಮರಾಯರು ಬರೆದ ಗ್ರಂಥವನ್ನು ಓದಿದ ರೆವರೆಂಡ್ ಟಾಮ್‌ಲಿನ್ಸನ್ ಎಂಬ ಪಾದ್ರಿಯು ಅದರ ಐವತ್ತು ಪ್ರತಿಗಳನ್ನು ಕೊಂಡು ತನ್ನವರಿಗೆ ಹಂಚಿದನಂತೆ. ಚಿಕ್ಕಮಂಗಳೂರಿಗೆ ಇವರನ್ನು ಭಾಷಣಕ್ಕೆ ಕರೆಸಿಕೊಂಡು, ಮಹಮದ್ ಪೈಗಂಬರರ ಜೀವನ ಚರಿತ್ರೆಗಾಗಿ ಅಲ್ಲಿನ ಮೌಲ್ವಿಗಳು ಸನ್ಮಾನಿಸಿದರಂತೆ. ಗುರು ನಾನಕ್ ಜೀವನ ಚರಿತ್ರೆಯನ್ನು ಓದಿದ ಸಿಕ್ ಸಾರ್ಜೆಂಟನು ಅವರ ಮನೆಯವರೆಗೆ ಜೀಪಿನಲ್ಲಿ ಮಿಲಿಟರಿ ಸಮವಸ್ತ್ರದಲ್ಲಿ ಬಂದವನು ಮನೆಯವರಿಗೆಲ್ಲ ಗಾಬರಿಗೊಳಿಸಿ ರಾಮರಾಯರಿಗೆ ಗ್ರಂಥಕ್ಕಾಗಿ ಸೆಲ್ಯೂಟ್ ಮಾಡಿ ಹೋದನಂತೆ. ಇಂಥ ಎಷ್ಟೋ ಘಟನೆಗಳು ಅವರ ಜೀವನದಲ್ಲಿ ನಡೆದಿವೆ.

ಸಮಾಜದಲ್ಲಿ ಸಾಹಿತಿಗೆ ಹಿರಿದಾದ ಸ್ಥಾನವಿದೆ. ಅಷ್ಟೇ ಜವಾಬ್ದಾರಿ ಅವನ ಲೇಖನಿಗೆ ಇದೆ. ಈ ಶಕ್ತಿಯನ್ನು ಅವನು ಸಮಾಜದ, ತನ್ನವರ ಒಳಿತಿಗಾಗಿ ಮೀಸಲಿಡಬೇಕೇ ಹೊರತು ಲೇಖನಿಯನ್ನು ಭ್ರಷ್ಟಗೊಳಿಸಬಾರದು. ಇಂಥ ವ್ಯಭಿಚಾರೀ ಲೇಖಕನಿಗೆ ಯಮಧರ್ಮರಾಜನು ಕಳ್ಳರು, ಕೊಲೆಗಾರರಿಗಿಂತ ಮಿಗಿಲಾದ ಕಠಿಣ ಶಿಕ್ಷೆ ವಿಧಿಸುವನೆಂದು ರಾಮರಾಯರು ವಿನೋದಕ್ಕೆ ಹೇಳುತ್ತಿದ್ದರು. ಈ ಪವಿತ್ರ ಧ್ಯೇಯದಿಂದ ಅವರು ತಮ್ಮ ದೈವದತ್ತವಾದ ಪ್ರತಿಭೆಯನ್ನು, ಲೇಖನಿಯನ್ನು ಸಮಾಜದ ಒಳಿತಿಗಾಗಿ ಬಳಸಿದರು. ಹಣಕಾಸಿನ ದೃಷ್ಟಿಯಿಂದ ಅವರು ಯಶಸ್ಸು ಪಡೆಯದಿರ ಬಹುದು. ನೂರಾರು, ಏಕೆ ಸಹಸ್ರಾರು ಎಳೆಜೀವರನ್ನು ತನ್ನ ಆದರ್ಶದತ್ತ ನಡೆಸಿ, ಅವರಲ್ಲಿ ಸಾರ್ಥಕತೆಯನ್ನು ತಂದರು. ಅವರು ಹೃನ್ಮನಗಳಲ್ಲಿ ಗೌರವ, ಪೂಜ್ಯಭಾವನೆ ದೊರಕಿಸಿಕೊಂಡರು. ಇದೇನೂ ಸಾಮಾನ್ಯ ಸಾಧನೆಯಲ್ಲ.

ರಾಮರಾಯರು ತಾವು ಸಮಾಜದಿಂದ ಪಡೆದದ್ದನ್ನು ಮತ್ತೆ ಮುಮ್ಮಡಿಯಾಗಿ ಅದಕ್ಕೆ ಹಿಂತಿರುಗಿಸಿ, ಸಮಾಜದ ಋಣವನ್ನು ತೀರಿಸಿದ್ದಾರೆ. ಅವರು ಬೆಂಗಳೂರಿನ ಮುನಿಸಿಪಲ್ ಕಾರ್ಪೊರೇಷನಿಗೆ ಚಾಮರಾಜಪೇಟೆ ಕ್ಷೇತ್ರದಿಂದ ಆರಿಸಿ ಬಂದಾಗ, ಗುಲಾಮಗಿರಿಯ

ದ್ಯೋತಕವಾಗಿ ನಿಂತಿದ್ದ ಸೆನೆಟಾಫ್ ವಿಜೇತವೀರರ ಸ್ಮಾರಕ – ವೀರರ ಸ್ಮಾರಕ ಸ್ಥಂಭ ತೆಗೆಯಲು ಬೇಕಾದ ಭೂಮಿಕೆ ಸಿದ್ಧಪಡಿಸಿದರು. ಪತ್ರಕರ್ತರಿಗಾಗಿ ಒಂದು ಕಾಲನಿ ಸ್ಥಾಪನೆಗೊಳ್ಳಲು, ಆ ಮೂಲಕ ನಿರ್ಭಾಗ್ಯ ಪತ್ರಕರ್ತರು ವಸತಿ ಸೌಕರ್ಯ ಪಡೆಯಲು ಪ್ರಯತ್ನ ಮಾಡಿದರು. ಅವರು ಮಾಧ್ವ ಸಂಘವನ್ನು ಸ್ಥಾಪಿಸಲು ೧೯೩೭ ಪ್ರಯತ್ನಿಸಿ, ಅದು ಸ್ಥಾಪನೆಗೊಂಡಾಗ ಕಾರ್ಯದರ್ಶಿಯಾಗಿ ದುಡಿದರು. ೧೯೪೫ರಲಿ ಮಾಧ್ವ ಯುವಕ ಸಂಘವನ್ನು ಕಟ್ಟಲು ನೆರವಾಗಿ ಇಂದು ಆ ಸಂಘವು ವಿಸ್ತಾರವಾದ ನಿವೇಶನದಲ್ಲಿ ಭವ್ಯ ಭವನ ಹೊಂದಿ ಸಹಸ್ರಾರು ವಿದ್ಯಾರ್ಥಿಗಳಿಗೆ ನೆರವಾಗಲು ಕಾರಣರಾದರು.

ಅವರು ಊಟ, ಉಡಿಗೆ, ನಡತೆಯಲ್ಲಿ ತುಂಬ ಸರಳರಾಗಿದ್ದರು. ದೈನಂದಿನ ಜೀವನದಲ್ಲಿ ಸರಳತೆ, ಶುಭ್ರತೆ ಎದ್ದು ಕಾಣುತ್ತಿತ್ತು. ಪ್ರಾಮಾಣಿಕತೆಗೆ ರಾಮರಾಯರು – ಇನ್ನೊಂದು ಹೆಸರಾಗಿದ್ದರು. ಒಮ್ಮೆ ಅವರು ಕೇವಲ ಸೇವಾಬುದ್ಧಿಯಿಂದ ದೇವರಾವ್ ಶಿವರಾಮ್ ಅವರಿಗೆ, ಭಾಷಣಗಳನ್ನು ಸಿದ್ಧಪಡಿಸಿಕೊಟ್ಟರಂತೆ. ಮುಂದೆ ಈ ವಿಷಯವನ್ನು ಅವರು ಮರೆತೇಬಿಟ್ಟರು. ಆದರೆ ಶಿವರಾಮ್ ಮರೆಯಲಿಲ್ಲ. ತಮ್ಮ ಮಗನ ಮದುವೆಯಾದ ಮೇಲೆ ನೂತನ ದಂಪತಿಗಳೊಡನೆ ಬೆಳ್ಳಿಯ ತಟ್ಟೆಯ ತುಂಬ ಹಣ್ಣು ಹಂಪಲುಗನ್ನು ಕಳುಹಿಸಿಕೊಟ್ಟರಂತೆ. ಅವರು ಬಿಟ್ಟು ಹೋದ ತಟ್ಟೆ ಮರೆತು ಬಿಟ್ಟಿದ್ದಾರೆಂದು ಬಗೆದು ರಾಮರಾಯರು ಅದನ್ನು ಹಿಂದಿರುಗಿಸಲು ಅವರು ಮನೆಗೆ ಹೋದಾಗ ಅವರಿಗೆ ಆಶ್ಚರ್ಯ ಕಾದಿತ್ತು. ಅದು ಮರೆತು ಬಂದ ತಟ್ಟೆಯಾಗಿರಲಿಲ್ಲ. ಕಾಣಿಕೆಯಾಗಿ ನೀಡಿದ್ದ ತಟ್ಟೆ ; ಅವರ ಒತ್ತಾಯಕ್ಕೆ ಕಟ್ಟುಬಿದ್ದು ಸಾಯುವವರೆಗೂ ಅದನ್ನು ರಾಮರಾಯರು ಊಟಕ್ಕೆ ಬಳಸುತ್ತಿದ್ದರಂತೆ. ಇನ್ನೊಮ್ಮೆ ತಾವು ಬರೆದ ಗ್ರಂಥವೊಂದು ವಿದ್ವಾಂಸರ ಸಹಾಯದಿಂದ ಪಠ್ಯಪುಸ್ತಕವಾಗಿ ಸಹಸ್ರಾರು ರೂಪಾಯಿ ಸಂಭಾವನೆ ಬಂದಾಗ, ಮನೆಕಟ್ಟಲು ಹಣ ಅಗತ್ಯ ವಿದ್ದರೂ, ಸಾಲಗಾರರ ಮನೆಗೆ ಹೋಗಿ, ಸಾಲ ತೀರಿಸಿ ಬಂದರಂತೆ! ಎಲ್ಲರಿಗೂ ಸೈಟು ಕೊಡಿಸಿದ್ದ ಈ ಮಹಾನುಭಾವ ತಮಗಾಗಿ ಸೈಟಿಗೆ ಅಪ್ಲೈ ಮಾಡಿರಲಿಲ್ಲ? ಈಗ ಇಂಥ ಪ್ರಾಮಾಣಿಕತೆ ಹೇಳಿದರೆ ನಂಬುವುದು ಕಷ್ಟ, ಆದರೆ ಇದು ಸತ್ಯ. ಇದು ರಾಮರಾಯರ ವ್ಯಕ್ತಿತ್ವ.

ರಾಮರಾಯರಿಗೆ ಕನ್ನಡಮಾತೆಯ ಮೇಲೆ ಎಷ್ಟು ಭಕ್ತಿ ಇತ್ತೋ ಕರ್ಣಾಟಕಾಂತರ್ಗತ ಭಾರತಮಾತೆಯ ಮೇಲೆ ಅಷ್ಟೇ ಭಕ್ತಿ ಇತ್ತು.ಅವರು ತಮ್ಮ ದೇಶ ಪ್ರೇಮದ ಸಂಕೇತವಾಗಿ ೧೯೫೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಭವ್ಯವೂ, ಸುಂದರವೂ, ಉದಾತ್ತ ಆದರ್ಶಗಳಿಂದ ಪ್ರೇರಿತವೂ ಆದ ಸಿಂಹವಾಹಿನಿ ಕರ್ಣಾಟಕದೇವಿಯ ಚಿತ್ರವನ್ನು ಕಾಣಿಕೆಯಾಗಿ ನೀಡಿದ್ದರು. ಚತುರ ಕಲಾವಿದ ಶ್ರೀನಿವಾಸರಾಯರಿಗೆ ವಿವರಗಳನ್ನು ನೀಡಿ, ಸ್ಫೂರ್ತಿ ನೀಡಿ ರಚಿಸಿದ ಅದ್ಭುತವಾದ ದೇವಿಯ ಚಿತ್ರಪಠ ಇದು.

ಸುಬೋಧ ರಾಮರಾಯರು ಒಂದು ದೃಷ್ಟಿಯಲ್ಲಿ ಸಾರ್ಥಕ ಜೀವನ ನಡೆಸಿದ ಆದರ್ಶ ಮಹನೀಯರ ವಿರಳ ಪಂಕ್ತಿಗೆ ಸೇರಿದ್ದರು. ಅವರದು ಉನ್ನತಾದರ್ಶದ ಸರಳ, ಸಂತೃಪ್ತ ಜೀವನ. ಅವರು ಅದು ಬೇಕು, ಇದು ಬೇಕು ಎಂದು ಜೀವನದಲ್ಲಿ ಹಂಬಲಿಸಿದವರಲ್ಲ. ತಮ್ಮ ಪಾಲಿಗೆ ಬಂದ ಕಾರ್ಯವನ್ನು ನಿಷ್ಠೆ, ಶ್ರದ್ಧಾಭಕ್ತಿಯಿಂದ ಮಾಡಿದರು. ಅವರ ಕರ್ತವ್ಯ ಕರ್ಮದಲ್ಲಿ ಈಶ್ವರಾರ್ಪಣ

ಬುದ್ಧಿ ಇತ್ತು. ಅಂದಂದಿಗೆ ಭಗವಂತನು ಕೊಟ್ಟಷ್ಟು ತಮ್ಮದೆಂದು ತಿಳಿದಿದ್ದರು. ತಾವು ಬಯಸಿದು ದೆಲ್ಲವೂ ಬರುವುದಿಲ್ಲವೆಂದೂ ತಿಳಿದಿತ್ತು; ಬಾರದುದಕ್ಕಾಗಿ ಹಂಬಲಿಸಿ ಕೊರಗಲಿಲ್ಲ; ಬಂದುದನ್ನು ಅದು ಎಷ್ಟೇ ಅಲ್ಪಕಾರ್ಯವಾಗಲಿ, ಪೂಜಾ ರೂಪದಲ್ಲಿ ಸ್ವೀಕರಿಸಿದರು; ದೊರಕಿದ ಅಲ್ಪ ಆದಾಯದಿಂದ ಸಂತೋಷಿಸಿದರು. ಇಷ್ಟು ನಮ್ಮ ಪ್ರಾಪ್ತಿ, ಸ್ವಾಮಿ ಕೊಟ್ಟಷ್ಟು ನಮ್ಮದು; ಹೆಚ್ಚಿನದನ್ನು ಬೇಡಿದರೆ ಹೇಗೆ ತಾನೇ ದೊರಕೀತು? ಎಂಬ ವೇದಾಂತಿಯ ಮನೋಭಾವ ಅವರದು. ಅವರು ಪಾಲಿಗೆ ಬಂದುದನ್ನು ಪಂಚಾಮೃತವೆಂದು ಸ್ವೀಕರಿಸಿದರು. ಬದುಕು ನೀಡಿದುದರಲ್ಲಿ ಪರಮಾನಂದ ಪಟ್ಟರು. ಇದು ಜ್ಞಾನಿಯ ಲಕ್ಷಣ; ಅನುಭವದಿಂದ ಮಾಗಿದ ಮನಸ್ಸು, ಪಕ್ವದೆಶೆಯ ಫಲ. ಹೀಗಾಗಿ ತಾವು ಪ್ರಜ್ಞರೆಂದು ತಿಳಿದು ಜನರು ತಮ್ಮ ಸಾಹಿತ್ಯವನ್ನು ಪಾಮರಸಾಹಿತ್ಯವೆಂದು ತೆಗಳಿದಾಗ ಅವರು ಕುಗ್ಗಲಿಲ್ಲ, ನಿರುತ್ಸಾಹ ತಾಳಲಿಲ್ಲ. ದೇಶ ವಿದೇಶಗಳಲ್ಲಿ ನಡೆಯುತ್ತಿದ್ದ ಜ್ಞಾನ ಪ್ರಸಾರದ ಕಾರ್ಯವನ್ನು ಬಲ್ಲ ವಿದ್ವಾಂಸರು-ನಿರ್ಮತ್ಸರದ ಜನರು-ರಾಮರಾಯರ ಸಾಹಿತ್ಯ ಚಟುವಟಿಕೆ ಗಳನ್ನು ಮೆಚ್ಚಿ ಮನದುಂಬಿ ಹೊಗಳಿದಾಗ ಅವರು ಅಹಂಕಾರದಿಂದ ಬೀಗಲಿಲ್ಲ; ತಲೆ ಎತ್ತಿ ಮೆರೆಯಲಿಲ್ಲ; ಅದನ್ನೂ ಇದನ್ನೂ ಸಮದೃಷ್ಟಿಯಿಂದಲೇ ಸ್ವೀಕರಿಸಿದ ನಿಷ್ಕಾಮ ಯೋಗಿ ರಾಮರಾಯರು. ಒಮ್ಮೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ರಾಮರಾಯರನ್ನು ಗೌರವಿಸುವ ಸಮಾರಂಭ ಏರ್ಪಟ್ಟಿತ್ತು. ಅವರು ತಮಗಾದ ಸನ್ಮಾನವನ್ನು ಕುರಿತು ಹೀಗೆ ಉದ್ಗಾರ ತೆಗೆದಿದ್ದರು.

"ಅಂದು ನನಗೆ ಎಲ್ಲೆಡೆಯಿಂದ ಶ್ಲಾಘನೆ, ಹೊಗಳಿಗೆ ಬಂದಿದ್ದರೆ ನನ್ನ ತಲೆ ಬಹುಶಃ ತಿರುಗುತ್ತಿತ್ತೆಂದು ಕಾಣುತ್ತದೆ. ಭಗವಂತನ ಇಚ್ಛೆ ಹಾಗಿರಲಿಲ್ಲ. ಅಂದು ಇಂಥ ಪ್ರೋತ್ಸಾಹ ದಾಯಕ ನುಡಿ ಬರಲಿಲ್ಲ. ಇಂದು ಜನರು ನನ್ನ ಅಲ್ಪ ಕಾರ್ಯವನ್ನು ಮಹತ್ತೆಂದು ತಿಳಿದು ಸನ್ಮಾನಿಸುತ್ತಿದ್ದಾರೆ; ಆದರೆ ಅವರು ಏನು ಹೇಳುತ್ತಿದ್ದಾರೆಂದು ಈಗ ನನ್ನ ಕಿವುಡುತನದಿಂದ ತಿಳಿಯಲಾರೆ. ಇದೂ ಒಂದು ವರವಲ್ಲವೆ?"

ರಾಮರಾಯರನ್ನು ಒಮ್ಮೆ ಕಂಡವರು ಅವರ ಸರಸ ಸಂಭಾಷಣೆ, ಸಜ್ಜನಿಕೆ, ಸರಳತೆ ಗಳನ್ನು ಎಂದಿಗೂ ಮರೆಯಲಾರರು.

"ಸೌಮ್ಯ, ಸಂತೃಪ್ತ, ಸಾತ್ವಿಕ ಗಂಭೀರವಾದ ಮುಖ; ಅದಕ್ಕೊಪ್ಪುವ ವೃದ್ಧಾಪ್ಯ ಸೂಚಕ ಬಿಳಿಯ ಸಣ್ಣ ಮೀಸೆ, ಹಳೆಯ ಕಾಲದ ಚೌಕಟ್ಟಿನ ದಪ್ಪಗಾಜಿನ ಕನ್ನಡಕ; ಅದರ ಹಿಂದೆ ಹೊಳೆಯುವ ಅಂತಃಕರಣ ಪೂರ್ವಕ ಕಳಕಳಿಯ ಕಣ್ಣುಗಳು; ಕುತ್ತಿಗೆಯನ್ನು ಮುಚ್ಚುವ ಕ್ಲೋಸ್ ಕಾಲರ್ ಕೋಟು; ಅದು ಸಾಮಾನ್ಯವಾಗಿ ಹತ್ತಿಬಟ್ಟೆಯ ಸಾದಾ ಶೈಲಿಯದು; ಅಂಚು, ಬಣ್ಣ, ಜರತಾರಿ ಯಾವುದೂ ಇಲ್ಲದಿದ್ದರೂ ಎದ್ದು ಕಾಣುವ, ಬಿಗಿಯಾಗಿ ಕಟ್ಟಿದ ಬಿಳಿಯ ಸಾದಾ ರುಮಾಲು ; ಶುಭ್ರವಾದ ಶಾಸ್ತ್ರೋಕ್ತವಾದ ಕೆಂಪು ಅಂಚಿನ ಮೇಲುಕೋಟೆ ಪಂಚಕಚ್ಚೆಯ ಪಂಚೆ; ಇದರ ಮೇಲೆ ಹೊದ್ದ ನೀಳವಾದ ಬಿಳಿಯ ಉತ್ತರೀಯ; ಕೈಯಲ್ಲಿ ಸಾಮಾನ್ಯವಾಗಿ ಯಾವುದಾದರೂ ಪುಸ್ತಕಗಳು ; ಮತ್ತೊಂದು ಕೈಯಲ್ಲಿ ಕೊಡೆ. ಇದು ನಿಯತವಾಗಿ ಸುಬೋಧ ರಾಮರಾಯರು ಎಲ್ಲಿ ಬಂದರೂ ಕಾಣುತ್ತಿದ್ದ ಬಾಹ್ಯರೂಪ. ಯಾರನ್ನಾದರೂ ಹಸನ್ಮುಖಿಯಾಗಿ ಅಂತಃಕರಣ ಪೂರ್ವಕವಾಗಿ ಮಾತನಾಡಿಸುವ ಅವರ ಸರಳ ಸೌಜನ್ಯ ಆಕರ್ಷಕವಾದುದು.

ಮೃದುವಾದ ಮನಸ್ಸು, ಕಷ್ಟ ಸಹಿಷ್ಣುವಾಗಿ, ಕಾರ್ಯದಕ್ಷರಾಗಿ, ನಿರಾಡಂಬರರಾಗಿ ಸತ್ಯನಿಷ್ಠುರರಾಗಿದ್ದ ವ್ಯಕ್ತಿತ್ವ ರಾಮರಾಯರದು. ಎಂಭತ್ತರ ಅಪರ ವಯಸ್ಸಿನಲ್ಲೂ ಉತ್ಸಾಹ ಚಟುವಟಿಕೆಗಳನ್ನು ತೋರಿಸುತ್ತಿದ್ದ ವಿರಳ ವ್ಯಕ್ತಿ"-ಹೀಗೆ ಕೆ.ಎಂ.ಕೃಷ್ಣರಾಯರು ರಾಮರಾಯರ ಮಾತಿನ ರೇಖಾಚಿತ್ರ ಕೊಟ್ಟಿದ್ದಾರೆ.

ಇದು ಎಷ್ಟೊಂದು ಸಹಜ ಚಿತ್ರವೆಂದು ಒಮ್ಮೆ ರಾಮರಾಯರನ್ನು 'ಂಡಿದ್ದವರಿಗೆ ಅನಿಸದೆ ಇರದು.

ರಾಮರಾಯರು ಮಾಡಿದ ಮಹತ್ತರ ಸೇವೆ ಏನು?

"ಕನ್ನಡದಲ್ಲಿ ಬರೆಯುವುದ ಲಾಭದ ದೃಷ್ಟಿಯಿಂದ ಅಲ್ಲವೆಂಬುದು ಹಾಗಿರಲಿ, ಅದು ಮಾನವನ್ನು ಕೂಡ ತರುವಂತಹದಲ್ಲ- ಅಷ್ಟೇ ಅಲ್ಲ, ಅವಮಾನಕರವಾಗಿಯೇ ಇತ್ತೋ ಏನೋ? ಕನ್ನಡ ಲೇಖಕರಿಗೆ ಯಶಸ್ಸು, ಅರ್ಥ ಯಾವ ಪ್ರಯೋಜನವೂ ಇಲ್ಲದಿದ್ದ ಕಾಲದಲ್ಲಿ ರಾಮರಾಯರು ಕನ್ನಡ ಲೇಖಕರಾಗಬಯಸಿದರು! ಮಾಸಪತ್ರಿಕೆಗಳೆರಡನ್ನು ನಡೆಸಿದರು. ನೂರ ಅರವತ್ತು ಪುಸ್ತಕಗಳನ್ನು (ಸುಮಾರು ೫೦ ಸಹಸ್ರ ಪುಟಗಳ ಸಾಹಿತ್ಯ) ಯಾವ ಸಹಾಯವೂ ಇಲ್ಲದೆ ಏಕಾಂಗಿಯಾಗಿ ಪ್ರಕಟಿಸಿದ ಅವರ ಸಾಧನೆಯದು ಸಾಧಾರಣವಾದುದೇನಲ್ಲ. ಆದರೂ ರಾಮರಾಯರು ಹಸನ್ಮುಖಿಯಾಗಿ ಹೇಳುತ್ತಿದ್ದರು.

"ಇದಾವುದೂ ನಾನು ಮಾಡಿಲ್ಲ. ಮಾಡಿಸಿದವನು ದೇವರು. ಪ್ರೇರಿಸಿದವರು ಕರ್ಪೂರ ಶ್ರೀನಿವಾಸರಾಯರು- ನಾನು ಬರಿಯ ಯಂತ್ರ"- ಇದು ಅದೆಂಥ ವಿನಯ, ಸಮರ್ಪಣಭಾವ!

ರಾಮರಾಯರನ್ನು ನೋಡದವರು ಅವರು ಹೀಗಿದ್ದರೆಂದರೆ ನಂಬಲಾರರು. ಅವರಿಂದ ನಾಡು ನುಡಿಗಳ ಭಂಡಾರ ಶ್ರೀಮಂತವಾಯಿತು. ಇಂಥ ಭಗವತ್ಕಾರ್ಯ ಸಾಧಕರಿಗೆ ಕನ್ನಡ ನಾಡು ಅರ್ಪಿಸಬಹುದಾದ ಕಾಣಿಕೆ ಏನು? ತೀರಿಸಬಹುದಾದ ಋಣ ಹೇಗೆ?

ರಾಮರಾಯರು ಜೀವಿಸಿದ್ದಾಗ, ಸಾಯುವ ಎರಡು ವರ್ಷ ಮುನ್ನ ತಾವು ಬರೆದಿದ್ದ ಸುಬೋಧ ಕುಸುಮಾಂಜಲಿಯನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂದಿದ್ದರು. ಅವರ ಜೀವಿತ ಕಾಲದಲ್ಲಿ ಸಾಧ್ಯವಾಗದಿದ್ದ ಈ ಕಾರ್ಯವನ್ನು ಇನ್ನಾದರೂ ಕಾರ್ಯರೂಪಕ್ಕೆ ತಂದರೆ ಅವರ ಮನಸ್ಸಿಗೆ ಶಾಂತಿ ದೊರಕುತ್ತದೆ.

ಅವರು ಬರೆದು ಅಚ್ಚಿಗೆ ಸಿದ್ಧಪಡಿಸಿದ ಹತ್ತಾರು ಗ್ರಂಥಗಳ ಹಸ್ತಪ್ರತಿಗಳಿವೆ. ಇವುಗಳ ಸೆರೆಯನ್ನು ಬಿಡಿಸಿ, ಓದುಗರ ಕೈಗೆ ಒಪ್ಪಿಸುವುದು ಇನ್ನೊಂದು ಋಣ ಸಂದಾಯ.

ಎಲ್ಲಕ್ಕೂ ಮಿಗಿಲಾಗಿ, ಯಾವ ಆದರ್ಶವನ್ನು ತಮ್ಮ ಕಣ್ಣ ಮುಂದೆ ಇರಿಸಿಕೊಂಡು ಅವರು ಕಾರ್ಯಪ್ರವರ್ತಕರಾದರೋ ಆ ಸಮಾಜಸೇವೆಗೆ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅವರ ಹೆಸರಿನಲ್ಲಿ ದಾಸಸಾಹಿತ್ಯ ಸಂಶೋಧನೆಗೆಂದೇ ಮೀಸಲಾದ ಪೀಠವೊಂದನ್ನು ಏರ್ಪಡಿಸುವುದೆ?

ಶತಮಾನೋತ್ಸವದ ವೇಳೆಗಾದರೂ ಈ ಎಲ್ಲ ಕನಸುಗಳು ನನಸಾಗುವುವೆ? ಕಾದು ನೋಡಬೇಕು? ಕಾಲಾಯತಸ್ಮೈ ನಮಃ!

# ಪರಿಶಿಷ್ಟ

## ಶ್ರೀ ಸುಬೋಧ ರಾಮರಾಯರ ಗ್ರಂಥಗಳು

**೧. ಸುಬೋಧ ಕುಸುಮಾಂಜಲಿ - ೧೫ ಸಂಪುಟಗಳಲ್ಲಿ ಪ್ರಕಟವಾದ ೧೩೦ ಗ್ರಂಥಗಳು.**

ಶ್ರೀರಾಮಚಂದ್ರ, ಬಭ್ರುವಾಹನ, ಶ್ರೀರಾಮಾನುಜಾಚಾರ್ಯರು, ಶ್ರೀ ವ್ಯಾಸರಾಯ ಸ್ವಾಮಿಗಳು, ಅಂಬರೀಷ, ಮಾರ್ಕಂಡೇಯ, ಸೀತಾದೇವಿ, ಕುಶಲವರು, ಶ್ರೀಕೃಷ್ಣ, ಶ್ರೀರಾಮಕೃಷ್ಣ ಪರಮಹಂಸ, ಸಮರ್ಥರಾಮದಾಸರು, ಕೃಷ್ಣಚೈತನ್ಯದೇವ, ಕಬೀರದಾಸರು, ದಮಯಂತಿ, ಅಭಿಮನ್ಯು, ಭಗೀರಥ, ಮಹಾವೀರಸ್ವಾಮಿ, ರಾಜಾರಾಮ ಮೋಹನರಾಯ್, ಕನಕದಾಸರು, ತುಲಸೀದಾಸರು, ಶಕುಂತಲಾ ದುಷ್ಯಂತರು, ಭೀಮಸೇನ, ಮಯೂರಧ್ವಜ, ಏಸುಕ್ರಿಸ್ತ, ಸ್ವಾಮಿ ಶ್ರದ್ಧಾನಂದ, ತುಕಾರಾಮ, ಶ್ರೀ ಪುರಂದರದಾಸರು, ದ್ರೌಪದಿ, ವಿನಾಯಕ, ಸುಧನ್ವ, ಮಹಮದ್ ಪೈಗಂಬರ್, ಸ್ವಾಮಿ ರಾಮತೀರ್ಥರು, ಬಲಿಚಕ್ರವರ್ತಿ, ನಾರದಮಹಾಮುನಿ, ದಾಕ್ಷಾಯಣೀ ದೇವಿ, ವಿದ್ಯಾರಣ್ಯರು, ಮುಮ್ಮಡಿ ಕೃಷ್ಣರಾಜ, ಕಮಲಾದೇವಿ, ಜೋಸೆಫ್ ಮ್ಯೂಝಿನಿ, ಜಿ. ಎನ್. ತಾತಾ, ಬಂಕಿಮಚಂದ್ರ ಚಟ್ಟೋಪಾಧ್ಯಾಯ, ದಿವಾನ್ ಪೂರ್ಣಯ್ಯ, ಶಿವಪ್ಪನಾಯಕ, ಸತೀ ಸಂಯುಕ್ತೆ, ಪಾರ್ವತಿದೇವಿ, ಮಹಾತ್ಮಗಾಂಧಿ, ಜಯದೇವಕವಿ, ಮೀರಬಾಯಿ, ಸಾರ್ವಭೌಮ ಪುಲಿಕೇಶಿ, ಚಾಲುಕ್ಯವಿಕ್ರಮ, ಬೆಂಜಮಿನ್ ಫ್ರಾಂಕ್ಲಿನ್, ಲೋಕಮಾನ್ಯ ತಿಲಕ್, ಭದ್ರಾಚಲ ರಾಮದಾಸರು, ಸಖೂಬಾಯಿ, ಶ್ರೀರಾಮಾನುಜ, ಹೈದರಾಲೀಖಾನ್, ಝಾನ್ಸಿ ಲಕ್ಷ್ಮೀಬಾಯಿ, ಸಾಧ್ವಿ ಸುಕನ್ಯಾ, ದಾದಾಬಾಯಿ ನವರೋಜಿ, ರಂಗಾನಾಥ ಶಾಸ್ತ್ರಿ, ಕಂಠೀರವ ನರಸರಾಜ ಒಡೆಯರ್, ಹರ್ಷ ಮಹಾರಾಜ, ರಾಣಿವೇದವತಿ, ಸಾಕ್ರೆಟೀಸ್, ಶೇಷಾದ್ರಿ ಅಯ್ಯರ್, ಪಂಡಿತ ಮೋತಿಲಾಲ ನೆಹರು, ಪರಶುರಾಮ, ಜಡಭರತ ಚಕ್ರವರ್ತಿ, ಶ್ರೀ ಬಸವೇಶ್ವರ, ಗುರುನಾನಕ್, ರುಕ್ಮಾಂಗದ ಮಹಾರಾಜ, ಅಜಾಮಿಳ, ರುಕ್ಮಿಣೀ ದೇವಿ, ಧನಂಜಯ, ವಿಶ್ವಾಮಿತ್ರ, ಶ್ರೀ ಮಧ್ವಾಚಾರ್ಯರು, ಗುರುಗೋವಿಂದಸಿಂಗ್, ಕುಚೇಲ, ಆಂಜನೇಯ, ಅನಸೂಯಾ, ವಾಲ್ಮೀಕಿ ಮಹರ್ಷಿ, ಜನಮೇಜಯ, ಶ್ರೀಶಂಕರಾಚಾರ್ಯರು, ಶ್ರೀ ಟೀಕಾಚಾರ್ಯರು, ಪ್ರಹ್ಲಾದ, ಭೀಷ್ಮ, ದೇವಯಾನಿ, ಹರಿಶ್ಚಂದ್ರ, ಕರ್ಣ, ವಿವೇಕಾನಂದ, ದಯಾನಂದ ಸರಸ್ವತಿ, ತ್ಯಾಗರಾಜ ಸ್ವಾಮಿಗಳು, ಗೋಂದಾವಳಿ ಮಹಾರಾಜರು, ದಿಲೀಪ ಮಹಾರಾಜ, ಸಾವಿತ್ರಿ, ಬುದ್ಧದೇವ, ಶ್ರೀವಲ್ಲಭಾಚಾರ್ಯರು, ಚಂದ್ರಹಾಸ, ಧ್ರುವ, ಅಹಲ್ಯಾದೇವಿ, ಸರ್ ಸಾಲರ್‌ಜಂಗ್, ರಾಜಾ ರಣಜಿತ್‌ಸಿಂಗ್, ನೂರ್‌ಜಹಾನ್, ಲಿಯೋ ಟಾಲ್‌ಸ್ಟಾಯ್, ಗೋಪಾಲಕೃಷ್ಣ ಗೋಖಲೆ, ಸುರೇಂದ್ರನಾಥ ಬ್ಯಾನರ್ಜಿ, ಪ್ರತಾಪಸಿಂಹ, ಕೃಷ್ಣದೇವರಾಯ, ಪದ್ಮಿನಿ, ಜಾರ್ಜ್‌ಸ್ಟೀವನ್‌ಸನ್, ಲಾಲಾ ಲಜಪತರಾಯ್, ರಂಗಾಚಾರ್ಲು, ಅಶೋಕ ಚಕ್ರವರ್ತಿ, ಅಕ್ಬರ್ ಮಹಾಶಯ,

ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ನೆಪೋಲಿಯನ್ ಬೋನಾಪಾರ್ಟ್, ಮಹಾದೇವ ಗೋವಿಂದ ರಾನಡೆ, ರಾಜಾ ರವಿವರ್ಮ, ಚಾಮರಾಜ ಒಡೆಯರು, ಶ್ರೀ ರಾಘವೇಂದ್ರ ಸ್ವಾಮಿಗಳು, ರಾಣಿ ಭವಾನಿ, ಸುಭದ್ರಾದೇವಿ, ಈಶ್ವರಚಂದ್ರ ವಿದ್ಯಾಸಾಗರ, ಶ್ರೀ ನಾಮದೇವ, ಚಂದ್ರಗುಪ್ತ ಚಾಣಕ್ಯರು, ಶಿವಾಜಿ, ವೀರರಾಣಿ, ರಮಾಬಾಯಿ, ಅಬ್ರಾಹಂ ಲಿಂಕನ್, ಚಿತ್ತರಂಜನ ದಾಸ್, ರಾಜಾ ಸರ್.ಬಿ.ಮಾಧವ ರಾವ್ ಮತ್ತು ಏಕನಾಥಸ್ವಾಮಿ.

೨. ಹರಿದಾಸ ಸಾಹಿತ್ಯ ; ಹರಿದಾಸ ಕೀರ್ತನ ತರಂಗಿಣಿ - ೧೨

ಪುರಂದರದಾಸರ ಕೃತಿಗಳು ( ಎರಡು ಭಾಗಗಳು) ಕನಕದಾಸರ ಕೃತಿಗಳು, ಜಗನ್ನಾಥ ದಾಸರ ಕೃತಿಗಳು, ಶ್ರೀ ವಿಜಯದಾಸರ ಕೃತಿಗಳು, ಶ್ರೀ ವಾದಿರಾಜರ ಕೃತಿಗಳು, ಶ್ರೀ ಪಾದರಾಜ ಸ್ವಾಮಿಗಳ ಕೃತಿಗಳು, ಶ್ರೀ ವ್ಯಾಸರಾಜ ಸ್ವಾಮಿಗಳ ಕೃತಿಗಳು, ಶ್ರೀ ಮೋಹನದಾಸರ ಕೃತಿಗಳು, ಶ್ರೀ ಗೋಪಾಲದಾಸರ ಕೃತಿಗಳು, ಶ್ರೀ ಹರಿಕಥಾಮೃತಸಾರ, ತಿಮ್ಮಣ್ಣ ಕವಿಯ ಹನುಮದ್ವಿಲಾಸ (ಯಕ್ಷಗಾನ) ಕುಚೋಲೋಪಖ್ಯಾನ, ಶ್ರೀಕಾಳಿಯ ಮರ್ದನ.

೩. ಅನುವಾದ ಕೃತಿಗಳು -೩

ಲೂಯಿ ಆರ್.ಬ್ರೈಟ್‌ನೋ ಹಾರ್ಟ್ ಬರೆದ ಇಂಜಿನಿಯರ್ ಹೆನ್ರಿ ಫೋರ್ಡ್ (ಜೀವನ ಚರಿತ್ರೆ)

ಡಾ॥ ಹೆಲನ್ ಕೆಲರ್ ಬರೆದ ನನ್ನ ಜೀವನದ ಕಥೆ (ಜೀವನ ಚರಿತ್ರೆ)
ರಾಜಾಸ್ಥಾನದ ಕಥಾವಳಿ (ಎರಡು ಭಾಗಗಳು) ತೆಲುಗು ಗ್ರಂಥದ ಅನುವಾದ.

೪. ಸ್ವತಂತ್ರ ಗ್ರಂಥ - ಜೀವನಕ್ಕೆ ಬೆಳಕು.
ಮೈಸೂರಿನ ರಾಜ್ಯಲಕ್ಷ್ಮಿಯರು (ಮೂವರು ರಾಣಿಯರ ಜೀವನ ಕಥೆ).

೫. ಪುರಾಣ ಗ್ರಂಥಗಳು ಮತ್ತು ಇವರ ಕಾವ್ಯಗಳು -೫
ಶ್ರೀ ಮದ್ಭಾಗವತ, ರಾಮಾಯಣ ಮತ್ತು ಮಹಾಭಾರತ, ಭಗವದ್ಗೀತೆ, ಹರಿಕಥಾಮೃತ ಸಾರ(ಗದ್ಯ ಅನುವಾದ) ಮತ್ತು ಪುರಂದರದಾಸರನ್ನು ಕುರಿತು ಚತುಶ್ಶತ ಮಾಲಿಕೆ (ಸಾಂಗತ್ಯ) ಇತ್ಯಾದಿ.

॥ ಮಂಗಳಂ ॥





ಧ್ಯಾನವು ಕೃತಯುಗದಲ್ಲಿ
ಯಜನಯಜ್ಞವು ತ್ರೇತಾಯುಗದಲ್ಲಿ,
ದಾನವಾಂತಕನ ದೇವತಾರ್ಚನೆಯು
ದ್ವಾಪರ ಯುಗದಲ್ಲಿ
ಕಲಿಯುಗದಿ ಗಾನದಿ ಕೇಶವನೆಂದರೆ
ಕೈಗೂಡುವನು ರಂಗವಿಠಲ ॥

- ಶ್ರೀಪಾದರಾಜರು

ಧ್ಯಾನವು ಕೃತಯುಗದಲ್ಲಿ
ಯಜ್ಞ ಯಾಗವು ತ್ರೇತಾಯುಗದಲ್ಲಿ
ಅರ್ಚನೆ ದ್ವಾಪರದಲ್ಲಿ
ಕೀರ್ತನೆ ಮಾತ್ರದಿ ಕಲಿಯುಗದಲ್ಲಿ
ಮುಕುತಿಯನ್ನೀವ ಪುರಂದರವಿಠಲ

-ಶ್ರೀ ಪುರಂದರದಾಸರು

ಆನಂದನಿಲಯ ಪ್ರಕಾಶನ
ನಂ. 22/12. ಎಂ.ಜಿ.ಕೆ. ಮೂರ್ತಿ ಬಡಾವಣೆ
6ನೇ ಮುಖ್ಯ ರಸ್ತೆ, ಚಾಮರಾಜಪೇಟೆ.
ಬೆಂಗಳೂರು - 560 018
ಮೊಬೈಲ್ : 98444 06266